# ಕರ್ನಾಟಕ ವಿಧಾನಮಂಡಲ

**ಕರ್ನಾಟಕ ಶಾಸಕಾಂಗ ಪತ್ರಿಕೆ**

**(ತ್ರೈಮಾಸಿಕ ಪತ್ರಿಕೆ)**

**ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ –2022**

**ಸಂಪುಟ–IV ಸಂಖ್ಯೆ – 4**


**ಪ್ರಕಟಣೆ:**

**ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,**

**ಕರ್ನಾಟಕ ವಿಧಾನ ಸಭೆ ಸಚಿವಾಲಯ, ವಿಧಾನಸೌಧ,**

**ಬೆಂಗಳೂರು – 560 233.**

## ವಿಶೇಷ ಸೂಚನೆ

ಕರ್ನಾಟಕ ಶಾಸಕಾಂಗ ಪತ್ರಿಕೆಯು ಕರ್ನಾಟಕ ವಿಧಾನ ಸಭೆ/ವಿಧಾನ ಪರಿಷತ್ತಿನ ಸದಸ್ಯರುಗಳ ಪರಾಮರ್ಶೆಗಾಗಿ ಪ್ರಕಟಿಸಲಾಗುತ್ತಿದ್ದು, ಇದು ಆಂತರಿಕ ಪ್ರಕಟಣೆಗೆ ಮಾತ್ರ ಸೀಮಿತವಾಗಿರುತ್ತದೆ.

ಈ ಪತ್ರಿಕೆಯಲ್ಲಿ ಅಳವಡಿಸಲಾಗಿರುವ ಮಾಹಿತಿಗಳು ವಿವಿಧ ದಿನ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಸುದ್ದಿಗಳ ಆಧಾರಿತವಾಗಿದ್ದು, ಇದರಲ್ಲಿ ನ್ಯೂನತೆ, ವ್ಯತ್ಯಾಸಗಳಿಂದ ಅಥವಾ ನಿಖರತೆಯ ಕೊರತೆಯಿಂದ ಯಾವುದೇ ವ್ಯಕ್ತಿಗೆ ಉಂಟಾಗಬಹುದಾದ ನಷ್ಟ/ಹಾನಿಗೆ ವಿಧಾನ ಸಭಾ ಸಚಿವಾಲಯವು ಯಾವುದೇ ರೀತಿ ಜವಾಬ್ದಾರವಾಗುವುದಿಲ್ಲ.

**ಸೂಚನೆ:–** ಪತ್ರಿಕೆಯು ವಿಧಾನ ಮಂಡಲದ ಅಂತರ್ಜಾಲ **http://kla.kar.nic.in** ನಲ್ಲೂ ಲಭ್ಯವಿದೆ

# ಮುನ್ನುಡಿ

ಕರ್ನಾಟಕ ವಿಧಾನಮಂಡಲದ ಸಂಶೋಧನಾ ಮತ್ತು ಉಲ್ಲೇಖನಾ ಶಾಖೆಯು ಉಭಯ ಸದನಗಳ ಮಾನ್ಯ ಸದಸ್ಯರುಗಳ ಉಪಯೋಗಕ್ಕಾಗಿ ಕರ್ನಾಟಕ ಶಾಸಕಾಂಗ ತ್ರೈಮಾಸಿಕ ಪತ್ರಿಕೆಯ ಸಂಪುಟ – IV ರ ನಾಲ್ಕನೇ ಸಂಚಿಕೆಯನ್ನು ಪ್ರಕಟಪಡಿಸುತ್ತಿದೆ.

ತ್ರೈಮಾಸಿಕ ಶಾಸಕಾಂಗ ಪತ್ರಿಕೆಯು ಮುಖ್ಯವಾಗಿ ಕರ್ನಾಟಕ ವಿಧಾನಮಂಡಲದ ಎರಡೂ ಸದನಗಳ ಶಾಸಕಾಂಗದ ಸುದ್ದಿಗಳು, ಲೋಕಸಭೆ, ರಾಜ್ಯಸಭೆಗಳ, ಸಂಸದೀಯ ವ್ಯವಹಾರಗಳಿಗೆ ಸಂಬಂಧಿಸಿದ ಪ್ರಮುಖ ಸುದ್ದಿಗಳು, ರಾಜ್ಯಗಳ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಹಾಗೂ ಇತರೆ ವಿಷಯಗಳನ್ನೊಳಗೊಂಡಿರುತ್ತದೆ.

ಈ ಸಂಚಿಕೆಯಲ್ಲಿ 2022ನೇ ಸಾಲಿನ ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ ತಿಂಗಳ ಅವಧಿಯಲ್ಲಿನ ಪ್ರಮುಖ ಸುದ್ದಿ, ಮಾಧ್ಯಮಗಳಲ್ಲಿ ಪ್ರಕಟವಾದ ದೈನಂದಿನ ಸುದ್ದಿಗಳನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ.

ಸಂಶೋಧನಾ ಮತ್ತು ಉಲ್ಲೇಖನಾ ವಿಭಾಗವು ಸಿದ್ಧಪಡಿಸಿ ಹೊರತರುತ್ತಿರುವ ಈ ಪತ್ರಿಕೆಯ ಗುಣಮಟ್ಟವನ್ನು ಉನ್ನತೀಕರಿಸಲು ಹಾಗೂ ಹೆಚ್ಚು ವಿಷಯಾಸಕ್ತವಾಗಿಸಲು ಇದರ ಬೆಳವಣಿಗೆಯ ಸುಧಾರಣೆಗೆ ಮಾನ್ಯ ಸದಸ್ಯರುಗಳಿಂದ ಅಮೂಲ್ಯ ಸಲಹೆ ಮತ್ತು ಸೂಚನೆಗಳನ್ನು ಬರಹ ರೂಪದಲ್ಲಿ ಸ್ವೀಕರಿಸಲು ಸದಾ ಸ್ವಾಗತವಿರುತ್ತದೆ.

**ಎಂ.ಕೆ. ವಿಶಾಲಾಕ್ಷಿ**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ.

ಬೆಂಗಳೂರು
ದಿನಾಂಕ: 16–03–2023

# ಕರ್ನಾಟಕ ಶಾಸಕಾಂಗ ತ್ರೈಮಾಸಿಕ ಪತ್ರಿಕೆಯ ಸಂಪಾದಕ ವರ್ಗ

## ಕರ್ನಾಟಕ ವಿಧಾನ ಸಭೆ ಸಚಿವಾಲಯ

1. ಶ್ರೀಮತಿ ಎಂ.ಕೆ. ವಿಶಾಲಾಕ್ಷಿ : ಕಾರ್ಯದರ್ಶಿ
2. ಶ್ರೀಮತಿ ಬಿ.ಎಸ್. ಮಂಜುಳ : ಜಂಟಿ ನಿರ್ದೇಶಕರು
3. ಶ್ರೀಮತಿ ವಿ.ಭಾಗ್ಯ : ಉಪ ನಿರ್ದೇಶಕರು
4. ಶ್ರೀಮತಿ ಜಿ. ಮಮತ : ಸಹಾಯಕ ನಿರ್ದೇಶಕರು

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

1. ಶ್ರೀಮತಿ ಕೆ. ಆರ್. ಮಹಾಲಕ್ಷ್ಮಿ : ಕಾರ್ಯದರ್ಶಿ
2. ಶ್ರೀಮತಿ ಎಸ್. ನಿರ್ಮಲ : ಅಪರ ಕಾರ್ಯದರ್ಶಿ

# ಕರ್ನಾಟಕ ಶಾಸಕಾಂಗ ಪತ್ರಿಕೆ
## (ತ್ರೈಮಾಸಿಕ ಪತ್ರಿಕೆ)

ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ – 2022
ಸಂಪುಟ–IV ಸಂಖ್ಯೆ– 4

## ಪರಿವಿಡಿ

## ಭಾಗ–1

## ವಿಧಾನ ಮಂಡಲದ ಸುದ್ದಿಗಳು

ಸೂಚನೆ: – ಇಲ್ಲಿ ಆಯ್ಕೆ ಮಾಡಿರುವ ಲೇಖನಗಳು ಪ್ರಮುಖ ದಿನಪ್ರತಿಕೆಗಳಿಂದ ಆಯ್ದು ಪ್ರಕಟಿಸಲಾಗಿದೆ.
ಇಲ್ಲಿನ ಅಭಿಪ್ರಾಯಗಳು ಸಂಪೂರ್ಣ ಲೇಖಕರದ್ದಾಗಿರುತ್ತದೆ.

# ಭಾಗ – 1

# ವಿಧಾನಮಂಡಲದ ಸುದ್ದಿಗಳು

## 1. ಭಗವದ್ಗೀತೆಯಷ್ಟೇ ಪವಿತ್ರ ಗ್ರಂಥ ಸಂವಿಧಾನ

ಭಗವದ್ಗೀತೆಯಷ್ಟೇ ಶ್ರೇಷ್ಠ ಗ್ರಂಥವಾಗಿರುವುದು ಭಾರತದ ಸಂವಿಧಾನ ಎಂದು ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಅಭಿಪ್ರಾಯಪಟ್ಟರು.

75ನೇ ಸ್ವಾತಂತ್ರ್ಯ ಮಹೋತ್ಸವದ ಅಂಗವಾಗಿ ವಿಂಡ್ಸೈಸ್ ಪ್ರೈ.ಲಿ., ಕಾನ್ವಿ ಫೌಂಡೇಶನ್ ಮತ್ತು ಸಾಕ್ಯ ಫೌಂಡೇಶನ್ ಸಹಯೋಗದಲ್ಲಿ ಗಾಂಧಿಭವನದಲ್ಲಿ ಆಯೋಜಿಸಿದ್ದ 'ಭಾರತದ ಸಂವಿಧಾನ ಮತ್ತು ಕಾನೂನು ವ್ಯವಸ್ಥೆ' ಬಗ್ಗೆ ಅರಿವು ಮತ್ತು ಜಾಗೃತಿ ಮಹಾಭಿಯಾನ ಉದ್ಘಾಟಿಸಿ ಅವರು ಮಾತನಾಡಿದರು.

"ಸಂವಿಧಾನವೆಂದರೆ ನ್ಯಾಯಾಲಯ, ಕಾರ್ಯಾಲಯ, ಶಾಸಕಾಂಗದ ನೀತಿ ನಿರೂಪಣೆಗಳು ಮತ್ತು ಕಾರ್ಯನಿರ್ವಹಿಸಬೇಕಾದ ನಿಯಮಗಳ ಗ್ರಂಥವಷ್ಟೇ ಎಂಬುದು ಸಾಮಾನ್ಯ ಜನರ ಭಾವನೆ. ಆದರೂ ಇದೆಲ್ಲವನ್ನೂ ಮಿರಿ ಸಮಾನತೆ, ಶ್ರೇಷ್ಠತೆ ಮತ್ತು ಬದುಕು ನಿರ್ಮಿಸುವ ಪವಿತ್ರ ಗ್ರಂಥ ಎಂಬ ಅರಿವು ಮೂಡಿಸಬೇಕು," ಎಂದು ಹೇಳಿದರು.

"ಭಗವದ್ಗೀತೆಯನ್ನು ಯಾವ ರೀತಿ ಭಾವನಾತ್ಮಕವಾಗಿ ಸ್ವೀಕರಿಸಿ ಜೀವನದಲ್ಲಿ ಅಳವಡಿಸಿಕೊಂಡಿದ್ದೇವೋ ಹಾಗೆಯೇ ಸಂವಿಧಾನವೂ ನಮ್ಮ ಜೀವನದಲ್ಲಿ ಹಾಸು ಹೊಕ್ಕಾಗಬೇಕು. 12ನೇ ಶತಮಾನದಲ್ಲಿ ಬಸವಣ್ಣನವರು ಅನುಭವ ಮಂಟಪ ನಿರ್ಮಿಸುವ ಮೂಲಕ ಇಡೀ ಜಗತ್ತಿಗೆ ಪ್ರಜಾಸತ್ತಾತ್ಮಕ ಆಡಳಿತದ ಪರಿಕಲ್ಪನೆ ಕಟ್ಟಿಕೊಟ್ಟರು. ಅದೇ ಮಾದರಿಯಲ್ಲಿ ಡಾ.ಅಂಬೇಡ್ಕರ್ ಸಂವಿಧಾನ ರಚನೆ ಮಾಡಿದರು. ಇದರಲ್ಲಿ ಮಹಿಳೆಯರಿಗೆ ಮತದಾನ ಹಕ್ಕು ಸೇರಿದಂತೆ ಶೋಷಿತರು, ದಮನಿತರು ಹಾಗೂ ಅಸಹಾಯಕರು ಸಮಾನವಾಗಿ ಬದುಕಲು ಏನೆಲ್ಲ ಅವಶ್ಯಕತೆ ಇದೆಯೋ ಅದೆಲ್ಲವನ್ನು ಸಂವಿಧಾನದಲ್ಲಿ ಸೇರಿಸಿದ್ದಾರೆ," ಎಂದು ವಿವರಿಸಿದರು.

"ಪ್ರತಿಯೊಬ್ಬರೂ ಹಕ್ಕಿಗಾಗಿ ಹೋರಾಟ ಮಾಡುವಾಗ ಸಂವಿಧಾನವನ್ನು ಎಳೆದು ತರುತ್ತೇವೆ. ಅದೇ ರೀತಿ ಸಂವಿಧಾನದಲ್ಲಿರುವ ಕರ್ತವ್ಯ ಪಾಲನೆ ಬಗ್ಗೆಯೂ ನಾವು ಜಾಗರೂಕರಾಗಿರಬೇಕು. ಅಲ್ಲದೇ, ಸಂವಿಧಾನದ ಪ್ರಸ್ತಾವನೆ ಹಾಗೂ 11 ಮೂಲಭೂತ ಕರ್ತವ್ಯದ ಬಗ್ಗೆ ಕಂಠಪಾಠ ಮಾಡುವುದನ್ನು ವಿದ್ಯಾರ್ಥಿಗಳಿಗೆ ಕಡ್ಡಾಯಗೊಳಿಸಬೇಕು. ಕಾಲಕಾಲಕ್ಕೆ ತಿದ್ದುಪಡಿ ಮೂಲಕ ನವೀಕರಣವಾಗುತ್ತಿರುವುದು ನಮ್ಮ ಸಂವಿಧಾನದ ಜೀವಂತಿಕೆಗೆ ಸಾಕ್ಷಿ," ಎಂದರು.

ಮಾಜಿ ಶಿಕ್ಷಣ ಸಚಿವ ಎನ್.ಮಹೇಶ್ ಮಾತನಾಡಿ, "ಸಂವಿಧಾನದಲ್ಲಿ ಸಾರ್ವಭೌಮ, ಸಮಾಜವಾದಿ, ಸರ್ವಧರ್ಮ ಸಮಾಭಾವ, ಪ್ರಜಾಸತ್ತಾತ್ಮಕ, ಗಣರಾಜ್ಯ, ನ್ಯಾಯ, ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವಗಳೆಂಬ 9 ಆದರ್ಶಗಳಿವೆ. ಸಂವಿಧಾನದ ಪ್ರತಿ ವಿಚಾರವನ್ನು ಜನತೆಗೆ ಮನದಟ್ಟು ಮಾಡಿಸುವ ಅಗತ್ಯವಿದೆ. ಆ ಕಾರ್ಯವನ್ನು ಮಹಾಭಿಮಾನದ ಮೂಲಕ ಮಾಡಲಾಗುತ್ತಿದೆ," ಎಂದು ಹೇಳಿದರು.

ಮಾಜಿ ಸಚಿವ ಮಾಲೀಕಯ್ಯ ಗುತ್ತೇದಾರ್ ಸಂವಿಧಾನ, ಸಮಾನತೆಯ ಬಗ್ಗೆ ಮಾತನಾಡಿದರು. ಕಾರ್ಯಕ್ರಮದಲ್ಲಿ ನಿರ್ದೇಶಕ ವಿನು ಬಳಂಜ, ಮಹಾಭಿಮಾನ ಯೋಜನಾ ತಂಡದ ನಿರ್ದೇಶಕ ಅರುಣ್ ಕುಮಾರ್ ದಿವಾನ್, ಡಾ.ಟಿ.ಕುಮಾರಸ್ವಾಮಿ ಸಾಕ್ಯ, ಡಾ.ಲೋಕೇಶ್ ಮೌರ್ಯ ಮತ್ತಿತರರು ಉಪಸ್ಥಿತರಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:11.10.2022.

**ದಿನಾಂಕ: 10.10.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಂಗಳೂರಿನಲ್ಲಿ ಆಯೋಜಿಸಿದ್ದ ಭಾರತದ ಸಂವಿಧಾನ ಮತ್ತು ಕಾನೂನು ವ್ಯವಸ್ಥೆಗಳ ಬಗ್ಗೆ ಅರಿವು ಮತ್ತು ಜಾಗೃತಿ ಮಹಾಭಿಯಾನ ಕಾರ್ಯಕ್ರಮದಲ್ಲಿ ಭಾಗವಹಿಸಿ ಸಂವಿಧಾನದ ಕುರಿತು ಸಾರ್ವಜನಿಕರಲ್ಲಿ ಅರಿವಿನ ಅಗತ್ಯತೆ ಕುರಿತು ತಿಳಿಸಿದರು. ಈ ಸಂದರ್ಭದಲ್ಲಿ ಶಾಸಕರಾದ ಶ್ರೀ ಎನ್. ಮಹೇಶ್, ಮಾಜಿ ಸಚಿವರಾದ ಶ್ರೀ ಮಾಲಿಕಯ್ಯ ಗುತ್ತೇದಾರ್ ಹಾಗೂ ಇತರೆ ಪ್ರಮುಖರು ಉಪಸ್ಥಿತರಿದ್ದರು.**





## 2. ನಮ್ಮದು ವಿಶ್ವದ ಶ್ರೇಷ್ಠ ಸಂವಿಧಾನ–ಸ್ಪೀಕರ್

ದೇಶದ ನೂರಾ ಮೂವತ್ತು ಕೋಟಿ ಜನತೆಯ ಹಕ್ಕು ಮತ್ತು ಕರ್ತವ್ಯಗಳ ಪಾಲನೆ ಮಾಡುವ ನಮ್ಮ ಸಂವಿಧಾನದ ಬಗ್ಗೆ ಪ್ರತಿಯೊಬ್ಬರೂ ಶ್ರದ್ಧೆಯಿಂದ ತಿಳಿದುಕೊಳ್ಳಬೇಕು. ಈ ನಿಟ್ಟಿನಲ್ಲಿ ಶಾಲಾ–ಕಾಲೇಜು ಹಂತದಲ್ಲಿ ಸಂವಿಧಾನದ ಪ್ರಸ್ತಾವನೆ(ಪ್ರಿಯಾಂಬಲ್) ಓದುವಂತೆ ಮಾಡುವುದು ಅಗತ್ಯವಾಗಿದೆ ಎಂದು ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರು ಹೇಳಿದರು.

'ಭಾರತದ ಸಂವಿಧಾನ ಮತ್ತು ಕಾನೂನು ವ್ಯವಸ್ಥೆಗಳ ಬಗ್ಗೆ ಅರಿವು ಮತ್ತು ಜಾಗೃತಿ ಅಭಿಯಾನ 2022–23' ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದ ಅವರು, ಬೇರೆ ಯಾರಾದರು ಸಂವಿಧಾನವನ್ನು ಬರೆದಿದ್ದರೆ ಅದು ಬರಿ ಅಕ್ಷರಗಳ ಜೋಡಣೆಯಾಗುತ್ತಿತ್ತೇನೋ. ಆದರೆ, ಡಾ.ಬಿ.ಆರ್.ಅಂಬೇಡ್ಕರ್ ಅವರು ಬರೆದಿದ್ದುದರ ಪರಿಣಾಮ ನಮ್ಮ ಸಂವಿಧಾನವು ದೇಶದ ಎಲ್ಲ ಜನರನ್ನು ಸಮಾನ ಮನೋಭಾವದಿಂದ ಕಾಣುವಂತೆ ಕಾನೂನಾತ್ಮಕ ಬೆಸುಗೆ ಹಾಕಿದೆ ಎಂದರು.

ಸಮಾನತೆ, ಸಹೋದರತ್ವ ತತ್ವ ಸಾರುವ ನಮ್ಮ ಸಂವಿಧಾನ ವಿಶ್ವದಲ್ಲೇ ಅತ್ಯಂತ ಶ್ರೇಷ್ಠ ಸಂವಿಧಾನವಾಗಿದ್ದು, ಪ್ರತಿಯೊಬ್ಬ ಯುವಕರು ಸಂವಿಧಾನವನ್ನು ಓದಿ ತಿಳಿದುಕೊಳ್ಳಬೇಕು. ನಮ್ಮ ದೇಶದಲ್ಲಿ ಇನ್ನು ಅಸಮಾನತೆ, ಅಸ್ಪೃಶ್ಯತೆಯಂಥ ಸಮಸ್ಯೆಗಳಿಗೆ ಪರಿಹಾರ ಸಂವಿಧಾನ ಅರಿಯುವುದು ಮತ್ತು ದೇಶ ಮೊದಲು ಎಂಬ ಭಾವನೆ ತಾಳುವುದೇ ಆಗಿದೆ.

ಅಂದು 13ನೇ ಶತಮಾನದಲ್ಲಿ ಇಂಗ್ಲೆಂಡ್‌ನಲ್ಲಿ ಪ್ರಜಾಪ್ರಭುತ್ವ ಜಾರಿಗೆ ಬಂದರೆ, ಅದಕ್ಕೂ ಮೊದಲು 12ನೇ ಶತಮಾನದಲ್ಲಿ ಬಸವಾದಿ ಶರಣರು ತಮ್ಮ ಅನುಭವ ಮಂಟಪದ ಮೂಲಕ ವಿಶ್ವಕ್ಕೆ ಮೊಟ್ಟ ಮೊದಲ ಬಾರಿಗೆ ಪ್ರಜಾಪ್ರಭುತ್ವನ್ನು ಬೋಧಿಸಿದರು. ಇನ್ನು ರಾಜಪ್ರಭುತ್ವದಲ್ಲೂ ಪ್ರಜಾಪ್ರಭುತ್ವ ನೀತಿಯನ್ನು ಮೊದಲಿಗೆ ಜಾರಿಗೆ ತಂದವರು ನಮ್ಮ ಮೈಸೂರು ಒಡೆಯರು ಎಂದು ಸ್ಪೀಕರ್ ಕಾಗೇರಿ ಅವರು ಚರಿತ್ರೆಯನ್ನು ಸ್ಮರಿಸಿಕೊಂಡರು.

ಪ್ರಾಸ್ತವಿಕವಾಗಿ ಮಾತನಾಡಿದ ಲೇಖಕ ಅರವಿಂದ ಚೊಕ್ಕಾಡಿ ಅವರು, ಡಾ.ಅಂಬೇಡ್ಕರ್ ಬಗ್ಗೆ ತಿಳಿದುಕೊಂಡರೆ ಸಾಲದು ಬದಲಾಗಿ ಅವರು ಬರೆದ ಸಂವಿಧಾನದ ಬಗ್ಗೆಯೂ ಪ್ರತಿಯೊಬ್ಬರೂ ತಿಳಿದುಕೊಳ್ಳುವುದು ಅಗತ್ಯವಾಗಿದ್ದು, ನಮ್ಮ ಈ ಜಾಗೃತಿ ಅಭಿಯಾನದ ಮುಖ್ಯ ಉದ್ದೇಶವೂ ಕೂಡ ಅದುವೇ ಆಗಿದೆ ಎಂದರು. ಮಾಜಿ ಸಚಿವ ಮಾಲೀಕಯ್ಯ ಗುತ್ತೇದಾರ್, ಕೊಳ್ಳೆಗಾಲ ಶಾಸಕ ಎನ್.ಮಹೇಶ್, ದಲಿತ ಸಂಘರ್ಷ ಸಮಿತಿ ಮುಖಂಡ ಡಾ.ಮೋಹನರಾಜ್ ಆರ್ ಇದೇ ವೇಳೆ ಮಾತನಾಡಿದರು. ಅಭಿಯಾನದ ರೂವಾರಿಗಳಾದ ವಿನು ಬಳಂಜ, ಅರುಣ್ ಕುಮಾರ್ ಉಪಸ್ಥಿತರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:11.10.2022.

## 3. Suvarna Soudha completes a decade with just 80 days in session

With the Suvarna Vidhan Soudha in Belagavi completing 10 years of its existence the mammoth structure, established as the second power centre of Karnataka, has become a white elephant. Despite spending Rs 5 crore on its maintenance each year, the government has been able to conduct legislature sessions here only for 80 days in the last 10 years.

For the sake of formality, it appears, the government has been holding legislature session in the soudha for just 10 days a year. The continued demand from various quarters across North Kanrataka to utilise the soudha effectively round –the year has fallen on deaf ears.

The government, headed by then CM H.D.Kumarswamy, had decided to construct the Suvarna Vidhana Soudha in belagavi with the sole objective of holding a full-fledged winter session of the state legislature every year besides getting several important offfices and departments shifted to the building. A whopping Rs. 450 crore was spent on its construction on the 127 acre land in Halaga between 2007 and 2012.

According to Sources, eight legislatrue sessions have been held in the soudha remained shut for two years due to the Covid crisis. The office of Information Commissioner is the only state-level office located at the Soudha. A huge sum is being spent on the maintenance of the gardens on its premises besides the power tariff, sources said.

Several people from North Karnataka region have criticised the government's failure to utilise it effectively and said the public money is being squandered wastefully by the government on its maintenance. " Besides holding a full-fledged winter session of the legislatrue, the government should utilise the structure regularly to stop people's money going down the drain," said writer DS Chougale.

Politician M S Bagwan appealed to the government to make the winter session effective and result-oriented in the Soudha.

Besides having discussions on major issues pertaining to the state, the sessions must also take important decisions to develop North Karnataka evenly he added.

A series of agitations have been staged over the past few years demanding complete utilisation of the soudha, but to no avail. The cost of this white elephant's maintenance has been a huge Rs 50 crore in the last 10 years, according to sources.

Courtesy: Indian express, Dated:12.10.2022.

## 4. 'ನನ್ನ ಮತ ಮಾರಾಟಕ್ಕಿಲ್ಲ' ಯಶಸ್ವಿಗೊಳಿಸಿ

ಆದರ್ಶ, ಮೌಲ್ಯಗಳ ರಕ್ಷಣೆ ಕೇವಲ ಶಾಸಕಾಂಗಕ್ಕೆ ಮಾತ್ರ ಸೀಮಿತವಲ್ಲ ಸಮಾಜದ ಪ್ರತಿಯೊಬ್ಬರ ಜವಾಬ್ದಾರಿಯೂ ಇದೆ. 'ನನ್ನ ಮತ ಮರಾಟಕ್ಕಿಲ್ಲ' ಅಭಿಯಾನ ಯಶಸ್ವಿಗೊಳಿಸುವ ಮೂಲಕ ಪ್ರಜಾ ಪ್ರಭುತ್ವ ಉಳಿಸುವ ಕಾರ್ಯದಲ್ಲಿ ಯುವಕರು ಮುಂಚೂಣಿಯಲ್ಲಿ ನಿಲ್ಲಬೇಕು ಎಂದು ವಿಧಾನ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಕರೆ ನೀಡಿದರು.

ನಗರದ ಟಿ.ಚನ್ನಯ್ಯ ರಂಗಮಂದಿರ, ಕೋಲಾರ ಜಿಲ್ಲಾಡಳಿತದ ಆಶ್ರಯದಲ್ಲಿ ಆಯೋಜಿಸಿದ್ದ 'ಚುನಾವಣಾ ಸುಧಾರಣಾ ಕ್ರಮಗಳ ಕುರಿತ ಸಂವಾದದಲ್ಲಿ ವಿದ್ಯಾರ್ಥಿಗಳ ಪ್ರಶ್ನೆಗೆ ಉತ್ತರಿಸಿದರು.

ಯುವಕರು ದೇಶದ ಭವಿಷ್ಯ ಮಾತ್ರವಲ್ಲ ಪ್ರಜಾಪ್ರಭುತ್ವ ವ್ಯವಸ್ಥೆಯ ಕಾವಲುಗಾರರಾಗಬೇಕು. ಇಲ್ಲದಿದ್ದರೆ ನಿಮ್ಮ ಬದುಕು ಅಂಧಕಾರವಾಗುತ್ತದೆ. ಜನಾಂದೋಲನ ಪ್ರಾರಂಭವಾಗಬೇಕು, ನನ್ನ ಮತ ಮರಾಟಕ್ಕಿಲ್ಲ ಎಂಬ ಆಂದೋಲನ ಆರಂಭಿಸಿ. ನಾವು ಹಣ ಕೊಟ್ಟರೂ ಬೇಡ ಎನ್ನಬೇಕು. ಈ ವಿಷಯದಲ್ಲಿ ಎಲ್ಲಿತನಕ ಯುವಕರಲ್ಲಿ ಜಾಗೃತಿ ಮೂಡುವುದಿಲ್ಲವೋ ಅಲ್ಲಿಯವರೆಗೆ ಸುಧಾರಣೆ ಅಸಾಧ್ಯ ಎಂದರು.

ದೇಶದ ಸ್ವಾವಲಂಬನೆಯಲ್ಲಿ ರೈತರನ್ನು ಮೊದಲು ನೆನೆಪಿಸಿಕೊಳ್ಳಬೇಕು. ಸ್ವಾತಂತ್ರ್ಯ ಹೋರಾಟದ ವೇಳೆ ಆಹಾರದ ಕೊರತೆ ಇತ್ತು. ರೈತರ ಶ್ರಮದಿಂದ ಆಹಾರ ಭದ್ರತೆ ಸಿಕ್ಕಿದೆ, ವಿಶ್ವಕ್ಕೆ ಆಹಾರ ನೀಡಿದ್ದೇವೆ, ಕೈಗಾರಿಕೆ, ತಾಂತ್ರಿಕತೆ, ರಕ್ಷಣೆ, ಸೈನಿಕರ ಆತ್ಮಬಲದಲ್ಲಿ ಪಾಕ್, ಚೀನಾಕ್ಕೂ ಉತ್ತರ ನೀಡಿದ್ದೇವೆ ಎಂದು ಹೇಳಿದರು.

ಆಧಾರ: ಉದಯವಾಣಿ, ದಿನಾಂಕ:13.10.2022.

**ದಿನಾಂಕ: 12.10.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಕೋಲಾರದಲ್ಲಿ ಆಯೋಜಿಸಿದ್ದ "ಚುನಾವಣಾ ವ್ಯವಸ್ಥೆಯಲ್ಲಿ ಸುಧಾರಣೆ ಅಗತ್ಯತೆ ಕುರಿತು ನಡೆದ ಸಂವಾದ ಕಾರ್ಯಕ್ರಮದಲ್ಲಿ ಭಾಗವಹಿಸಿ, ಕಾಲೇಜು ವಿದ್ಯಾರ್ಥಿಗಳು ಹಾಗೂ ಸಂಘ ಸಂಸ್ಥೆಗಳ ಪ್ರಮುಖರೊಂದಿಗೆ ಸಂವಾದ ನಡೆಸಿದರು. ಈ ಸಂದರ್ಭದಲ್ಲಿ ಮಾನ್ಯ ಸಂಸದರಾದ ಶ್ರೀ ಕೆ ಮುನಿಸ್ವಾಮಿ ಶಾಸಕರುಗಳಾದ ಶ್ರೀ ಕೆ. ಶ್ರೀನಿವಾಸಗೌಡ, ಶ್ರೀ ಹೆಚ್.ನಾಗೇಶ್, ವಿಧಾನ ಪರಿಷತ್ತಿನ ಸದಸ್ಯರುಗಳಾದ ಶ್ರೀ ಇಂಚರ ಗೋವಿಂದರಾಜು, ಶ್ರೀ ಛಲವಾದಿ ನಾರಾಯಣಸ್ವಾಮಿ, ಕುಲಪತಿಗಳಾದ ಪ್ರೊ. ನಿರಂಜನ್, ಜಿಲ್ಲಾ ಪತ್ರಕರ್ತರು ಸಂಘದ ಅಧ್ಯಕ್ಷರಾದ ಶ್ರೀ ಗೋಪಿನಾಥ್, ಜಿಲ್ಲೆಯ ಹಿರಿಯ ಅಧಿಕಾರಿಗಳು, ಕಾಲೇಜು ವಿದ್ಯಾರ್ಥಿಗಳು, ನ್ಯಾಯವಾದಿಗಳು ಹಾಗೂ ಸಂಘ ಸಂಸ್ಥೆಗಳ ಪ್ರಮುಖರು ಭಾಗವಹಿಸಿದ್ದರು.**







## 5. ನ್ಯಾಯಾಂಗದಲ್ಲಿ ಆದರ್ಶ ತುತ್ತತುದಿಯಲ್ಲಿದಿಯೇ?

'ಆದರ್ಶ, ಮೌಲ್ಯ ಕುಸಿದಿರುವುದು ಶಾಸಕಾಂಗದಲ್ಲಿ ಮಾತ್ರವೇ, ನ್ಯಾಯಾಂಗ ವ್ಯವಸ್ಥೆಯಲ್ಲಿ ಏನು ಆದರ್ಶ ತುತ್ತತುದಿಯಲ್ಲಿದೆಯೇ, ಭ್ರಷ್ಟಾಚಾರ, ವಿಳಂಬ ಇಲ್ಲವೇ' ಎಂದು ವಿಧಾನ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಪ್ರಶ್ನಿಸಿದರು.

ಜಿಲ್ಲಾಡಳಿತ ಆಯೋಜಿಸಿದ್ದ 'ಚುನಾವಣೆ ವ್ಯವಸ್ಥೆಯಲ್ಲಿ ಸುಧಾರಣೆ ಅಗತ್ಯ' ಕುರಿತ ಸಂವಾದ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

'ಕಾರ್ಯಂಗ ವ್ಯವಸ್ಥೆಗೆ ಜಡತ್ವ ಹಿಡಿದಿದೆ. ಅಧಿಕಾರಿಗಳು ಒಂದು ಕಡತಕ್ಕೆ ಕೊಕ್ಕೆ ಹಾಕಿ ಕಳುಹಿಸಿದರೆ ಅದು ಯಾವ ರೀತಿ ತಿರುಗಿ ಬರುತ್ತದೆ ಎಂಬುದು ನಮಗೇನೂ ಗೊತ್ತಿಲ್ಲವೇ? ಜನಜೀವನ ಕಷ್ಟ ಸುಖಕ್ಕೆ ಸ್ಪಂದಿಸುವ ಮಾನವೀಯತೆ, ಭಾವನೆ ಇಲ್ಲದೆ ಕೇವಲ ಸರ್ಕಾರದ ಸುತ್ತೋಲೆ ಪಾಲಿಸುವವರನ್ನು ನಾವು ನೋಡಿಲ್ಲವೇ' ಎಂದು ಕೇಳಿದರು.

ಅದಾದ ನಂತರ ಅವರ ಮಾತು ಮಾಧ್ಯಮಗಳತ್ತ ಹೊರಳಿತು. 'ಇನ್ನು ಪ್ರಜಾಪ್ರಭುತ್ವದ ನಾಲ್ಕನೇ ಅಂಗವಾದ ಪತ್ರಿಕಾ ರಂಗ ಹೇಗಿದೆ? ಯಾವ ಪತ್ರಿಕೆಯಲ್ಲಿ ಯಾವ ಸುದ್ದಿ ಬಂದಿದೆ ಎಂಬುದನ್ನು ನನಗೆ ತೋರಿಸಿ. ಅದು ಏಕೆ ಬಂದಿದೆ ಎಂಬುದನ್ನು ನಾನು ಹೇಳುತ್ತೇನೆ. ಯಾವ ಸುದ್ದಿ ಬಂದಿಲ್ಲವೆಂದು ಹೇಳಿ. ಏಕೆ ಪ್ರಕಟಿಸಿಲ್ಲ ಎಂಬುದನ್ನೂ ಹೇಳುತ್ತೇನೆ' ಎಂದಾಗ ಸಭೆಯಲ್ಲಿದ್ದವರಿಗೆ ನಗು ತಡೆಯಲಾಗಲಿಲ್ಲಿ.

'ರಾಜಕೀಯ ವ್ಯಕ್ತಿಗಳು ಸರಿಯಾದರೆ ಎಲ್ಲವೂ ಸರಿ ಹೋಗಲಿದೆ ಎಂಬುದಾಗಿ ನೀವು ನಮ್ಮತ್ತ ಬೊಟ್ಟು ಮಾಡಿ ತೋರಿಸುತ್ತೀರ. ಜವಾಬ್ದಾರಿ, ಮಹತ್ವ ನಮ್ಮ ಮೇಲೆ ಹೆಚ್ಚು ಇರುವುದು ನಿಜ. ಅದರ ಅರಿವೂ ನಮಗಿದ್ದು, ಸರಿ ಮಾಡಿಕೊಳ್ಳಲು ಪ್ರಯತ್ನ ನಡೆಯುತ್ತಿದೆ. ನಾವು ಮಾತ್ರ ಸರಿ ಹೋದರೆ ವ್ಯವಸ್ಥೆ ಸಂಪೂರ್ಣ ಸರಿ ಹೋಗುವುದಿಲ್ಲ' ಎಂದು ಪ್ರತಿಪಾದಿಸಿದರು.

'ಸಹಕಾರ ಸಂಘದಿಂದ ಹಿಡಿದ ಸಂಸತ್ತಿನವರೆಗೆ ಎಲ್ಲಾ ಚುನಾವಣೆಗಳಲ್ಲಿ ಹಣ, ಹೆಂಡ, ಜಾತಿ ತೋಳ್ಬಲ ಪ್ರಾಧಾನ್ಯ ಪಡೆದು ನ್ಯಾಯಸಮ್ಮತ ಚುನಾವಣೆ ವ್ಯವಸ್ಥೆ ದೂರವಾಗುವ ಆತಂಕ ಕಾಡುತ್ತಿದೆ. ಯುವ ಜನತೆಗೆ 'ನನ್ನ ಮತ ಮಾರಾಟಕ್ಕಿಲ್ಲ' ಎಂಬ ಆಂದೋಲನ ರೂಪಿಸಬೇಕಿದೆ ಎಂದು ಅವರು ಕರೆ ನೀಡಿದರು.

ಆಧಾರ: ಪ್ರಜಾವಾಣಿ, ದಿನಾಂಕ:13.10.2022.

## 6. ಅಹವಾಲು ಸಮಿತಿ ಸಭೆಗೆ ಬಿಡಿಎ, ಬಿಬಿಎಂಪಿ ಆಯುಕ್ತರೇ ಗೈರು

ವಿಧಾನಸಭೆಯ ಅಹವಾಲು ಸಮಿತಿ ಸಭೆಗೆ ಗೈರು ಹಾಜರಾದ ಬಿಡಿಎ ಮತ್ತು ಬಿಬಿಎಂಪಿ ಆಯುಕ್ತರ  ವಿರುದ್ಧ ಸಮಿತಿ ತೀವ್ರ ಅಸಮಾಧಾನ ವ್ಯಕ್ತಪಡಿಸಿದ್ದು, ಈ ಬಗ್ಗೆ ಸರ್ಕಾರದ ಮುಖ್ಯ ಕಾರ್ಯದರ್ಶಿ ಅವರಿಗೆ ದೂರು ನೀಡಲು ತೀರ್ಮಾನಿಸಿದೆ ಎಂದು ಮೂಲಗಳು ತಿಳಿಸಿವೆ.

ವಿಧಾನಸೌಧದಲ್ಲಿ ಶಾಸಕ ಅಪ್ಪಚ್ಚು ರಂಜನ್‌ರವರ ಅಧ್ಯಕ್ಷತೆಯಲ್ಲಿ ನಾಡಪ್ರಭು ಕೆಂಪೇಗೌಡ ಬಡಾವಣೆ ಮತ್ತು ಕೆಂಗೇರಿ ಬಂಡೇಮಠ ಕೆಎಚ್‌ಬಿ ಬಡಾವಣೆಯ ನಾಗರಿಕರಿಂದ ಬಂದಿರುವ ದೂರುಗಳಿಗೆ ಸಂಬಂಧಿಸಿದಂತೆ ವಿಧಾನಸಭೆಯ ಅಹವಾಲು ಸಮಿತಿ ಸಭೆ ನಿಗದಿಯಾಗಿತ್ತು. ಬಿಬಿಎಂಪಿಯ ಮುಖ್ಯ ಆಯುಕ್ತ ತುಷಾರ್ ಗಿರಿನಾಥ್, ಬಿಡಿಎ ಆಯುಕ್ತ ಜಿ.ಕುಮಾರ್ ನಾಯ್ಕ್ ಹಾಗೂ ಇತರ ಅಧಿಕಾರಿಗಳ ಅನುಪಸ್ಥಿತಿಯ  ಬಗ್ಗೆ ಸಮಿತಿ ಸಭೆಯ ಅಧ್ಯಕ್ಷತೆ ವಹಿಸಿದ್ದ ಅಪ್ಪಚ್ಚು ರಂಜನ್ ಮತ್ತು ಸದಸ್ಯರಾದ ಎಸ್.ಸುರೇಶ್ ಕುಮಾರ್, ನೆಹರೂ ಓಲೇಕಾರ್, ಉಮಾನಾಥ ಕೋಟ್ಯಾನ್, ವೀರಭದ್ರಯ್ಯ ಮತ್ತು ರಮೇಶ್ ಭೂಸನೂರು ಮಠ ತೀವ್ರ ಅಸಮಾಧಾನ ಹೊರಹಾಕಿದರು ಪೂರ್ವ ಮಾಹಿತಿ ನೀಡದೇ ಸಭೆಗೆ ಗೈರಾಗಿದ್ದು ಸದಸ್ಯರ ಆಕ್ರೋಶಕ್ಕೆ ಕಾರಣವಾಗಿದ್ದು, ಹಿರಿಯ ಅಧಿಕಾರಿಗಳ ಈ ಧೋರಣೆ ವಿರುದ್ಧ ಸರ್ಕಾರದ ಮುಖ್ಯ ಕಾರ್ಯದರ್ಶಿ ಅವರಿಗೆ ಪತ್ರ ಬರೆಯಲು ಸಮಿತಿ ತೀರ್ಮಾನಿಸಿತು. ಎನ್‌ಪಿಕೆಎಲ್ ಮತ್ತು ಬಂಡೇಮಠ  ಕೆಎಚ್‌ಬಿ ಬಡಾವಣೆ ಮೂಲ ಸೌಕರ್ಯ ಕೊರತೆ ಕುರಿತ ಪ್ರಕರಣಗಳ ಮುಂದಿನ ವಿಚಾರಣೆಯನ್ನು  ಅಕ್ಟೋಬರ್ 27ಕ್ಕೆ  ನಡೆಸಲು ಸಮಿತಿ ತೀರ್ಮಾನಿಸಿತು ಎನ್ನಲಾಗಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ:14.10.2022.

## 7. ಕೆಂಪೇಗೌಡ ಬಡಾವಣೆಗೆ ಅರ್ಜಿ ಸಮಿತಿ ಸದಸ್ಯರ ಭೇಟಿ

ಕೆಂಪೇಗೌಡ ಬಡಾವಣೆಯಲ್ಲಿ ಕೈಗೊಳ್ಳಲಾಗಿರುವ ಮೂಲ ಸೌಕರ್ಯ ಅನುಷ್ಠಾನದಲ್ಲಿನ ಪ್ರಗತಿ ಕುರಿತಂತೆ ವಿಧಾನಸಭೆ ಅರ್ಜಿ ಸಮಿತಿಯಿಂದ ಬಡಾವಣೆಗೆ ಭೇಟಿ ನೀಡಿ ಪರಿಶೀಲಿಸಲಾಗುತ್ತಿದೆ ಬಡಾವಣೆಯಲ್ಲಿ 2022 ರ ಡಿಸೆಂಬರ್ ಅಂತ್ಯದೊಳಗೆ ಎಲ್ಲ ರೀತಿಯ ಮೂಲಸೌಕರ್ಯ ಕಲ್ಪಿಸುವುದಾಗಿ ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಅವರು ವಿಧಾನ ಮಂಡಲ ಅಧಿವೇಶನದಲ್ಲಿ ತಿಳಿಸಿದ ಹಿನ್ನೆಲೆಯಲ್ಲಿ ವಿಧಾನಸಭೆ ಅರ್ಜಿ ಸಮಿತಿ ಸದಸ್ಯ ಶಾಸಕ ಅಪ್ಪುಚ್ಚು ರಂಜನ್ ನೇತೃತ್ವದಲ್ಲಿ ಬಿಡಿಎ ಅಧಿಕಾರಿಗಳೊಂದಿಗೆ ಸಭೆ ನಡೆಸಲಾಯಿತು. ಈ ವೇಳೆ ಸಮಿತಿಯ ಪ್ರಶ್ನೆಗೆ ಬಿಡಿಎ ಅಧಿಕಾರಿಗಳು ಸಮರ್ಪಕವಾಗಿ ಉತ್ತರಿಸದ ಕಾರಣ, ಸಮಿತಿಯ ಸದಸ್ಯ ಹಾಗೂ ಶಾಸಕ ಸುರೇಶ್ ಕುಮರ್ ನೇತೃತ್ವದಲ್ಲಿ ಬಡಾವಣೆಗೆ ಭೇಟಿ ನೀಡಿ ಮೂಲಸೌಕರ್ಯ ಅನುಷ್ಠಾನದ ಕುರಿತಂತೆ ಪರಿಶೀಲನೆ ನಡೆಸಲು ನಿರ್ಧರಿಸಲಾಯಿತು.

ಆಧಾರ: ಉದಯವಾಣಿ, ದಿನಾಂಕ:14.10.2022.

## 8. ಸಮಿತಿ ಸಭೆಗೆ ಗೈರಾಗಿಲ್ಲ

ನಾಡಪ್ರಭು ಕೆಂಪೇಗೌಡ ಬಡಾವಣೆಗೆ ಮೂಲಸೌಕರ್ಯ ಕಲ್ಪಿಸುವ ಸಂಬಂಧ ನಿಗದಿಯಾಗಿದ್ದ ವಿಧಾನಸಭೆಯ ಅರ್ಜಿಗಳ ಸಮಿತಿ ಸಭೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ (ಬಿಡಿಎ) ಆಯುಕ್ತ ಜಿ.ಕುಮಾರ ನಾಯಕ್ ಅನುಮತಿ ಇಲ್ಲದೆ ಗೈರುಹಾಜರಾಗಿಲ್ಲ ಎಂದು ಪ್ರಾಧಿಕಾರದ ಅಧಿಕಾರಿಗಳು ತಿಳಿಸಿದ್ದಾರೆ.

ಕೇಂದ್ರ ಸರ್ಕಾರದ ಇಂಧನ ಸಚಿವಾಲಯದ ಆಹ್ವಾನದ ಮೇರೆಗೆ ರಾಜಸ್ಥಾನದ ಉದಯಪುರದಲ್ಲಿ ನಡೆಯುತ್ತಿರುವ ಮೂರು ದಿನಗಳ ಸಮಾವೇಶದಲ್ಲಿ ಪಾಲ್ಗೊಳ್ಳುವ ಹಿನ್ನೆಲೆಯಲ್ಲಿ ಕುಮಾರ ನಾಯಕ್ ವಿನಾಯಿತಿ ಕೋರಿ ಈ ಮೊದಲೇ ವಿಧಾನಸಭೆ ಕಾರ್ಯದರ್ಶಿಗೆ ಪತ್ರ ಬರೆದಿದ್ದರು ಎಂದು ಆಯುಕ್ತರ ಕಚೇರಿ ಸ್ಪಷ್ಟಪಡಿಸಿದೆ.

ಅಕ್ಟೋಬರ್ 7ರಂದೇ ಆಯುಕ್ತರ ಕಚೇರಿಯಿಂದ ಬರೆದಿದ್ದ ಪತ್ರವನ್ನು ವಿಧಾನಸಭೆಯ ಕಾರ್ಯದರ್ಶಿಯವರ ಕಚೇರಿಯು 10 ರಂದು ಸ್ವೀಕರಿಸಿ ಹಿಂಬರಹ ನೀಡಿದೆ. ಅಲ್ಲದೇ ಸಭೆಗೆ ಆಯುಕ್ತರ ಅನುಪಸ್ಥಿತಿಯಲ್ಲಿ ಪ್ರಾಧಿಕಾರದ ಇತರ ಅಧಿಕಾರಿ ಹಾಜರಾಗಿ ಸಮಿತಿಯು ಬಯಸುವ ಮಾಹಿತಿಯನ್ನು ಒದಗಿಸಲು ಕ್ರಮ ಕೈಗೊಳ್ಳಲಾಗಿತ್ತು. ಇದರನ್ವಯ 14 ರಂದು ನಡೆದ ಸಮಿತಿ ಸಭೆಯಲ್ಲಿ ಬಿಡಿಎ ಅಭಿಯಂತರ ಸದಸ್ಯರು ಹಾಜರಾಗಿ ಕೆಂಪೇಗೌಡ ಬಡಾವಣೆಗೆ ಸಂಬಂಧಿಸಿದ ಮಾಹಿತಿ ಒದಗಿಸಲಾಗಿದೆ ಎಂದು ಅಧಿಕಾರಿಗಳು ತಿಳಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:16.10.2022.

## 9. ಎನ್ಇಪಿ ಆಶಾಕಿರಣ

ಪರಕೀಯರ ಕಾರಣದಿಂದಾಗಿ ಹಣ ಗಳಿಕೆಯ ಶಿಕ್ಷಣವೇ ಸಿಕ್ಕಿದೆಯೇ ಹೊರತು ಜ್ಞಾನ ಕಲಿಕೆಯ ಶಿಕ್ಷಣ ಸಿಕ್ಕಿಲ್ಲ ಈಗ ರಾಷ್ಟ್ರಿಯ ಶಿಕ್ಷಣ ನೀತಿ (ಎನ್ಇಪಿ) ಆಶಾಕಿರಣವಾಗಿದೆ. ನೈತಿಕ ಶಿಕ್ಷಣದ ಮೌಲ್ಯಗಳನ್ನು ಹೆಚ್ಚಿಸಬೇಕು ಎಂದು ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಹೇಳಿದರು.

ಇಲ್ಲಿನ ಕೃಷ್ಣಮೂರ್ತಿಪುರಂನ ಶಾರದಾ ವಿಲಾಸ ಶತಮಾನೋತ್ಸವ ಭವನದಲ್ಲಿ ಪಂಡಿತರತ್ನ ಕೆ.ಎಸ್.ವರದಾಚಾರ್ಯ ಶತಮಾನೋತ್ಸವ ಸಮಿತಿಯಿಂದ ಎರಡು ದಿನಗಳವರೆಗೆ ಆಯೋಜಿಸಿರುವ ಪಂಡಿತರತ್ನ ಕೆ.ಎಸ್.ವರದಾಚಾರ್ಯ ಶತಮಾನೋತ್ಸವಾ ಉದ್ಘಾಟನಾ ಸಮಾರಂಭದಲ್ಲಿ "ಸಮನ್ವಯ ವರದ" ಸಂಸ್ಮರಣ ಗ್ರಂಥ ಬಿಡುಗಡೆ ಮಾಡಿ ಮಾತಾನಾಡಿದ್ದ ಅವರು, ಹಣ ಗಳಿಕೆಯ ಉದ್ದೇಶದ ಶಿಕ್ಷಣ ಅಪಾಯಕಾರಿಯಾದುದ್ದು. ಮಕ್ಕಳಿಗೆ ಕಠಿಣ ಪರಿಶ್ರಮದ ಶಿಕ್ಷಣ ಸಿಕ್ಕಾಗ ಮಾತ್ರವೇ ಜ್ಞಾನಾರ್ಜನೆ ಆಗುತ್ತದೆ. ದೇಶ ಮೊದಲು ಎನ್ನುವ ಮನೋಭಾವ ಎಲ್ಲರಲ್ಲೂ ಬರಬೇಕು. ನಮ್ಮ ಧರ್ಮ–ಸಂಸ್ಕೃತಿಯ ರಕ್ಷಣೆಯಾಗಬೇಕು. ವೈಯುಕ್ತಿಕ ಹಿತ, ನಂಬಿಕೆ, ಆಚಾರ–ವಿಚಾರಗಳ ನಡುವೆ ರಾಷ್ಟ್ರ ಚಿಂತನೆಗೆ ಮೊದಲ ಪ್ರಾಧಾನ್ಯತೆ ನೀಡಬೇಕು. ಕೊಡುಗೆ ನೀಡಿದ ಹಿರಿಯರನ್ನು ನೆನೆಯುವುದು ಸುಸಂಸ್ಕೃತ ಸಮಾಜದ ಲಕ್ಷಣ. ಇದರ ಮೂಲಕ ಇಂದಿನ ಪೀಳಿಗೆಗೆ ಪ್ರೇರಣೆ ನೀಡಬೇಕು ಎಂದು ಹೇಳಿದರು.

ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದ ವಿಶ್ರಾಂತ ಕುಲಪತಿ ಡಾ.ಪರಮೇಶ್ವರ ನಾರಾಯಣಶಾಸ್ತ್ರಿ ಮತ್ತು ತಿರುಪತಿಯ ರಾಷ್ಟ್ರೀಯ ಸಂಸ್ಕೃತಿ ವಿಶ್ವವಿದ್ಯಾಲಯದ ಸಾಹಿತ್ಯ ವಿಭಾಗದ ಮುಖ್ಯಸ್ಥ ಡಾ.ಚಕ್ರವರ್ತಿ ರಂಗನಾಥನ್ ಅವರನ್ನು ಸಹಕಾರಿ ಸಚಿವ ಎಸ್.ಟಿ.ಸೋಮಶೇಖರ್ ಸನ್ಮಾನಿಸಿದರು.

**ಮೈಸೂರು ರಾಜಮನೆತನ ಸ್ಮರಿಸಬೇಕು:** ಮೈಸೂರಿನ ರಾಜಮನೆತನವನ್ನು ಸದಾ ಸ್ಮರಿಸಬೇಕು. ವಿದ್ವಾಂಸರಿಗೆ ರಾಜಾಶ್ರಯ ನೀಡಿದ ಮನೆತನವದು. ಅದರಿಂದಲೇ ನಮ್ಮ ಸನಾತನ ಹಿಂದೂ ಧರ್ಮದ ಸಂಸ್ಕೃತಿಯ ರಕ್ಷಣೆಯಾಗಿದೆ ಹಾಗೂ ಬೆಳೆದಿದೆ. ಪರಕೀಯರು ನಮ್ಮ ನಂಬಿಕೆಯ, ಶ್ರದ್ಧೆಯ ಕೇಂದ್ರಗಳನ್ನು ಘಾಸಿಗೊಳಸಿರಬಹುದು. ಪುಸ್ತಕಗಳನ್ನು ಸುಟ್ಟಿರಬಹುದು. ಆದರೆ, ನಮ್ಮ ಜ್ಞಾನವನ್ನು

ಒಯ್ಯಲಾಗಲಿಲ್ಲ. ಹೀಗಾಗಿಯೇ, ಭಾರತದಿಂದ ಒಳಿತಾಗುತ್ತದೆ ಎಂಬ ನಂಬಿಕೆಯು ಇಡೀ ವಿಶ್ವಕ್ಕೇ ಬಂದಿದೆ ಎಂದು ವಿಧಾನ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಪ್ರತಿಪಾದಿಸಿದರು.

ಆಧಾರ: ವಿಶ್ವ ವಾಣಿ, ದಿನಾಂಕ:23.10.2022.

## 10. ಭವಿಷ್ಯದಲ್ಲಿ ಭಾರತಕ್ಕೆ ವಿಶ್ವಗುರು ಮಾನ್ಯತೆ : ಸ್ಪೀಕರ್ ಕಾಗೇರಿ

ಸತ್ಯ, ಧರ್ಮ, ನ್ಯಾಯ-ನೀತಿಯ ನೆಲೆಯಲ್ಲಿ ಸನಾತನ ಸಂಸ್ಕೃತಿಯ ಸಂರಕ್ಷಣೆಯೊಂದಿಗೆ ಮನಪರಿವರ್ತನೆ ಮೂಲಕ ಧರ್ಮಸ್ಥಳದ ಧರ್ಮಾಧಿಕಾರಿ ಡಾ। ಡಿ.ವೀರೇಂದ್ರ ಹೆಗಡೆಯವರು ವಿವಿಧ ಕ್ಷೇತ್ರಗಳಲ್ಲಿ ಮಾಡಿದ ಸೇವಾ ಕಾರ್ಯಗಳು ಹಾಗೂ ಕ್ರಾಂತಿಕಾರಿ ಪರಿವರ್ತನೆ ಸಾರ್ವಕಾಲಿಕ ಮೌಲ್ಯ ಹೊಂದಿದ್ದು ಸಮಾಜಕ್ಕೆ ರಾಷ್ಟ್ರಕ್ಕೆ ತಪಸ್ಸಿನಂತ ಸೇವೆ ನೀಡಿದ್ದಾರೆ ಎಂದು ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಹೇಳಿದರು.

ಡಾ। ವೀರೇಂದ್ರ ಹೆಗ್ಗಡೆಯವರ 55ನೇ ಪಟ್ಟಾಭಿಷೇಕ ವರ್ಧಂತ್ಯುತ್ಸವ ಪ್ರಯುಕ್ತ ಧರ್ಮಸ್ಥಳ ಮಹೋತ್ಸವ ಸಭಾಭವನದಲ್ಲಿ ನಡೆದ ಅಭಿನಂದನ ಸಮಾರಂಭದಲ್ಲಿ ಅವರು ಮಾತನಾಡಿದರು.

ಪ್ರಧಾನಿ ನರೇಂದ್ರ ಮೋದಿಯವರ ನೇತೃತ್ವದಲ್ಲಿ ಹಾಗೂ ಹೆಗ್ಗಡೆಯವರ ಸೇವಾ ಕಾರ್ಯಗಳ ಕಾರ್ಯವೈಖರಿ ಹಾಗೂ ಸಾಧನೆಯ ಫಲವಾಗಿ ಭವಿಷ್ಯದಲ್ಲಿ ಭಾರತ ವಿಶ್ವಗುರು ಮಾನ್ಯತೆಯನ್ನು ಹೊಂದಲಿದೆ. ಹೆಗ್ಗಡೆಯವರ ಸೇವೆ ಸಾಧನೆಯನ್ನು ಮನ್ನಿಸಿಯೇ ಪ್ರಧಾನಿಯವರು ಅವರನ್ನು ರಾಜ್ಯಸಭಾ ಸದಸ್ಯರಾಗಿ ನಾಮನಿರ್ದೇಶನ ಮಾಡಿದ್ದಾರೆ ಎಂದರು.

ಡಾ। ಡಿ.ವೀರೇಂದ್ರ ಹೆಗ್ಗಡೆಯವರು ಮಾತನಾಡಿ, ಪಟ್ಟಾಭಿಷೇಕಕ್ಕೆ ಅದರದೇ ಆದ ಜವಾಬ್ದಾರಿಯಿದೆ. ಕರ್ತವ್ಯ, ಹೋಣೆಗಾರಿಕೆ, ದೈವ ದೇವರ ಸೇವೆಯೊಂದಿಗೆ ಸಾನ್ನಿಧ್ಯ ರಕ್ಷಣೆ ಮತ್ತು ಸಮಾಜದ ಸೇವೆ ಪ್ರಮುಖವಾಗಿದೆ ಎಂದರು.

ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆಯ ಮೂಲಕ 50 ಲಕ್ಷ ಕುಟುಂಬಗಳ ಫಲಾನುಭವಿಗಳು ಸ್ವಾವಲಂಬಿ ಜೀವನ ನಡೆಸುತ್ತಿದ್ದು ಸಣ್ಣ ಪ್ರಯತ್ನ ಇಂದು ಬೃಹದಾಕಾರವಾಗಿ ವಿಸ್ತರಿಸಿ ಮಹಿಳಾ ಸಶಕ್ತೀಕರಣಕ್ಕೆ ನಾಂದಿಯಾಗಿದೆ. ಈ ವರ್ಷ ಈಗಾಗಲೇ 7,312 ದೇವಸ್ಥಾನಗಳಿಗೆ ರೂ.89 ಕೋಟಿ ನೆರವು ನೀಡುವ ಮೂಲಕ ದಾನ ಧರ್ಮದಿಂದಲೂ ಪರಿವರ್ತನೆ ಕ್ಷೇತ್ರದಿಂದಾಗಿದೆ ಎಂದರು.

ಡಾ।ಹೇಮಾವತಿ ವೀ. ಹೆಗ್ಗಡೆ, ಡಿ. ಸುರೇಂದ್ರ ಕುಮಾರ್, ಪ್ರೊ। ಎಸ್ ಪ್ರಬಾಕರ್, ಡಿ. ರಾಜೇಂದ್ರ ಕುಮಾರ್, ಮಣಿಪಾಲದ ಮೋಹನದಾಸ ಸ್ವಾಮೀಜಿ, ಶಾಸಕ ಕೆ. ಹರೀಶ್ ಪೂಂಜ, ವಿಧಾನಪರಿಷತ್ ಸದಸ್ಯ ಕೆ.ಪ್ರತಾಪಸಿಂಹ ನಾಯಕ್, ಮಾಜಿ ಸಚಿವ ಕೆ.ಅಭಯಚಂದ್ರ ಜೈನ್ ಮತ್ತು ಎಸ್.ಡಿ.ಸಂಪತ್ ಸಾಮ್ರಾಜ್ಯ ಶಿರ್ತಾಡಿ ಉಪಸ್ಥಿತರಿದ್ದರು.

ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆಯ ಸಿ.ಒ.ಒ. ಅನಿಲ್ ಕುಮಾರ್ ಸ್ವಾಗತಿಸಿದರು. ಡಿ.ಎಂ.ಸಿ.ಯ ಪ್ರಭಾಕರ್ ವಂದಿಸಿದರು. ಉಪನ್ಯಾಸಕ ಮಹಾವೀರ್ ಜೈನ್ ಕಾರ್ಯಕ್ರಮ ನಿರ್ವಹಿಸಿದರು.

ಆಧಾರ: ಉದಯವಾಣಿ, ದಿನಾಂಕ:25.10.2022.

ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ದಿನಾಂಕ: 24.10.2022ರಂದು ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ಶ್ರೀ ಮಂಜುನಾಥ ಸ್ವಾಮಿ ದೇವರ ದರ್ಶನ ಪಡೆದು, ಪೂಜ್ಯ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರ ಪಟ್ಟಾಭಿಷೇಕದ 55 ನೇ ವರ್ಧಂತ್ಯುತ್ಸವದಲ್ಲಿ ಭಾಗವಹಿಸಿ ಶುಭ ಕೋರಿ, ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ, ಶ್ರೀ ವೀರೇಂದ್ರ ಹೆಗ್ಗಡೆ ಅವರ ಧರ್ಮಪತ್ನಿ ಶ್ರೀಮತಿ ಹೇಮಾವತಿ ಹೆಗ್ಗಡೆ, ಶಾಸಕರಾದ ಶ್ರೀ ಹರೀಶ್ ಪೂಂಜಾ, ವಿ.ಪ. ಸದಸ್ಯರಾದ ಶ್ರೀ ಕೆ. ಪ್ರತಾಪಸಿಂಹ ನಾಯಕ್ ಮತ್ತಿತರರು ಉಪಸ್ಥಿತರಿದ್ದರು.





## 11. ಸದನದಲ್ಲಿ ನೀಡುವ ಭರವಸೆ ಶೀಘ್ರ ಈಡೇರಿಸುವಂತೆ ಸೂಚನೆ

ಸದನದಲ್ಲಿ ನೀಡುವ ಭರವಸೆಗಳನ್ನು ಕಾಲಮಿತಿಯೊಳಗೆ ಅನುಷ್ಠಾನಗೊಳಿಸುವಂತೆ ಸರ್ಕಾರದ ಮುಖ್ಯಕಾರ್ಯದರ್ಶಿ ವಂದಿತಾ ಶರ್ಮಾ ಅಧಿಕಾರಿಗಳಿಗೆ ಸೂಚನೆ ನೀಡಿದ್ದಾರೆ.

ಸದನದಲ್ಲಿ ಸಚಿವರು ನೀಡುವ ಭರವಸೆಗಳು ಪೂರ್ಣಗೊಳ್ಳುವುದಿಲ್ಲ. ಅದು ಕೇವಲ ಭರವಸೆಗಳಾಗಿಯೇ ಉಳಿಯುತ್ತವೆ ಎನ್ನುವ ಆರೋಪವನ್ನು ಪ್ರತಿಪಕ್ಷದವರು ಮಾಡುತ್ತಿದ್ದರು. ಆದ್ದರಿಂದ ಈ ಬಗ್ಗೆ ಸೂಚನೆ ನೀಡಿರುವ ವಂದಿತಾ ಶರ್ಮಾ ಅವರು, ವಿಧಾನ ಮಂಡಲದಲ್ಲಿ ನೀಡಲಾಗುವ ಭರವಸೆಗಳನ್ನು ಕಾಲಮಿತಿಯೊಳಗೆ ಅನುಷ್ಠಾನಗೊಳಿಸಲು ಅನುಪಾಲನಾ ಕ್ರಮ ವಹಿಸುವಂತೆ ಸೂಚನೆ ನೀಡಿದ್ದಾರೆ.

ವಿಧಾನ ಪರಿಷತ್ತಿನ ಸರ್ಕಾರಿ ಭರವಸೆಗಳ ಸಮಿತಿಯ ಅಧ್ಯಕ್ಷರು ಅಕ್ಟೋಬರ್ 28ರಂದು ಮುಖ್ಯ ಕಾರ್ಯದರ್ಶಿಗೆ ಪತ್ರ ಬರೆದು, ಸದನ ನಡೆಯುವಾಗ ಹಾಜರಿರುವ ಇಲಾಖಾ ಅಧಿಕಾರಿಗಳು, ಸಚಿವರುಗಳು ನೀಡುವ ಭರವಸೆಗಳ ಅನುಷ್ಠಾನಕ್ಕಾಗಿ ತ್ವರಿತ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಎಲ್ಲ ಇಲಾಖೆಗಳ ಪ್ರಧಾನ ಕಾರ್ಯದರ್ಶಿಗಳಿಗೆ ಸೂಕ್ತ ಸೂಚನೆ ನೀಡಿ, ಭರವಸೆ ಸಮಿತಿ ಸಭೆಯಲ್ಲಿ ವಿನಾಕಾರಣ ಚರ್ಚೆಗೆ ಆಸ್ಪದ ನೀಡದೇ, ಭರವಸೆಗಳನ್ನು ಶೀಘ್ರವಾಗಿ ಪೂರ್ಣಗೊಳಿಸಲು ಅನುಪಾಲನೆ ಮಾಡುವಂತೆ ತಿಳಿಸಲು ಕೋರಿದ್ದರು. ಈ ಹಿನ್ನೆಲೆಯಲ್ಲಿ ವಿಧಾನಮಂಡಲ ಕಲಾಪ ನಡೆಯುವ ಸಂದರ್ಭದಲ್ಲಿ ಆಯಾ ಇಲಾಖೆಗೆ ಸಂಬಂಧಿಸಿದಂತೆ ಸಚಿವರುಗಳು ನೀಡುವ ಉತ್ತರದಿಂದ ಉದ್ಭವಿಸುವ ಭರವಸೆಗಳ ಅನುಷ್ಠಾನಕ್ಕಾಗಿ ತುರ್ತು ಅನುಪಾಲನಾ ಕ್ರಮವನ್ನು ವಹಿಸುವಂತೆ ಸೂಚಿಸಿದ್ದಾರೆ.

ಆಧಾರ: ವಿಶ್ವವಾಣಿ, ದಿನಾಂಕ:07.11.2022.

## 12. ಅತ್ಯುತ್ತಮ ಅಸೆಂಬ್ಲಿ, ಮೇಲ್ಮನೆ ಪ್ರಶಸ್ತಿಗೆ ಮಾನದಂಡ : ಕಾಗೇರಿ

ಅತ್ಯುತ್ತಮ ವಿಧಾನಸಭೆ, ವಿಧಾನಪರಿಷತ್ ಪ್ರಶಸ್ತಿಗೆ ಮಾನದಂಡಗಳನ್ನು ಸೂಚಿಸುವ ಕುರಿತು ಲೋಕಸಭಾಧ್ಯಕ್ಷ ಓಂ ಬಿರ್ಲಾ ಅವರಿಗೆ ಡಿಸೆಂಬರ್‌ನಲ್ಲಿ ಶಿಫಾರಸ್ಸು ಸಲ್ಲಿಸಲಾಗುವುದು ಎಂದು ವಿಧಾನಸಭಾಧ್ಯಕ್ಷರ ಸಮಿತಿ ಅಧ್ಯಕ್ಷ ಮತ್ತು ರಾಜ್ಯ ವಿಧಾನಸಭೆಯ ಅಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಹೇಳಿದ್ದಾರೆ.

ವಿಧಾನಸೌಧದಲ್ಲಿ ನಡೆದ ವಿಧಾನಸಭಾಧ್ಯಕ್ಷರ ಸಮಿತಿಯ ಸಭೆ ಬಳಿಕ ಸುದ್ದಿಗಾರರ ಜೊತೆ ಮಾತನಾಡಿದ ಅವರು, ಸಮಿತಿಯು ಎರಡನೇ ಸಭೆ ನಡೆಸಿದೆ. ಅತ್ಯುತ್ತಮ ವಿಧಾನಸಭೆ, ವಿಧಾನ ಪರಿಷತ್ ಪ್ರಶಸ್ತಿಗೆ ಮಾನದಂಡಗಳನ್ನು ಸೂಚಿಸುವ ಸಂಬಂಧ ಚರ್ಚೆ ನಡೆಸಲಾಗಿದೆ. ಡಿಸೆಂಬರ್‌ನಲ್ಲಿ ಲೋಕಸಭಾಧ್ಯಕ್ಷರಿಗೆ ಸಭೆಯ ಶಿಫಾರಸ್ಸುಗಳನ್ನು ಸಲ್ಲಿಸಲಾಗುವುದು ಎಂದು ಹೇಳಿದರು.

ದೆಹಲಿ, ಬಿಹಾರ, ಅಸ್ಸಾಂ, ಗುಜರಾತ್, ತಮಿಳುನಾಡು ರಾಜ್ಯಗಳ ವಿಧಾನಸಭೆಯ ಸಭಾಧ್ಯಕ್ಷರು ಮತ್ತು ಮಹಾರಾಷ್ಟ್ರ ರಾಜ್ಯದ ವಿಧಾನಪರಿಷತ್‌ನ ಸಭಾಪತಿಗಳು ಸಮಿತಿಯ ಸದಸ್ಯರಾಗಿದ್ದಾರೆ. ಅವರೆಲ್ಲರೂ ಸಭೆಯಲ್ಲಿ ಭಾಗವಹಿಸಿದ್ದರು ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ:08.11.2022.

ದಿನಾಂಕ: 07.11.2022ರಂದು ನಡೆಯಲ್ಲಿರುವ ದೇಶದ ಅತ್ಯುತ್ತಮ ವಿಧಾನ ಸಭೆ/ ವಿಧಾನ ಪರಿಷತ್ತು ಪ್ರಶಸ್ತಿ ಆಯ್ಕೆಗೆ ಮಾನದಂಡಗಳನ್ನು ಸೂಚಿಸುವ ಕುರಿತು ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ, ಕಾಗೇರಿಯವರ ಅಧ್ಯಕ್ಷತೆಯಲ್ಲಿ ಪೀಠಾಸೀನಾಧಿಕಾರಿಗಳ ಸಮಿತಿ ಸಭೆ ನಡೆಯಲಿದ್ದು, ಅದರ ಪೂರ್ವಭಾವಿಯಾಗಿ ದಿನಾಂಕ: 05.11.2022ರಂದು ಸನ್ಮಾನ್ಯ ಸಭಾಧ್ಯಕ್ಷರು ವಿಧಾನಸೌಧದಲ್ಲಿ ವಿಧಾನಸಭೆ ಸಚಿವಾಲಯದ ಕಾರ್ಯದರ್ಶಿಗಳು ಹಾಗೂ ಅಧಿಕಾರಿಗಳೊಂದಿಗೆ ಚರ್ಚಿಸಿ, ಅಗತ್ಯ ಸೂಚನೆಗಳನ್ನು ನೀಡಿದರು.



ದಿನಾಂಕ: 07.11.2022ರಂದು ಅತ್ಯುತ್ತಮ ವಿಧಾನಸಭೆ ಮತ್ತು ವಿಧಾನ ಪರಿಷತ್ತು ಪ್ರಶಸ್ತಿ ಆಯ್ಕೆಗೆ ಮಾನದಂಡಗಳನ್ನು ರೂಪಿಸಲು ಸನ್ಮಾನ್ಯ ಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ ರಚಿತವಾದ ಪೀಠಾಸೀನಾಧಿಕಾರಿಗಳ ಸಮಿತಿಯ ಸಭೆಯು ದಿನಾಂಕ: 07.11.2022ರಂದು ಸನ್ಮಾನ್ಯ ಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ ಬೆಂಗಳೂರಿನ ವಿಧಾನಸೌಧದಲ್ಲಿ ನಡೆಯಿತು. ಈ ಸಭೆಯಲ್ಲಿ ದೆಹಲಿ, ಆಸ್ಸಾಂ ಮತ್ತು ತಮಿಳುನಾಡಿನ ವಿಧಾನಸಭಾ ಅಧ್ಯಕ್ಷರುಗಳು ಹಾಗೂ ಅಧಿಕಾರಿಗಳು ಭಾಗವಹಿಸಿದ ಸಂದರ್ಭ; ಈ ಸಂದರ್ಭದಲ್ಲಿ ಸಮಿತಿಯ ಸದಸ್ಯರುಗಳು ಸನ್ಮಾನ್ಯ ಸಭಾಧ್ಯಕ್ಷರೊಂದಿಗೆ ವಿಧಾನ ಸಭೆ/ಪರಿಷತ್ತು ಸಭಾಂಗಣಗಳಿಗೆ ಭೇಟಿ ನೀಡಿದರು;





## 13. ನಾಡಪ್ರಭುವಿಗೆ ನಮೋ ನಮನ

ನಾಡಿನ ದಾರ್ಶನಿಕರು, ನಾಡ ಕಟ್ಟಿದವರು ಹಾಗೂ ಚಾರಿತ್ರಿಕ ವೀರ ಮಹಿಳೆಯನ್ನು ಸ್ಮರಿಸುತ್ತಲೇ ಕರುನಾಡಿಗೆ ಅನುಕೂಲವಾಗುವ ವಿವಿಧ ಯೋಜನೆಗೆ ಚಾಲನೆ ನೀಡಿದ ಪ್ರಧಾನಿ ನರೇಂದ್ರ ಮೋದಿ ಕೇಂದ್ರ––ರಾಜ್ಯ ಸರ್ಕಾರದ ಡಬಲ್ ಇಂಜಿನ್ ಸರ್ಕಾರದ ಭಾಗಶಃ ರಿಪೋರ್ಟ್ ಕಾರ್ಡನ್ನು ಜನರ ಮುಂದಿಟ್ಟರು.

ಕರ್ನಾಟಕದ ಪಾಲಿಗೆ ಮಹತ್ವ ಎನಿಸಿದ ಸರಣಿ ಕಾರ್ಯಕ್ರಮದಲ್ಲಿ ಪಾಲ್ಗೊಂಡ ಅವರು ಲಕ್ಷಾಂತರ ಜನರ ಮುಂದೆ ಅಂಕಿ ಅಂಶಗಳ ಸಹಿತ ಅಭಿವೃದ್ಧಿಯ ಸಾಧನೆಯ ಪಠಿಸಿದರು. ಇದಕ್ಕೆ ಪೂರಕವಾಗಿ ಪ್ರಗತಿಯ ದ್ಯೋತಕವಾಗಿರುವ 108 ಅಡಿ ಎತ್ತರದ ನಾಡಪ್ರಭು ಕೆಂಪೇಗೌಡರ ಕಂಚಿನ ಪ್ರತಿಮೆ ಅನಾವರಣಗೊಳಿಸಿದರು.

ಅಷ್ಟೇ ಅಲ್ಲದೇ, ದೇಶೀಯ ತಂತ್ರಜ್ಞಾನದಿಂದ ರೂಪುಗೊಂಡ ಅತಿ ವೇಗದ ರೈಲು ವಂದೇ ಭಾರತ್‌ಗೆ ಚಾಲನೆ, ದೇಶದ ಪುಣ್ಯಕ್ಷೇತ್ರಗಳಲ್ಲಿ ಒಂದಾದ ಕಾಶಿ ಪ್ರವಾಸದ ವಿಶೇಷ ರೈಲಿಗೆ ಹಸಿರು ನಿಶಾನೆ, ಅಂತರಾಷ್ಟ್ರಿಯ ವಿಮಾನ ನಿಲ್ದಾಣದ ಅತ್ಯಾಧುನಿಕ ಎರಡನೇ ಟರ್ಮಿನಲ್ ಸೇವೆಯನ್ನು ಸಾರ್ವಜನಿಕರಿಗೆ ಸಮರ್ಪಿಸಿದರು.

ಬೆಂಗಳೂರಿಗೆ ಬಂದಿಳಿಯುತ್ತಿದ್ದಂತೆ ಶಾಸಕರ ಭವನದ ಆವರಣದಲ್ಲಿರುವ ಮಹರ್ಷಿ ವಾಲ್ಮೀಕಿ ಹಾಗೂ ಸಂತ ಕನಕ ದಾಸರ ಪ್ರತಿಮೆಗೆ ಪುಷ್ಪಾರ್ಚನೆ ಮಾಡಿ ಗೌರವ ಸಲ್ಲಿಸಿದರು. ಕನಕ ದಾಸ ಜಯಂತಿ ಹಿನ್ನೆಲೆಯಲ್ಲಿ ಈ ಭೇಟಿ ಮಹತ್ವ ಪಡೆದು ಕೊಂಡಿತ್ತು. ಬಳಿಕ ರೈಲ್ವೆ ನಿಲ್ದಾಣಕ್ಕೆ ತೆರಳಿ ದಕ್ಷಿಣ ಭಾರತದ ಮೊದಲ ವಂದೇ ಭಾರತ್ ರೈಲಿನ ಸಂಚಾರ ಆರಂಭಕ್ಕೆ ಹಸಿರು ಬಾವುಟ ತೋರಿದರು. ರೈಲಿನ ಒಳಹೊಕ್ಕು ಅಲ್ಲಿದ್ದ ರೈಲ್ವೆ ಇಲಾಖೆ ಅಧಿಕಾರಿ, ಸಿಬ್ಬಂದಿಯೊಂದಿಗೆ ಉಭಯ ಕುಶಲೋಪರಿ

ಕೂಡ ನಡೆಸಿದರು. ಅಷ್ಟೇ ಅಲ್ಲದೇ ಧಾರ್ಮಿಕ ದತ್ತಿ ಇಲಾಖೆ ವ್ಯವಸ್ಥೆ ಮಾಡಿರುವ ಕಾಶಿ ದರ್ಶನ ರೈಲು ಪ್ರಯಾಣ ಕಾರ್ಯಕ್ರಮಕ್ಕೂ ಚಾಲನೆ ನೀಡಿದರು.

ರಸ್ತೆ ಮಾರ್ಗದಲ್ಲಿ ಸಾವು ವೇಳೆ ಸಂಗೊಳ್ಳಿ ರಾಯಣ್ಣ ವೃತ್ತದಲ್ಲಿ ಸೇರಿದ್ದ ಜನರ ಹರ್ಷೋದ್ಗಾರ ಕಂಡು ಕಾರಿನಿಂದ ಕೆಳಗಿಳಿದರು. ನಾಲ್ಕೂ ದಿಕ್ಕಿನತ್ತ ಕೈ ಬೀಸಿ ನೆರದವರಿಗೆ ಸಮೀಪ ದರ್ಶನ ನೀಡಿ ಖುಷಿಪಡಿಸಿದರು. ಮಧ್ಯಾಹ್ನ ಕೆಂಪೆಗೌಡ ಅಂತಾರಾಷ್ಟ್ರಿಯ ವಿಮಾನ ನಿಲ್ದಾಣದ ಟರ್ಮಿನಲ್ಲ್–2ನ್ನು ಸಾರ್ವಜನಿಕ ಸೇವೆಗೆ ಮುಕ್ತಗೊಳಿಸಿದ್ದಲ್ಲದೇ, ಅಲ್ಲಿನ ವೈಭವ ಕಂಡು ಸಂತಸಪಟ್ಟರು. ದಿನದ ಮೂರನೇ ಪ್ರಮುಖ ಕಾರ್ಯಕ್ರಮವಾಗಿ ನಾಡಪ್ರಭೂ ಕೆಂಪೇಗೌಡರ 108 ಅಡಿ ಎತ್ತರದ ಕಂಚಿನ ಪ್ರತಿಮೆ ಅನಾವರಣಗೊಳಿಸಿ, ಪಾದಕ್ಕೆ ಜಲಾಭಿಷೇಕ ನಡೆಸಿ ಗೌರವ ಸಲ್ಲಿಸಿದರು.

**ಅಭಿವೃದ್ಧಿಯ ತಾಕತ್ತು:**

ಪ್ರತಿಮೆ ಅನಾವರಣದ ಬಳಿಕ ಸಾರ್ವಜನಿಕ ಸಭೆಯಲ್ಲಿ ಕಿಕ್ಕಿರಿದ ಜನರ ಮುಂದೆ ಅಭಿವೃದ್ಧಿ ವಿಚಾರವಾಗಿ ಕರ್ನಾಟಕಕ್ಕೆ ಬೆನ್ನು ತಟ್ಟುವ ಜೊತೆ ಕೇಂದ್ರ ರಾಜ್ಯ ಸರ್ಕಾರದ ಕೊಡುಗೆಗಳನ್ನು ಮೋದಿ ಪ್ರಸ್ತಾಪಿಸಿದರು. ಇದು ಡಬಲ್ ಇಂಜಿನ್ ತಾಕತ್ತು ಎಂದು ಗಟ್ಟಿ ದನಿಯಲ್ಲಿ ಹೇಳಿದರು. ಪಕ್ಷದ ವಿಚಾರ ಧಾರೆಯನ್ನು ಪರೋಕ್ಷವಾಗಿ ಕಟ್ಟಿಕೊಟ್ಟ ಅವರು ಭೌತಿಕ ಅಭಿವೃದ್ಧಿ, ಎಲ್ಲರನ್ನೂ ಒಳಗೊಳ್ಳುವುದು, ಸಾಮಾಜಿಕ ಸಬಲೀಕರಣ, ಸಾಮರಸ್ಯ ವಿಷಯವನ್ನು ಉಲ್ಲೇಖಿಸಿದರು. ಕನಕದಾಸರ ಭಕ್ತಿ–ವೈಚಾರಿಕತೆ, ಕೆಂಪೇಗೌಡರ ದೂರದೃಷ್ಟಿ ಸ್ಮರಿಸಿ, ತಾವು ಸಾಗುವ ಹಾದಿ ಮತ್ತು ಮುಂದಿನ ನಡೆಯನ್ನು ತಿಳಿಸಿದರು. ಜೊತೆಗೆ ಅಭಿವೃದ್ಧಿಯ ವಿಷಯ ಮುಂದಿಟ್ಟುಕೊಂಡು ಹಿಂದಿನ ಸರ್ಕಾರವನ್ನು ಹಿತಮಿತವಾಗಿ ಮೊಟಕಿದರು.

ಆಧಾರ: ವಿಜಯವಾಣಿ, ದಿನಾಂಕ:12.11.2022.

ಗೌರವಾನ್ವಿತ ಪ್ರಧಾನ ಮಂತ್ರಿಗಳಾದ ಸನ್ಮಾನ್ಯ ಶ್ರೀ ನರೇಂದ್ರ ಮೋದಿಯವರು ದಿನಾಂಕ: 11.11.2022 ರಂದು ಬೆಂಗಳೂರಿನ ಶಾಸಕರ ಭವನದಲ್ಲಿರುವ ಶ್ರೀ ಕನಕದಾಸರ ಹಾಗೂ ಶ್ರೀ ಮಹರ್ಷಿ ವಾಲ್ಮೀಕಿಯವರ ಪುತ್ಥಳಿಗೆ ಪುಷ್ಪ ನಮನವನ್ನು ಸಲ್ಲಿಸಲು ಆಗಮಿಸುತ್ತಿರುವುದರಿಂದ ಸನ್ಮಾನ್ಯ ಸಭಾಧ್ಯಕ್ಷರು ದಿನಾಂಕ: 10.11.2022ರಂದು ಪೂರ್ವಸಿದ್ಧತೆಗಳನ್ನು ಪರಿಶೀಲಿಸಿ, ಅಧಿಕಾರಿಗಳಿಗೆ ಸೂಕ್ತ ಸೂಚನೆಗಳನ್ನು ನೀಡುತ್ತಿರುವ ಸಂದರ್ಭ



ದಿನಾಂಕ: 11.11.2022ರಂದು ನಾಡಿನ ಶ್ರೇಷ್ಠ ಸಂತರಾದ ಶ್ರೀ ಕನಕದಾಸರ ಜಯಂತಿ ನಿಮಿತ್ತ, ಗೌರವಾನ್ವಿತ ಪ್ರಧಾನಮಂತ್ರಿಗಳಾದ ಸನ್ಮಾನ್ಯ ಶ್ರೀ ನರೇಂದ್ರ ಮೋದಿಯವರು ಬೆಂಗಳೂರಿನ ಶಾಸಕರ ಭವನದಲ್ಲಿರುವ ಶ್ರೀ ಕನಕದಾಸರ ಹಾಗೂ ಶ್ರೀ ಮಹರ್ಷಿ ವಾಲ್ಮೀಕಿಯವರ ಪುತ್ಥಳಿಗೆ ಪುಷ್ಪ ನಮನ ಅರ್ಪಿಸಿ ಗೌರವ ನಮನ ಸಲ್ಲಿಸಿದ ಸಂದರ್ಭದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಭಾಗವಹಿಸಿದ ಸಂದರ್ಭ



**ದಿನಾಂಕ: 11–11–2022 ರಂದು ಶಾಸಕರ ಭವನದಲ್ಲಿ ನಡೆದ ಕನಕದಾಸ ಜಯಂತಿ ಕಾರ್ಯಕ್ರಮದಲ್ಲಿ ಘನತೆವೆತ್ತ ಭಾರತದ ಪ್ರಧಾನ ಮಂತ್ರಿಗಳಾದ ಸನ್ಮಾನ್ಯ ಶ್ರೀ ನರೇಂದ್ರ ಮೋದಿರವರು ವಿಧಾನಪರಿಷತ್ತಿನ ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು ಹಾಗೂ ವಿಧಾನಸಭೆಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ, ಸನ್ಮಾನ್ಯ ಮುಖ್ಯಮಂತಿಗಳಾದ ಶ್ರೀ ಬಸವರಾಜ ಎಸ್ ಬೊಮ್ಮಾಯಿರವರು, ಇತರ ಸಚಿವರು, ಗಣ್ಯರು ಹಾಗೂ ಕಾಗಿನೆಲೆ ಪೀಠಾಧ್ಯಕ್ಷರೊಂದಿಗೆ ಕನಕದಾಸ ಪ್ರತಿಮೆಗೆ ಮಾಲಾರ್ಪಣೆ ಮಾಡಿದ ಸಂದರ್ಭ.**







## 14. ಕಾರ್ಯಾಂಗ ವಿರುದ್ಧ ಸ್ಪೀಕರ್ ಆಕ್ರೋಶ

ಪ್ರಸಕ್ತ ಸಂದರ್ಭದಲ್ಲಿ ಕಾರ್ಯಾಂಗವು ಇಡೀ ಸಮಾಜದ ಜೀವ ಹಿಂಡುತ್ತಿದೆ. ಕಡತಗಳನ್ನು ಇಟ್ಟುಕೊಂಡು ಜನರನ್ನು ಸತಾಯಿಸುತ್ತಿದೆ ಎಂದು ವಿಧಾನಸಭಾಧ್ಯಕ್ಷರು ಕಿಡಿಕಾರಿದರು.

ಚುನಾವಣಾ ಸುಧಾರಣಾ ಕ್ರಮಗಳ ಕುರಿತು ಕೆಎಲ್‌ಇ ತಾಂತ್ರಿಕ ವಿಶ್ವವಿದ್ಯಾಲಯದಲ್ಲಿ ಸಂವಾದ ಕಾರ್ಯಕ್ರಮ ಉದ್ಘಾಟಿಸಿದ ಅವರು, ಕೇವಲ ಸುತ್ತೋಲೆಗಳನ್ನು ಕಾಯ್ದೆಗಳು ಎನ್ನುತ್ತ ಜನರನ್ನು ಅಮಾನವೀಯವಾಗಿ ಹಿಂಸಿಸುವ ಕೆಲಸ ಕಾರ್ಯಾಂಗದಿಂದ ನಡೆದಿದೆ ಎಂದು ಆಕ್ರೋಶ ವ್ಯಕ್ತಪಡಿಸುವ ಕಾಗೇರಿ, ವಿದ್ಯಾರ್ಥಿಗಳೊಡನೆ ಮಾತನಾಡುತ್ತ ಅಧಿಕಾರಶಾಹಿ ನಡೆದುಕೊಳ್ಳುತ್ತಿರುವ ರೀತಿಯನ್ನು ಸದನದಲ್ಲಿ ತರಾಟೆಗೆ ತೆಗೆದುಕೊಂಡದ್ದಕ್ಕಿಂತ ತೀವ್ರವಾಗಿ ಒರೆಗೆ ಹಚ್ಚಿದರು.

'ನಮ್ಮಲ್ಲಿ ಕಾರ್ಯಾಂಗಕ್ಕೆ ಮಾನವೀಯತೆಯೂ ಇಲ್ಲ, ಹೃದಯವಂತಿಕೆಯೂ ಇಲ್ಲ, ಮನಸ್ಸೇ ಇಲ್ಲದೇ ಕೆಲಸ ಮಾಡುವ ಪ್ರಜಾಪ್ರಭುತ್ವದ ಈ ಪ್ರಮುಖ ಅಂಗಿಂದ್ದಾಗಿ ಸರ್ಕಾರಗಳ ಒಳ್ಳೆಯ ಕಾರ್ಯಕ್ರಮಗಳಿಗೂ ಕೆಟ್ಟ ಹೆಸರು ಬರುವಂತಾಗಿದೆ' ಎಂದು ಸಿಟ್ಟಿನಿಂದ ನುಡಿದರು. ಸಚಿವಾಲಯಗಳು ಹಾಗೂ ಕೆಳ ಹಂತಗಳ ಕಚೇರಿಗಳಲ್ಲಿ ಕಡತಗಳು ಒಂದು ಟೇಬಲ್‌ನಿಂದ ಇನ್ನೊಂದಕ್ಕೆ ಓಡಾಡುವುದರಲ್ಲೇ ಹೇಗೆ ಜನಸಾಮಾನ್ಯರ ಸಂಕಷ್ಟ ಇಮ್ಮಡಿಸುತ್ತ ಹೋಗುತ್ತದೆ ಎಂಬುದನ್ನು ತಮ್ಮ ಅನುಭವದ ಹಿನ್ನೆಲೆಯಲ್ಲಿ ಎಳೆಎಳೆಯಾಗಿ ಬಿಡಿಸಿಟ್ಟರು.

ನ್ಯಾಯಾಂಗ, ಪತ್ರಿಕಾರಂಗ, ವೈದ್ಯಕೀಯ ಸೇರಿದಂತೆ ಸಮಾಜದ ಇನ್ನಿತರ ಎಲ್ಲ ಅಂಗಗಳು ಕೂಡ ಕಲುಷಿತವಾಗಿವೆ ಎಂದು ಖೇದ ವ್ಯಕ್ತಪಡಿಸಿದರು. ಯೋಗ್ಯರನ್ನು ಆಯ್ಕೆ ಮಾಡುವ ಮೂಲಕ ಇದನ್ನು ಸರಿದಾರಿಗೆ ತರುವ ಹೊಣೆ ಯುವ ಸಮುದಾಯದ ಮೇಲಿದೆ. ಆದ್ದರಿಂದ ಮತ ಹಾಕುವುದು ನನ್ನ ಕರ್ತವ್ಯ ಹಾಗೂ ನನ್ನ ಮತ ಮಾರಾಟಕ್ಕಿಲ್ಲ ಎಂಬ ಸ್ಪಷ್ಟ ಧೋರಣೆಯಿಂದ ಹಕ್ಕು ಚಲಾವಣೆ ಮಾಡಿ ಎಂದು ಕರೆ ನೀಡಿದರು. ತುರ್ತು ಪರಿಸ್ಥಿತಿಯಿಂದ ದೇಶವನ್ನು ಜಯಪ್ರಕಾಶ ನಾರಾಯಣ ಹೊರತರುವಲ್ಲಿಯೂ ಯುವ ಸಮುದಾಯದ ಪಾತ್ರವೇ ದೊಡ್ಡದಾಗಿತ್ತು. ನೆನಪಿಡಿ ಎಂದು ಕಿವಿಮಾತು ಹೇಳಿದರು.

ಶಾಸಕ ಅರವಿಂದ ಬೆಲ್ಲದ, ಜಿಲ್ಲಾಧಿಕಾರಿ ಗುರುದತ್ತ ಹೆಗಡೆ, ಜಿಲ್ಲಾಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಡಾ:ಸುರೇಶ ಇಟ್ನಾಳ, ಕೆಎಲ್‌ಇ ತಾಂತ್ರಿಕ ವಿಶ್ವವಿದ್ಯಾಲಯದ ಕುಲಸಚಿವ ಪ್ರೋ.ಬಸವರಾಜ ಅಮಾನಿ ಉಪಸ್ಥಿತರಿದ್ದರು.

**ಸಂಯುಕ್ತ ಕರ್ನಾಟಕ ಕೊಡುಗೆ ಅನನ್ಯ:** ಕರ್ನಾಟಕ ಏಕೀಕರಣ ಅದಕ್ಕೂ ಮುಂಚಿನ ಸ್ವಾತಂತ್ರ್ಯ ಹೋರಾಟದಲ್ಲಿ 'ಸಂಯುಕ್ತ ಕರ್ನಾಟಕ' ಅನನ್ಯ, ರಾಜ್ಯದ ಬೆಳವಣಿಗೆಗೆ ಸಂಯುಕ್ತ ಪ್ರತಿ ಹಂತದಲ್ಲೂ ರಚನಾತ್ಮಕವಾಗಿ ಕೆಲಸ ಮಾಡಿದೆ. ಕರ್ನಾಟಕ ಹಾಗೂ ದೇಶದ ಬೆಳವಣಿಗೆಯಲ್ಲಿ ಹಾಗೂ ಧನಾತ್ಮಕವಾಗಿ ಸಮಾಜವನ್ನು ಪ್ರಗತಿಪಥದ ಕಡೆಗೆ ಕೊಂಡೊಯ್ಯುವಲ್ಲಿ ಪತ್ರಿಕೆ, ಸಾಹಿತಿಗಳು, ಹಿರಿಯರು ಹಾಗೂ ಹೋರಾಟಗಾರರ ಪಾತ್ರ ಮರೆಯುವಂತಿಲ್ಲ. ಚುನಾವಣಾ ವ್ಯವಸ್ಥೆ ಸುಧಾರಣೆಗೂ ಪತ್ರಿಕಾರಂಗ ಬರಹಗಾರರು ಸಕಾರಾತ್ಮಕವಾಗಿ ಸ್ಪಂದಿಸಲಿ.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:17.11.2022

ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ದಿನಾಂಕ: **16.11.2022** ರಂದು ಹುಬ್ಬಳ್ಳಿಯಲ್ಲಿ ಆಯೋಜಿಸಿದ್ದ "ಚುನಾವಣಾ ಸುಧಾರಣಾ ಕ್ರಮಗಳ ಕುರಿತು ಸಂವಾದ ಕಾರ್ಯಕ್ರಮ" ದಲ್ಲಿ ಭಾಗವಹಿಸಿ, ಕಾಲೇಜು ವಿದ್ಯಾರ್ಥಿಗಳು, ಸಂಘಸಂಸ್ಥೆಗಳ ಪ್ರಮುಖರೊಂದಿಗೆ ಸಂವಾದ ನಡೆಸಿದರು. ಈ ಸಂದರ್ಭದಲ್ಲಿ ಮಾನ್ಯ ಶಾಸಕರಾದ ಶ್ರೀ ಅರವಿಂದ ಬೆಲ್ಲದ್, ಕೆ.ಎಲ್.ಇ. ಟೆಕ್ ಸಂಸ್ಥೆಯ ರಿಜಿಸ್ಟ್ರಾರ್ ಶ್ರೀ ಬಸವರಾಜ ಅನಾಮಿ, ಜಿಲ್ಲಾಧಿಕಾರಿಗಳು ಶ್ರೀ ಗುರುದತ್ ಹೆಗಡೆ, ಸಿಇಓ–ಜಿಲ್ಲಾ ಪಂಚಾಯತ್ ಶ್ರೀ ಸುರೇಶ್ ಹಿಟ್ನಾಳ್, ಕಾಲೇಜುಗಳ ವಿದ್ಯಾರ್ಥಿಗಳು, ನ್ಯಾಯವಾದಿಗಳು ಮತ್ತು ಸಂಘಸಂಸ್ಥೆಗಳ ಪ್ರಮುಖರು ಪಾಲ್ಗೊಂಡಿದ್ದರು.






## 15. ಸಹಕಾರಿ ಕ್ಷೇತ್ರದ ಮೇಲೆ ಹೆಚ್ಚಿದ ನಿರೀಕ್ಷೆ

ಸಹಕಾರಿ ಕ್ಷೇತ್ರದ ಮೇಲೆ ನಿರೀಕ್ಷೆ ಹಾಗೂ ಭರವಸೆ ರಾಜ್ಯದಲ್ಲಿ ಹೆಚ್ಚಾಗಿದೆ ಎಂದು ಕರ್ನಾಟಕ ವಿಧಾನಸಭಾಧ್ಯಕ್ಷರು ಹೇಳಿದರು.

ಬೆಂಗಳೂರು ಕೆಂಗೇರಿ ಬಳಿ ಏರ್ಪಡಿಸಿದ್ದ 69ನೇ ಅಖಿಲ ಭಾರತ ಸಹಕಾರ ಸಪ್ತಾಹ ಹಾಗೂ ಸಹಕಾರ ರತ್ನ ಪ್ರಶಸ್ತಿ ಪ್ರಧಾನ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಅವರು ಜನರಲ್ಲಿ ಇಂದು ಆತ್ಮಸ್ಥೈರ್ಯ ಹಾಗೂ ಭರವಸೆಯನ್ನು ನೀಡುತ್ತಿರುವ ಕ್ಷೇತ್ರ ಸಹಕಾರಿ ಕ್ಷೇತ್ರ, ಸಹಕಾರಿ ಕ್ಷೇತ್ರದಲ್ಲಿ ಯುವಕರು ಮುಂದೆ ಬರುತ್ತಿರುವುದು ಸಂತಸದ ವಿಷಯ. ಯಶಸ್ವಿನಿ ಯೋಜನೆಯ ಅಡಿಯಲ್ಲೂ ಅನೇಕರು ಪ್ರಯೋಜನ ಪಡೆದುಕೊಂಡಿದ್ದಾರೆ ಎಂದರು.

ಪ್ರಸ್ತುತ ಕರ್ನಾಟಕ ಅತೀ ಹೆಚ್ಚು ಹಾಲು ಉತ್ಪಾದಕರ ಸಂಘಗಳು ಇರುವುದಕ್ಕೆ ಕಾರಣ ಸಹಕಾರಿ ಕ್ಷೇತ್ರ. ಏಕೆಂದರೆ ಸಹಕಾರಿ ಕ್ಷೇತ್ರದಲ್ಲಿ ಬೆಂಬಲವಾಗಿ ಲೀಟರ್‌ಗೆ ರೂ.5 ನೀಡುತ್ತಿರುವುದು ಬಹಳ ಒಳ್ಳೆಯ ಕೊಡುಗೆಯಾಗಿದೆ. ನರೇಂದ್ರ ಮೋದಿ ಅವರು ಸಹಕಾರಿ ಕ್ಷೇತ್ರಕ್ಕೆ ಪ್ರತ್ಯೇಕ ಸಚಿವಾಲಯ ನೀಡಿದ್ದಾರೆ. ಸಹಕಾರಿ ಕ್ಷೇತ್ರದ ಅಭಿವೃದ್ಧಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರ ನಿರಂತರ ಕೆಲಸ ಮಾಡುತ್ತಿದೆ. ಪ್ರತಿಯೊಬ್ಬರು ಕ್ಷೇತ್ರದಲ್ಲಿ ನಂಬಿಕೆಯಿಂದ ಕೆಲಸ ಮಾಡಬೇಕು. ಮಾಡುತ್ತಿರುವ ಕೆಲಸದಲ್ಲಿ ದೇವರನ್ನು ಕಾಣಬೇಕು. ವಿಶ್ವವು ಭಾರತದ ಕಡೆ ನೋಡುತ್ತಿದೆ, ಕಾರಣ ಇಲ್ಲಿರುವ ಜ್ಞಾನ ಭಾರತೀಯರು ದೇಶ ಮೊದಲು ಎಂಬ ಭಾವನೆಯಿಂದ ಕೆಲಸ ಮಾಡುವುದಕ್ಕೆ ಸಂಕಲ್ಪ ಮಾಡಬೇಕು. ನಾವು ಮಾಡುವ ಕೆಲಸ ದೇಶಕ್ಕಾಗಿ ಎಂಬ ನಂಬಿಕೆ ಇಟ್ಟು ಕೆಲಸ ಮಾಡಿ ಎಂದು ಸಲಹೆ ನೀಡಿದರು.

ಸಹಕಾರ ಸಚಿವರು ಮಾತನಾಡಿ ಸಹಕಾರ ಸಂಘಗಳು ಗ್ರಾಮ ಹಾಗೂ ಜನರ ಸಮಗ್ರ ಜೀವನಮಟ್ಟ ಸುಧಾರಣೆಗೆ ಅಮೂಲ್ಯ ಕೊಡುಗೆ ನೀಡಿದೆ. ಸಂಘಗಳ ಜಾತಿ ಧರ್ಮದ ತಾರತಮ್ಯವಿಲ್ಲದೆ ಸಮುದಾಯವನ್ನು ಒಗ್ಗೂಡಿಸುವುದರಿಂದ ಸಮಾಜದಲ್ಲಿ ಶಾಂತಿ, ಸಹಬಾಳ್ವೆ ಸಾಧ್ಯವಾಗಿದೆ. ಇಂದು ರಾಜ್ಯದಲ್ಲಿ ರೈತರ ಸಾಲ ಮನ್ನಾ ಮಾಡುವಲ್ಲಿ ಮಾಜಿ ಮುಖ್ಯ ಮಂತ್ರಿ ಬಿ.ಎಸ್.ಯಡಿಯೂರಪ್ಪ ದಿಟ್ಟ ನಿರ್ಧಾರ ತೆಗೆದುಕೊಂಡಿದ್ದಾರೆ. ಹಾಗೆಯೇ ಈಗಿನ ಮುಖ್ಯಮಂತ್ರಿಗಳೂ ಕೂಡಾ ರೈತರ ಒಳಿತಿಗಾಗಿ ಕೆಲಸ ಮಾಡುತ್ತಿದ್ದಾರೆ ಎಂದರಲ್ಲದೆ, ನಂದಿನಿ ಕ್ಷೀರ ಸಮೃದ್ಧಿ ಬ್ಯಾಂಕ್ ಮುಖ್ಯಮಂತ್ರಿ ಸದ್ಯದಲ್ಲೇ ಚಾಲನೆ ನೀಡಲಿದ್ದಾರೆ, ಸಹಕಾರ ಕ್ಷೇತ್ರದಲ್ಲಿ ಕೈಗೊಳ್ಳಲಿರುವ ಅನೇಕ ಯೋಜನೆಗಳು ವಿವರಿಸಿದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:20.11.2022

## 16. ಕೋಟ್ಯಾಂತರ ಜನಕ್ಕೆ ಯಶಸ್ವಿನಿ ಅನುಕೂಲ: ಕಾಗೇರಿ

ಆರೋಗ್ಯ ಸೇವೆ ದುಬಾರಿಯಾಗಿರುವ ಸಂದರ್ಭದಲ್ಲಿ ರಾಜ್ಯ ಸರ್ಕಾರವು ಯಶಸ್ವಿನಿ ಯೋಜನೆ ಮರು ಜಾರಿಗೊಳಿಸುವ ಮೂಲಕ ಕೋಟ್ಯಾಂತರ ಬಡವರು, ರೈತರ ಕುಟುಂಬಗಳಿಗೆ ಉಚಿತ ಆರೋಗ್ಯ ಸೇವೆ ಕಲ್ಪಿಸಿದೆ ಎಂದು ವಿಶ್ವೇಶ್ವರ ಹೆಗಡೆ, ಕಾಗೇರಿ ಅವರು ತಿಳಿಸಿದರು.

ಕೆಂಗೇರಿ ಉಪನಗರ ಗಣೇಶ ಆಟದ ಮೈದಾನದಲ್ಲಿ ಆಯೋಜನೆಗೊಂಡಿದ್ದ 69ನೇ ಅಖಿಲ ಭಾರತ ಸಹಕಾರ ಸಪ್ತಾಹವನ್ನು ಉದ್ಘಾಟಿಸಿ ಮಾತನಾಡಿದ ಅವರು, 'ಆರೋಗ್ಯ ಸೇವೆ ದುಬಾರಿಯಾಗಿ ಬಡವರು, ರೈತರಿಗೆ ತುಂಬಾ ತೊಂದರೆಯಾಗಿತ್ತು. ಜನತೆಯ ನಿರೀಕ್ಷೆಯನ್ನು ಅರಿತ ಸಹಕಾರ ಸಚಿವರು ವಿಶೇಷ ಮುತುವರ್ಜಿಯಿಂದ ಯಶಸ್ವಿನಿ ಯೋಜನೆಯನ್ನು ಸರ್ಕಾರ ಮರು ಜಾರಿಗೊಳಿಸಿದೆ. ಇದರಿಂದ ಕೊಟ್ಯಾಂತರ ಬಡವರು, ರೈತ ಕುಟುಂಬಗಳಿಗೆ ಉಚಿತ ಹಾಗೂ ಉತ್ತಮ ಆರೋಗ್ಯ ಸೇವೆ ದೊರೆಯಲಿದೆ' ಎಂದರು.

**ಯಶಸ್ವಿನಿಗೆ ರೂ.100 ಕೋಟಿ ಬಿಡುಗಡೆ:** ಸಹಕಾರ ಸಚಿವ ಎಸ್.ಟಿ.ಸೋಮಶೇಖರ್ ಮಾತನಾಡಿ, ಸಹಕಾರ ಸಂಘಗಳು ಜಾತಿ–ಧರ್ಮದ ತಾರತಮ್ಯವಿಲ್ಲದೆ ಸಮುದಾಯವನ್ನು ಒಗ್ಗೂಡಿಸುವಲ್ಲಿ ಮಹತ್ತರ

ಪಾತ್ರ ವಹಿಸಿವೆ. ಸಹಕಾರ ಸಂಘಗಳ ಮೂಲಕ ಶೂನ್ಯ ಹಾಗೂ ಅಗ್ಗದ ಬಡ್ಡಿ ದರದಲ್ಲಿ ಸಾಲ ನೀಡಿ ರೈತರು ಹಾಗೂ ಬಡವರಿಗೆ ಅನುಕೂಲ ಮಾಡಿಕೊಡಲಾಗುತ್ತಿದೆ. ಯಶಸ್ವಿನಿ ಯೋಜನೆಗೆ ರಾಜ್ಯ ಸರ್ಕಾರ ರೂ.300 ಕೋಟಿ ಮೀಸಲಿರಿಸಿದ್ದು ಈಗಾಗಲೇ ರೂ. 100 ಕೋಟಿ ಬಿಡುಗಡೆ ಮಾಡಲಾಗಿದೆ ಎಂದು ತಿಳಿಸಿದರು.

ಸಹಕಾರ ಇಲಾಖೆ ವತಿಯಿಂದ ಹಾಲು ಉತ್ಪಾದಕರ ಸಹಕಾರ ಸಂಘಗಳು ಸ್ವಂತ ಕಟ್ಟಡ ಹೊಂದಲು ರೂ.5 ರಿಂದ ರೂ.10 ಲಕ್ಷ ಸಹಾಯಧನ ನೀಡಲಾಗುತ್ತಿದೆ. ಪ್ರತಿ ಲೀಟರ್ ಹಾಲಿಗೆ ರೂ.5 ಪ್ರೋತ್ಸಾಹ ಧನವನ್ನು ನೀಡುತ್ತಿದ್ದು ,ವಾರ್ಷಿಕ ರೂ.1,280 ಕೋಟಿ ಹಣವನ್ನು ಸರ್ಕಾರ ಭರಿಸುತ್ತಿದೆ ಎಂದರು.

**ಹಾಲು ಉತ್ಪಾದಕರಿಗೆ ಕ್ರೆಡಿಟ್ ಕಾರ್ಡ್**: ರಾಜ್ಯದ 15 ಹಾಲು ಉತ್ಪಾದಕರ ಒಕ್ಕೂಟಗಳಲ್ಲಿ, 26 ಲಕ್ಷ ಹಾಲು ಉತ್ಪಾದಕರಿದ್ದಾರೆ. ಈ ಪೈಕಿ 9 ಲಕ್ಷ ಮಹಿಳೆಯರಿದ್ದಾರೆ. ಶ್ರಮಜೀವಿಗಳು ಸಕಾಲದಲ್ಲಿ ಆರ್ಥಿಕ ಸಂಕಷ್ಟಗಳಿಗೆ ಸಾಲ ಸೌಲಭ್ಯ ಪಡೆಯಲು ಅನುಕೂಲವಾಗುವಂತೆ ಪ್ರತ್ಯೇಕ ಬ್ಯಾಂಕ್ ಸ್ಥಾಪಿಸಲಾಗುವುದು. ಜೊತೆಗೆ ಪ್ರತಿ ಹಾಲು ಉತ್ಪಾದಕರಿಗೆ ಕ್ರೆಡಿಟ್ ಕಾರ್ಡ್ ನೀಡಲು ಚಿಂತನೆ ನಡೆಸಲಾಗಿದೆ. ಸದ್ಯದಲ್ಲೇ ನಂದಿನಿ ಕ್ಷೀರ ಸಮೃದ್ಧಿ ಬ್ಯಾಂಕ್ ಕಾರ್ಯಾರಂಭವಾಗಲಿದ್ದು, ನಬಾರ್ಡ್‌ನಿಂದ ನೇರವಾಗಿ ಬ್ಯಾಂಕ್ ಗ್ರಾಹಕರಿಗೆ ಹಣಕಾಸು ದೊರೆಯಲಿದೆ ಎಂದು ಎಸ್.ಟಿ.ಸೋಮಶೇಖರ್ ಮಾಹಿತಿ ನೀಡಿದರು.

**54 ಸಹಕಾರಿಗಳಿಗೆ ಪ್ರಶಸ್ತಿ**: ಕಾರ್ಯಕ್ರಮ ಉದ್ಘಾಟನೆಗೂ ಮುನ್ನ ಗೋಪೂಜೆ ನೆರವೇರಿಸಿ ಸಹಕಾರಿ ಧ್ವಜಾರೋಹಣ ನೆರವೇರಿಸಲಾಯಿತು. ಸಹಕಾರ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಬೆಂಗಳೂರು ವಿಭಾಗದ 9 ಜಿಲ್ಲೆಗಳ 54 ಸಹಕಾರಿಗಳಿಗೆ ಸಹಕಾರ ರತ್ನ ಪ್ರಶಸ್ತಿಯನ್ನು ಪ್ರಧಾನ ಮಾಡಲಾಯಿತು. ಇದೇ ಸಂದರ್ಭದಲ್ಲಿ ಯಶಸ್ವಿನಿ ಯೋಜನೆಯ ಫಲಾನುಭವಿಗಳಿಗೆ ಯಶಸ್ವಿನಿ ಕಾರ್ಡ್ ವಿತರಿಸಲಾಯಿತು. ಬಳಿಕ ಸಹಕಾರ ಪತ್ರಿಕೆ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಲಾಯಿತು.

ಕಾರ್ಯಕ್ರಮದಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲ ಮಾಜಿ ಅಧ್ಯಕ್ಷ ಜಿ.ಟಿ.ದೇವೇಗೌಡ, ವಿಧಾನಪರಿಷತ್ ಸದಸ್ಯ ಅ.ದೇವೇಗೌಡ, ಬೆಂಗಳೂರು, ಡಿಸಿಸಿ ಬ್ಯಾಂಕ್ ನಿಯಮಿತ ಅಧ್ಯಕ್ಷ ಡಿ.ಹನುಮಂತಯ್ಯ, ಕರ್ನಾಟಕ ರಾಜ್ಯ ಸಹಕಾರ ವಸತಿ ಮಹಾಮಂಡಳ ನಿರ್ದೇಶಕ ದೊಡ್ಡನಾಗಯ್ಯ, ಸಹಕಾರಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಶಿವಯೋಗಿ ಕಳಸದ್, ಸಹಕಾರ ಸಂಘ ನಿಬಂಧಕ ಕ್ಯಾಪ್ಟನ್ ಡಾ:ಕೆ.ರಾಜೇಂದ್ರ ಮತ್ತಿತರರು ಉಪಸ್ಥಿತರಿದ್ದರು.

ಆಧಾರ:ಕನ್ನಡ ಪ್ರಭ, ದಿನಾಂಕ: 20.11.2022

**ದಿನಾಂಕ: 19.11.2022ರಂದು ಬೆಂಗಳೂರಿನಲ್ಲಿ ಆಯೋಜಿಸಿದ್ದ “69ನೇ ಅಖಿಲ ಭಾರತ ಸಹಕಾರ ಸಪ್ತಾಹ” ಕಾರ್ಯಕ್ರಮದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಭಾಗವಹಿಸಿ, ಸಾಧಕರಿಗೆ “ಸಹಕಾರ ರತ್ನ” ಪ್ರಶಸ್ತಿ ನೀಡಿ ಸನ್ಮಾನಿಸಿ, ರೈತರಿಗೆ “ಯಶಸ್ವಿನಿ” ಕಾರ್ಡ್ ವಿತರಿಸಿ ಶುಭ ಹಾರೈಸಿದರು. ಈ ಸಂದರ್ಭದಲ್ಲಿ ಸಹಕಾರ ಸಚಿವರಾದ ಶ್ರೀ ಎಸ್.ಟಿ. ಸೋಮಶೇಖರ್, ಮಾನ್ಯ ಶಾಸಕರಾದ ಹಾಗೂ ಸಹಕಾರ ಮಹಾಮಂಡಳಿ ನಿಗಮದ ಅಧ್ಯಕ್ಷರಾದ ಶ್ರೀ ಜಿ.ಟಿ. ದೇವೇಗೌಡರವರು ಹಾಗೂ ಸಹಕಾರ ಇಲಾಖೆಯ ಅಧಿಕಾರಿಗಳು ಉಪಸ್ಥಿತರಿದ್ದರು;**





## 17. ಚಿಕ್ಕಮಗಳೂರು, ಶಿರಸಿಗೂ ಹೊಸ ವಿಶ್ವವಿದ್ಯಾಲಯ

ಶಿರಸಿ ಹಾಗೂ ಚಿಕ್ಕಮಗಳೂರಿಗೂ ವಿಶ್ವವಿದ್ಯಾಲಯ ಸ್ಥಾಪನೆಗೆ ಬಿಜೆಪಿಯ ಹಿರಿಯ ಮುಖಂಡರೇ ಸರ್ಕಾರದ ಮೇಲೆ ಒತ್ತಡ ಹಾಕುತ್ತಿದ್ದು, ಈಗ ಘೋಷಣೆಯಾಗಿರುವ ಏಳರ ಪಟ್ಟಿಗೆ ಮತ್ತೆರಡು ವಿವಿ ಸೇರುವ ಸಾಧ್ಯತೆ ಹೆಚ್ಚಿದೆ.

ನಮ್ಮ ಜಿಲ್ಲೆಗೂ ವಿಶ್ವವಿದ್ಯಾಲಯ ಮಂಜೂರು ಮಾಡಬೇಕೆಂದು ಬಿಜೆಪಿ ಹಿರಿಯ ಮುಖಂಡರು ಸರ್ಕಾರದ ಮೇಲೆ ಒತ್ತಡ ಹೇರುತ್ತಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯ ಶಿರಸಿ ಕ್ಷೇತ್ರವನ್ನು ಪ್ರತಿನಿಧಿಸುವ ವಿಶ್ವೇಶ್ವರ ಹೆಗಡೆ, ಕಾಗೇರಿ ಮತ್ತು ಚಿಕ್ಕಮಗಳೂರು ಶಾಸಕ ಬಿಜೆಪಿ ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿ ಸಿ.ಟಿ.ರವಿ ನಮ್ಮ ಜಿಲ್ಲೆಗೂ ವಿಶ್ವವಿದ್ಯಾಲಯ ಮಂಜೂರು ಮಾಡುವಂತೆ ಮುಖ್ಯಮಂತ್ರಿ ಅವರಿಗೆ ಪತ್ರ ಬರೆದಿದ್ದಾರೆ. ಸಿಎಂ ಅವರು, ಈ ಮನವಿಯನ್ನು ಪುರಸ್ಕರಿಸಿ ಮುಂದಿನ ಕ್ರಮವಹಿಸುವಂತೆ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿಗೆ ಪತ್ರ ಬರೆದು ನಿರ್ದೇಶನ ನೀಡಿದ್ದಾರೆ.

ಈ ವಿಚಾರವನ್ನು ಪರಿಷತ್ತಿನ ಅಧಿಕಾರಿಗಳು ಖಚಿತಪಡಿಸಿದ್ದು, ಚಿಕ್ಕಮಗಳೂರಿನಲ್ಲಿರುವ ಇಂದಾವರ ದೊಡ್ಡ ಸಿದ್ದಲಿಂಗೇಗೌಡ ಸರ್ಕಾರಿ ಕಾಲೇಜು (ಐಡಿಎಸ್‌ಜಿ) ಸರ್ಕಾರಿ ಕಾಲೇಜನ್ನು ವಿವಿ ಆಗಿ ಪರಿವರ್ತಿಸಲು ಪ್ರಸ್ತಾವನೆ ಸಲ್ಲಿಕೆಯಾಗಿದೆ. ಉತ್ತರ ಕನ್ನಡ ಜಿಲ್ಲೆಯ ಶಿರಸಿ ಅಥವಾ ಕಾರವಾರದಲ್ಲಿ ಹಾಲಿ ಇರುವ ಕಾಲೇಜನ್ನೇ ವಿವಿ ಆಗಿ ಪರಿವರ್ತಿಸಬೇಕೋ, ಇಲ್ಲವೇ ಹೊಸದಾಗಿ ಆರಂಭಿಸಬೇಕೇ ಎಂಬ ನಿರ್ಧಾರ ಕೈಗೊಂಡಿಲ್ಲ ಎಂದು ತಿಳಿಸಿದರು.

ಈಗಿರುವ ಸ್ನಾತಕೋತ್ತರ ಕೇಂದ್ರವನ್ನು ವಿಶ್ವವಿದ್ಯಾಲಯವಾಗಿ ಮಾರ್ಪಾಡು ಮಾಡಿ ಚಾಮರಾಜನಗರ, ಹಾಸನ, ಬೀದರ್, ಕೊಡಗು, ಕೊಪ್ಪಳ, ಬಾಗಲಕೋಟೆ ಮತ್ತು ಹಾವೇರಿ ಜಿಲ್ಲೆಯಲ್ಲಿ ವಿವಿ ಸ್ಥಾಪನೆ ಮಾಡಲು ಅಧಿಸೂಚನೆ ಹೊರಡಿಸಿದೆ. ಹೊಸ ವಿವಿಗೆ ಹೆಚ್ಚುವರಿಯಾಗಿ ಭೂಮಿ ಖರೀದಿಸುವಂತಿಲ್ಲ, ಹೊಸ ಹುದ್ದೆಗಳನ್ನು ಸೃಷ್ಟಿಸದಂತೆ ಷರತ್ತು ವಿಧಿಸಲಾಗಿದೆ.

**ಬಹುಶಿಸ್ತೀಯ ಕೋರ್ಸ್:** ರಾಷ್ಟ್ರೀಯ ಶಿಕ್ಷಣ ನೀತಿ (ಎನ್‌ಇಪಿ) ಪ್ರಕಾರ ಹೊಸ ವಿಶ್ವವಿದ್ಯಾಲಯಗಳು ಆರಂಭಿಸಬೇಕಾದರೆ, ಅಲ್ಲಿ ಬಹುಶಿಸ್ತೀಯ ಕೋರ್ಸ್‌ಗಳು ಇರಬೇಕು. ಅಂದರೆ, ಕೇವಲ ಎಂಜಿನಿಯರಿಂಗ್ ಮಾತ್ರ ಬೋಧನೆ ಮಾಡಿದರೆ, ಅಂತಹ ಕಾಲೇಜಿಗೆ ವಿವಿಯ ಮಾನ್ಯತೆ ನೀಡುವುದಕ್ಕೆ ಬರುವುದಿಲ್ಲ. ಬದಲಾಗಿ, ಇಂಜಿನಿಯರಿಂಗ್, ಸಾಮಾನ್ಯ ಪದವಿ ಕೋರ್ಸ್, ವೈದ್ಯಕೀಯ ಕೋರ್ಸ್‌ಗಳು ಸೇರಿದಂತೆ ಕನಿಷ್ಠ 2ಕ್ಕಿಂತ ಹೆಚ್ಚು ನಿಕಾಯದ ಕೋರ್ಸ್‌ಗಳನ್ನು ಬೋಧಿಸುವಂತಿರಬೇಕು. ಆಗ ಮಾತ್ರ ವಿವಿ ಮಾನ್ಯತೆ ಸಿಗಲಿದೆ. ಏಕೆಂದರೆ, ಎನ್‌ಇಪಿ ಬಂದ ಮೇಲೆ ವಿದ್ಯಾರ್ಥಿಗಳು ತಮಗಿಷ್ಟವಾದ ಯಾವುದೇ ನಿಕಾಯದ ಯಾವುದೇ ಕೋರ್ಸ್ ಅನ್ನು ವ್ಯಾಸಂಗ ಮಾಡಲು ಅವಕಾಶ ಇರುವುದರಿಂದ ಆ ಅವಕಾಶಗಳನ್ನು ವಿಶ್ವವಿದ್ಯಾಲಯ ಒದಗಿಸಿಕೊಡಬೇಕಿದೆ.

**ಅನುದಾನ ಕೊರತೆ:** ರಾಜ್ಯದಲ್ಲಿ ಕಳೆದ 5 ವರ್ಷದಿಂದ ಆರಂಭವಾದ ವಿಶ್ವವಿದ್ಯಾಲಯಗಳು ಅಗತ್ಯ ಅನುದಾನವಿಲ್ಲದೆಯೇ ಮೂಲ ಸೌಕರ್ಯ ಕೊರತೆಯನ್ನು ಎದುರಿಸುತ್ತಿವೆ. ಹಲವು ವಿವಿಗಳು ನೀರು, ವಿದ್ಯುತ್ ಬಿಲ್ ಅನ್ನು ಸಹ ಬಾಕಿ ಉಳಿಸಿಕೊಂಡಿವೆ. ಅಗತ್ಯ ಸಿಬ್ಬಂದಿಗಳ ನೇಮಕಾತಿಯನ್ನು ಕೇಳುವಂತೆಯೇ ಇಲ್ಲ. ಪರಿಸ್ಥಿತಿ ಈ ರೀತಿ ಇರುವಾಗ ಹೊಸ ವಿಶ್ವವಿದ್ಯಾಲಯವನ್ನು ಆರಂಭಿಸುತ್ತಿರುವುದಕ್ಕೆ ಹಾಲಿ ಕುಲಪತಿಗಳ ಅಸಮಾಧಾನ ಕೂಡ ಇದೆ. ಆದರೆ, ಕುಲಪತಿಗಳು ಶಿಷ್ಟಾಚಾರದಂತೆ ಬಹಿರಂಗವಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಸಾಧ್ಯವಾಗದೆ ಇರುವುದರಿಂದ ಸುಮ್ಮನಾಗಿದ್ದಾರೆ.

ಆಧಾರ:ವಿಜಯಕರ್ನಾಟಕ, ದಿನಾಂಕ:21.11.2022

## 18. ಸಹಕಾರ ತತ್ವದಿಂದ ಜೀವನ ಮಟ್ಟ ಸುಧಾರಣೆ

ಜನತೆಯ ಜೊತೆ ವಿಶ್ವಾಸ ಹಾಗೂ ಭಾವನಾತ್ಮಕ ಸಂಬಂಧ ಹೊಂದಿ, ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗೆ ಉತ್ತಮ ಸಲಹೆ ನೀಡುವ ಮಟ್ಟಕ್ಕೆ ಸಹಕಾರ ಸಂಘಗಳು ಬಲಗೊಳ್ಳಬೇಕು ಎಂದು ಸಭಾಧ್ಯಕ್ಷರು ಹೇಳಿದರು.

ಕೆಂಗೇರಿ ಉಪನಗರದ ಗಣೇಶ ಮೈದಾನದಲ್ಲಿ ನಡೆದ 69ನೇ ಅಖಿಲ ಭಾರತ ಸಹಕಾರ ಸಪ್ತಾಹ ಕಾರ್ಯಕ್ರಮದಲ್ಲಿ ಸಹಕಾರ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಬೆಂಗಳೂರು ವಿಭಾಗದ 9 ಜಿಲ್ಲೆಗಳ 54 ಸಹಕಾರಿಗಳಿಗೆ 'ಸಹಕಾರ ರತ್ನ' ಪ್ರಶಸ್ತಿಯನ್ನು ಪ್ರದಾನ ಮಾಡಿ ಅವರು ಮಾತನಾಡಿದರು.

"ಸಹಕಾರ ಕ್ಷೇತ್ರ ಬಹಳ ದೊಡ್ಡ ಕ್ಷೇತ್ರ ಇಲ್ಲಿನ ವ್ಯವಹಾರ ಕಾನೂನಿಗಿಂತ ಮಿಗಿಲಾಗಿ ಪ್ರತಿ–ವಿಶ್ವಾಸದ ಮೇಲೆ ಬೆಳೆಯುವುದು. ಸಹಕಾರ ಸಂಘದಲ್ಲಿ ಸಿಗುವ ಕೈಗೆಟುಕುವ ಸೌಲಭ್ಯ, ಸಾಲಗಳು ಜನರ ಜೀವನ ಮಟ್ಟ ಸುಧಾರಣೆಗೆ ಅಮೂಲ್ಯವಾಗಿದೆ" ಎಂದರು.

"ಸಹಕಾರ ಕ್ಷೇತ್ರದ ಏಳಿಗೆಗೆ ಅಪಾರವಾಗಿ ಶ್ರಮಿಸಿದವರಿಗೆ ಸಹಕಾರ ರತ್ನ ಪ್ರಶಸ್ತಿ ಬಂದಿದೆ. ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗೆ ಉತ್ತಮ ಸಲಹೆಗಳನ್ನು ನೀಡಲು ಈ ಸಹಕಾರ ಸಪ್ತಾಹ ಸಾಕ್ಷಿಯಾಗಬೇಕು. ಸಹಕಾರ ಸಂಘಗಳಲ್ಲಿ ಶೂನ್ಯ ಬಡ್ಡಿ ದರದಲ್ಲಿ ಸಾಲ ವಿತರಣೆ, ರಾಜ್ಯದ 6 ಸಾವಿರಕ್ಕಿಂತ ಹೆಚ್ಚು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಗಣಕೀಕರಣ, ಬೀದಿಬದಿ ವ್ಯಾಪಾರಿಗಳಿಗೆ ಅರ್ಥಿಕ ಸಹಾಯ, ಯಶಸ್ವಿನಿ ಯೋಜನೆ ಮರುಜಾರಿ, 33 ಲಕ್ಷ ರೈತರಿಗೆ 24 ಸಾವಿರ ಕೋಟಿ ಸಾಲ ವಿತರಣೆಗೆ ಸೋಮಶೇಖರ್ ಅವರು ಸಾಕಷ್ಟು ಶ್ರಮಿಸಿದ್ದಾರೆ" ಎಂದು ಹೇಳಿದರು.

**ಕಾಂಗ್ರೆಸಿನಿಂದ ಯಶಸ್ವಿನಿ ರದ್ದು**: ಸಹಕಾರ ಸಚಿವ ಎಸ್.ಟಿ.ಸೋಮಶೇಖರ್ ಮಾತನಾಡಿ "ನವೆಂಬರ್ 14 ರಿಂದ 20ರ ವರೆಗೆ ಪ್ರತಿ ವರ್ಷ ಸಹಕಾರ ಸಪ್ತಾಹ ಆಚರಿಸಲಾಗುತ್ತಿದೆ. 20 ವರ್ಷಗಳಿಗೂ ಹೆಚ್ಚು ಕಾಲದಿಂದ ಸಹಕಾರ ಸಪ್ತಾಹ ಮಾಡಿಕೊಂಡು ಬಂದಿದ್ದೇನೆ. ಸಹಕಾರ ಮಹಾಮಂಡಳ ಮಾತೃ ಸಂಸ್ಥೆಯಾಗಿ ಕೆಲಸ ಮಾಡುತ್ತಿದೆ. ಸಹಕಾರಿ ಕ್ಷೇತ್ರವನ್ನು ಮುನ್ನಡೆಸುವಲ್ಲಿ ಜಿ.ಟಿ.ದೇವೇಗೌಡ ಪಾತ್ರ ಶ್ಲಾಘನೀಯ" ಎಂದು ಹೇಳಿದರು.

"ಮಾಜಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ, ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಅವರ ಸಹಕಾರದಿಂದ ಸಹಕಾರ ಸಚಿವರಾಗಿ ಕೆಲಸ ಮಾಡುತ್ತಿದ್ದೇನೆ. ಶೂನ್ಯ ಬಡ್ಡಿ ದರದಲ್ಲಿ ರೈತರಿಗೆ ಅತಿಹೆಚ್ಚು ಸಾಲ ನೀಡಿದ್ದು ಬವರಾಜ ಬೊಮ್ಮಾಯಿ ಅವರ ಸರ್ಕಾರ ರೂ.5,700 ಕೋಟಿ ಸಾಲಮನ್ನಾ ಮಾಡಿದ್ದು ಯಡಿಯೂರಪ್ಪ, ಸಾಲಮನ್ನಾಕ್ಕಾಗಿ ಬಜೆಟ್‌ನಲ್ಲಿ ಹಣ ಒದಗಿಸಿ ಐತಿಹಾಸಿಕ ತೀರ್ಮಾನ ಮಾಡಿದ್ದು ಯಡಿಯೂರಪ್ಪ, ಕಾಂಗ್ರೆಸ್ ಸರ್ಕಾರ ಯಶಸ್ವಿನಿ ಯೋಜನೆಯನ್ನು ರದ್ದು ಮಾಡಿತ್ತು. ಆದರೆ, ಬಿಜೆಪಿ ಸರ್ಕಾರ ಅದನ್ನು ಮರುಜಾರಿ ಮಾಡಿದೆ. ಈ ಮೂಲಕ ಲಕ್ಷಾಂತರ ರೈತರಿಗೆ ಅನುಕೂಲವಾಗಲಿದೆ," ಎಂದು ಹೇಳಿದರು.

"ಹಾಲು ಪೂರೈಸುವ ರೈತರಿಗೆ ನಂದಿನಿ 'ಕ್ಷೀರ ಸಮೃದ್ಧಿ ಬ್ಯಾಂಕ್' ಮುಖಾಂತರ ಸಾಲಸೌಲಭ್ಯ ಕಲ್ಪಿಸಲಾಗುವುದು. ಕ್ಷೇತ್ರದ ಜನತೆಯ ಪ್ರೀತಿ, ವಿಶ್ವಾಸದಿಂದ ಶಾಸಕರಾಗಿ ಆಯ್ಕೆಯಾಗಿ ದಸರಾ ಆಚರಣೆ ಮಾಡಲಾಯಿತು. ಸರ್ಕಾರ, ಪಕ್ಷಕ್ಕೆ ಮುಜುಗರವಾಗದಂತೆ ಕೆಲಸ ಮಾಡಿದ್ದೇನೆ. ಯಶವಂತಪುರ ಜನತೆಯ ಪ್ರೀತಿ ವಿಶ್ವಾಸ ಉಳಿಸಿಕೊಂಡಿದ್ದೇನೆ. ದ್ವೇಷದ ರಾಜಕಾರಣ ಮಾಡಿಲ್ಲ, ಮಾಡುವುದೂ ಇಲ್ಲ," ಎಂದರು.

"ಕ್ಷೇತ್ರದ ಡಾಂಬರೀಕರಣಕ್ಕೆ ರೂ. 200 ಕೋಟಿ ಬಿಡುಗಡೆ ಮಾಡಲಾಗಿದೆ. ರಾಜಕಾಲುವೆ ಸಮಸ್ಯೆ ಬಗೆಹರಿಸಲು ರೂ. 120 ಕೋಟಿ ಅನುದಾನ ಬಿಡುಗಡೆಯಾಗಿದೆ. ವಿಶ್ವೇಶ್ವರಯ್ಯ, ಬನಶಂಕರಿ 6ನೇ ಹಂತದ ಅಭಿವೃದ್ಧಿಗೆ ರೂ.208 ಕೋಟಿ ಬಿಡುಗಡೆಯಾಗಿದೆ. ಕಾವೇರಿ ನೀರು ಪೂರೈಕೆ ಕಾಮಗಾರಿ

ಆರಂಭವಾಗಿದೆ. ಮಂಚನಬೆಲೆಯಿಂದ 72 ಹಳ್ಳಿಗಳಿಗೆ ಕುಡಿಯುವ ನೀರು ಪೂರೈಕೆ ಕಾಮಗಾರಿ ಕೈಗೆತ್ತಿಕೊಳ್ಳಲಾಗಿದೆ," ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಸಹಕಾರ ಮಹಾಮಂಡಳದ ಅಧ್ಯಕ್ಷರಾದ ಜಿ.ಟಿ.ದೇವೇಗೌಡ ಪಾಲ್ಗೊಂಡಿದ್ದರು.

ಆಧಾರ:ವಿಜಯಕರ್ನಾಟಕ, ದಿನಾಂಕ:21.11.2022

## 19. ಪಂಚಾಯ್ತಿ ಮಟ್ಟದಲ್ಲೂ ಸಂವಿಧಾನಬದ್ಧ ಆಡಳಿತ

ರಾಜ್ಯದ ಎಲ್ಲಾ ಗ್ರಾಮ ಪಂಚಾಯಿತಿಗಳ ಗ್ರಂಥಾಲಯಗಳಿಗೆ ಸಂವಿಧಾನ ಹಾಗೂ ಗ್ರಾಮ ಪಂಚಾಯತಿಯ 73 ಮತ್ತು 74ನೇ ತಿದ್ದುಪಡಿ, ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆಗಳ ಪ್ರತಿಗಳನ್ನು ದೊಡ್ಡ ಪ್ರಮಾಣದಲ್ಲಿ ರವಾನಿಸುವ ಮೂಲಕ ಅಲ್ಲಿಯು ಸಂವಿಧಾನಬದ್ಧ ಆಡಳಿತ ನಡೆಸುವುದು ನಮ್ಮ ಸರ್ಕಾರದ ಆಶಯವಾಗಿದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ತಿಳಿಸಿದರು.

ಸಂವಿಧಾನ ದಿನದ ಅಂಗವಾಗಿ ವಿಧಾನಸೌಧದ ಮುಂಭಾಗದಲ್ಲಿರುವ ಸಂವಿಧಾನಶಿಲ್ಪಿ ಡಾ.ಬಿ.ಆರ್.ಅಂಬೇಡ್ಕರ್ ಅವರ ಪ್ರತಿಮೆಗೆ ಮಾಲಾರ್ಪಣೆ ಮಾಡಿದ ನಂತರ ಮಾಧ್ಯಮದವರೊಂದಿಗೆ ಅವರು ಮಾತನಾಡಿದರು. ಸಂವಿಧಾನದ ಸ್ಫೂರ್ತಿ ಗ್ರಾಮೀಣ ಮಟ್ಟದಲ್ಲಿ ಆಗಬೇಕೆನ್ನುವುದು ನಮ್ಮ ಉದ್ದೇಶ. ಪ್ರಧಾನ ಮಂತ್ರಿ ನರೇಂದ್ರ ಮೋದಿಯವರು ಸಂವಿಧಾನ ನನಗೆ ಧರ್ಮಗ್ರಂಥ ಎಂದು ಹೇಳಿದ್ದರು. ಅದನ್ನು ಅಕ್ಷರಶಃ ನಾವೆಲ್ಲರೂ ಪಾಲನೆ ಮಾಡುತ್ತಿದ್ದೇವೆ. ಎಂದರು ಸಂವಿಧಾನವನ್ನು ಅದರ ಒಟ್ಟು ರೂಪದಲ್ಲಿ ಆಚರಣೆಗೆ ತರುವ ಉದ್ದೇಶ ನಮ್ಮದು ಎಂದರು.

**ಸಂವಿಧಾನ ಶಾಶ್ವತ ಕೊಡುಗೆ:** ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಅಧ್ಯಕ್ಷತೆಯಲ್ಲಿ ರಚನೆಯಾದ ಸಂವಿಧಾನ ರಚನಾ ಸಮಿತಿ, ಪ್ರಜಾಪ್ರಭುತ್ವಕ್ಕೆ ಶಾಶ್ವತ ಕೊಡುಗೆಯಾಗಿ ಸಂವಿಧಾನವನ್ನು ನೀಡಿದ್ದಾರೆ. ಹಲವಾರು ದೇಶಗಳ ಸಂವಿಧಾನಗಳನ್ನು ಅಭ್ಯಾಸ ಮಾಡಿ ಭಾರತಕ್ಕೆ ಲಿಖಿತ ರೂಪದ ಸಂವಿಧಾನವನ್ನು ಕೊಟ್ಟಿದ್ದಾರೆ. ಬ್ರಿಟನ್‌ನಲ್ಲಿ ಇಂದಿಗೂ ಅಲಿಖಿತ ಸಂವಿಧಾನ ಇದೆ. ಇದರಲ್ಲಿ ಭಾರತದ ಏಕತೆ, ಸಮಾನತೆ, ವ್ಯಕ್ತಿ ಸ್ವಾತಂತ್ರ್ಯ ಎಲ್ಲವೂ ಕೂಡ ಎಲ್ಲಾ ಆಯಾಮಗಳಲ್ಲಿ ನೋಡಿ ರಚನೆಯಾಗಿದ್ದರಿಂದ 75 ವರ್ಷ ಯಶಸ್ವಿ ಪ್ರಜಾಪ್ರಭುತ್ವವನ್ನು ಸಂವಿಧಾನಬದ್ಧವಾಗಿ ನಡೆಸಲು ಸಾಧ್ಯವಾಗಿದೆ. ಎಲ್ಲಾ ಕಾನೂನುಗಳು ಸಂವಿಧಾನಬದ್ಧವಾಗಿ ನಡೆಯಬೇಕಾಗಿರುವುದು ಭಾರತ ಪ್ರಜಾಪ್ರಭುತ್ವದ ಮೂಲ ಮಂತ್ರವಾಗಿದೆ ಎಂದರು.

ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗ, ಪತ್ರಿಕಾ ರಂಗಗಳು ಸಂವಿಧಾನ ಬದ್ಧವಾಗಿ ನಡೆದುಕೊಳ್ಳಬೇಕಿದೆ. ಭಾರತದಲ್ಲಿ ಕಾನೂನು ಸುವ್ಯವಸ್ಥೆ, ನ್ಯಾಯ ಮತ್ತು ಶಾಂತಿ ಎಲ್ಲವೂ ನಡೆಸಲು ಸಾಧ್ಯವಾಗಿದೆ. ಇಂಥ ಮಹಾನ್ ಸಂವಿಧಾನವನ್ನು ಅಂಬೇಡ್ಕರ ಅವರಿಗೆ ನೀಡಿದ್ದಾರೆ ಎಂದು ಸಿಎಂ ಶ್ಲಾಘಿಸಿದರು.

ಇದು ಅತ್ಯಂತ ಜೀವಂತಿಕೆ ಇರುವ ಸಂವಿಧಾನವಾಗಿದ್ದು, ಕಾಲ ಕಾಲಕ್ಕೆ ಬದಲಾಗುತ್ತಿರುವ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳಿಗನುಗುಣವಾಗಿ ಸಂವಿಧಾನವನ್ನು ತಿದ್ದುಪಡಿ ಮಾಡುವ ಹಾಗೂ ಹೊಸ ಹೊಸ ಸಂಶೋಧನೆಗಳ ಅಗತ್ಯವಿದ್ದು, ಹೀಗಾಗಿ ಕಾಲಕಾಲಕ್ಕೆ ಸಂವಿಧಾನಕ್ಕೆ ತಿದ್ದುಪಡಿತರಲಾಗಿದೆ. ಪರಿಪೂರ್ಣತೆಯಿಂದ ಕೂಡಿರುವ ಸಂವಿಧಾನ, ವ್ಯಕ್ತಿ ಸ್ವಾತಂತ್ರ್ಯವನ್ನು ರಕ್ಷಿಸುವ, ಸಮಾನತೆಯನ್ನು ಸಾರುವ ಸಂವಿಧಾನವನ್ನು ನಾವೆಲ್ಲರೂ ಗೌರವಿಸಿ, ಅದರಂತೆ ನಡೆಯಬೇಕು ಎಂದರು.

ಈ ಸಂದರ್ಭದಲ್ಲಿ ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ, ಮಾಜಿ ಸಚಿವ ಕೊಳ್ಳೇಗಾಲ ಮಹೇಶ್, ಮೇಲ್ಮನೆ ಸದಸ್ಯ ಛಲವಾದಿ ನಾರಾಯಣಸ್ವಾಮಿ, ಸರ್ಕಾರದ ಮುಖ್ಯ ಕಾರ್ಯದರ್ಶಿ ವಂದಿತಾಶರ್ಮಾ ಹಾಜರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:27.11.2022.

**ಸನ್ಮಾನ್ಯ ಸಭಾಧ್ಯಕ್ಷರು "ನವೆಂಬರ್ 26 ಸಂವಿಧಾನ ದಿವಸ"ದ ಅಂಗವಾಗಿ ವಿಧಾನಸೌಧ ಎದುರು ಸಂವಿಧಾನ ಶಿಲ್ಪಿ ಡಾ: ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಪುತ್ತಳಿಗೆ ಪುಷ್ಪ ನಮನ ಸಲ್ಲಿಸಿದರು. ನಂತರ ಸಮ್ಮೇಳನ ಸಭಾಂಗಣದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸಂವಿಧಾನದ ಪ್ರಸ್ತಾಪನೆಯನ್ನು ಓದಲಾಯಿತು. ಈ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ್ ಬೊಮ್ಮಾಯಿ ಶಾಸಕರಾದ ಶ್ರೀ ಎನ್ ಮಹೇಶ್, ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಚಲುವಾಡಿ ನಾರಾಯಣ ಸ್ವಾಮಿ, ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾದ ಶ್ರೀಮತಿ ವಂದಿತಾ ಶರ್ಮಾ ಹಾಗೂ ಹಿರಿಯ ಅಧಿಕಾರಿಗಳು ಉಪಸ್ಥಿತರಿದ್ದರು;**



## 20. ಶಾಸಕರ ಭವನ: ಪರಿಶಿಷ್ಟ ಗುತ್ತಿಗೆದಾರರ ಪ್ರತಿಭಟನೆ

ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಗುತ್ತಿಗೆದಾರರಿಗೆ ರೂ.50 ಲಕ್ಷಗಳವರೆಗಿನ ಸರ್ಕಾರಿ ಕಾಮಗಾರಿಗಳಲ್ಲಿ ಮೀಸಲಾತಿ ಮಿತಿಯನ್ನು ರೂ.1 ಕೋಟಿಗೆ ಹೆಚ್ಚಿಸುವಂತೆ ಒತ್ತಾಯಿಸಿ ಎಸ್‌ಸಿ–ಎಸ್‌ಟಿ ಗುತ್ತಿಗೆದಾರರು ಶಾಸಕರ ಭವನದಲ್ಲಿ ಪ್ರತಿಭಟನೆ ನಡೆಸಿದರು.

ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿಯ ಸಭೆ ನಡೆಯುವಾಗ ಗುತ್ತಿಗೆದಾರರ ಸಂಘದ ಪ್ರತಿನಿಧಿಗಳು ಧರಣಿ ನಡೆಸಿ ಸಮಿತಿಗೆ ತಮ್ಮ ಅಹವಾಲು ಸಲ್ಲಿಸಿದರು.

ಸಮಿತಿ ಅಧ್ಯಕ್ಷ ಹಾಗೂ ಶಾಸಕ ಎಂ.ಪಿ.ಕುಮಾರಸ್ವಾಮಿ ಅವರು ಮನವಿಯನ್ನು ಸ್ವೀಕರಿಸಿ, ಮುಂದಿನ ವಾರ ನಡೆಯುವ ಸಮಿತಿಯ ಸಭೆಯಲ್ಲಿ ವಿಷಯವನ್ನು ಕೈಗೆತ್ತಿಕೊಳ್ಳಲಾಗುವುದು. ಅಲ್ಲಿ ಈ ಸಂಬಂಧ ತೀರ್ಮಾನ ತೆಗೆದುಕೊಂಡು ಮುಖ್ಯಮಂತ್ರಿ ಅವರ ಬಳಿ ನಿಯೋಗ ಒಯ್ಯುವುದಾಗಿ ಭರವಸೆ ನೀಡಿದರು ಎಂದು ಸಂಘದ ರಾಜ್ಯಾಧ್ಯಕ್ಷ ಎನ್.ಮಹದೇವಸ್ವಾಮಿ ತಿಳಿಸಿದ್ದಾರೆ.

ಮೀಸಲಾತಿ ಮಿತಿ ಹೆಚ್ಚಿಸುವ ಬಗ್ಗೆ ಮುಖ್ಯಮಂತ್ರಿಯವರಿಗೆ ಅನೇಕ ಬಾರಿ ಮನವಿ ಮಾಡಿದ್ದೆವು. ಈ ಸಂಬಂಧ ಸೂಕ್ತ ಕ್ರಮ ತೆಗದುಕೊಳ್ಳಲು ಆರ್ಥಿಕ ಇಲಾಖೆಗೆ ಮುಖ್ಯಮಂತ್ರಿಯವರು ಸೂಚಿಸಿದರು.

ಆರ್ಥಿಕ ಇಲಾಖೆಗೆ ಕಾಮಗಾರಿಗಳ ಮೀಸಲಾತಿ ಮಿತಿಯನ್ನು ರೂ. 50 ಲಕ್ಷದಿಂದ ರೂ. 1 ಕೋಟಿಗೆ ಹೆಚ್ಚಿಸಲು ಮುಖ್ಯಮಂತ್ರಿಯವರಿಗೆ ಕಡತ ಮಂಡಿಸಲಾಗಿದೆ. ಆದರೆ, ಮುಖ್ಯಮಂತ್ರಿಯವರು ಈವರೆಗೂ ಅನುಮೋದನೆ ನೀಡಿಲ್ಲ ಎಂದು ಅವರು ಹೇಳಿದರು.

ಅಲ್ಲದೇ, ಜಾರಿಯಲ್ಲಿರುವ ಮೀಸಲು ಗುತ್ತಿಗೆ ಕಾಮಗಾರಿಗಳಲ್ಲಿ ಈ ಸಮುದಾಯಗಳವರು ಪಾಲ್ಗೊಳ್ಳದಂತೆ ತಡೆಯಲು ಕಳೆದ ಮೇ ತಿಂಗಳಲ್ಲಿ ಸುತ್ತೋಲೆಯೊಂದನ್ನು ಹೊರಡಿಸಲಾಗಿದೆ ಎಂದೂ ಮಹದೇವಸ್ವಾಮಿ ದೂರಿದರು.

ಆಧಾರ:ಪ್ರಜಾವಾಣಿ, ದಿನಾಂಕ:01.12.2022

## 21. ಪಠ್ಯದಲ್ಲಿ ಭಗವದ್ಗೀತೆ ಸೇರಿಸಲು ಹೆಜ್ಜೆ

ಭಾಷೆ, ಆಹಾರ ಪದ್ಧತಿ ಸೇರಿದಂತೆ ನಾನಾ ಕಾರಣಗಳಿಂದ ಒಡೆದು ಹೋಗಿರುವ ಮನಸ್ಸುಗಳಲ್ಲಿ ಏಕತಾ ಭಾವ ಬೆಳೆಯಲು ಭಗವದ್ಗೀತೆ ಸಹಕಾರಿಯಾಗಿದ್ದು, ರಾಜ್ಯ ಸರ್ಕಾರವು ಪಠ್ಯದಲ್ಲಿ ಭಗವದ್ಗೀತೆ ಸೇರಿಸುವ ನಿಟ್ಟಿನಲ್ಲಿ ಹೆಜ್ಜೆ ಇಡುತ್ತಿದೆ ಎಂದು ವಿಶ್ವೇಶ್ವರ ಹೆಗಡೆ, ಕಾಗೇರಿ ಮಾನ್ಯ ವಿಧಾನಸಭಾಧ್ಯಕ್ಷರು ತಿಳಿಸಿದರು.

ನಗರದಲ್ಲಿ ಭಗವದ್ಗೀತಾ ಅಭಿಯಾನಾ–ಕರ್ನಾಟಕ, ಶ್ರೀಸೋಂದಾಸ್ವರ್ಣದಲ್ಲೀ ಮಹಾಸಂಸ್ಥಾನದ ಆಶ್ರಯದಲ್ಲಿ ಏರ್ಪಡಿಸಿದ್ದ ಭಗವದ್ಗೀತಾ ಅಭಿಯಾನದ ರಾಜ್ಯಮಟ್ಟದ ಮಹಾಸಮರ್ಪಣಾ ಸಮಾರಂಭದಲ್ಲಿ ಅವರು ಮಾತನಾಡಿದರು.

"ಹಿಂದೆಂದಿಗಿಂತಲೂ ಈಗ ಭಗವದ್ಗೀತೆ ಹೆಚ್ಚು ಪ್ರಸ್ತುತವಾಗಿದೆ. ಹೀಗಾಗಿ, ಶಾಲಾ ಪಠ್ಯದಲ್ಲೂ ಅದು ಬರಬೇಕಾಗಿದೆ. ಗೀತೆಯ 18 ಅಧ್ಯಾಯದ ಎಲ್ಲಾ ಶ್ಲೋಕಗಳನ್ನು ಕಂಠಪಾಠ ಮಾಡಿ ರಕ್ಷಿಸಲು ಸಿದ್ಧವಾಗಿದ್ದೇವೆ ಎಂಬ ಸಂದೇಶ ಈ ವೇದಿಕೆಯಿಂದ ಹೋಗಬೇಕು. ದಿನಕ್ಕೆ ಒಂದು ಶ್ಲೋಕವಾದರೂ ಓದುತ್ತೇವೆ ಎಂಬ ಸಂಕಲ್ಪ ಮಾಡಬೇಕು," ಎಂದು ಕಿವಿಮಾತು ಹೇಳಿದರು.

ಶಿರಸಿಯ ಶ್ರೀಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಶ್ರೀಗಂಗಾಧರೇಂದ್ರ ಸರಸ್ವತಿ ಸ್ವಾಮೀಜಿ, "ವ್ಯಕ್ತಿತ್ವ ನಿರ್ಮಾಣ, ಸಾಮಾಜಿಕ ಸಾಮರಸ್ಯ ಮತ್ತು ರಾಷ್ಟ್ರೀಯ ಭಾವೈಕ್ಯತೆಗಾಗಿ 2007 ರಿಂದ ಈ ಅಭಿಯಾನ ನಡೆಸಿಕೊಂಡು ಬರಲಾಗುತ್ತಿದೆ. ಇದರ ಪರಿಣಾಮವಾಗಿ ಇಂದು ಪ್ರತಿಭಾ ಕಾರಂಜಿಯಲ್ಲಿ ಭಗವದ್ಗೀತೆ ಪಠಣಕ್ಕೆ ಅವಕಾಶ ದೊರೆತಿದೆ. ಅಲ್ಲದೇ, ಪಠ್ಯದಲ್ಲಿಯೂ ಗೀತೆಯನ್ನು ಸೇರಿಸಬೇಕೆಂಬ ಚರ್ಚೆ ಶುರುವಾಗಿದೆ" ಎಂದು ತಿಳಿಸಿದರು.

ರಾಜ್ಯಪಾಲ ಥಾವರಚಂದ್ ಗೆಹ್ಲೋಟ್ ಮಹಾಸರ್ಮಣಾ ಸಮಾರಂಭ ಉದ್ಘಾಟಿಸಿದರು. ಸಿರಿಗೆರೆ ತರಳಬಾಳು ಮಠದ ಡಾ:ಶಿವಮೂರ್ತಿ ಶಿವಾಚಾರ್ಯ ಸ್ವಾಮೀಜಿ, ಹರಿಹರ ಎರೇಹೊಸಳ್ಳಿಯ ಮಹಾಯೋಗಿ ವೇಮನ ಸಂಸ್ಥಾನ ಮಠದ ವೇಮನಾನಂದ ಸವಾಮಿಜಿ, ಶ್ರೀರಾಮ ಕೃಷ್ಣಾಶ್ರಮದ ತ್ಯಾಗೀಶ್ವರಾನಂದಜೀ ಮಹಾರಾಜ್ ಸಾನ್ನಿಧ್ಯ ವಹಿಸಿದ್ದರು.

ಆಧಾರ:ವಿಜಯಕರ್ನಾಟಕ, ದಿನಾಂಕ:05.12.2022

## 22. ಶಿರಸಿ ಜಿಲ್ಲೆ ಬೇಡಿಕೆ ಈಡೇರಿಕೆ ಸನ್ನಿಹಿತ

ಉತ್ತರಕನ್ನಡ ಜಿಲ್ಲೆಯನ್ನು ವಿಭಜಿಸಿ ಪ್ರತ್ಯೇಕ ಶಿರಸಿ ಜಿಲ್ಲೆ ರಚನೆ ಕುರಿತ ಬಹು ವರ್ಷಗಳ ಕೂಗಿಗೆ ಮತ್ತೆ ಬಲ ಬಂದಿದೆ. ಅಷ್ಟೆ ಅಲ್ಲ, ಜಿಲ್ಲೆ ರಚನೆಯಾಗುತ್ತದೆ ಎಂಬ ನಿರೀಕ್ಷೆಯೂ ಹೆಚ್ಚಿದೆ.

ಇದಕ್ಕೆ ಕಾರಣ ವಿಧಾನಸಭಾಧ್ಯಕ್ಷ ಅವರ ಹೇಳಿಕೆ. ಇದೇ ಮೊದಲ ಬಾರಿಗೆ ಸಾರ್ವಜನಿಕ ವೇದಿಕೆಯಲ್ಲಿ ಶಿರಸಿ ಪ್ರತ್ಯೇಕ ಜಿಲ್ಲೆ ಕುರಿತು ಸಕಾರಾತ್ಮಕವಾಗಿ ಮಾತನಾಡಿರುವ ಅವರು ಈ ಬಗ್ಗೆ ಮುಖ್ಯಮಂತ್ರಿ ಅವರೊಂದಿಗೆ ಈಗಾಗಲೇ ಮಾತನಾಡಲಾಗಿದೆ ಎಂದು ಹೇಳಿದ್ದಾರೆ.

ದಶಕಗಳಿಂದ ಉತ್ತರ ಕನ್ನಡ ಜಿಲ್ಲೆಯನ್ನು ವಿಭಜಿಸಿ, ಘಟ್ಟದ ಮೇಲಿನ ತಾಲ್ಲೂಕುಗಳನ್ನು ಸೇರಿಸಿ ಶಿರಸಿ ಪ್ರತ್ಯೇಕ ಜಿಲ್ಲೆ ರಚನೆ ಮಾಡಬೇಕು ಎಂಬ ಬೇಡಿಕೆಯಿತ್ತು. ಅದಕ್ಕಾಗಿ ಶಿರಸಿ ಜಿಲ್ಲಾ ಹೋರಾಟ ಸಮಿತಿ ರಚಿಸಿಕೊಂಡು ಹೋರಾಟವನ್ನೂ ನಡೆಸಲಾಗಿತ್ತು. ಆದರೆ, ಜನಪ್ರತಿನಿಧಿಗಳ ಕಡೆಯಿಂದ ಯಾವುದೇ ಪ್ರತಿಕ್ರಿಯೆ ಅಥವಾ ಸ್ಪಂದನೆ ಸಿಕ್ಕಿರಲಿಲ್ಲ. ಅದರಲ್ಲೂ ಆಡಳಿತ ಪಕ್ಷದವರು ಸೊಲ್ಲೆತ್ತುತ್ತಿರಲಿಲ್ಲ. ಆದರೆ ಶಿರಸಿಯಲ್ಲಿ ನಡೆದ ಕಾರ್ಮಿಕ ಇಲಾಖೆ ರಾಜ್ಯ ವಿಮಾ ಯೋಜನೆ ಚಿಕಿತ್ಸಾಲಯದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಕಾಗೇರಿ ಅವರು, ರಾಜ್ಯದ ವಿವಿಧ ಜಿಲ್ಲೆಗಳನ್ನು ವಿಭಜಿಸಿ ಪ್ರತ್ಯೇಕ ಜಿಲ್ಲೆಗಳು ರಚನೆಯಾಗಿವೆ. ಘಟ್ಟದ ಮೇಲಿನ ತಾಲ್ಲೂಕುಗಳನ್ನು ಒಳಗೊಂಡ ಶಿರಸಿ ಪ್ರತ್ಯೇಕ ಜಿಲ್ಲೆಯ ಬೇಡಿಕೆ ಹೆಚ್ಚಾಗುತ್ತಿದೆ. ಈ ಬಗ್ಗೆ ಸಾರ್ವಜನಿಕರು ನನ್ನ ಹಾಗೂ ಸಚಿವ ಶಿವರಾಮ ಹೆಬ್ಬಾರ್ ಅವರನ್ನು ಕೇಳುತ್ತಿದ್ದಾರೆ. ಸಚಿವರ ಸಹಕಾರವೂ ಮುಖ್ಯ. ಈ ಬಗ್ಗೆ ಮತ್ತೊಮ್ಮೆ ಮುಖ್ಯಮಂತ್ರಿ ಜೊತೆ ಇಬ್ಬರೂ ಸೇರಿ ಚರ್ಚಿಸುತ್ತೇವೆ. ಸಮಯ, ಸಂದರ್ಭ ನೋಡಿ ಮುಂದಿನ ಕ್ರಮ ಕೈಗೊಳ್ಳುತ್ತೇವೆ ಎಂದು ಶಿವರಾಮ ಹೆಬ್ಬಾರ್ ಸಮ್ಮುಖದಲ್ಲೇ ಹೇಳಿದರು.

ಈ ಹಿಂದೆ ಜನರ ಬೇಡಿಕೆ, ಹೋರಾಟ ಆದಾಗ ಕ್ರಮ ಕೈಗೊಳ್ಳುತ್ತೇನೆ ಎಂದಷ್ಟೇ ಹೇಳುತ್ತಿದ್ದ ಜನಪ್ರತಿನಿಧಿಗಳು, ಇದೀಗ ಮತ್ತೊಂದು ಹೆಜ್ಜೆ ಮುಂದೆ ಹೋಗಿ ಮುಖ್ಯಮಂತ್ರಿ ಜೊತೆ ಚರ್ಚಿಸುವುದಾಗಿ ಹೇಳಿರುವುದು ಪ್ರತ್ಯೇಕ. ಶಿರಸಿ ಜಿಲ್ಲೆ ಬೇಡಿಕೆ ಮುಂದಿಟ್ಟಿರುವ ಘಟ್ಟದ ಮೇಲಿನ ಜನರ ನಿರೀಕ್ಷೆ ಹೆಚ್ಚಾಗುವಂತೆ ಮಾಡಿದೆ. ಇದೀಗ ಕಾಗೇರಿ ಅವರು ಹೆಬ್ಬಾರ್ ಅವರ ಮೇಲೂ ಜವಾಬ್ದಾರಿ ಹಾಕಿದ್ದು, ಜಿಲ್ಲಾ ರಚನೆಯ ಪ್ರಯತ್ನ ನಡೆಸುವುದು ಹೆಬ್ಬಾರ್ ಅವರಿಗೂ ಅನಿವಾರ್ಯವಾಗಿದೆ.

ಮೊದಲಿನಿಂದಲೂ ಘಟ್ಟದ ಮೇಲಿನ ಹಿರಿಯ ನಾಯಕರೊಬ್ಬರು ಜಿಲ್ಲಾ ರಚನೆಗೆ ವಿರೋಧ ವ್ಯಕ್ತಪಡಿಸುತ್ತಿದ್ದಾರೆ ಎಂಬ ಆರೋಪವಿತ್ತು. ಆದರೆ, ಈಗ ಅವರಿಂದಲೂ ಸ್ಪಂದನೆ ದೊರೆತಿದೆ ಎನ್ನಲಾಗಿದ್ದು, ಎಲ್ಲಾ ಮೂರು ಶಾಸಕರೂ ಸೇರಿಕೊಂಡರೆ ಶಿರಸಿ ಪ್ರತ್ಯೇಕ ಜಿಲ್ಲೆ ರಚನೆ ಮಾಡುವ ಕಾಲ ಸನ್ನಿಹಿತವಾಗಲಿದೆ ಎಂಬ ವಿಚಾರ ಕಾಗೇರಿ ಹೇಳಿಕೆಯಿಂದ ಹೆಚ್ಚು ಚರ್ಚೆಗೆ ಕಾರಣವಾಗಿದೆ.

**ಚುನಾವಣೆ ಅಸ್ತ್ರ:** ಈ ಮಧ್ಯೆ ಶಿರಸಿ ಜಿಲ್ಲೆ ರಚನೆ ಎಂಬುದು ಚುನಾವಣೆ ಅಸ್ತ್ರ ಎಂಬ ಅಭಿಪ್ರಾಯವೂ ವ್ಯಕ್ತವಾಗಿದೆ. ರಾಜಕೀಯವಾಗಿ ಜಿಲ್ಲೆ ರಚನೆ ಮಾಡಿದಲ್ಲಿ ಸಾಕಷ್ಟು ಜನರ ಪ್ರಶಂಸೆ, ಬೆಂಬಲ ಸಿಗಲಿದೆ. ಹೀಗಾಗಿ ಶಿರಸಿ ಜಿಲ್ಲೆ ರಚನೆ ಮುಂದಿನ ವಿಧಾನಸಭೆ ಚುನಾವಣೆಗೆ ಪ್ರಬಲ ರಾಜಕೀಯ ಅಸ್ತ್ರವಾಗಲಿದೆ. ವಿಶ್ವೇಶ್ವರ ಹೆಗಡೆ, ಕಾಗೇರಿ ಈ ವಿಚಾರ ಘೋಷಣೆ ಮಾಡಿದ್ದಾರಾದರೂ ಶಿವರಾಮ ಹೆಬ್ಬಾರ್ ಅವರಿಗೂ ಇದು ಅನಿವಾರ್ಯ, ಹೀಗಾಗಿ ಅವರೂ ಸಹಕರಿಸಬೇಕಾಗುತ್ತದೆ.

ಶಿರಸಿ ಜಿಲ್ಲೆ ರಚನೆಯ ಕುರಿತು ಮುಖ್ಯಮಂತ್ರಿಯವರ ಗಮನಕ್ಕೆ ತರಲಾಗಿದೆ. ಈ ಬಗ್ಗೆ ಸಚಿವರ ಸಂಪುಟದಲ್ಲಿ ಚರ್ಚೆಯಾಗಬೇಕಿದೆ. ಜನರ ಆಶೋತ್ತರಗಳಿಗೆ ಅನುಗುಣವಾಗಿ ಸರ್ಕಾರ ನಿರ್ಧಾರ ಕೈಗೊಳ್ಳಲಿದ್ದು, ಈ ವಿಚಾರದಲ್ಲಿ ಸರ್ಕಾರದಿಂದ ಸಕಾರಾತ್ಮಕ ಪ್ರತಿಕ್ರಿಯೆ ಬರುವ ವಿಶ್ವಾಸವಿದೆ ಎಂದು ವಿಶ್ವೇಶ್ವರ ಹೆಗಡೆ, ಕಾಗೇರಿ ವಿಧಾನಸಭಾಧ್ಯಕ್ಷರು ತಿಳಿಸಿದರು.

ಆಧಾರ:ವಿಶ್ವವಾಣಿ, ದಿನಾಂಕ:07.12.2022

**ದಿನಾಂಕ: 28.12.2022ರಂದು ಬೆಳಗಾವಿಯ ಸುವರ್ಣ ವಿಧಾನಸೌಧಕ್ಕೆ, ಶಿರಸಿ ಪ್ರತ್ಯೇಕ ಜಿಲ್ಲೆಯಾಗಿ ಘೋಷಣೆ ಮಾಡುವಂತೆ ಹೋರಾಟ ಸಮಿತಿಯ ಪ್ರಮುಖರು ಭೇಟಿ ನೀಡಿದ ಸಂದರ್ಭದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ್ ಬೊಮ್ಮಾಯಿಯವರೊಂದಿಗೆ ಸದರಿ ವಿಷಯದ ಕುರಿತಂತೆ ಸನ್ಮಾನ್ಯ ಸಭಾಧ್ಯಕ್ಷರು ಚರ್ಚಿಸಿದರು. ಈ ಸಂದರ್ಭದಲ್ಲಿ ಸನ್ಮಾನ್ಯ ಸಚಿವರಾದ ಶ್ರೀ ಅರಬೈಲ್ ಶಿವರಾಂ ಹೆಬ್ಬಾರ್‌ರವರು ಉಪಸ್ಥಿತರಿದ್ದರು;**





## 23. ಬೆಳಗಾವಿ ಅಧಿವೇಶನದಲ್ಲಿ ಪೂರ್ಣ ಹಾಜರಾತಿ ಕಡ್ಡಾಯ

'ಇದೇ 19 ರಿಂದ 30ರ ವರೆಗೆ ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ನಡೆಯಲಿರುವ ಚಳಿಗಾಲದ ಅಧಿವೇಶನ ಅತ್ಯಂತ ಮಹತ್ವ ಪಡೆದಿದೆ. ಇದರಲ್ಲಿ ಪೂರ್ಣ ಹಾಜರಾತಿ ಇರಬೇಕೆಂದು ಎಲ್ಲಾ ಶಾಸಕರಿಗೂ ಸೂಚಿಸಲಾಗಿದೆ' ಎಂದು ವಿಶ್ವೇಶ್ವರ ಹೆಗಡೆ, ಕಾಗೇರಿ ಮಾನ್ಯ ವಿಧಾನ ಸಭಾಧ್ಯಕ್ಷರು ತಿಳಿಸಿದರು.

ಅಧಿವೇಶನದ ಪೂರ್ವಸಿದ್ಧತೆಗಳನ್ನು ಪರಿಶೀಲಿಸಿದ ನಂತರ ಮಾತನಾಡಿದ ಅವರು ಕೆಲ ಸಚಿವರು, ಶಾಸಕರು ಅಧಿವೇಶನದ ವೇಳೆ ಗೋವಾ, ಮಹಾರಾಷ್ಟ್ರ ಕಡೆಗೆ ಪ್ರವಾಸಕ್ಕೆ ಹೋಗುತ್ತಾರೆ. ಗಂಭೀರ ವಿಷಯಗಳ ಚರ್ಚೆಯಲ್ಲಿ ಗೈರಾಗುತ್ತಾರೆ ಎಂದು ಹಲವರು ದೂರಿದ್ದಾರೆ. ಎಲ್ಲರೂ ಎಲ್ಲ ಕಲಾಪಗಳಲ್ಲೂ ಪಾಲ್ಗೊಳ್ಳುವಂತೆ ಸೂಚನೆ ನೀಡಲಾಗಿದೆ ಎಂದರು.

'ನಾನು ಅಧಿವೇಶನಕ್ಕೆ ಹಾಜರಾಗುವುದಿಲ್ಲ ಎಂದು ಕೆಲವರು ಹೇಳಿದ್ದಾರೆ. ಅದು ತಪ್ಪು, ಅಧಿವೇಶನವನ್ನು ಯಾರೂ ಹಗುರವಾಗಿ ತೆಗೆದುಕೊಳ್ಳಬಾರದು, ಹಗುರವಾಗಿ ಮಾತನಾಡಬಾರದು ಎಂದು ಹೆಚ್.ಡಿ.ಕುಮಾರಸ್ವಾಮಿ ಅವರಿಗೆ ಟಾಂಗ್ ನೀಡಿದರು.

**'ಆರು ವಿಷಯಗಳ ಕುರಿತು ಚರ್ಚೆ'**: ಈ ಅಧಿವೇಶನದಲ್ಲಿ ಮಂಡಿಸಲಾಗುತ್ತಿದೆ.

1. ಕನ್ನಡ ಭಾಷಾ ಸಮಗ್ರ ಅಭಿವೃದ್ಧಿ ವಿಧೇಯಕ–2022.

2. ಬೆಂಗಳೂರು ಮಹಾನಗರ ಭೂಸಾರಿಗೆ ಪ್ರಾಧಿಕಾರ ವಿಧೇಯಕ, ಈ ಎರಡನ್ನೂ ಬೆಂಗಳೂರು ಅಧಿವೇಶನದಲ್ಲಿ ಮಂಡಿಸಿದ್ದೇವೆ. ಇಲ್ಲಿ ಚರ್ಚಿಸಿ ಅಂಗೀಕರಿಸಲಾಗುವುದು.

3. ಕನ್ನಡ ಭೂ ಕಂದಾಯ ವಿಧೇಯಕ.

4. ಅನುಸೂಚಿತ ಜಾತಿ–ಪಂಗಡಗಳ ಶಿಕ್ಷಣ ಸಂಸ್ಥೆಗಳ ಸ್ಥಾನಗಳಲ್ಲಿ ಮತ್ತು ರಾಜಾಧೀನ ಸೇವೆಗಳ ನೇಮಕಾತಿಗಳಲ್ಲಿ ಮೀಸಲಾತಿ ವಿಧೇಯಕ.

5. ಕರ್ನಾಟಕ ವಿಶೇಷ ಹೂಡಿಕೆ ಪ್ರದೇಶ ವಿಧೇಯಕ.

6. ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ ಇವುಗಳಲ್ಲದೇ ಇನ್ನೂ ಹೊಸ ವಿಷಯಗಳೂ ಚರ್ಚೆಗೆ ಬರಲಿವೆ ಎಂದು ವಿಧಾನಸಭಾಧ್ಯಕ್ಷರು ವಿವರಿಸಿದರು.

ಆಧಾರ:ಪ್ರಜಾವಾಣಿ, ದಿನಾಂಕ:13.12.2022

**ದಿನಾಂಕ: 12.12.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ಡಿಸೆಂಬರ್ 19 ರಿಂದ 30ರವರೆಗೆ ನಡೆಯಲಿರುವ ವಿಧಾನಸಭೆ ಅಧಿವೇಶನದ ಬಗ್ಗೆ ಪೂರ್ವ ತಯಾರಿಗಳನ್ನು ಪರಿಶೀಲಿಸಿ, ಸಂಬಂಧಪಟ್ಟ ಎಲ್ಲಾ ಇಲಾಖಾ ಅಧಿಕಾರಿಗಳೊಂದಿಗೆ ಸಭೆ ನಡೆಸಿ, ಪತ್ರಿಕಾಗೋಷ್ಠಿ ಕರೆದು ವಿವರ ಒದಗಿಸಿದರು.**







## 24. ಬೆಳಗಾವಿ ಅಧಿವೇಶನದಲ್ಲಿ ವಕೀಲರ ರಕ್ಷಣಾ ಮಸೂದೆ

ಬೆಳಗಾವಿಯಲ್ಲಿ ನಡೆಯಲಿರುವ ಚಳಿಗಾಲದ ಅಧಿವೇಶನದಲ್ಲಿ ವಕೀಲರ ರಕ್ಷಣಾ ಮಸೂದೆಯನ್ನು ಮಂಡಿಸುವುದಾಗಿ ವಕೀಲರ ಸಂಘದ ನಿಯೋಗಕ್ಕೆ ಮುಖ್ಯಮಂತ್ರಿಯವರು ತಿಳಿಸಿದರು.

ಮುಖ್ಯಮಂತ್ರಿಗಳ ಗೃಹ ಕಛೇರಿ ಕೃಷ್ಣಾಗೆ ವಕೀಲರ ಸಂಘದ ಅಧ್ಯಕ್ಷ ವಿವೇಕ್ ಸುಬ್ಬಾ ರೆಡ್ಡಿ, ಕಾರ್ಯದರ್ಶಿ ಟಿ.ಜಿ.ರವಿ, ಖಜಾಂಚಿ ಹರೀಶ್ ಎಂ.ಟಿ, ಇನ್ನಿತರರ ನಿಯೋಗ ಭೇಟಿ ನೀಡಿ, ಇತ್ತೀಚಿನ ದಿನಗಳಲ್ಲಿ ಕರ್ತವ್ಯ ನಿರತ ವಕೀಲರ ಮೇಲೆ ದೌರ್ಜನ್ಯಗಳು ಹೆಚ್ಚುತ್ತಿದ್ದು, ಅನೇಕರನ್ನು ಕೊಲ್ಲಲಾಗಿದೆ. ಈ ಹಿನ್ನೆಲೆಯಲ್ಲಿ ವಕೀಲರ ರಕ್ಷಣಾ ಕಾಯ್ದೆಯ ಕರಡು ಮಸೂದೆಯನ್ನು ಡಿಸೆಂಬರ್ 19 ರಿಂದ ಪ್ರಾರಂಭವಾಗುತ್ತಿರುವ ಅಧಿವೇಶನದಲ್ಲಿ ಎರಡೂ ಸದನಗಳಲ್ಲಿ ಮಂಡಿಸುವಂತೆ ಮುಖ್ಯಮಂತ್ರಿಗಳಿಗೆ ನಿಯೋಗ ಮನವಿ ಮಾಡಿತ್ತು. ಇದಕ್ಕೆ ಬೊಮ್ಮಾಯಿ ಅವರು ಭರವಸೆ ನೀಡಿದ್ದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:13.12.2022

## 25. ಅಸೆಂಬ್ಲಿಯಲ್ಲಿ ಸಾವರ್ಕರ್, 6 ಗಣ್ಯರ ಚಿತ್ರ

ಆಡಳಿತ ಮತ್ತು ಪ್ರತಿಪಕ್ಷಗಳ ನಡುವಿನ ತಿಕ್ಕಾಟಕ್ಕೆ ಕಾರಣವಾಗಿರುವ ಸ್ವಾತಂತ್ರ್ಯ ಹೋರಾಟಗಾರ ವೀರ ಸಾವರ್ಕರ್ ಭಾವ ಚಿತ್ರ ಸೇರದಂತೆ ಇತರೆ ಗಣ್ಯರ ಭಾವಚಿತ್ರಗಳನ್ನು ಮಾಧ್ಯಮಗಳು ಸೇರಿದಂತೆ ಯಾರಿಗೂ ಪ್ರವೇಶಾವಕಾಶ ನೀಡದೆ ತರಾತುರಿಯಲ್ಲಿ ವಿಧಾನಸಭೆಯಲ್ಲಿ ಅನಾವರಣಗೊಳಿಸಲಾಯಿತು.

ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ ಕಾಗೇರಿ, ಕಾನೂನು ಮತ್ತು ಸಂಸದೀಯ ಸಚಿವ ಜೆ.ಸಿ.ಮಾಧುಸ್ವಾಮಿ ಅವರು ಏಳು ಭಾವಚಿತ್ರಗಳನ್ನು ಅನಾವರಣಗೊಳಿಸಿದರು.

ಭಾವಚಿತ್ರಗಳನ್ನು ಅನಾರಣಗೊಳಿಸುವ ವೇಳೆ ಸದನದ ಎಲ್ಲಾ ಬಾಗಿಲುಗಳನ್ನು ಮುಚ್ಚಿ ಕೆಲವೇ ಕೆಲವು ಮಂದಿಗೆ ಮಾತ್ರ ಪಾಲ್ಗೊಳ್ಳಲು ಅವಕಾಶ ನೀಡಲಾಗಿತ್ತು.

ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರು ಕುವೆಂಪು ಸೇರಿದಂತೆ ನಾಡಿನ ಹಲವು ದಾರ್ಶನಿಕರ ಭಾವಚಿತ್ರ ಅಳವಡಿಸುವಂತೆ ಆಗ್ರಹಿಸಿ ಸುವರ್ಣಸೌಧದ ಮೆಟ್ಟಿಲುಗಳ ಮೇಲೆ ಪ್ರತಿಭಟನೆ ನಡೆಸುತ್ತಿದ್ದರೆ, ಅತ್ತ ಸದನದೊಳಗೆ ಮುಚ್ಚಿದ ಬಾಗಿಲುಗಳೊಂದಿಗೆ ಅನಾವರಣ ಮಾಡಲಾಯಿತು.

ವೀರ ಸವರ್ಕರ್ ಭಾವಚಿತ್ರ ಸೇರಿದಂತೆ ಬಸವಣ್ಣ, ಡಾ.ಬಿ.ಆರ್.ಅಂಬೇಡ್ಕರ್, ಸ್ವಾಮಿ ವಿವೇಕಾನಂದ, ಸುಭಾಷ ಚಂದ್ರ ಬೋಸ್, ಮಹಾತ್ಮಗಾಂಧಿ, ಸರ್ದಾರ್ ವಲ್ಲಭಭಾಯಿ ಪಟೇಲ್ ಅವರ ಭಾವಚಿತ್ರಗಳನ್ನು ಅಳವಡಿಸಲಾಗಿದೆ. ಬಸವಣ್ಣ ಅವರ ಭಾವಚಿತ್ರವನ್ನು ಸಭಾಧ್ಯಕ್ಷರ ಪೀಠದ ಮೇಲೆ ನೇತುಹಾಕಲಾಗಿದೆ. ಸಂಸತ್ ಮಾದರಿಯಲ್ಲಿಯೇ ಅನುಭವ ಮಂಟಪದಲ್ಲಿ ಚರ್ಚೆ ನಡೆಸುತ್ತಿದ್ದರಿಂದ ಅವರ ಭಾವಚಿತ್ರವನ್ನು ಸಭಾಧ್ಯಕ್ಷರ ಪೀಠದ ಮೇಲೆ ಹಾಕಲಾಗಿದೆ ಎಂದು ಹೇಳಲಾಗಿದೆ.

ಇನ್ನು, ಸಭಾಧ್ಯಕ್ಷರ ಪೀಠದ ಬಲಭಾಗಕ್ಕೆ ಅಂದರೆ, ಅಧಿಕಾರಿಗಳ ಗ್ಯಾಲರಿ ಕಡೆಗೆ ಸ್ವಾಮಿ ವಿವೇಕಾನಂದ, ಸುಭಾಷ್ ಚಂದ್ರ ಬೋಸ್. ಡಾ.ಬಿ.ಆರ್.ಅಂಬೇಡ್ಕರ್ ಅವರ ಭಾವಚಿತ್ರವನ್ನು ಹಾಕಲಾಗಿದೆ. ಸಭಾದ್ಯಕ್ಷರ ಪೀಠದ ಎಡಭಾಗಕ್ಕೆ ಅಂದರೆ, ಪತ್ರಕರ್ತರ ಗ್ಯಾಲರಿ ಕಡೆಗೆ ಮಹಾತ್ಮ ಗಾಂಧಿ, ಸರ್ದಾರ ವಲ್ಲಭಭಾಯಿ ಪಟೇಲ್, ವೀರ ಸಾವರ್ಕರ್ ಭಾವಚಿತ್ರಗಳನ್ನು ಹಾಕಲಾಗಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ:20.12.2022.

**ದಿನಾಂಕ: 19.12.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ವಿಧಾನ ಸಭೆಯ ಸಭಾಂಗಣದಲ್ಲಿ ಜಗಜ್ಯೋತಿ ಬಸವೇಶ್ವರರು, ಮಹಾತ್ಮಾ ಗಾಂಧಿ, ಸರ್ದಾರ್ ವಲ್ಲಭಭಾಯ್ ಪಟೇಲ್, ವೀರ್ ಸಾವರ್ಕರ್, ಡಾ: ಬಿ.ಆರ್. ಅಂಬೇಡ್ಕರ್, ನೇತಾಜಿ ಸುಭಾಷ್ ಚಂದ್ರ ಬೋಸ್ ಹಾಗೂ ಸ್ವಾಮಿ ವಿವೇಕಾನಂದರ ಭಾವಚಿತ್ರಗಳನ್ನು ಅನಾವರಣಗೊಳಿಸಿದ ಸಂದರ್ಭ;**



## 26. ಸಭಾಪತಿಯಾಗಿ ಹೊರಟ್ಟಿ ಅಧಿಕಾರ ಸ್ವೀಕಾರ

ಮೇಲ್ಮನೆ ನೂತನ ಸಭಾಪತಿಯಾಗಿ ಹಿರಿಯ ಸದಸ್ಯ ಬಿಜೆಪಿಯ ಬಸವರಾಜ ಹೊರಟ್ಟಿ ಅವಿರೋಧವಾಗಿ ಆಯ್ಕೆಯಾಗಿದ್ದು ಬುಧವಾರ ಅಧಿಕಾರ ಸ್ವೀಕರಿಸಿದರು.

ವಿಧಾನಪರಿಷತ್ ಕಲಾಪ ಆರಂಭವಾಗುತ್ತಿದ್ದಂತೆ ಹಂಗಾಮಿ ಸಭಾಪತಿ ರಘುನಾಥ ಮಲ್ಕಾಪುರ ಅವರು ಬಸವರಾಜ್ ಹೊರಟ್ಟಿ ಅವರ ಆಯ್ಕೆಯನ್ನು ಪ್ರಕಟಿಸಿದರು. ಬಳಿಕ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಸಭಾನಾಯಕ ಕೋಟಾ ಶ್ರೀನಿವಾಸ ಪೂಜಾರಿ, ಬಿ.ಕೆ.ಹರಿಪ್ರಸಾದ್ ಮತ್ತಿತರರು ಹೊರಟ್ಟಿ ಅವರನ್ನು ಸಭಾಪತಿಯವರ ಪೀಠದ ಬಳಿ ಕರೆತಂದರು. ಹಂಗಾಮಿ ಸಭಾಪತಿ ಮಲ್ಕಾಪುರೆ ಅವರು ಅಧಿಕಾರ ಹಸ್ತಾಂತರ ಮಾಡಿದರು.

ನೂತನ ಸಭಾಪತಿ ಆಯ್ಕೆ ಕುರಿತು ಮಾತನಾಡಿದ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಸಭಾಪತಿ ಸ್ಥಾನಕ್ಕೆ ನಿಮ್ಮಂಥ ಹಿರಿಯರು ಆಯ್ಕೆಯಾಗಿರುವುದು ಅತ್ಯಂತ ಸೂಕ್ತ. ಸತತ 8 ಬಾರಿ ಮೇಲ್ಮನೆ ಸದಸ್ಯರಾಗಿರುವ, ಶಿಕ್ಷಣ ಸಚಿವ, ಮೂರು ಸಲ ಸಭಾಪತಿಯಾಗಿ ರಾಜಕೀಯ ಜೀವನದಲ್ಲಿ 42 ವರ್ಷಗಳ ಅನುಭವ ಹೊಂದಿರುವ ಹೊರಟ್ಟಿ ಅವರು ಬೆಳಗಾವಿಯಲ್ಲಿ ಸಭಾಪತಿ ಸ್ಥಾನದಲ್ಲಿ ಉಪಸ್ಥಿತರಾಗಿರುವುದು ಈ ಸದನ ಹಾಗೂ ಪೀಠಕ್ಕೆ ಗೌರವ ಹೆಚ್ಚಿಸಿದೆ ಎಂದು ಬಣ್ಣಿಸಿದರು.

ಬಸವರಾಜ ಹೊರಟ್ಟಿ ಅವರು ಉತ್ತರ ಕರ್ನಾಟಕದ ಧ್ವನಿಯಾಗಿ ಎಲ್ಲಾ ಮುಖ್ಯಮಂತ್ರಿಗಳೊಂದಿಗೆ ಉತ್ತಮ ಬಾಂಧವ್ಯ ಇಟ್ಟುಕೊಂಡಿದ್ದಾರೆ. ಅವರ ಅವಧಿಯಲ್ಲಿ ಸಮಗ್ರ ಕರ್ನಾಟಕ ಅಭಿವೃದ್ಧಿಗೆ ಅರ್ಥ ಪೂರ್ಣ ಚರ್ಚೆ, ಜನಸ್ಪಂದನೆ ಸಿಗುವ ಕೆಲಸ ಆಗಲಿ ಎಂದು ಹಾರೈಸಿದರು.

ಸಭಾನಾಯಕ ಕೋಟಾ ಶ್ರೀನಿವಾಸ ಪೂಜಾರಿ ಮಾತನಾಡಿ, ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ನಿಟ್ಟಿನಲ್ಲಿ ಸಭಾಪತಿಗಳು ಕಾರ್ಯನಿರ್ವಹಿಸುವ ವಿಶ್ವಾಸವಿದೆ ಎಂದರು ಪ್ರತಿಪಕ್ಷದ ನಾಯಕ ಬಿ.ಕೆ. ಹರಿಪ್ರಸಾದ್ ಮಾತನಾಡಿದರು.

**ಮೂರನೇ ಬಾರಿಗೆ ಸಭಾಪತಿ**: 1980 ರಿಂದ ಪಶ್ಚಿಮ ಶಿಕ್ಷಕರ ಕ್ಷೇತ್ರದಿಂದ ಸತತವಾಗಿ 8 ಬಾರಿ ವಿಧಾನಪರಿಷತ್ತಿಗೆ ಆಯ್ಕೆಯಾಗುವ ಮೂಲಕ ದಾಖಲೆ ನಿರ್ಮಿಸಿರುವ ಹೊರಟ್ಟಿಯವರು ಮೂರನೇ ಬಾರಿಗೆ ಸಭಾಪತಿ ಸ್ಥಾನ ಅಲಂಕರಿಸಿದ್ದಾರೆ. ಈ ಹಿಂದೆ ಶಿಕ್ಷಣ ಸಚಿವರಾಗಿ, ಮಾಹಿತಿ ಹಾಗೂ ವಿಜ್ಞಾನ ಹಾಗೂ ಕಾನೂನು ಸಚಿವರಾಗಿ ಕಾರ್ಯನಿರ್ವಹಿಸಿರುವ ಹೊರಟ್ಟಿಯವರು ಪರಿಷತ್ ರಾಜಕಾರಣದಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ.

ಆಧಾರ:ಕನ್ನಡ ಪ್ರಭ, ದಿನಾಂಕ:22.12.2022

**ದಿನಾಂಕ: 21-12-2022 ರಂದು ಬೆಳಗಾವಿ ಸುವರ್ಣಸೌಧದಲ್ಲಿ ನಡೆದ ಅಧಿವೇಶನದಲ್ಲಿ ಅವಿರೋಧವಾಗಿ ಸಭಾಪತಿ ಸ್ಥಾನಕ್ಕೆ ಆಯ್ಕೆಯಾದ ಶ್ರೀ ಬಸವರಾಜ ಎಸ್ ಹೊರಟ್ಟಿ ರವರು ಅಧಿಕಾರ ಸ್ವೀಕರಿಸಿದ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ ಬೊಮ್ಮಾಯಿರವರು, ಮಾನ್ಯ ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರಾದ ಶ್ರೀ ಕೋಟ ಶ್ರೀನಿವಾಸ್ ಪೂಜಾರಿರವರು, ನಿಕಟಪೂರ್ವ ಸಭಾಪತಿಗಳಾದ ಶ್ರೀ ರಘುನಾಥರಾವ್ ಮಲ್ಕಾಪೂರೆರವರು, ವಿರೋಧ ಪಕ್ಷದ ನಾಯಕರಾದ ಶ್ರೀ ಹರಿಪ್ರಸಾದ್‌ರವರು, ಮಾನ್ಯ ಸರ್ಕಾರಿ ಮುಖ್ಯ ಸಚೇತಕರಾದ ಶ್ರೀ ವೈ.ಎ ನಾರಾಯಸ್ವಾಮಿರವರು, ಹಾಗೂ ವಿಧಾನ ಪರಿಷತ್ ಸದಸ್ಯರಾದ ಶ್ರೀ ಬೋಜೇಗೌಡರವರು ಶುಭಾಷಯ ಕೋರಿದರು.**



**ಬೆಳಗಾವಿ ಸುವರ್ಣಸೌಧದಲ್ಲಿ ನಡೆದ 148ನೇ ಅಧಿವೇಶನದಲ್ಲಿ ಮೂರನೇ ಬಾರಿಗೆ ಸಭಾಪತಿ ಸ್ಥಾನಕ್ಕೆ ಆಯ್ಕೆಯಾದ ಶ್ರೀ ಬಸವರಾಜ ಎಸ್ ಹೊರಟ್ಟಿ ರವರು ಅಧಿವೇಶನ ನಡೆಸಿದ ಸಂದರ್ಭ.**



## 27. ಮೇಲ್ಮನೆಯಲ್ಲಿ ನೆಹರು ಕದನ

ಬಿಜೆಪಿ ಸದಸ್ಯ ಎನ್.ರವಿಕುಮಾರ್ ಅವರು ಬಳಸಿದ **'ನೆಹರು ಕಾಲದ ಭ್ರಷ್ಟಾಚಾರ'** ಎಂಬ ಪದ ವಿಧಾನ ಪರಿಷತ್‌ನಲ್ಲಿ ತೀವ್ರ ಕೋಲಾಹಲ, ವಾಗ್ವಾದ, ಪ್ರತಿಭಟನೆಗೆ ಕಾರಣವಾಗಿ ಸದನವನ್ನು ಕೆಲ ನಿಮಿಷಗಳ ಕಾಲ ಮುಂದೂಡಿದ ಘಟನೆ ನಡೆಯಿತು. ಕೊನೆಗೆ ರವಿಕುಮಾರ್ ಸದನದ ಕ್ಷಮೆ ಯಾಚಿಸಿ ತಾವು ಬಳಸಿದ ಪದ ಹಿಂಪಡೆದ ಮೇಲೆ ಕಲಾಪ ಮುಂದುವರೆಯಿತು.

ಶೂನ್ಯವೇಳೆ ನಂತರ ವಿರೋಧ ಪಕ್ಷದ ನಾಯಕ ಬಿ.ಕೆ.ಹರಿಪ್ರಸಾದ್ ಅವರು, ವಿಶ್ವವಿದ್ಯಾಲಯಗಳಲ್ಲಿ ಕುಲಪತಿಗಳಾಗಬೇಕೆಂದರೆ ರೂ.5–6 ಕೋಟಿ ಬೇಕು ಎಂದು ಸಂಸದ ಪ್ರತಾಪಸಿಂಹ ನೀಡಿರುವ ಹೇಳಿಕೆ ಬಗ್ಗೆ ಚರ್ಚಿಸಲು ಅವಕಾಶ ನೀಡಬೇಕು ಎಂದು ಕೋರಿದರು. ಆಗ ಬಿಜೆಪಿ ಸದಸ್ಯ ಎನ್.ರವಿಕುಮಾರ್ ನೆಹರು ಅವರಿಂದ ಸೋನಿಯಾಗಾಂಧಿ ಅವರ ಕಾಲದವರೆಗೆ ಭ್ರಷ್ಟಾಚಾರದಿಂದ 3–4 ತಲೆಮಾರಿಗಾಗುವಷ್ಟು ಆಸ್ತಿ ಗಳಿಸಿದ್ದೇವೆ ಎಂದು ಮಾಜಿ ಸ್ಪೀಕರ್ ರಮೇಶ್ ಕುಮಾರ್ ಭಾಷಣ ಮಾಡಿದ್ದಾರೆ. ಆ ಬಗ್ಗೆಯೂ ಚರ್ಚೆಯಾಗಲಿ ಎಂದು ಹೇಳಿದರು.

ಇದರಿಂದ ರೊಚ್ಚಿಗೆದ್ದ ಕಾಂಗ್ರೆಸ್ಸಿಗರು ಸಭಾಪತಿಗಳ ಮುಂದೆ ಪ್ರತಿಭಟನೆ ನಡೆಸಿದಾಗ ಕಲಾಪವನ್ನು ಮುಂದೂಡಲಾಗಿತ್ತು. ಭೋಜನವಿರಾಮದ ಬಳಿಕ ಕಲಾಪ ಆರಂಭವಾಗುತ್ತಿದ್ದಂತೆ ಕಾಂಗ್ರೆಸ್ಸಿಗರು ಧರಣಿಯನ್ನು ಮುಂದುವರಿಸಿದರು.

ರವಿಕುಮಾರ್ ಬಳಸಿದ ಪದವನ್ನು ಕಡತದಿಂದ ತೆಗೆದುಹಾಕುತ್ತೇನೆ ಎಂದು ಸಭಾಪತಿ ಹೊರಟ್ಟಿ ತಿಳಿಸಿದರೂ, ಇದಕ್ಕೆ ಒಪ್ಪದ ಹರಿಪ್ರಸಾದ್ ಅವರು ಪದ ಬಳಕೆ ಮಾಡಿದ್ದಕ್ಕೆ ರವಿಕುಮಾರ್ ಕ್ಷಮೆಯಾಚಿಸಬೇಕು. ರಮೇಶ್‌ಕುಮಾರ್ ತಮ್ಮ ಭಾಷಣದಲ್ಲಿ ಆ ಪದ ಬಳಸಿಲ್ಲ, ಬಳಸಿದ್ದರೆ ನಾನು ನನ್ನ ಸ್ಥಾನಕ್ಕೆ ರಾಜೀನಾಮೆ ನೀಡುತ್ತೇನೆ ಇಲ್ಲವೇ ರವಿಕುಮಾರ್ ರಾಜೀನಾಮೆ ನೀಡಲಿ ಎಂದರು.

ಆಗ ಕಲಾಪವನ್ನು ಮತ್ತೆ 10 ನಿಮಿಷಗಳ ಕಾಲ ಮುಂದೂಡಿದ ಸಭಾಪತಿಗಳು, ಎರಡು ಪಕ್ಷದವರನ್ನು ತಮ್ಮ ಕೊಠಡಿಗೆ ಕರೆಯಿಸಿ ಚರ್ಚೆ ನಡೆಸಿದರು. ಬಳಿಕ ಮತ್ತೆ ಶುರುವಾದ ಕಲಾಪದಲ್ಲೂ ಕಾಂಗ್ರೆಸ್ಸಿಗರು ತಮ್ಮ ಪ್ರತಿಭಟನೆ ಮುಂದುವರಿಸಿದರು. ಬಿಜೆಪಿ ಹಾಗೂ ಜೆಡಿಎಸ್ ಕೆಲ ಹಿರಿಯ ಸದಸ್ಯರು ಪದವನ್ನು ಹಿಂಪಡೆಯುವಂತೆ ರವಿಕುಮಾರ್ ಅವರಿಗೆ ಸೂಚಿಸಿದರು.

ಬಳಿಕ ರವಿಕುಮಾರ್, ನೆಹರು ಹೆಸರು ಬಳಸಿದ್ದಕ್ಕೆ ಕಾಂಗ್ರೆಸ್ಸಿಗರಿಗೆ ಘಾಸಿಯಾಗಿದೆ. ಅದಕ್ಕಾಗಿ ಕ್ಷಮೆ ಕೇಳುತ್ತೇನೆ. ಆ ಪದವನ್ನು ಹಿಂಪಡೆಯುತ್ತೇನೆ ಎಂದು ತಿಳಿಸಿದರು. ಆದರೆ ಇದಕ್ಕೆ ಒಪ್ಪದ ವಿರೋಧ ಪಕ್ಷದವರು ನೆಹರು ಹೆಸರು ಬಳಸಿರುವುದಕ್ಕೆ ನಮ್ಮ ಆಕ್ಷೇಪವಿಲ್ಲ. ಆ ಕಾಲದ ಭ್ರಷ್ಟಾಚಾರ ಎಂದು ಬಳಸಿರುವುದಕ್ಕೆ ಆಕ್ಷೇಪವಿದೆ. ರಮೇಶ್‌ಕುಮಾರ್ ಹಾಗೆ ಭಾಷಣ ಮಾಡಿಲ್ಲ ಎಂಬುದನ್ನು ವಿಡಿಯೋ ಮೂಲಕ ಈಗಾಗಲೇ ನಿಮಗೆ ತೋರಿಸಲಾಗಿದೆ. ಆದ ಕಾರಣ ರವಿಕುಮಾರ್ ತಮ್ಮ ಹೇಳಿಕೆಯನ್ನು ಸಂಪೂರ್ಣವಾಗಿ ಹಿಂಪಡೆದು ಕ್ಷಮೆಯಾಚಿಸಬೇಕು. ಅಲ್ಲಿಯವರೆಗೂ ಕಲಾಪ ನಡೆಸಲು ಬಿಡುವುದಿಲ್ಲ ಎಂದು ಪಟ್ಟು ಹಿಡಿದರು.

**ರವಿಕುಮಾರ್ ಕ್ಷಮೆ**: ಕೊನೆಗೆ ರವಿಕುಮಾರ್ ಮಾತನಾಡಿ, ನೆಹರು ಕಾಲದ ಭ್ರಷ್ಟಾಚಾರ ಎಂದು ಬಳಸಿರುವುದಕ್ಕೆ ಕ್ಷಮೆಯಾಚಿಸಿ ಆ ಪದವನ್ನು ಹಿಂಪಡೆಯುವೆ ಎಂದು ತಿಳಿಸಿದರು. ಜೊತೆಗೆ ರಮೇಶ್ ಕುಮಾರ್ ಭಾಷಣವನ್ನು ಜನರು ಹೇಗೆ ಅರ್ಥೈಸಿಕೊಂಡಿದ್ದಾರೋ ಅದೇ ರೀತಿ ನಾನು ಅರ್ಥೈಸಿಕೊಳ್ಳುತ್ತೇನೆ ಎಂದರು. ಬಳಿಕ ಬಿಜೆಪಿ ಸದಸ್ಯರೆಲ್ಲರೂ, ಇನ್ಮುಂದೆ ನಾಗಪುರವನ್ನು ಹಾವಿನಪುರ, ಆರ್‌ಎಸ್‌ಎಸ್‌ನ್ನು ರಾಷ್ಟ್ರೀಯ ಸುಲಭ್ ಶೌಚಾಲಯ ಎಂಬ ಪದ ಬಳಸದಂತೆ ಆಗ್ರಹಿಸಿದರು.

ಆಧಾರ: ಕನ್ನಡ ಪ್ರಭ, ದಿನಾಂಕ:23.12.2022

## 28. Assembly passes Bill for land conversion in just 7 days

The Assembly passed a Bill that allows conversion of agricultural land for non-agricultural purposes in just seven days.

The Karnataka Land Revenue (Second Amendment) Bill will now go to the Legislative Council for consideration.

Piloting the Bill, Revenue Minister said the new law is designed to prevent harassment of landowner under the guise of documentation.

Allaying concerns raised by Arsikere JD(S) member K.Shivalinge Gowda, Ashoka said land conversion would be done within seven days only in areas that have a local planning authority.

“In villages, where there is no planning authority. We have given 15 days to receive objections and another 15 days for approval. So, that’s 30 days in villagers” he said.

Former speaker K.R.Ramesh Kumar asked Ashoka to make sure the proposed law “does not become a festival for developers”. The Assembly also passed the Karnataka Border Area Development Authority (Amendment) Bill.

This gives power to the government to add, alter or omit taluks from the jurisdiction of the Authority. This is mainly to bring newly-created taluks under the Authority.

Courtesy: Deccan Herald, Dated: 23.12.2022

## 29. ಉತ್ತರ ಕರ್ನಾಟಕ ಕಲ್ಯಾಣ

ವಿಧಾನಮಂಡಲ ಅಧಿವೇಶನ ಬೆಳಗಾವಿಯಲ್ಲಿ ನಡೆಯುತ್ತಿರುವ ಸಂದರ್ಭದಲ್ಲಿ ಬಸವರಾಜ ಬೊಮ್ಮಾಯಿ ಸರ್ಕಾರ ಕಿತ್ತೂರು ಕರ್ನಾಟಕ ಹಾಗೂ ಕಲ್ಯಾಣ ಕರ್ನಾಟಕ ಭಾಗಕ್ಕೆ ಐದೂವರೆ ಸಾವಿರ ಕೋಟಿ ಮೊತ್ತದ ನೀರಾವರಿ ಯೋಜನೆಗಳನ್ನು ಪ್ರಕಟಿಸಿದೆ. ಅದೇ ರೀತಿ, ಬೆಂಗಳೂರು ಹೊರಭಾಗದಲ್ಲೂ ಸ್ಟಾರ್ಟಪ್‌ಗಳು ನೆಲೆಯೂರಲು ಪ್ರೋತ್ಸಾಹ ನೀಡುವ ನೀತಿಯನ್ನು ಪ್ರಕಟಿಸಿದೆ. ಸುವರ್ಣ ವಿಧಾನಸೌಧದಲ್ಲಿ ನಡೆದ ಸಂಪುಟ ಸಭೆಯಲ್ಲಿ ಈ ಮಹತ್ವದ ನಿರ್ಣಯ ಕೈಗೊಂಡಿದ್ದು, ಕಿತ್ತೂರು ಕರ್ನಾಟಕ ಮತ್ತು ಕಲ್ಯಾಣ ಕರ್ನಾಟಕ ಭಾಗದ ಒಟ್ಟು 13 ಪ್ರಮುಖ ನೀರಾವರಿ ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ. ಇದಕ್ಕಾಗಿ ಒಟ್ಟು ರೂ.5,701.38 ಕೋಟಿ ವೆಚ್ಚ ಮಾಡಲಾಗುತ್ತಿದೆ. ವಿಶ್ವಬ್ಯಾಂಕ್ ನೆರವಿನೊಂದಿಗೆ ಕರ್ನಾಟಕ ನಗರ ನೀರು ಸರಬರಾಜು ಆಧುನೀಕರಣಕ್ಕೆ ರೂ.3,740 ಕೋಟಿಗಳ ಪರಿಷ್ಕೃತ ಯೋಜನೆಗೆ ಸಮ್ಮತಿ ನೀಡಲಾಗಿದೆ.

**ಇ–ಸ್ವತ್ತು ಸಮಸ್ಯೆಗೆ ಪರಿಹಾರ:**ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡದ ನಗರ ಸ್ಥಳೀಯ ಸಂಸ್ಥೆಗಳು 2017ರ ಮಾರ್ಚ್ 22ರ ಪೂರ್ವದಲ್ಲಿ ತೆರೆದಿರುವ ಖಾತೆಗಳನ್ನು ಇ–ಆಸ್ತಿ ತಂತ್ರಾಂಶದಲ್ಲಿ ಮುಂದುವರಿಸಲು ಅವಕಾಶ ನೀಡಲಾಗಿದೆ. ಸ್ಥಳೀಯ ಯೋಜನಾ ಪ್ರದೇಶವ್ಯಾಪ್ತಿಯ ಹೊರಭಾಗದಲ್ಲಿ ಬರುವ ಗ್ರಾಮ ಪಂಚಾಯಿತಿಗಳನ್ನು ನಗರ ಸ್ಥಳೀಯ ಸಂಸ್ಥೆಗಳಾಗಿ ಮೇಲ್ದರ್ಜೆಗೇರಿಸಿದ ನಂತರ ಈ ಹಿಂದೆ ಇ–ಸ್ವತ್ತು ತಂತ್ರಾಂಶದಡಿ ನಿರ್ವಹಿಸಿದ್ದ ಖಾತೆಗಳನ್ನು ಇ–ಆಸ್ತಿ ತಂತ್ರಾಂಶದಲ್ಲಿ ದಾಖಲಿಸುವುದಕ್ಕೆ ಒಪ್ಪಿಗೆ ನೀಡಲಾಗಿದೆ.

**ಪೊಲೀಸರಿಗೆ ಶುಭ ಸುದ್ದಿ**:ಪೊಲೀಸ್ ಸಿಬ್ಬಂದಿ ಅಂತರ ಜಿಲ್ಲಾ ವರ್ಗಾವಣೆಗೆ ಸಂಪುಟ ಸಭೆ ಅನುಮೋದನೆ ನೀಡಿದೆ. ಯಾವುದೇ ಜಿಲ್ಲೆಯಲ್ಲಿ ನೇಮಕ ಹೊಂದಿ ಹಾಗೂ ಅದೇ ಜಿಲ್ಲೆಯಲ್ಲಿ ಏಳು ವರ್ಷ ಸೇವೆ ಸಲ್ಲಿಸಿದ ಸಿಬ್ಬಂದಿ ಇತರೆ ಜಿಲ್ಲೆಗಳು ಅಥವಾ ಸ್ವಂತ ಜಿಲ್ಲೆಗೆ ವರ್ಗಾವಣೆ ಹೊಂದಲು ಅರ್ಹತೆ ಪಡೆಯಲಿದ್ದಾರೆ. ಅದೇ ರೀತಿಯಾಗಿ ಪೊಲೀಸ್ ಇಲಾಖೆಗೆ ನೇಮಕವಾದ ಹಾಗೂ ಕನಿಷ್ಠ ಮೂರು ವರ್ಷಗಳ ಸೇವೆ ಸಲ್ಲಿಸಿದ ಮಾಜಿ ಯೋಧರು ಸಹ ಬೇರೆ ಜಿಲ್ಲೆಗೆ ವರ್ಗಾವಣೆ ಕೋರಲು ಒಪ್ಪಿಗೆ ನೀಡಲಾಗಿದೆ.

**ಪ್ರಮುಖ ನಿರ್ಣಯಗಳು:**

- **11 ವಸತಿ ಶಾಲೆ**:2022–23ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆಯಿಂದ ರೂ.198 ಕೋಟಿ ಮೊತ್ತದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ವಿದ್ಯಾರ್ಥಿಗಳ 11 ವಸತಿ ಶಾಲೆಗಳನ್ನು ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ.
- **ಶಾಲೆಗೆ ರೂ.100 ಕೋಟಿ**: 2022–23 ನೇ ಸಾಲಿಗೆ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳು ಪ್ರೌಢ ಶಾಲೆಗಳು ಹಾಗೂ ಪದವಿ ಪೂರ್ವ ಕಾಲೇಜುಗಳಿಗೆ ರೂ.100 ಕೋಟಿ ವೆಚ್ಚದಲ್ಲಿ ಪೀಠೋಪಕರಣ ಖರೀದಿಗೆ ಒಪ್ಪಿಗೆ.
- **620 ಬಸ್ ಖರೀದಿ**: 2022–23 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ 620 ಬಿಎಸ್–5 ಬಸ್‌ಗಳನ್ನು ರೂ. 269.75 ಕೋಟಿ ಮೊತ್ತದಲ್ಲಿ ಖರೀದಿಸಲು ಆಡಳಿತಾತ್ಮಕ ಅನುಮತಿ.

**100 ಹೈಟೆಕ್ ಸಂಚಾರಿ ಕ್ಲಿನಿಕ್**:ಕಾರ್ಮಿಕ ಇಲಾಖೆಯು ಈಗಾಗಲೇ ಜಾರಿ ಮಾಡಿರುವ ಸಂಚಾರಿ ಕ್ಲಿನಿಕ್ ಯೋಜನೆಗೆ 100 ಹೈಟೆಕ್ ಸಂಚಾರಿ ಕ್ಲಿನಿಕ್ ಸೇರ್ಪಡೆ ಮಾಡಲು ನಿರ್ಧರಿಸಿದೆ. ಕಾರ್ಮಿಕರು ಕೆಲಸ ನಿರ್ವಹಿಸುವ ಸ್ಥಳಗಳಿಗೆ ತೆರಳಿ ಅಗತ್ಯ ಪರೀಕ್ಷೆ, ವರದಿ, ಚಿಕಿತ್ಸೆ ನೀಡುವ ಯೋಜನೆ ಇದಾಗಿದೆ. ಈಗಾಗಲೇ 35 ಸಂಚಾರಿ ಕ್ಲಿನಿಕ್‌ಗಳು ಕಾರ್ಯನಿರ್ವಹಿಸುತ್ತಿವೆ.

**ವಿಧೇಯಕ ಮಂಡನೆಗೆ ಒಪ್ಪಿಗೆ:**

1. ನೋಂದಾಯಿತ ಹಳೆಯ ವಾಹನಗಳನ್ನು ನಾಶಪಡಿಸುವ ನೀತಿ 2022ಕ್ಕೆ ಆಡಳಿತಾತ್ಮಕ ಅನುಮೋದನೆ.
2. ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ (ತಿದ್ದುಪಡಿ) ವಿಧೇಯಕ–2022.
3. ಸರ್ಕಾರಿ ಜಮೀನುಗಳಲ್ಲಿ ಅನಧಿಕೃತವಾಗಿ ಪ್ಲಾಂಟೇಶನ್ ಬೆಳೆ ಬೆಳೆಯುತ್ತಿರುವವರಿಗೆ ಅಂತಹ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ನೀಡುವ ಕುರಿತಾದ ಕರ್ನಾಟಕ ಭೂಕಂದಾಯ (3ನೇ ತಿದ್ದುಪಡಿ) ವಿಧೇಯಕ–2022.
4. ಸಂವಿಧಾನದ ಅನುಚ್ಛೇದ 16(4)ರ ಅನ್ವಯ ರಾಜ್ಯ ಸಿವಿಲ್ ಸೇವೆಗಳಿಗೆ ನೇರ ನೇಮಕಾತಿ ಮತ್ತು ಮುಂಬಡ್ತಿಯಲ್ಲಿ ಮೀಸಲಾತಿ ಕಲ್ಪಿಸುವ ಕುರಿತು ಪರಿಷ್ಕೃತ ಆದೇಶ ಹೊರಡಿಸಲು ಅನುಮೋದನೆ.

**ಇತರ ನಿರ್ಣಯಗಳು:**

- ಬೆಂಗಳೂರು ನಗರ ವ್ಯಾಪ್ತಿಯ ಕೆ.ಜಿ.ಹಳ್ಳಿ ಮತ್ತು ಡಿ.ಜಿ.ಹಳ್ಳಿಯಲ್ಲಿ 2020ರ ಆಗಸ್ಟ್11 ರಂದು ನಡೆದ ಅಹಿತಕರ ಘಟನೆಗಳ ಸಂಬಂಧ ಮ್ಯಾಜಿಸ್ಟೀರಿಯಲ್ ವಿಚಾರಣಾ ವರದಿ ಸ್ವೀಕಾರ.

- ಬೆಂಗಳೂರು ಜಲಮಂಡಳಿಯ ಶಿವ ಸಮತೋಲನ ಜಲಾಶಯ (ಎಸ್‌ಬಿಆರ್) ನೆಟ್ಕಲ್ ಸಮತೋಲನ (ಎನ್‌ಬಿಆರ್) ವರೆಗಿನ ಅಂದಾಜು 6.15 ಕಿ.ಮೀ ಉದ್ದ, 300 ಮೀಟರ್ ವ್ಯಾಸದ ಕಚ್ಚಾ ನೀರು ಸರಬರಾಜು ಮಾಡುವ ಉಕ್ಕಿನ ಕೊಳವೆ ಮಾರ್ಗ ಜೋಡನೆ.
- ಬೆಂಗಳೂರು ಮೆಟ್ರೋ ರೈಲ್ವೆ ಯೋಜನೆ ಹಂತ –1ರ ಪರಿಷ್ಕೃತ ಹಣಕಾಸು ಮಾದರಿಗೆ ಅನುಮೋದನೆ.

ಆಧಾರ:ವಿಜಯವಾಣಿ, ದಿನಾಂಕ: 23.12.2022

## 30. ಭೂಪರಿವರ್ತನೆ ವಿಧೇಯಕ ಪಾಸ್

ಭೂಪರಿವರ್ತನೆ ಪ್ರಕ್ರಿಯೆ ಸರಳೀಕರಣಗೊಳಿಸಿ ಪಾರದರ್ಶಕತೆಗೆ ಒತ್ತು ನೀಡಿ, ವಿಳಂಬ ತಪ್ಪಿಸುವ ಉದ್ದೇಶದ ಕರ್ನಾಟಕ ಭೂ ಕಂದಾಯ (2ನೇ ತಿದ್ದುಪಡಿ) ವಿಧೇಯಕ–2022ಕ್ಕೆ ವಿಧಾನಸಭೆ ಅನುಮೋದನೆ ನೀಡಿತು. ಕೃಷಿಯೇತರ ಉದ್ದೇಶಕ್ಕಾಗಿ ಕೃಷಿ ಭೂಮಿ ಪರಿವರ್ತನೆ ಕೋರಿ ಅರ್ಜಿ ಸಲ್ಲಿಸಿದ 7 ದಿನಗಳ ಒಳಗೆ ಅನುಮೋದನೆ ನೀಡುವುದು ಕಡ್ಡಾಯ ಮಾಡಲಾಗಿದೆ.

ಆರ್‌ಟಿಸಿ, 11 ಇ–ಸ್ಕೆಚ್ ಮತ್ತು ಮ್ಯುಟೇಷನ್ ಈ ಮೂರು ದಾಖಲೆಗಳೊಂದಿಗೆ ಸ್ವಯಂ ಘೋಷಣೆ ಪತ್ರ (ಅಫಿಡವಿಟ್) ಸಲ್ಲಿಸಿದರೆ 7 ದಿನಗಳೊಳಗೆ ಭೂಪರಿವರ್ತನೆ ಕೋರಿಕೆ ಅರ್ಜಿ ವಿಲೇವಾರಿ ಮಾಡಬೇಕು. ವಾರದೊಳಗೆ ಸಂಬಂಧಪಟ್ಟ ಜಿಲ್ಲಾಧಿಕಾರಿ ಅನುಮೋದನೆ ನೀಡದಿದ್ದರೆ, ಸ್ವಯಂ ಭೂಪರಿವರ್ತನೆಯಾಗಿದೆ ಎಂದ ಪರಿಗಣಿಸಲಾಗುತ್ತದೆ. ಭೂಪರಿವರ್ತನೆಗೆ ಯೋಜನಾ ಪ್ರದೇಶಗಳ ವ್ಯಾಪ್ತಿಯಲ್ಲಿ 7 ದಿನಗಳ ಕಾಲಾವಕಾಶ ಹಾಗೂ ಗ್ರಾಮೀಣ ಭಾಗದಲ್ಲಿ 30 ದಿನಗಳ ಕಾಲಾವಕಾಶ ನಿಗದಿ ಮಾಡಲಾಗಿದೆ.

ವಿಧೇಯಕದ ಮೇಲಿನ ಚರ್ಚೆಗೆ ಉತ್ತರ ನೀಡಿದ ಆರ್.ಅಶೋಕ್ "ಭೂಪರಿವರ್ತನೆ ಅರ್ಜಿಗಳ ವಿಚಾರದಲ್ಲಿ ಅನಗತ್ಯ ವಿಳಂಬ ಹಾಗೂ ಕಿರುಕುಳ ತಪ್ಪಿಸಿ ನಾನಾ ನಿರಾಪೇಕ್ಷಣಾ ಪತ್ರಗಳಿಗೆ ಅರ್ಜಿದಾರರನ್ನು ಅಲೆದಾಡುವಂತೆ ಮಾಡುವುದನ್ನು ತಪ್ಪಿಸಲು ಈ ಕಾನೂನು ತಿದ್ದುಪಡಿ ವಿಧೇಯಕ ತರಲಾಗಿದೆ. ಇಡೀ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ತರಲಾಗಿದೆ," ಎಂದು ತಿಳಿಸಿದರು.

"ಭೂಪರಿವರ್ತನೆ ಪ್ರಕರಣದಲ್ಲಿ ಅರ್ಜಿದಾರರು ತಪ್ಪು ಮಾಹಿತಿ ನೀಡಿ ವಂಚಿಸಲು ಯತ್ನಿಸಿದರೆ, ಆಸ್ತಿ ಮುಟ್ಟುಗೋಲು ಹಾಕಿಕೊಂಡು ದಂಡ ವಿಧಿಸಲು ಹಾಗೂ ಕ್ರಿಮಿನಲ್ ಮೊಕದ್ದಮೆ ದಾಖಲಿಸಲು ವಿಧೇಯಕದಲ್ಲಿ ಅವಕಾಶ ಕಲ್ಪಿಸಲಾಗಿದೆ. ಅಂತೆಯೇ, ನಿಗದಿತ ಕಾಲಮಿತಿಯಲ್ಲಿ ಅರ್ಜಿ ವಿಲೇವಾರಿ ಮಾಡದ ಅಧಿಕಾರಿಗಳಿಗೆ ದಂಡ ವಿಧಿಸಲೂ ಅವಕಾಶ ಇದೆ,"ಎಂದು ಸದನಕ್ಕೆ ವಿವರಿಸಿದರು.

ವಿಧೇಯಕವನ್ನು ಪಕ್ಷಭೇದವಿಲ್ಲದೆ ಸದಸ್ಯರು ಸ್ವಾಗತಿಸಿ ಬೆಂಬಲ ನೀಡಿದರು. ಜೊತೆಗೆ ಕೆಲವೊಂದು ಸಲಹೆ ನೀಡಿದರು. ಕಾಯಿದೆಗೆ ನಿಯಮಾವಳಿಗಳ ರಚನೆ ಸಂದರ್ಭದಲ್ಲಿ ಈ ಸಲಹೆಗಳನ್ನು ಪರಿಗಣಿಸುವುದಾಗಿ ಸಚಿವರು ಭರವಸೆ ನೀಡಿದರು.

**'ಮಿಸ್ಸಿಂಗ್ ಫೈಲ್' ಸಮಸ್ಯೆಗೆ ಕೊನೆಮೊಳೆ:** "ಕಂದಾಯ ಇಲಾಖೆಯಲ್ಲಿ 'ಮಿಸಿಂಗ್ ಫೈಲ್' ದೊಡ್ಡ ಸಮಸ್ಯೆಯಾಗಿದೆ. 100 ಎಕರೆ ಜಮೀನು ಇರುವ ಕಡೆಗಳಲ್ಲಿ 200 ಎಕರೆ ಜಮೀನು ಮಂಜೂರು ಮಾಡಿರುವುದು, ಯಾರಿಗೋ ಮಂಜೂರಾದ ಜಮೀನಿನಲ್ಲಿ ಮತ್ತೊಬ್ಬರು ಸ್ವಾಧೀನದಲ್ಲಿರುವುದು ಹಾಗೂ ಈ ಸಂಬಂಧದ ದಾಖಲೆಗಳು ತಾಲ್ಲೂಕು ಕಚೇರಿಗಳಲ್ಲೂ ಇಲ್ಲದೆ' ಬೋಗಸ್' ಎಂದು ಬಿಂಬಿಸುವುದು ನಡೆಯುತ್ತಿದೆ. ಇದನ್ನು ಗಂಭೀರವಾಗಿ ಪರಿಗಣಿಸಿ, ಸ್ಥಳ ಪರಿಶೀಲನೆ ಹಾಗೂ ಆ ಸಂದರ್ಭದಲ್ಲಿ ಯಾರು ಸ್ವಾಧೀನದಲ್ಲಿರುತ್ತಾರೋ ಅದನ್ನೇ ಅಧಿಕೃತವಾಗಿ ಪರಿಗಣಿಸಲು ತೀರ್ಮಾನಿಸಲಾಗಿದೆ," ಎಂದು ಆರ್.ಅಶೋಕ್ ತಿಳಿಸಿದರು.

**ಒತ್ತುವರಿಗೆ ಸಹಕರಿಸಿದರೆ ಹುಷಾರ್**: **"**ಯೋಜನಾ ಪ್ರದೇಶಗಳ ವ್ಯಾಪ್ತಿಯಲ್ಲಿ ರಾಜಕಾಲುವೆ ಒತ್ತುವರಿ ಮತ್ತಿತರ ಅಕ್ರಮ ಕಟ್ಟಡಗಳ ನಿರ್ಮಾಣ ಪ್ರಕರಣಗಳಲ್ಲಿ ಸಹಕರಿಸಿದ ಅಧಿಕಾರಿಗಳನ್ನು ನಿರ್ದಿಷ್ಟವಾಗಿ ಹೊಣೆ ಮಾಡಿ, ಅವರ ವಿರುದ್ಧ ಕ್ರಮ ಜರುಗಿಸಲು ಹೊಸ ಕಾನೂನು ರೂಪಿಸಲು ಸರ್ಕಾರ ಬಯಸಿದೆ**"**, ಎಂದು ಕಂದಾಯ ಸಚಿವರು ಈ ಸಂದರ್ಭದಲ್ಲಿ ತಿಳಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:23.12.2022

## 31. ಸುಮ್ನೆ ಕೆಣಕಿದ್ರೆ ಹುಷಾರ್

ಗಡಿ ವಿಚಾರಕ್ಕೆ ಸಂಬಂಧಿಸಿದಂತೆ ಮಹಾರಾಷ್ಟ್ರಕ್ಕೆ, ಖಡಕ್ ಸಂದೇಶ ರವಾನಿಸಲಾಗಿದ್ದು, ಅನವಶ್ಯಕ ಪ್ರಚೋದನೆ ನೀಡಿದರೆ ಸುಮ್ಮನಿರಲು ಸಾಧ್ಯವಿಲ್ಲ. ಪುಂಡಾಟಿಕೆ ಮುಂದುವರಿಸಿದರೆ, ರಾಜ್ಯದ ಬಗ್ಗೆ ಅವಹೇಳನ ಮಾಡಿದರೆ ಕಾನೂನು ಕ್ರಮಕ್ಕೆ ಸಿದ್ಧ ಎಂಬ ಎಚ್ಚರಿಕೆ ನೀಡಲಾಗಿದೆ.

ಈ ಸಂಬಂಧ ವಿಧಾನಸಭೆ ಸರ್ವಾನುಮತದ ನಿರ್ಣಯ ಕೈಗೊಂಡಿದ್ದು, ರಾಜ್ಯದ ನೆಲ, ಭಾಷೆ ಹಾಗೂ ಕನ್ನಡಿಗರ ಹಿತಾಸಕ್ತಿಯ ವಿಷಯದಲ್ಲಿ ಯಾವುದೇ ರಾಜಿ ಪ್ರಶ್ನೆಯೇ ಇಲ್ಲ. ಈ ವಿಷಯದಲ್ಲಿ ಕರ್ನಾಟಕದ ಜನತೆ ಮತ್ತು ಸದಸ್ಯರೆಲ್ಲರ ಭಾವನೆ ಒಂದೇ ಆಗಿದ್ದು ಇದಕ್ಕೆ ಧಕ್ಕೆ ಆದಾಗ ಎಲ್ಲರೂ ಒಗ್ಗಟ್ಟಿನಿಂದ ರಾಜ್ಯದ ಹಿತಾಸಕ್ತಿ ಹಾಗೂ ರಕ್ಷಣೆಗೆ ಸಂವಿಧಾನಾತ್ಮಕ ಹಾಗೂ ಕಾನೂನಾತ್ಮಕ ಕ್ರಮ ಕೈಗೊಳ್ಳಲು ಬದ್ದರಿದ್ದೇವೆ ಎಂದು ಹೇಳಲಾಗಿದೆ.

ಅಲ್ಲದೆ ಈ ನಿರ್ಣಯವನ್ನು ಕೇಂದ್ರ ಸರ್ಕಾರಕ್ಕೂ ಕಳುಹಿಸಿಕೊಡಲು ನಿರ್ಧರಿಸಲಾಗಿದೆ. ಇದಕ್ಕೂ ಮುನ್ನ ಮುಖ್ಯಮಂತ್ರಿ ಮತ್ತು ಪತ್ರಿಪಕ್ಷದ ನಾಯಕರು ಮಹಾರಾಷ್ಟ್ರದ ಸಚಿವರು ಮತ್ತು ಶಾಸಕರು ನೀಡಿದ ಹೇಳಿಕೆ ಸದನದಲ್ಲಿ ಮಾತನಾಡಿರುವ ವಿಚಾರದ ಬಗ್ಗೆ ಕಿಡಿ ಕಾರಿದರು. ಶಿವಸೇನೆ ಉದ್ಧವ್ ಠಾಕ್ರೆ ಬಣದ ಸಂಸದ ಸಂಜಯ್ ರಾವುತ್ ಮತ್ತು ಶಾಸಕ ಜಯಂತ್‌ಪಾಟೀಲ್ ವಿರುದ್ಧ ಏಕವಚನದಲ್ಲಿ ಉಭಯ ನಾಯಕರೂ ದಾಳಿ ನಡೆಸಿದರು. ಶಾಂತಿ ರಕ್ಷಣೆಗೆ ಆದ್ಯತೆ ನೀಡುವ ಕನ್ನಡಿಗರು ಧೈರ್ಯಶಾಲಿಗಳಾಗಿದ್ದು, ಸುಸಂಸ್ಕೃತರು. ಆದರೆ, ಪ್ರಚೋದನೆ ನೀಡಿದರೆ ಸುಮ್ಮನಿರುವುದಿಲ್ಲ ಎಂಬ ಸಂದೇಶವನ್ನು ಸಾರಿದರು.

**ಏಕವಚನದಲ್ಲಿ ಸಿದ್ದು ವಾಗ್ದಾಳಿ**: ಮಹಾರಾಷ್ಟ್ರದವರು ಉದ್ಧಟನದಿಂದ ಮಾತನಾಡುತ್ತಿದ್ದಾರೆ. ಜೈಲಿಗೆ ಹೋಗಿದ್ದ ಸಂಜಯ್ ರಾವುತ್, ಚೀನಾ ಭಾರತದ ಮೇಲೆ ದಾಳಿ ಮಾಡಿದಂತೆ ನಾವೂ ಕರ್ನಾಟಕದ ಗಡಿಯಲ್ಲಿ ದಾಳಿ ಮಾಡುತ್ತೇವೆ ಎಂದು ಹೇಳಿದ್ದಾನೆ. ಚೀನಾ ನಮ್ಮ ವೈರಿ ದೇಶ. ಅದರ ಹೆಸರು ಹೇಳಿಕೊಂಡು ಮಾತನಾಡುತ್ತಿರುವ ಆತನಿಗೆ ಕನಿಷ್ಠ ಒಕ್ಕೂಟ ವ್ಯವಸ್ಥೆಯಲ್ಲಿ ಬದುಕುತ್ತಿದ್ದೇವೆಂಬ ಜ್ಞಾನ ಬೇಡವೇ? ಮರ್ಯಾದೆ ಇದೆಯಾ ಅವನಿಗೆ? ಒಕ್ಕೂಟ ವ್ಯವಸ್ಥೆ ಎಂದರೇನು ಎಂಬುದು ಆತನಿಗೇನಾದರೂ ಗೊತ್ತಿದೆಯೇ? ಆದ್ದರಿಂದ ಸಿಎಂ ಅವರು ಉತ್ತರಿಸುವಾಗ ಆತನಿಗೆ ತಕ್ಕ ರೀತಿಯಲ್ಲಿ ನಾಗರಿಕ ಭಾಷೆಯಲ್ಲಿ ಉತ್ತರಿಸಬೇಕು ಎಂದು ಹೇಳಿದರು.

**ರಾವುತ್ ದೇಶದ್ರೋಹಿ:** ಮುಖ್ಯಮಂತ್ರಿಯವರು ಮಾತನಾಡುತ್ತಾ, ದೇಶದ ಏಕತೆ, ಅಖಂಡತೆ ಹಾಳು ಮಾಡಲು ಹೊರಟ ಸಂಜಯ್ ರಾವುತ್, ಚೀನಾದ ಏಜೆಂಟ್ ಮಾತ್ರವಲ್ಲ ದೇಶದ್ರೋಹಿ. ಚೀನಾದ ರೀತಿ ನುಗ್ಗಿದರೆ ಭಾರತೀಯ ಸೈನಿಕರ ರೀತಿಯಲ್ಲೇ ಓಡಿಸುವ ಎಚ್ಚರಿಕೆಯನ್ನು ಆತನಿಗೆ ಈಗಾಗಲೇ ನೀಡಿದ್ದೇನೆ. ನಾವು ಸಂಸ್ಕೃತಿಯ ಗೆರೆ ದಾಟುವುದಿಲ್ಲ. ಆದರೆ, ಕೆಣಕಿದರೆ ಸುಮ್ಮನಿರುವುದಿಲ್ಲ. ಮಹಾಮೇಳಾವ್ ನಿಲ್ಲಿಸಿದಂತೆ, ಅಲ್ಲಿನ ಸಚಿವರ ಬೆಳಗಾವಿಗೆ ಬರದಂತೆ ತಡೆದಂತೆಯೇ ಮುಂದೆ ಬರುವವರನ್ನೂ ಹಿಮ್ಮೆಟ್ಟಿಲು ನಮಗೆ ಗೊತ್ತಿದೆ. ಇನ್ನು ಕರ್ನಾಟಕದ ಪಾಲಿನ ನೀರನ್ನು ಹಿಡಿದಿಡಲು ಯಾರಿಂದಲೂ ಸಾಧ್ಯವಿಲ್ಲ. ಕೇಂದ್ರ ಗೃಹ ಸಚಿವರ ಮಾತುಕತೆ ಬಳಿಕವೂ ಮತ್ತೆ ಅದೇ ರೀತಿ ವರ್ತಿಸುತ್ತಾರೆ ಎಂದರೆ ಸಹಿಸಲು ಸಾಧ್ಯವಿಲ್ಲ. ಪುಂಡಾಟಿಕೆ ಮುಂದುವರಿಸಿದರೆ ಕಾನೂನು ಕ್ರಮ ಕೈಗೊಳ್ಳಲು ಹಿಂದೆ ಮುಂದೆ ನೋಡುವುದಿಲ್ಲ.

**ಕರ್ನಾಟಕ ವಿಧಾನಸಭೆಯ ನಿರ್ಣಯಗಳು:**

- ಈಗಾಗಲೇ ಮಹಾಜನ್ ಆಯೋಗದ ವರದಿ ಮಂಡಿಸಿ 66 ವರ್ಷ ಕಳೆದಿದ್ದು, ಎರಡೂ ರಾಜ್ಯಗಳ ಜನರು ಅತ್ಯಂತ ಸೌಹಾರ್ದದಿಂದ ಬದುಕುತ್ತಿದ್ದಾರೆ. ಮಹಾರಾಷ್ಟ್ರ-ಕರ್ನಾಟಕದ ಗಡಿ ವಿಚಾರ ಈಗಾಗಲೇ ಮುಗಿದು ಹೋದ ಅಧ್ಯಾಯ.

- ಆದಾಗ್ಯೂ ಮಹಾರಾಷ್ಟ್ರ 2004ರಲ್ಲಿ ಸುಪ್ರೀಂಕೋರ್ಟ್‌ನಲ್ಲಿ ಗಡಿಯ ಬಗ್ಗೆ ದಾವೆ ಹೂಡಿ, ಅಂದಿನಿಂದಲೂ ಎರಡೂ ರಾಜ್ಯಗಳ ಜನರ ನಡುವಿನ ಸಾಮರಸ್ಯ ಕದಡುವ ಪ್ರಯತ್ನ ಮಾಡುತ್ತಿರುವುದು ಖಂಡನೀಯ.

- 2004ರಿಂದ ಇಲ್ಲಿಯವರೆಗೂ ಸುಪ್ರೀಂ ಕೋರ್ಟ್‌ನಲ್ಲಿ ಮಹಾರಾಷ್ಟ್ರದ ದಾವೆಯನ್ನು ಕೈಗೆತ್ತಿಕೊಳ್ಳಲು ಸಾಧ್ಯವಿಲ್ಲ. ಯಾಕೆಂದರೆ ಸಂವಿಧಾನದ 3ನೇ ಪರಿಚ್ಛೇದದ ಪ್ರಕಾರ ಈ ಮರುಪರಿಶೀಲನೆ ಮಾಡುವ ಪರಮಾಧಿಕಾರ ಈ ದೇಶದ ಪ್ರಜಾಪ್ರಭುತ್ವದ ಉನ್ನತ ಸಂಸ್ಥೆಯಾದ ಸಂಸತ್ತಿಗೆ ಮಾತ್ರ ಇದೆ.

- ಸುಪ್ರೀಂಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಶಿವರಾಜ ಪಾಟೀಲ ಅಧ್ಯಕ್ಷತೆಯಲ್ಲಿ ರಾಜ್ಯ ಸರ್ಕಾರ ಕರ್ನಾಟಕ ಗಡಿ ಮತ್ತು ನದಿಗಳ ರಕ್ಷಣಾ ಆಯೋಗ ರಚಿಸಿ, ನಿರಂತರ ಮಾರ್ಗದರ್ಶನ ಪಡೆಯುತ್ತಿದೆ. ಸರ್ವೋಚ್ಚ ನ್ಯಾಯಾಲಯದ ಹಿರಿಯ ನ್ಯಾಯವಾದಿ ಮುಕುಲ್ ರೊಹಟಗಿ ನೇತೃತ್ವದಲ್ಲಿ ಐವರ ವಕೀಲರ ತಂಡ ರಚನೆ ಮಾಡಲಾಗಿದ್ದು, ಕರ್ನಾಟಕದ ನೆಲ, ಜಲದ ಹಿತ ಕಾಪಾಡಲು ಸರ್ಕಾರ ಬದ್ಧ.

- ಗಡಿ ವಿಚಾರದಲ್ಲಿ ಇತ್ತೀಚೆಗೆ ಮಹಾರಾಷ್ಟ್ರದ ನಾಯಕರು ಕೊಡುತ್ತಿರುವ ಎಲ್ಲ ಹೇಳಿಕೆಗಳು ಅತ್ಯಂತ ಖಂಡನೀಯ ಮತ್ತು ಮಹಾರಾಷ್ಟ್ರದ ಸಚಿವರು ಕಾನೂನು ಸುವ್ಯವಸ್ಥೆ ಸೂಕ್ಷ್ಮವಿದ್ದಂತಹ ಸಂದರ್ಭದಲ್ಲಿ ಕರ್ನಾಟಕಕ್ಕೆ ಆಗಮಿಸಿ, ಪ್ರಚೋದಿಸಲು ಯತ್ನಿಸುವ ಕಾರ್ಯವೂ ಖಂಡನೀಯ.

- ಕೇಂದ್ರ ಗೃಹ ಸಚಿವರು ಎರಡೂ ರಾಜ್ಯಗಳ ಮಧ್ಯೆ ಶಾಂತಿ ಸುವ್ಯವಸ್ಥೆ ಮತ್ತು ಸೌಹಾರ್ದ ಕಾಪಾಡಿಕೊಳ್ಳಲು ನೀಡಿರುವ ಸೂಚನೆಯನ್ನು ಸಹ ಮಹಾರಾಷ್ಟ್ರ ಉಲ್ಲಂಘಿಸುತ್ತಿದ್ದು, ಎರಡೂ ರಾಜ್ಯಗಳ ಸಂಬಂಧಕ್ಕೆ ಧಕ್ಕೆ ತರುವಂತಾಗಿದೆ. ಇದನ್ನು ನಿಯಂತ್ರಿಸಬೇಕೆಂದು ಮಹಾರಾಷ್ಟ್ರಕ್ಕೆ ಸರ್ಕಾರ ಸೂಚಿಸುತ್ತಾ, ಈ ವಿಷಯವನ್ನು ಕೇಂದ್ರ ಸರ್ಕಾರದ ಗಮನಕ್ಕೂ ರಾಜ್ಯ ಸರ್ಕಾರ ತರುತ್ತದೆ.

- ಕರ್ನಾಟಕದ ನೆಲ, ಜಲ, ಭಾಷೆ ಹಾಗೂ ಕನ್ನಡಿಗರ ಹಿತಾಸಕ್ತಿಯ ವಿಷಯದಲ್ಲಿ ಯಾವುದೇ ರಾಜಿ ಮಾಡಿಕೊಳ್ಳುವ ಪ್ರಶ್ನೆಯೇ ಇಲ್ಲ. ಈ ವಿಷಯದಲ್ಲಿ ಕರ್ನಾಟಕದ ಜನರ ಮತ್ತು ಸದಸ್ಯರ ಭಾವನೆಯೂ ಒಂದೇ ಆಗಿದ್ದು, ಇದಕ್ಕೆ ಧಕ್ಕೆ ಆದಾಗ ಎಲ್ಲರೂ ಒಗ್ಗಟ್ಟಿನಿಂದ ರಾಜ್ಯದ ಹಿತಾಸಕ್ತಿ ಹಾಗೂ ರಕ್ಷಣೆಗೆ ಸಂವಿಧಾನಾತ್ಮಕ ಹಾಗೂ ಕಾನೂನಾತ್ಮಕ ಕ್ರಮ ಕೈಗೊಳ್ಳಲು ಬದ್ಧರಿದ್ದೇವೆ.

- ಮಹಾರಾಷ್ಟ್ರದ ಜನತೆಯ ಅನವಶ್ಯಕವಾಗಿ ಸೃಷ್ಟಿಸಿರುವ ಗಡಿ ವಿವಾದವನ್ನು ಖಂಡಿಸಿ, ರಾಜ್ಯದ ಹಿತರಕ್ಷಣೆಗೆ ಸರ್ವಾನುಮತದಿಂದ ನಿರ್ಣಯಿಸುತ್ತದೆ.

ಆಧಾರ:ವಿಶ್ವವಾಣಿ, ದಿನಾಂಕ:23.12.2022

## 32. ಸಚಿವರಿಲ್ಲದೆ ಸದನವನ್ನೇ ಮುಂದೂಡಿದ ಸ್ಪೀಕರ್

ಸದನದಲ್ಲಿ ಸಚಿವರೇ ಇಲ್ಲವೆಂದು ಕಲಾಪವನ್ನು ಮುಂದೂಡಿದ ಅಪರೂಪದ ಘಟನೆಗೆ ವಿಧಾನಸಭೆ ಸಾಕ್ಷಿಯಾಯಿತು.

ಭೋಜನ ವಿರಾಮದ ನಂತರ ಕಲಾಪ ಆರಂಭವಾದಾಗ ಯಾವುದೇ ಸಚಿವರು ಇರಲಿಲ್ಲ. ಪ್ರತಿಪಕ್ಷ ನಾಯಕರು, ಜೆಡಿಎಸ್ ಉಪನಾಯಕರು ಹಾಗೂ ಇತರರು ತೀವ್ರ ಆಕ್ರೋಶ ವ್ಯಕ್ತಪಡಿಸಿದರು.

ಸರ್ಕಾರದ ನಡೆಯ ವಿರುದ್ಧ ತೀವ್ರ ಸಿಟ್ಟಿಗೆದ್ದ ಸ್ಪೀಕರ್ ಮುಖ್ಯ ಸಚೇತಕರನ್ನು ತರಾಟೆಗೆ ತೆಗೆದುಕೊಂಡರು. ಆಗ ಸದನಕ್ಕೆ ಬಂದ ಅಶೋಕ್, ಕಾಂಗ್ರೆಸ್ ಸದಸ್ಯರು ಇಲ್ಲವೆಂದು ಸಮರ್ಥನೆ ಮುಂದಾದರು. ಇದರಿಂದ ಸಿಟ್ಟಿಗೆದ್ದ ಸ್ಪೀಕರ್ ಗಡಿ ವಿಚಾರದಲ್ಲಿ ನಿರ್ಣಯ ಮಂಡಿಸುವ ನಿರ್ಧಾರವಾಗಿದೆ, ನಿರ್ಣಯದ ಪ್ರತಿ ಇಲ್ಲ, ಮಂಡಿಸಬೇಕಾದ ಮುಖ್ಯಮಂತ್ರಿಯೂ ಇಲ್ಲವೆಂದು ಸದನವನ್ನು ಹತ್ತು ನಿಮಿಷ ಮುಂದೂಡಿದರು. ಸುವರ್ಣಸೌಧದ ಮೂರನೇ ಮಹಡಿಯಲ್ಲಿ ಕೋವಿಡ್ ಕುರಿತು ಸಭೆ ನಡೆಸುತ್ತಿದ್ದ ಮುಖ್ಯಮಂತ್ರಿ ಅವರನ್ನು ಅಶೋಕ್ ಹೋಗಿ ಕರೆತಂದರು. ನಿರ್ಣಯ ಅಂಗೀಕಾರವಾದ ನಂತರ ಬಸವರಾಜ ಬೊಮ್ಮಾಯಿಯವರು ಸದನದಿಂದ ತೆರಳಿದರು.

ನಾಲ್ಕೈದು ಗಮನ ಸೆಳೆಯುವ ಸೂಚನೆಗಳಿದ್ದು ಅವುಗಳನ್ನು ಮುಗಿಸುವ ಬಗ್ಗೆ ಸ್ಪೀಕರ್ ಆಸಕ್ತಿ ತೋರಿಸಿದರು. ಆದರೆ ಕಾನೂನು ಸಚಿವರು ಸಮಯ ಆಗಿದೆ ನಾವು ಹೋಗಬೇಕು. ನಾಳೆ ಬೆಳಿಗ್ಗೆ ಚರ್ಚೆ ಮಾಡೋಣವೆಂದು ಹೇಳಿದರು. ಆದರೆ ಸಭಾಧ್ಯಕ್ಷರು ಒಪ್ಪಲಿಲ್ಲ. ಆಗ ಮಾಧುಸ್ವಾಮಿ 'ನೀವು ನಡೆಸಿಕೊಳ್ಳಿ ನಾವು ಹೋಗುತ್ತೇವೆ' ಎಂದು ಎದ್ದು ಹೋದರು. ಗಮನ ಸೆಳೆಯುವ ಸೂಚನೆ ಕೈಗೊಳ್ಳಲು ಸಚಿವರ ಕೊರತೆ ಇತ್ತು. ಇಂಧನ, ಕಂದಾಯ, ಆರೋಗ್ಯ, ಕೃಷಿ, ಲೋಕೋಪಯೋಗಿ, ಪ್ರಾಥಮಿಕ ಶಿಕ್ಷಣ ಸಚಿವರು ಇರಬೇಕಿತ್ತು. ಅವರಾರು ಇಲ್ಲ. ಮುಖ್ಯ ಸಚೇತಕರನ್ನು ಕರೆಸಿ ಅಲ್ಲಿಯ ತನಕ ಇಲ್ಲಿಯೇ ಕಾಯೋಣ ಎಂದು ಚಾಟಿ ಬೀಸಿದರು. ಗೃಹ ಸಚಿವರು ಉತ್ತರ ನೀಡುವುದಾಗಿ ಮನವೊಲಿಸಿದರು. ಕಾಂಗ್ರೆಸ್‌ನ ಯು.ಟಿ.ಖಾದರ್, ನೀವೂ ಪ್ರತಿಬಾರಿ ಸಚಿವರ ಪರವಾಗಿ ಮೃದು ಧೋರಣೆ ತೋರಿಸಿದ್ದೀರಿ. ಅದಕ್ಕೆ ಈ ಪರಿಸ್ಥಿತಿ ಬಂದಿದೆ ಎಂದು ಟೀಕಿಸಿದರು.

ಸದನ ಮುಗಿಯುವ ಸಂದರ್ಭದಲ್ಲಿ ಮಾಧುಸ್ವಾಮಿಯವರ ವಿರುದ್ಧ ತೀವ್ರ ಅಸಮಾಧಾನ ಹೊರ ಹಾಕಿದ ಸ್ಪೀಕರ್, ಸಂಸದೀಯ ವ್ಯವಹಾರಗಳ ಸಚಿವರು ನೀವು ಸದನ ನಡೆಸಿಕೊಳ್ಳುವುದಾದರೆ ನಡೆಸಿಕೊಳ್ಳಿ ಎಂಬ ಮಾತನ್ನು ಹೇಳಿ ಹೋಗಿದ್ದು ತೀವ್ರ ನೋವಾಗಿದೆ. ನನ್ನ ಮೃಧು ಧೋರಣೆ ನನ್ನ ಅಸಹಾಯಕತೆ ಅಲ್ಲ ಎಂದು ಎಚ್ಚರಿಸಿದರು.

ಆಧಾರ:ವಿಜಯವಾಣಿ, ದಿನಾಂಕ:23.12.2022

## 33. ಸರ್ಕಾರದ ವಿರುದ್ಧ ಸ್ಪೀಕರ್ ಕೆಂಡಾಮಂಡಲ

ಅಧಿವೇಶನದಲ್ಲಿ ಸಚಿವರ ಗೈರು ಹಾಗೂ ಸರ್ಕಾರದ ನಡವಳಿಕೆ ವಿರುದ್ಧ ಸಭಾಧ್ಯಕ್ಷರು ಸಿಡಿಮಿಡಿಗೊಂಡು ತೀಕ್ಷ್ಣ ಮಾತುಗಳಲ್ಲಿ ಅಸಮಾಧಾನ ವ್ಯಕ್ತಪಡಿಸಿದ ಪ್ರಸಂಗ ನಡೆಯಿತು.

ಬೆಳಿಗ್ಗೆ ಸದನ ಆರಂಭವಾದ ನಂತರದ ಹಲವು ಬೆಳವಣಿಗೆಗಳಿಂದ ಅಸಮಾಧಾನಗೊಂಡಿದ್ದ ಸ್ಪೀಕರ್, ದಿನದ ಕಲಾಪ ಮುಗಿಯುವ ಹೊತ್ತಿನಲ್ಲಿ ಒಡಲಾಳದ ಅಸಮಾಧಾನವನ್ನು ಹೊರಹಾಕಿದರು. ಸುವರ್ಣ ಅಧಿವೇಶನ ಕಟ್ಟಿರುವುದು ಯಾವ ಪುರುಷಾರ್ಥಕ್ಕೆ? ಉತ್ತರ ಕರ್ನಾಟಕ ಜನರ ನಿರೀಕ್ಷೆ ಬಗ್ಗೆ ಆಸಕ್ತಿ ಮತ್ತು ಕಾಳಜಿ ಇಲ್ಲವೇ? ಎಂದು ಸರ್ಕಾರವನ್ನು ತರಾಟೆಗೆ ತೆಗೆದುಕೊಂಡರು.

ಗಡಿ ವಿಚಾರದಲ್ಲಿ ನಿರ್ಣಯ ಅಂಗೀಕಾರದ ಬಳಿಕ ಗಮನ ಸೆಳೆಯುವ ಸೂಚನೆಗಳ ಕಲಾಪವನ್ನು ಕೈಗೆತ್ತಿಕೊಳ್ಳಲು ಸ್ಪೀಕರ್ ಮುಂದಾದಾಗ ಸಮಯ ಸಂಜೆ 6.30 ದಾಟಿತ್ತು. ಆ ವೇಳೆಗೆ ಸದನದಲ್ಲಿ ಸಚಿವರ ಗೈರು ಹಾಗೂ ಸದನ ಖಾಲಿಯಾಗಿದ್ದು, ಸಭಾಧ್ಯಕ್ಷರನ್ನು ಕೆರಳಿಸಿತು.

"ಸಂಜೆ 6.30 ತಡವಾಯಿತು ಎಂದು ಹೊರಟರೆ ಹೇಗೆ? ಸಚಿವರುಗಳಿಗೆ ನಾನಾ ಒತ್ತಡ ಇರಬಹುದು. ಆದರೆ, ಸದನಕ್ಕಿಂತ ಅವರಿಗೆ ಬೇರೆ ಸಂಗತಿ ಮುಖ್ಯವಾದರೆ ಏನು ಮಾಡುವುದು? ಸುವರ್ಣ ವಿಧಾನಸೌಧ ಕಟ್ಟಿದ್ದು ಯಾವ ಪುರುಷಾರ್ಥಕ್ಕೆ? ಸಚಿವರು ಇಲ್ಲ ಎಂದ ಮಾತ್ರಕ್ಕೆ ನಾನು ನನ್ನ ಕರ್ತವ್ಯವನ್ನು ನಿಭಾಯಿಸದೆ ಇರಲಾರೆ" ಎಂದು ಗುಡುಗಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:23.12.2022

## 34. ಜನವರಿ 15ಕ್ಕೆ 'ನಮ್ಮ ಕಾಗೇರಿ ನಮ್ಮ ಹೆಮ್ಮೆ'

ಕರ್ನಾಟಕ ವಿಧಾನಸಭಾ ಅಧ್ಯಕ್ಷ, ಸಜ್ಜನ ರಾಜಕಾರಣಿ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರನ್ನು ಪಕ್ಷಾತೀತವಾಗಿ ಅಭಿನಂದಿಸುವ ಸಾರ್ವಜನಿಕ ಅಭಿನಂದನಾ ಸಮಾರಂಭವನ್ನು ಜನವರಿ 15ರಂದು ಏರ್ಪಡಿಸಲಾಗಿದೆ.

ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅಭಿನಂದನಾ ಸಮಿತಿ ಅಧ್ಯಕ್ಷ ಪ್ರೊ.ಕೆ.ಎನ್.ಹೊಸ್ಮನಿ, "ನಮ್ಮ ಕಾಗೇರಿ ನಮ್ಮ ಹೆಮ್ಮೆ" ಎಂಬ ಧ್ಯೇಯ ವಾಕ್ಯದಡಿಯಲ್ಲಿ ಸಮಾರಂಭದ ಸಿದ್ಧತೆ ಮಾಡಲಾಗುತ್ತಿದೆ. ನೆಲದ ಅಭಿಮಾನದ ಸಂಕೇತವಾಗಿ ಸ್ಪೀಕರ್ ಆದ ಬಳಿಕ ಅವರು ಇಡೀ ಕ್ಷೇತ್ರ, ಜಿಲ್ಲೆಗೆ ಹೆಮ್ಮೆಯಾಗಿದ್ದಾರೆ," ಎಂದರು.

"ಕಾಗೇರಿ ಅವರ ಸಾಧನೆಯ ಹಾದಿಯನ್ನು ಅರಿಯುವ ಅಭಿನಂದಿಸುವ ಸಂಭ್ರಮಿಸುವ ಕಾಲದಲ್ಲಿ ಇದ್ದೇವೆ. ಜಾಗೃತ ಸಮಾಜದ ಪ್ರತೀಕವಾಗಿ ಹಬ್ಬದ ಮಾದರಿಯಲ್ಲಿ ಸಮಾರಂಭ ನಡೆಸಲು ತೀರ್ಮಾನಿಸಲಾಗಿದೆ" ಎಂದರು.

ಪ್ರಮುಖವಾದ ಪಾಂಡುರಂಗ ಪೈ, ಜಯದೇವ ಯು.ನಿಲೇಕಣಿ, ಡಾ.ದಿನೇಶ ಹೆಗಡೆ, ಕೆ.ಬಿ.ಲೋಕೇಶ, ಹರೀಶ ಪಂಡಿತ್, ಗಣಪತಿ ಭಟ್ಟ ಇದ್ದರು.

**ಇಡೀ ದಿನದ ಕಾರ್ಯಕ್ರಮ**: ನಗರದ ಮಾರಿಕಾಂಬಾ ಸರ್ಕಾರಿ ಪ್ರೌಢಶಾಲಾ ಆವರಣದಲ್ಲಿ ಜನವರಿ 15ರಂದು ಬೆಳಿಗ್ಗೆಯಿಂದ ಸಂಜೆಯವರೆಗೆ ಕಾರ್ಯಕ್ರಮಗಳು ನಡೆಯಲಿವೆ. ಉದ್ಘಾಟನೆಗೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹಾಗೂ ಕೇಂದ್ರ ಸಚಿವ ಪ್ರಲ್ಹಾದ ಜೋಶಿ, ಮಾಜಿ ಸಿಎಂ. ಬಿ.ಎಸ್.ಯಡಿಯೂರಪ್ಪ, ಧರ್ಮಸ್ಥಳದ ಧರ್ಮಾಧಿಕಾರಿ ಡಾ:ವಿರೇಂದ್ರ ಹೆಗ್ಗಡೆ ಅವರನ್ನು ಆಹ್ವಾನಿಸಲಾಗುತ್ತಿದೆ. ಸಮಾರೋಪದಲ್ಲಿ ಸ್ಪೀಕರ್ ಕಾಗೇರಿ ಅವರನ್ನು ಅಭಿನಂದಿಸಲಾಗುತ್ತದೆ. ಬೆಳ್ಳಿಗ್ಗೆ ಬೈಕ್ ರ್ಯಾಲಿ ಹಾಗೂ ಸಂಜೆ ಕಲಾವಿದರಿಂದ ಸಂಗೀತ ಕಾರ್ಯಕ್ರಮ ನಡೆಯಲಿದೆ ಎಂದು ಪ್ರೋಪೆಸರ್ ಕೆ.ಎಸ್.ಹೊಸ್ಮನಿ ತಿಳಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:23.12.2022

## 35. ಪರಿಷತ್ ಉಪಸಭಾಪತಿಯಾಗಿ ಪ್ರಾಣೇಶ್ ಆಯ್ಕೆ

ಉಪಸಭಾಪತಿ ಹುದ್ದೆಗೆ ನಡೆದ ಚುನಾವಣೆಯಲ್ಲಿ ಬಿಜೆಪಿಯ ಎಂ.ಕೆ.ಪ್ರಾಣೇಶ್ ಗೆಲುವು ಸಾಧಿಸಿದ್ದು, ಇದರೊಂದಿಗೆ ಮೇಲ್ಮನೆಯ ಎರಡೂ ಪ್ರಮುಖ ಸ್ಥಾನಗಳನ್ನು ಬಿಜೆಪಿ ಗೆದ್ದುಕೊಂಡಂತಾಗಿದೆ.

ಮೇಲ್ಮನೆ ಉಪಸಭಾಪತಿ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ಬಿಜೆಪಿಯ ಎಂ.ಕೆ.ಪ್ರಾಣೇಶ್ 39 ಮತ ಪಡೆದರೆ, ಕಾಂಗ್ರೆಸ್ ಅಭ್ಯರ್ಥಿ ಅರವಿಂದ ಅರಳಿ 26 ಮತಗಳನ್ನು ಪಡೆದರು. ಜೆಡಿಎಸ್ ತಟಸ್ಥ ನಿಲುವು ಹೊಂದಿದ್ದರಿಂದ ಪ್ರಾಣೇಶ್ ಸುಲಭವಾಗಿ ಗೆಲುವು ಸಾಧಿಸಿದರು.

ಮತದಾನ ಪ್ರಕ್ರಿಯೆ ಪೂರ್ಣಗೊಂಡ ಬಳಿಕ ಫಲಿತಾಂಶ ಪ್ರಕಟಿಸಿದ ಸಭಾಪತಿ ಬಸವರಾಜ ಹೊರಟ್ಟಿ, ಉಪಸಭಾಪತಿಯಾಗಿ ಎಂ.ಕೆ.ಪ್ರಾಣೇಶ್ ಆಯ್ಕೆಯನ್ನು ಘೋಷಿಸಿದರು. ನಂತರ ಮುಖ್ಯಮಂತ್ರಿ

ಬಸವರಾಜ ಬೊಮ್ಮಾಯಿ, ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ ಮತ್ತು ಪ್ರತಿಪಕ್ಷ ನಾಯಕ ಬಿ.ಕೆ.ಹರಿಪ್ರಸಾದ್ ಅವರು ಪ್ರಾಣೇಶ್ ಅವರನ್ನು ಉಪಸಭಾಪತಿ ಸ್ಥಾನಕ್ಕೆ ಕರೆತಂದು ಕುಳ್ಳಿರಿಸಿದರು.

**ಪಕ್ಷೇತರ ಸದಸ್ಯ ಸೇರಿ ಐವರು ಗೈರು**: ಕಾಂಗ್ರೆಸ್ ಮತ್ತು ಬಿಜೆಪಿ ತನ್ನ ಸದಸ್ಯರಿಗೆ ವಿಪ್ ಜಾರಿಗೊಳಿಸಿದ್ದರಿಂದ ಎರಡೂ ಪಕ್ಷಗಳ ಎಲ್ಲಾ ಸದಸ್ಯರು ಚುನಾವಣಾ ಪ್ರಕ್ರಿಯೆಯಲ್ಲಿ ಪಾಲ್ಗೊಂಡಿದ್ದರು. ಆದರೆ, ಜೆಡಿಎಸ್‌ನ ಮರಿತಿಬ್ಬೇಗೌಡ, ಮಂಜೇಗೌಡ, ಟಿ.ಎ.ಶರವಣ, ಬಿ.ಎಂ. ಫಾರೂಕ್ ಹಾಗೂ ಪಕ್ಷೇತರ ಸದಸ್ಯ ಲಖನ್ ಜಾರಿಕಿಹೊಳಿ ಕಲಾಪಕ್ಕೆ ಗೈರಾಗಿದ್ದರು. ಸದನಕ್ಕೆ ಹಾಜರಾಗಿದ್ದ ಜೆಡಿಎಸ್ ಸದಸ್ಯರು ತಟಸ್ಥರಾಗಿದ್ದರು.

ಆಧಾರ:ವಿಶ್ವವಾಣಿ, ದಿನಾಂಕ:24.12.2022

## 36. ಸದನದಲ್ಲಿ ಗುಜರಿ ಚರ್ಚೆ ಭರ್ಜರಿ

ಸರ್ಕಾರಿ ಕಛೇರಿಗಳ ಆವರಣದಲ್ಲಿ ತುಕ್ಕು ಹಿಡಿದು ನಿಂತ ವಾಹನಗಳ ಸಾಲು, ವಿಲೇವಾರಿ ಇಲ್ಲದ ಕಾರಣ ಉಂಟಾಗಿರುವ ತೊಂದರೆ, ವಾಹನ ಸಂಚಾರಕ್ಕೆ ಅಡ್ಡಿ, ಪೊಲೀಸ್ ಠಾಣೆ ಬಳಿ ಜಪ್ತಿಯಾಗಿ ನಿಂತ ವಾಹನಗಳ ಬಿಡಿಭಾಗ ಕಳುವಿನ ಬಗ್ಗೆ ವಿಧಾನಸಭೆಯಲ್ಲಿ ಸ್ವಾರಸ್ಯಕರ ಚರ್ಚೆ ನಡೆಯಿತು.

ಗಮನ ಸೆಳೆಯುವ ಸೂಚನೆಯಡಿ ವಿಚಾರ ಪ್ರಸ್ತಾಪಿಸಿದ ಬಿಜೆಪಿಯ ಹರ್ಷವರ್ಧನ್, "ಸರ್ಕಾರಿ ಕಛೇರಿ, ಸಾರಿಗೆ ಇಲಾಖೆಗಳಲ್ಲಿ ಬಳಕೆಯಾಗದ ಹಳೆಯದಾದ ಕಾರು, ಬಸ್‌ಗಳನ್ನು ಪರಿಶೀಲಿಸಿ ಸ್ಕ್ರಾಪ್ ಮಾಡುವ ಬಗ್ಗೆ ಪರಿಶೀಲಿಸಬೇಕು. ನೀರಾವರಿ, ಲೋಕೋಪಯೋಗಿ, ಪೊಲೀಸ್ ಸೇರಿದಂತೆ ಸಾಕಷ್ಟು ಇಲಾಖೆಗಳಲ್ಲಿ ಹಲವು ವರ್ಷಗಳಿಂದ ಗುಜರಿ ವಾಹನಗಳಿವೆ. ಒಂದೆಡೆ ಪಾರ್ಕಿಂಗ್ ಸ್ಥಳ ಅಭಾವವಿದ್ದರೆ, ಮತ್ತೊಂದೆಡೆ ಗುಜರಿ ವಾಹನಗಳ ನಿಲುಗಡೆ ಆಗಿರುತ್ತವೆ. ಕೆಲ ಇಲಾಖೆಗಳಲ್ಲಿ ಗರಿಷ್ಠ ಕಿ.ಮೀ.ಮಿತಿ ಕ್ರಮಿಸಿದ ವಾಹನ ಬಳಸುತ್ತಿದ್ದು, ಅಪಘಾತಗಳಾಗುವ ಅಪಾಯವಿದೆ. ಇವುಗಳನ್ನು ತ್ವರಿತವಾಗಿ ಸ್ಕ್ರಾಪ್ ಮಾಡಿ ಸರ್ಕಾರದ ಬೊಕ್ಕಸಕ್ಕೆ ಆದಾಯ ಬರುವಂತೆ ಕ್ರಮ ವಹಿಸಬೇಕು," ಎಂದು ಕೋರಿದರು.

ಇದಕ್ಕೆ ದನಿಗೂಡಿಸಿದ ಸ್ಪೀಕರ್ "ನಾನು ಈ ವಿಚಾರವನ್ನು ಹೇಳಿ ಹೇಳಿ ಸಾಕಾಯಿತು. ಸಾರಿಗೆ ಇಲಾಖೆ ಅಧಿಕಾರಿಗಳು ಮೌಲ್ಯಮಾಪನ ನಡೆಸಿದ ನಂತರ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಸಮಿತಿ ಅನುಮೋದಿಸಬೇಕಾಗುತ್ತದೆ. ಈ ಪ್ರಕ್ರಿಯೆಯಲ್ಲಿನ ವಿಳಂಬದಿಂದ ವಿಲೇವಾರಿ ತಡವಾಗುತ್ತಿದೆ," ಎಂದು ಹೇಳಿದರು.

ಬಳಿಕ ಉತ್ತರ ನೀಡಿದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು "ಬಳಕೆಗೆ ಯೋಗ್ಯ ಇಲ್ಲದ 15 ವರ್ಷಗಳ ಹಿಂದಿನ ವಾಹನ ಸ್ಕ್ರಾಪ್ ಮಾಡುವವರಿಗೆ ಹೊಸ ವಾಹನ ಖರೀದಿಗೆ ರಿಯಾಯಿತಿ ನೀಡುವ ಬಗ್ಗೆ ತೀರ್ಮಾನವಾಗಿದೆ. ಉಳಿದಂತೆ ಸರ್ಕಾರಿ ವಾಹನಗಳನ್ನು ನಿಯಮಾನುಸಾರವೇ ಸ್ಕ್ರಾಪ್ ಇಲ್ಲವೇ ಹರಾಜು ಮಾಡಬೇಕಾಗುತ್ತದೆ," ಎಂದರು.

ಇದಕ್ಕೆ ಸಮಾಧಾನಗೊಳ್ಳದ ಸ್ಪೀಕರ್, "ಸರ್ಕಾರಿ ಕಛೇರಿಗಳ ಬಳಿ ಯುದ್ಧ ಪಳೆಯುಳಿಕೆಗಳ ರೂಪದಲ್ಲಿ ಗುಜರಿ ವಾಹನಗಳು ಕಾಣಸಿಗುತ್ತವೆ. ಬಳಕೆಗೆ ಯೋಗ್ಯವಲ್ಲದ ಸ್ಥಿತಿಗೆ ತಲುಪುತ್ತಿದ್ದಂತೆ ಹರಾಜು ಹಾಕಿದರೆ ರೂ.50,000 ವರೆಗಾದರೂ ಹಣ ಸಿಗಬಹುದು. ಎಲ್ಲ ಹಾಳಾದ ನಂತರ ಹರಾಜಿಗೆ ಮುಂದಾದರೆ ರೂ.5,000 ಕೂಡ ಸಿಗುವುದು ಕಷ್ಟ," ಎಂದು ಹೇಳಿದರು.

ಆಗ ಮಾಧುಸ್ವಾಮಿ, "ಗುಜರಿ ವಾಹನಗಳ ವಿಲೇವಾರಿ ಸಮಸ್ಯೆ ವಿಚಾರ ಗಂಭೀರವಾಗಿ ಪರಿಗಣಿಸಲಾಗಿದೆ. ತ್ವರಿತ ವಿಲೇವಾರಿಗೆ ಕ್ರಮ ವಹಿಸಲಾಗುವುದು," ಎಂದು ಭರವಸೆ ನೀಡಿದರು.

**ಬಿಡಿಭಾಗಗಳನ್ನೂ ಬಿಡಲ್ಲ**: ವಿಧಾನಸಭೆಯ ಕಾಂಗ್ರೆಸ್ ಉಪ ನಾಯಕರು "ಪೊಲೀಸ್ ಠಾಣೆಗಳ ಬಳಿಯೂ ಇದೇ ಸ್ಥಿತಿ ಇದೆ. ಜಪ್ತಿ ಮಾಡಿದ ವಾಹನಗಳನ್ನು ರಸ್ತೆಗಳಲ್ಲೇ ನಿಲುಗಡೆ ಮಾಡುವುದರಿಂದ

ಸಂಚಾರಕ್ಕೆ ತೊಂದರೆಯಾಗುತ್ತಿದೆ. ಠಾಣೆಗಳ ಸಮೀಪ ಎರಡು ಎಕರೆ ಭೂಮಿ ಪಡೆದು ಅಲ್ಲಿ ನಿಲುಗಡೆ ವ್ಯವಸ್ಥೆ ಕಲ್ಪಿಸಿ ಸಮಸ್ಯೆ ಪರಿಹರಿಸಬಹುದು," ಎಂದು ಸಲಹೆ ನೀಡಿದರು.

ಇದಕ್ಕೆ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ "ಪೊಲೀಸ್ ಪ್ರಕರಣಗಳಿಗೆ ಸಂಬಂಧಪಟ್ಟ ವಾಹನಗಳನ್ನು ಗುಜರಿಗೆ ಹಾಕಲು ಅವಕಾಶವಿಲ್ಲ. ಅಕ್ರಮ ಮದ್ಯ, ಗಂಧದ ಮರ ಸಾಗಣೆಯಂತಹ ಪ್ರಕರಣಗಳಲ್ಲಿ ಜಪ್ತಿ ಆಗುವ ವಾಹನ ತಮ್ಮದೆಂದು ಒಪ್ಪಿಕೊಳ್ಳಲು ಯಾರೊಬ್ಬರೂ ಮುಂದೆ ಬರುವುದೇ ಇಲ್ಲ. ಪ್ರತ್ಯೇಕ ಸ್ಥಳ ಗುರುತಿಸಿ ನಿಲುಗಡೆ ವ್ಯವಸ್ಥೆ ಕಲ್ಪಿಸುವುದು ಕಷ್ಟ. ಯಾಕೆಂದರೆ, ಸದ್ಯ ಠಾಣೆ ಮುಂದಿರುವ ಜಪ್ತಿ ವಾಹನಗಳಲ್ಲೇ ಬಿಡಿಭಾಗ ಬಿಡುವುದಿಲ್ಲ, ಇನ್ನು ಪ್ರತ್ಯೇಕ ಸ್ಥಳದಲ್ಲಿ ನಿಲುಗಡೆ ಮಾಡಿದರೆ ಎಂಜಿನ್ ಕೂಡ ಉಳಿಯುವುದಿಲ್ಲ," ಎಂದು ನಗುತ್ತಾ ಉತ್ತರಿಸಿದರು.

ಆಗ ಸ್ಪೀಕರ್ "ನಮ್ಮ ಊರಿನಲ್ಲೂ ಒಂದು ಲೀಟರ್ ಪೆಟ್ರೋಲ್‌ಗೆ 3 ಕಿ.ಮೀ. ಕ್ರಮಿಸುವ ಹಳೆ ವಾಹನವಿದ್ದು, ಈಗಲೂ ಬಳಸುತ್ತಿದ್ದಾರೆ," ಎಂದು ಸದನದ ಗಮನ ಸೆಳೆದರು. ಅದಕ್ಕೆ ಮಾಧುಸ್ವಾಮಿ, "ನಮ್ಮ ಕ್ಷೇತ್ರದಲ್ಲಿ ಸೀಮೆ ಎಣ್ಣೆಯಿಂದ ಚಲಿಸುವ ವಾಹನ ಇನ್ನೂ ಬಳಕೆಯಲ್ಲಿದೆ" ಎಂದರು.

ಕಾಂಗ್ರೆಸ್‌ನ ಕೆ.ಜೆ.ಜಾರ್ಜ್, "ಬೆಂಗಳೂರಿನ ಸುತ್ತಮುತ್ತ ಒಂದೆರಡು ಕಡೆ 50 ಎಕರೆ ಜಾಗ ಗುರುತಿಸಿ ಸ್ಕ್ರಾಪ್ ಯಾರ್ಡ್ ನಿರ್ಮಿಸುವುದು ಸೂಕ್ತ," ಎಂದು ಸಲಹೆ ನೀಡಿದಾಗ ಮಾಧುಸ್ವಾಮಿಯವರು "ಗುಜರಿ ವಾಹನಗಳ ತ್ವರಿತ ವಿಲೇವಾರಿಗೆ ಸೂಕ್ತ ಕ್ರಮ ಕೈಗೊಳ್ಳಲಾಗುವುದು," ಎಂದು ಭರವಸೆ ನೀಡಿದರು.

ಆಧಾರ:ವಿಜಯಕರ್ನಾಟಕ, ದಿನಾಂಕ:24.12.2022

## 37. ಫೆಬ್ರವರಿಯಲ್ಲಿ ರಾಜ್ಯ ಬಜೆಟ್ ಮಂಡನೆ

ಫೆಬ್ರವರಿಯಲ್ಲಿ ರಾಜ್ಯ ಬಜೆಟ್ ಮಂಡನೆ ಮಾಡಲಿದ್ದು, ಈಗಾಗಲೇ ಹಣಕಾಸು ಇಲಾಖೆ ಜೊತೆ ಎರಡು ಸುತ್ತಿನ ಮಾತುಕತೆ ನಡೆಸಲಾಗಿದೆ ಎಲ್ಲಾ ಇಲಾಖೆಯವರ ಜೊತೆಗೂ ಚರ್ಚೆ ಮಾಡಲಿದ್ದೇನೆ. ಬಜೆಟ್‌ಗೆ ಎಲ್ಲ ಸಿದ್ಧತೆಗಳನ್ನು ಮುಂದಿನ ಜನವರಿಯಿಂದಲೇ ಶುರು ಮಾಡಲಿದ್ದೇನೆ ಎಂದು ಮುಖ್ಯಮಂತ್ರಿಯವರು ಹೇಳಿದರು.

ಶಿಗ್ಗಾವಿಯಲ್ಲಿ ಮಾಧ್ಯಮದ ಜೊತೆ ಮಾತನಾಡಿ ಡಿಸೆಂಬರ್ 26ಕ್ಕೆ ದೆಹಲಿಗೆ ತೆರಳಿ ಹೈಕಮಾಂಡ್ ಭೇಟಿ ಮಾಡಲಿದ್ದು, ಈ ವೇಳೆ ಚುನಾವಣೆ ತಯಾರಿ ಕುರಿತು ಚರ್ಚಿಸಲಾಗುವುದು ಎಂದು ತಿಳಿಸಿದರು. ರಾಜ್ಯದಲ್ಲಿ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳು, ಕೆಲವು ಯೋಜನೆಗಳು ಸಮರ್ಪಕವಾಗಿ ಜಾರಿಯಾಗುತ್ತಿವೆ. ದೆಹಲಿಯಲ್ಲಿ ಬಿಜೆಪಿ ಘಟಕದ ಅಧ್ಯಕ್ಷರ ಜೊತೆ ಚರ್ಚೆ ಮಾಡಲಾಗುವುದು. ಅಲ್ಲಿ ಏನು ಚರ್ಚೆ ನಡೆಯುತ್ತದೆ ಎಂಬುದನ್ನು ಬಳಿಕ ನಿಮಗೆ ತಿಳಿಸುತ್ತೇನೆ ಎಂದರು.

**ಕೋವಿಡ್ ಟೆಸ್ಟ್ ಹೆಚ್ಚಳ**: ಕೊರೊನಾ ಹಿನ್ನೆಲೆಯಲ್ಲಿ ಕೋವಿಡ್ ಟೆಸ್ಟ್‌ಗಳನ್ನು ಹೆಚ್ಚಿಸುತ್ತೇವೆ. ಬೂಸ್ಟರ್ ಡೋಸ್ ಕೂಡಾ ಜಾಸ್ತಿ ಮಾಡ್ತಿದ್ದೇವೆ. ಆಸ್ಪತ್ರೆಗಳಲ್ಲಿ ಮೂಲ ಸೌಕರ್ಯ, ತಂತ್ರಜ್ಞಾನಗಳನ್ನು ಅಳವಡಿಸಿ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಭೌತಿಕ ಅಂತರ, ಮಾಸ್ಕ್ ಕಡ್ಡಾಯ ಮಾರ್ಗಸೂಚಿ ಪಾಲಿಸಲು ಸೂಚಿಸಲಾಗಿದೆ. ವಿಮಾನ ನಿಲ್ದಾಣ ಮತ್ತು ಬಸ್ ನಿಲ್ದಾಣಗಳಲ್ಲಿ ನಿಗಾ ಇಡಲು ಅಧಿಕಾರಿಗಳಿಗೆ ಸೂಚನೆ ನೀಡಿದ್ದೇನೆ ಎಂದರು.

ಹಾವೇರಿಯಲ್ಲಿ ನಡೆಯಲಿರುವ ಸಾಹಿತ್ಯ ಸಮ್ಮೇಳನಕ್ಕೆ ಕರೋನಾ ಹೆಚ್ಚಳದಿಂದ ಯಾವುದೇ ಸಮಸ್ಯೆಯಾಗುವುದಿಲ್ಲ. ಸಮ್ಮೇಳನ ಬಯಲು ಪ್ರದೇಶದಲ್ಲಿ ಆಗುವುದರಿಂದ, ತೊಂದರೆಯ ಸಾಧ್ಯತೆ ಇಲ್ಲ. ಆದರೂ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಳ್ಳುವ ಮಾರ್ಗಸೂಚಿಗಳನ್ನು ಸೂಚಿಸಲಾಗುವುದು ಎಂದು ಸ್ಪಷ್ಟಪಡಿಸಿದರು.

ಆಧಾರ:ವಿಶ್ವವಾಣಿ, ದಿನಾಂಕ:25.12.2022

## 38. ಉತ್ತರ ಕರ್ನಾಟಕ ಸಮಸ್ಯೆ ಕುರಿತ ಚರ್ಚೆಗೆ ಎರಡು ದಿನ ಮೀಸಲು

ಬೆಳಗಾವಿ ಅಧಿವೇಶನದಲ್ಲಿ ಉತ್ತರ ಕರ್ನಾಟಕದ ಸಮಸ್ಯೆಗಳ ಕುರಿತ ಚರ್ಚೆಗಾಗಿ ಎರಡು ದಿನ ಮೀಸಲಿಡಲಾಗುವುದು ಎಂದು ವಿಧಾನಪರಿಷತ್ ಸಭಾಪತಿ ಬಸವರಾಜ ಹೊರಟ್ಟಿಯವರು ಹೇಳಿದರು.

ಸಭೆ ಕರೆದು ಚರ್ಚಿಸಿ ಉತ್ತರ ಕರ್ನಾಟಕದ ಸಮಸ್ಯೆಗಳ ಪಟ್ಟಿ ಸಿದ್ಧಪಡಿಸಲಾಗುವುದು. ಮುಖ್ಯವಾಗಿ ಮಹದಾಯಿ, ಗಡಿ ಭಾಗದ ಸಮಸ್ಯೆಗಳು, ನೀರಾವರಿ ಯೋಜನೆಗಳ ಕುರಿತು ಚರ್ಚಿಸಲು ಆದ್ಯತೆ ನೀಡಲಾಗುವುದು ಎಂದು ಹೇಳಿದರು.

ಸದನದಲ್ಲಿ ರಾಜ್ಯದ ಸಮಗ್ರ ವಿಷಯಗಳು ಚರ್ಚೆ ನಡೆಸಬೇಕು ಎನ್ನುವ ನಿಟ್ಟಿನಲ್ಲಿ ಸದಸ್ಯರಿಗೆ ಸಮಯವನ್ನು ಅಚ್ಚುಕಟ್ಟಾಗಿ ನೀಡಲಾಗುತ್ತಿದೆ. ಸನದನದಲ್ಲಿ ಸಚಿವರು, ಶಾಸಕರ ಗೈರು ಕುರಿತು ಗಂಭೀರವಾಗಿ ಚಿಂತನೆ ನಡೆಸಲಾಗಿದೆ. ಈ ಕುರಿತು ಅಂದಿನ ವಿಷಯಗಳ ಪಟ್ಟಿ ಪಡೆದು ಅದಕ್ಕೆ ಸಂಬಂಧಪಟ್ಟಂತೆ ಅಂದು ಯಾವ ಸಚಿವರು, ಶಾಸಕರು, ಅಧಿಕಾರಿಗಳು ಹಾಜರಿರಬೇಕು ಎಂಬುದನ್ನು ನೋಡಲಾಗುತ್ತದೆ. ಯಾರು ಹಾಜರಾಗಿಲ್ಲ ಎಂಬುದನ್ನು ಗುರುತಿಸಲಾಗುವುದು. ಅವರನ್ನು ಕರೆಸುವ ಅಥವಾ ಮುಖ್ಯಮಂತ್ರಿಗಳಿಂದ ಉತ್ತರ ಪಡೆಯಲಾಗುವುದು ಎಂದರು. ಬೆಳಗಾವಿ ಅಧಿವೇಶನವನ್ನು ಎರಡು ದಿನ ಹೆಚ್ಚಿನ ಅವಧಿಗೆ ನಡೆಸಲಿ ಎಂಬ ಸಲಹೆ ನೀಡಲಾಗುವುದು. ಆದರೆ, ಸರ್ಕಾರ ಆ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಬೇಕು. ವಿಧಾನಪರಿಷತ್‌ನಲ್ಲಿ ಅನಗತ್ಯ ಗದ್ದಲ–ಗಲಾಟೆ, ಕಾಲಹರಣಕ್ಕೆ ಅವಕಾಶ ಕೊಡುವುದಿಲ್ಲ ಎಂದು ನುಡಿದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:25.12.2022

## 39. ಎಸ್ಸಿ–ಎಸ್ಟಿ ಮೀಸಲು ಹೆಚ್ಚಳಕ್ಕೆ ಪರಿಷತ್ತಲ್ಲೂ ಅಸ್ತು

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಮೀಸಲಾತಿ ಹೆಚ್ಚಳ ಸಂಬಂಧ ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು (ಶೈಕ್ಷಣಿಕ ಸಂಸ್ಥೆಗಳಲ್ಲಿನ ಸ್ಥಾನಗಳಲ್ಲಿ ಮತ್ತು ರಾಜ್ಯಾಧೀನ ಸೇವೆಗಳಲ್ಲಿನ ನೇಮಕಾತಿ ಅಥವಾ ಹುದ್ದೆಗಳಲ್ಲಿ ಮೀಸಲಾತಿ) ವಿಧೇಯಕ 2022 ಅನ್ನು ವಿಧಾನ ಪರಿಷತ್‌ನಲ್ಲಿ ಸುದೀರ್ಘ ಚರ್ಚೆ ಬಳಿಕ ಸರ್ವಾನುಮತದಿಂದ ಅಂಗೀಕರಿಸಲಾಯಿತು. ಇನ್ನು ನಿರ್ಣಯವನ್ನು ಕೇಂದ್ರ ಸರ್ಕಾರ ಹಾಗೂ ಸಂಸತ್ತಿನ ಅನುಮೋದನೆಗೆ ಕಳಿಸಿಕೊಡಲಾಗುತ್ತದೆ. ಅಲ್ಲಿ ಒಪ್ಪಿಗೆ ದೊರೆತರೆ ಮೀಸಲು ಜಾರಿಗೆ ಬರಲಿದೆ.

ಕಾನೂನು ಸಚಿವ ಜೆ.ಸಿ. ಮಾಧುಸ್ವಾಮಿ ಈ ವಿಧೇಯಕವನ್ನು ಮಂಡಿಸಿ ಮಾತನಾಡಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ಹೆಚ್ಚಳ ಮಾಡುವ ನಿಟ್ಟಿನಲ್ಲಿ ಈ ವಿಧೇಯಕ ತರಲಾಗಿದೆ. ನಾಗಮೋಹನ್ ದಾಸ್ ಅವರ ಆಧರಿಸಿ ಪರಿಶಿಷ್ಟ ಜಾತಿಗೆ ಶೇ.15 ರಿಂದ ಶೇ.17ಕ್ಕೆ ಹಾಗೂ ಪರಿಶಿಷ್ಟ ಪಂಗಡಕ್ಕೆ ಶೇ.3 ರಿಂದ ಶೇ.7ಕ್ಕೆ ಮೀಸಲಾತಿ ಹೆಚ್ಚಳ ಮಾಡಲಾಗಿದೆ ಎಂದು ವಿಧೇಯಕದ ಉದ್ದೇಶ ವಿವರಿಸಿದರು.

ಇದಕ್ಕೆ ಪ್ರತಿಕ್ರಿಯಿಸಿದ ಪ್ರತಿಪಕ್ಷದ ನಾಯಕ ಬಿ.ಕೆ. ಹರಿಪ್ರಸಾದ್ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಮೀಸಲಾತಿ ಹಚ್ಚಳ ಮಾಡುತ್ತಿರುವುದು ಸ್ವಾಗತಾರ್ಹ. ಆದರೆ, ಚುನಾವಣೆಯ ಹೊಸ್ತಿಲಲ್ಲಿ ತರಾತುರಿಯಲ್ಲಿ ವಿಧೇಯಕ ತರುವ ಅಗತ್ಯವೇನಿತ್ತು, ಸರ್ವಪಕ್ಷದ ಸಭೆ ಕರೆದು, ವಿಶೇಷ ಅಧಿವೇಶನ ಕರೆದು ಈ ವಿಧೇಯಕದ ಬಗ್ಗೆ ಚರ್ಚಿಸಿ ಬಳಿಕ ಜಾರಿಗೆ ತರಬಹುದಿತ್ತು. ಆದರೆ, ಸುಗ್ರಿವಾಜ್ಞೆ ಮೂಲಕ ಈ ವಿಧೇಯಕ ಜಾರಿಗೆ ತರಲಾಗಿದೆ. ಆತುರದ ನಿರ್ಧಾರದ ಈ ವಿಧೇಯಕಕ್ಕೆ ಸಂವಿಧಾನ ರಕ್ಷಣೆ ಸಿಗುವುದಿಲ್ಲ. ಉಭಯ ಸದನಗಳಲ್ಲಿ ಅಂಗೀಕಾರ ಪಡೆದು ಸಂವಿಧಾನ ತಿದ್ದುಪಡಿ ಮಾಡಿ 9ನೇ ಶೆಡ್ಯೂಲ್‌ಗೆ ಸೇರಿಸುವಂತೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಬೇಕಿತ್ತು. ಆದರೆ, ರಾಜ್ಯ ಸರ್ಕಾರ ಚುನಾವಣೆ ಲಾಭಕ್ಕಾಗಿ ತರಾತುರಿಯಲ್ಲಿ ಸುಗ್ರಿವಾಜ್ಞೆ ಹೊರಡಿಸಿದೆ ಎಂದರು.

ಇದಕ್ಕೆ ಉತ್ತರಿಸಿದ ಸಚಿವ ಮಾಧುಸ್ವಾಮಿ ಸರ್ಕಾರ ಶೋಷಿತ ಸಮುದಾಯದ ಪರವಿದೆ. ಸಂವಿಧಾನದ 103ನೇ ತಿದ್ದುಪಡಿಯಲ್ಲಿ ಮೀಸಲಾತಿ ಶೇ.50 ಮೀರಲು ಅವಕಾಶವಿದೆ. ಇದನ್ನೇ ಬಳಸಿಕೊಂಡು ಹಾಗೂ ನಾಗಮೋಹನ್ ದಾಸ ವರದಿಗೆ ಸೀಮಿತವಾಗಿ ನಾನು ಮೀಸಲಾತಿ ಹೆಚ್ಚಳ ಮಾಡಿದ್ದೇವೆ. ಇದನ್ನು ತಾರ್ಕಿಕ ಅಂತ್ಯ ಕಾಣಿಸಲು ಸರ್ಕಾರ ಬದ್ಧವಾಗಿದೆ. ಒಂದು ವೇಳೆ ಇದನ್ನು ನ್ಯಾಯಾಲಯ ನಿರಾಕರಿಸಿದರೆ ಮುಂದಿನ ತೀರ್ಮಾನ ಮಾಡುತ್ತೇವೆ ಎಂದು ಸರ್ಕಾರದ ನಿರ್ಧಾರವನ್ನು ಸಮರ್ಥಿಸಿಕೊಂಡರು.

ಕಾಂಗ್ರೆಸ್ ಪ್ರಕಾಶ್ ರಾಥೋಢ್, ಮಹೇಶ್ ಅರಳಿ, ನಾಗರಾಜ ಯಾದವ್ ಸೇರಿದಂತೆ ಎಲ್ಲ ಸದಸ್ಯರು ಈ ವಿಧೇಯಕವನ್ನು ಸ್ವಾಗತಿದರು.

ಆಧಾರ:ಕನ್ನಡಪ್ರಭ, ದಿನಾಂಕ:25.12.2022

## 40. ಉತ್ತರ ಕರ್ನಾಟಕಕ್ಕೆ ಒಳ್ಳೆಯ ಉತ್ತರಗಳೇ ಸಿಗುತ್ತಿಲ್ಲ

ಸುವರ್ಣ ವಿಧಾನಸೌಧದಲ್ಲಿ ರಾಜ್ಯ ವಿಧಾನಮಂಡಲ ಅಧಿವೇಶನ ಆರಂಭವಾಗಿ ವಾರ ಕಳೆದರೂ ಉತ್ತರ ಕರ್ನಾಟಕ ಭಾಗದ ಜನರ ನಿರೀಕ್ಷೆಯಂತೆ ಹಲವು ಪ್ರಮುಖ ವಿಚಾರಗಳು ಚರ್ಚೆಗೇ ಬಂದಿಲ್ಲ.

ಸಾವಿರಾರು ಎಕರೆಯಲ್ಲಿ ಸಮೃದ್ಧಿ ಸೃಷ್ಟಿಸಬೇಕಾದ ಕೃಷ್ಣಾ ಮೇಲ್ದಂಡೆ 3ನೇ ಹಂತದ ಯೋಜನೆ ತೆವಳುತ್ತಿದೆ. ಬೀದರ್, ಯಾದಗಿರಿ, ಕಲಬುರಗಿ ಭಾಗದ ಏಕೈಕ ವಾಣಿಜ್ಯ ಬೆಳೆ ತೊಗರಿ ಸೊರಗು ರೋಗದಿಂದ ನೆಲಕಚ್ಚಿ ರೈತರು ಆರ್ಥಿಕ ಸಂಕಷ್ಟಕ್ಕೆ ಸಿಲುಕಿದ್ದಾರೆ. ಸಂವಿಧಾನದ ಕಲಂ 371(ಜೆ) ಅಡಿ ಕಲ್ಯಾಣ ಕರ್ನಾಟಕದ ಅಭಿವೃದ್ಧಿ ವಿಚಾರದಲ್ಲಿ ಕಣ್ಣಿಗೆ ಕಾಣುವಂತಹ ಕೆಲಸಗಳಾಗಿಲ್ಲ ಮತ್ತು ಉದ್ಯೋಗ ನೇಮಕಾತಿಗಳಿಗೂ ನಿರೀಕ್ಷೆಯಂತೆ ನಡೆದಿಲ್ಲ.

ವಿಶೇಷವಾಗಿ, 2019 ರಿಂದ ನಿರಂತರ ನೆರೆಯಿಂದ ನೆಲೆ ಕಳೆದುಕೊಂಡ ಜನರಿಗೆ ಇನ್ನೂ ಪೂರ್ಣ ಪ್ರಮಾಣದಲ್ಲಿ ನೆಲೆ ಸಿಕ್ಕಿಲ್ಲ. ಮನೆ ಕಳೆದುಕೊಂಡವರಿಗೆ ಹೊಸ ಮನೆಗಳ ನಿರ್ಮಾಣವಾಗಿಲ್ಲ. ಸತತ ನೆರೆಗೆ ತುತ್ತಾಗುವ ಜನವಸತಿ ಪ್ರದೇಶಗಳ ಸ್ಥಳಾಂತರ ಪ್ರಕ್ರಿಯೆ ಆಡಳಿತ ವ್ಯವಸ್ಥೆಗೆ ಮರೆತುಹೋಗಿದೆ. ಮಹದಾಯಿ ಸರ್ಕಾರದ ಕನಸು ವಿಳಂಬವಾಗುತ್ತದೇ ಹೋಗುತ್ತಿದೆ.

ಇಂತಹ ಹತ್ತಾರು ಜ್ವಲಂತ ವಿಚಾರಗಳ ಬಗ್ಗೆ ಚರ್ಚೆಗೆ ಸುವರ್ಣ ವಿಧಾನಸೌಧದ ಚಳಿಗಾಲದ ಅಧಿವೇಶನ ಆರಂಭದಲ್ಲೇ ಸಾಕ್ಷಿಯಾಗುವ ನಿರೀಕ್ಷೆ ಇತ್ತು. ಆದರೆ, ಬೆಳಗಾವಿ ಗಡಿ ವಿಚಾರದಲ್ಲಿ ನೆರೆಯ ಮಹಾರಾಷ್ಟ್ರದ ತಂಟೆಗೆ ಒಗ್ಗಟ್ಟಿನ ಪ್ರತ್ಯುತ್ತರದ ಸಂದೇಶ ಹೊರತಾಗಿ ಅಧಿವೇಶನದಲ್ಲಿ ಉಳಿದ ಮುಖ್ಯ ವಿಚಾರಗಳು ಇನ್ನೂ ಚರ್ಚೆಗೆ ಬಂದಿಲ್ಲ. ಇನ್ನು ಐದು ದಿನಗಳ ಕಲಾಪವಷ್ಟೇ ಬಾಕಿ ಉಳಿದಿದೆ.

**ಕೋವಿಡ್ ಕರಿಛಾಯೆ**: ಈ ಮಧ್ಯೆ, ಕೋವಿಡ್ ರೂಪಾಂತರಿ ಬಿಎಫ್–17 ಸಾಂಕ್ರಾಮಿಕ ರೋಗದ ಆತಂಕ ಅಧಿವೇಶನದ ಮೇಲೂ ಕರಿನೆರಳು ಬೀರುವ ಆತಂಕ ಸೃಷ್ಟಿಸಿದೆ. ಇದಕ್ಕೆ ಪೂರಕ ಎಂಬಂತೆ ಕಲಾಪ ಪಟ್ಟಿಯಲ್ಲಿ ಎಲ್ಲಾ ಪ್ರಮುಖ ವಿಧೇಯಕಗಳ ಚರ್ಚೆಯನ್ನು ಪಟ್ಟಿ ಮಾಡಲಾಗಿದೆ.

ಜೊತೆಗೆ ಚರ್ಚೆಗೆ ಬರಲಿರುವ ಪರಿಶಿಷ್ಟರ ಮೀಸಲು ಹೆಚ್ಚಳ ವಿಧೇಯಕದ ವೇಳೆ ನಾನಾ ಸಮುದಾಯಗಳ ಮೀಸಲಾತಿ ಹೆಚ್ಚಳ ಹಾಗೂ ಬದಲಾವಣೆ ಬೇಡಿಕೆಗಳು ರಾಜಕೀಯ ಮೇಲಾಟಕ್ಕೆ ಕಾರಣವಾಗುವ ನಿರೀಕ್ಷೆಯಿದೆ. ಮುಖ್ಯವಾಗಿ, ಈಗಾಗಲೇ ಚುನಾವಣಾ ಮೂಡ್‌ಗೆ ಜಾರಿರುವ ಶಾಸಕರ ಮನಸ್ಸೆಲ್ಲಾ ತಮ್ಮ ಕ್ಷೇತ್ರದಲ್ಲಿನ ರಾಜಕೀಯ ಚಟುವಟಿಕೆಗಳತ್ತ ಕೇಂದ್ರೀಕರಿಸಿದೆ. ಹಾಗಾಗಿ, ಶಾಸಕರ ಆಸಕ್ತಿ ಮತ್ತು ಹಾಜರಾತಿಯೂ ಕಡಿಮೆ ಇದೆ. ಈ ಎಲ್ಲಾ ಬೆಳವಣಿಗೆಗಳು, ಉತ್ತರ ಕರ್ನಾಟಕ ಭಾಗದ ಜ್ವಲಂತ ಸಮಸ್ಯೆಗಳ ಚರ್ಚೆಯ ನಿರೀಕ್ಷೆಯನ್ನು ಕುಗ್ಗಿಸಿದೆ.

**ಕೃಷ್ಣಾ ಮೇಲ್ದಂಡೆ ಯೋಜನೆ**: ವಿಶೇಷವಾಗಿ ಕಲ್ಯಾಣ ಕರ್ನಾಟಕದ ಸಾವಿರಾರು ಎಕರೆ ಪ್ರದೇಶದಲ್ಲಿ ಜೀವಸೆಲೆ ಉಕ್ಕಿಸುವ ಕೃಷ್ಣಾ ಮೇಲ್ದಂಡೆ 3ನೇ ಹಂತದ ಯೋಜನೆ ಕುಂಟುತ್ತಿರುವುದು ಈ ಅಧಿವೇಶನದಲ್ಲಿ ಪ್ರಮುಖ ಚರ್ಚೆಯ ವಿಷಯವಾಗುವ ನಿರೀಕ್ಷೆಯಿತ್ತು. ಅಂದಾಜು 60 ಸಾವಿರ ಕೋಟಿಗೂ ಮೀರಿದ ಅನುದಾನ ಅಗತ್ಯವಾದ ಈ ಯೋಜನೆ ಅನುಷ್ಠಾನಕ್ಕೆ ಅಗತ್ಯವಾದ ಭೂಮಿ ಸ್ವಾಧೀನ ಪ್ರಕ್ರಿಯೆಗೆ ಹಿನ್ನಡೆಯಾಗಿದೆ. ಯೋಜನೆಯಿಂದ ಮುಳುಗಡೆಯಾಗುವ ಬಬಲೇಶವರ, ಕೊಲ್ಹಾಪುರ, ನಿಡಗುಂದಿ ತಾಲ್ಲೂಕುಗಳ 29 ಗ್ರಾಮಗಳ ಸಾವಿರಾರು ಎಕರೆ ಭೂಮಿಗೆ ಪರಿಹಾರ ಸಂಬಂಧಿಸಿದ ತಕರಾರು ಇನ್ನೂ ಬಗೆಹರಿದಿಲ್ಲ. 20ಕ್ಕೂ ಹೆಚ್ಚು ಗ್ರಾಮಗಳ ಸ್ಥಳಾಂತರ ಮತ್ತು ಪುನರ್ವಸತಿ ಪ್ರಕ್ರಿಯೆ ಆಗಿಲ್ಲ. ಮುಖ್ಯವಾಗಿ, ಡಬ್ಬಲ್ ಎಂಜಿನ್ ಸರ್ಕಾರದಲ್ಲಿ ಕೃಷ್ಣಾ ನ್ಯಾಯಾಧೀಕರಣದ ಅಂತಿಮ ತೀರ್ಪಿನ ಗೆಜೆಟ್ ಅಧಿಸೂಚನೆ ನಿರೀಕ್ಷೆ ಕೈಗೊಂಡಿಲ್ಲ.

ಈ ಮಧ್ಯೆ, ಕಲ್ಯಾಣ ಮತ್ತು ಕಿತ್ತೂರು ಕರ್ನಾಟಕ ಭಾಗದ ಸುಮಾರು ರೂ.5,701 ಕೋಟಿ ಮೊತ್ತದ ನಾನಾ ಏತ ನೀರಾವರಿ ಯೋಜನೆಗಳಿಗೆ ಸಚಿವ ಸಂಪುಟ ಆಡಳಿತಾತ್ಮಕ ಅನುಮೋದನೆ ನೀಡಿದೆ. ಆದರೆ, ಈ ಎಲ್ಲಾ ಯೋಜನೆಗಳಲ್ಲೂ ಎರಡು ಹಂತದ ಅನುಷ್ಠಾನ ಎಂದು ಗುತುರಿಸಿ, ಮೊದಲ ಹಂತದ ಟೆಂಡರ್ ಪ್ರಕ್ರಿಯೆ ಆರಂಭಿಸಲು ನಿರ್ಧರಿಸಲಾಗಿದೆ. ಅಂದರೆ, ಚುನಾವಣೆ ಹಿನ್ನೆಲೆಯಲ್ಲಿ ಈ ಎಲ್ಲವೂ ಅಡಿಗಲ್ಲು ಹಾಕಿ ಮತ ಕೊಯಿಲಿಗೆ ಜನರ ನಿರೀಕ್ಷೆ ಕಾಯ್ದಿಟ್ಟುಕೊಳ್ಳುವ ಲೆಕ್ಕಾಚಾರವಿದೆ. ಈ ಬಗ್ಗೆ ಅಧಿವೇಶನದಲ್ಲಿ ಚರ್ಚಿಸಿ, ಸರ್ಕಾರದ ಅನುಷ್ಠಾನ ಬದ್ಧತೆಯನ್ನು ಖಾತ್ರಿ ಪಡಿಸುವ ಚರ್ಚೆ ಅಧಿವೇಶನದಲ್ಲಿ ನಡೆಯುತ್ತಾ ಎಂಬುದು ಮುಖ್ಯವಾಗಿದೆ.

**ಬಿಯಾಂಡ್ ಹುಬ್ಬಳ್ಳಿ ಕೂಗು**: ರಾಜಧಾನಿ ಬೆಂಗಳೂರು ಹೊರಗೆ ದ್ವಿತೀಯ ಮತ್ತು ತೃತೀಯ ಹಂತದ ನಗರಗಳಿಗೆ ಬಂಡವಾಳ ಹೂಡಿಕೆ ಆಕರ್ಷಿಸುವ ಮೂಲಕ ಕೈಗಾರಿಕೋದ್ಯಮ ಚಟುವಟಿಕೆಗಳನ್ನು ಪ್ರೋತ್ಸಾಹಿಸಿ ಉದ್ಯೋಗ ಅವಕಾಶಗಳನ್ನು ಸೃಷ್ಟಿಸಬೇಕು ಎಂಬ ಆಶಯ ಉತ್ತರ ಕರ್ನಾಟಕ ಭಾಗದಲ್ಲಿ ಸಾಕಾರವಾಗಿಲ್ಲ. ಅದಕ್ಕಾಗಿ ಬಿಯಾಂಡ್ ಹುಬ್ಬಳ್ಳಿ ಆಗಬೇಕು ಎಂಬುದು ಈ ಭಾಗದ ಜನರ ಹಕ್ಕೊತ್ತಾಯವಾಗಿದೆ. ಬಿಯಾಂಡ್ ಬೆಂಗಳೂರು ಘೋಷಣೆಯಂತೆ ಉದ್ಯಮ ಚಟುವಟಿಕೆಗಳು ಹುಬ್ಬಳ್ಳಿ ದಾಟಿ ಮುಂದೆ ಬರುತ್ತಿಲ್ಲ. ಒಂದು ಜಿಲ್ಲೆ–ಒಂದು ಉತ್ಪನ್ನ ಘೋಷಣೆ ಇನ್ನೂ ಚಾಲನೆ ಪಡೆದಿಲ್ಲ. 9 ಇಂಡಸ್ಟ್ರೀಯಲ್ ಕ್ಲಸ್ಟರ್ ಸ್ಥಾಪನೆಗೂ ನಿರೀಕ್ಷಿತ ಒತ್ತಾಸೆ ಸಿಕ್ಕಿಲ್ಲ ಎಂಬ ದೂರು ಈ ಭಾಗದ ಜನ ಪ್ರತಿನಿಧಿಗಳದ್ದಾಗಿದೆ. ಮುಖ್ಯವಾಗಿ, ವಿಮಾನ ನಿಲ್ದಾಣ ನಿರ್ಮಾಣ ಯೋಜನೆಗಳ ವಿಚಾರದಲ್ಲಿ ಶಿವಮೊಗ್ಗ ಮತ್ತು ಹಾಸನದಲ್ಲಿ ಆದ ಪ್ರಗತಿ ಈ ಭಾಗದಲ್ಲಿ ಆಗಿಲ್ಲ. ರಾಜಕೀಯ ಇಚ್ಛಾಶಕ್ತಿ ಮತ್ತು ಒತ್ತಡದ ಕೊರತೆಯಿಂದಾಗಿ ರಾಯಚೂರು, ವಿಜಯಪುರ, ಕೊಪ್ಪಳ ವಿಮಾನ ನಿಲ್ದಾಣ ಯೋಜನೆಗಳು ಹಾಗೂ ಏರ್‌ಸ್ಟ್ರಿಪ್‌ಗಳ ನಿರ್ಮಾಣ ಯೋಜನೆಗಳು ವೇಗ ಪಡೆದಿಲ್ಲ ಎಂಬ ಅಸಮಾಧಾನ ಈ ಭಾಗದ ಜನರಲ್ಲಿದೆ. ಈ ವಿಚಾರಗಳು ಅಧಿವೇಶನದಲ್ಲಿ ಇನ್ನೂ ಚರ್ಚೆಗೆ ಬಂದಿಲ್ಲ.

**ಆಶಯಕ್ಕೆ ಹಿನ್ನಡೆ**:ಅಭಿವೃದ್ಧಿ ಅಸಮತೋಲನದ ಕಾರಣಕ್ಕಾಗಿ ಸೃಷ್ಟಿಯಾದ ರಾಜ್ಯದ ಒಡಕಿನ ಧ್ವನಿ ತಗ್ಗಿಸುವ ಹಾಗೂ ಗಡಿ ಭಾಗದಲ್ಲಿ ಎಂಇಎಸ್ ಪುಂಡಾಟಿಕೆಗೆ ಕಡಿವಾಣ ಹಾಕಲು ಬೆಳಗಾವಿಯಲ್ಲಿ ವರ್ಷಕ್ಕೊಮ್ಮೆ ಅಧಿವೇಶನ ನಡೆಸಿ ಜನರಲ್ಲಿ ವಿಶ್ವಾಸ ತುಂಬುವ ಆಶಯದಿಂದ ಈ ಭಾಗದಲ್ಲಿ ಸಂಪ್ರದಾಯದಂತೆ ಅಧಿವೇಶನದಲ್ಲಿ ನಡೆಯುತ್ತಿದೆ. ಈ ಆಶಯಕ್ಕೆ ಈ ಸಲ ಹಿನ್ನಡೆಯಾಗುವ ಆತಂಕವಿದೆ.

**ಆದ್ಯತೆ ಏಕಿಲ್ಲ**:

- ನೆರೆ ಸಂತ್ರಸ್ಥರ ಪುನರ್ವಸತಿ, ಪರಿಹಾರ.
- ಕೃಷ್ಣಾ ಮೇಲ್ದಂಡೆ 3ನೇ ಹಂತದ ಯೋಜನೆಗೆ ಭೂಸ್ವಾಧೀನ.

- ಮುಳುಗಡೆ ಗ್ರಾಮಗಳ ಪುನರ್ವಸತಿ, ಪರಿಹಾರ.
- ಕಲ್ಯಾಣ ಮತ್ತು ಕಿತ್ತೂರು ಕರ್ನಾಟಕ ಭಾಗದ ನಾನಾ ಏತ ನೀರಾವರಿ ಯೋಜನೆಗಳ ಅನುಷ್ಠಾನ.
- ಉದ್ಯಮ ಚಟುವಟಿಕೆ ಹುಬ್ಬಳ್ಳಿಯಿಂದ ಆಚೆಗೆ ವಿಸ್ತರಿಸಲು 'ಬಿಯಾಂಡ್ ಹುಬ್ಬಳ್ಳಿ' ಅಭಿಯಾನ.
- ರಾಯಚೂರು, ವಿಜಯಪುರ, ಕೊಪ್ಪಳ ವಿಮಾನ ನಿಲ್ದಾಣ ಯೋಜನೆಗಳು, ಏರ್‌ಸ್ಟ್ರಿಪ್‌ಗಳ ನಿರ್ಮಾಣ ವಿಳಂಬ.

ಆಧಾರ:ವಿಜಯಕರ್ನಾಟಕ, ದಿನಾಂಕ:26.12.2022

## 41. ವಿಶ್ವವಿದ್ಯಾಲಯಗಳ ಸಮಸ್ಯೆ ಬಾವಿಗಿಳಿದು ಪ್ರತಿಭಟನೆ

ರಾಜ್ಯದಲ್ಲಿ ವಿಶ್ವವಿದ್ಯಾಲಯಗಳು ಎದುರಿಸುತ್ತಿರುವ ಸಮಸ್ಯೆಗಳ ಕುರಿತು ವಿಧಾನಪರಿಷತ್ತಿನಲ್ಲಿ ಬಿಸಿಬಿಸಿ ಚರ್ಚೆ ನಡೆಯಿತು. ಉನ್ನತ ಶಿಕ್ಷಣ ಸಚಿವರ ಉತ್ತರದಿಂದ ಸಮಾಧಾನಗೊಳ್ಳದ ಪ್ರತಿಪಕ್ಷಗಳ ಸದಸ್ಯರು ಬಾವಿಗಿಳಿದು ಪ್ರತಿಭಟನೆ ನಡೆಸಿದರು. ಈ ವೇಳೆ ಸಭಾಪತಿ ಮಾತು ಧಿಕ್ಕರಿಸಿ, ಆಡಳಿತರೂಢ ಮತ್ತು ಪ್ರತಿಪಕ್ಷಗಳ ಸದಸ್ಯರು ಮಾತಿನ ಚಕಮಕಿಯನ್ನೂ ನಡೆಸಿದರು.

ಪ್ರಶ್ನೋತ್ತರ ವೇಳೆಯಲ್ಲಿ ಮರಿತಿಬ್ಬೇಗೌಡ, ಅತಿಥಿ ಉಪನ್ಯಾಸಕರ ವೇತನ ಪರಿಷ್ಕರಣೆ, ಮೌಲ್ಯಮಾಪನಕ್ಕೆ ಗೌರವಧನ ನೀಡುವುದು, ನೇಮಕಾತಿ ಇತರ ಸವಲತ್ತುಗಳ ಬಗ್ಗೆ ಪ್ರಶ್ನಿಸಿದರು. "ಮೈಸೂರು ವಿವಿಯ ಅತಿಥಿ ಉಪನ್ಯಾಸಕರಿಗೆ ವೇತನ ಪರಿಷ್ಕರಣೆ ಮಾಡಲಾಗಿದೆ. ಒಂದು ತಿಂಗಳು ಪರಿಷ್ಕೃತ ವೇತನ ಕೊಟ್ಟು ನಂತರ ವಿವಿ ಆರ್ಥಿಕ ಸಮಿತಿ ಒಪ್ಪಲಿಲ್ಲ ಎಂದು ಹಳೆಯ ವೇತನ ನೀಡಲಾಗಿದೆ. ಇತರೆ ವಿವಿಗಳ ಅತಿಥಿ ಉಪನ್ಯಾಸಕರಿಗೆ ಹೋಲಿಸಿದರೆ ಕಡಿಮೆ ಇದೆ. ಪರಿಷ್ಕೃತ ವೇತನ ತೀರ್ಮಾನ ಮಾಡಿದ ಕುಲಪತಿ ಮತ್ತು ರಿಜಿಸ್ಟ್ರಾರ್ ಇಬ್ಬರೂ ಈಗಿಲ್ಲ ಈ ಅತಿಥಿ ಉಪನ್ಯಾಸಕರಿಗೆ ಪರಿಷ್ಕೃತ ವೇತನ ನೀಡಬೇಕು," ಎಂದು ಆಗ್ರಹಿಸಿದರು.

"ವಿಶ್ವವಿದ್ಯಾಲಯ ಆರ್ಥಿಕ ಸಮಿತಿ ಪರಿಷ್ಕೃತ ವೇತನ ನೀಡಲು ಒಪ್ಪುತ್ತಿಲ್ಲ," ಎಂದು ಸಚಿವರು ಹೇಳಿದಾಗ, ಮರಿತಿಬ್ಬೇಗೌಡ ಅವರು, 'ಉನ್ನತ ಶಿಕ್ಷಣ ಹಾಳು ಮಾಡಿದ ಸಚಿವರು ಇವರು," ಎಂದು ಛೇಡಿಸಿದರು. ಇದರಿಂದ ಆಡಳಿತರೂಢ ಮತ್ತು ಪ್ರತಿಪಕ್ಷಗಳ ಸದಸ್ಯರ ನಡುವೆ ವಾಗ್ವಾದ ಶುರುವಾಯಿತು.

ನಮ್ಮ ಪ್ರಶ್ನೆಗೆ ಸಮರ್ಪಕ ಉತ್ತರ ನೀಡಬೇಕು ಎಂದು ಒತ್ತಾಯಿಸಿ ಮರಿತಿಬ್ಬೇಗೌಡ ಅವರು ಸದನದ ಬಾವಿಗಿಳಿದು ಪ್ರತಿಭಟನೆಗೆ ಮುಂದಾದರು. ಇತರೆ ಕಾಂಗ್ರೆಸ್ ಮತ್ತು ಜೆಡಿಎಸ್ ಸದಸ್ಯರೂ ಬಾವಿಗಿಳಿದು ಘೋಷಣೆ ಕೂಗಿದರು.

ಐದು ನಿಮಿಷಗಳ ಕಲಾಪ ನಿಲ್ಲಿಸಲಾಯಿತು. ಮಾತುಕತೆ ಸಭೆ ನಂತರ ಕಲಾಪ ಮತ್ತೆ ಶುರುವಾದಾಗ, ಸಚಿವರು ಉತ್ತರ ನೀಡಿ, ಪರಿಶೀಲಿಸಿ ಕ್ರಮ ಕೈಗೊಳ್ಳುವ ಭರವಸೆ ನೀಡಿದಾಗ ಕಲಾಪ ಸುಗಮವಾಗಿ ಸಾಗಿತು.

ಆಧಾರ:ವಿಜಯಕರ್ನಾಟಕ, ದಿನಾಂಕ:27.12.2022

## 42. ವಿಧಾನಪರಿಷತ್‌ನಲ್ಲಿ ಎರಡು ಪ್ರಮುಖ ವಿಧೇಯಕ ಪಾಸ್

ವಿಧಾನಸಭೆಯಲ್ಲಿ ಅಂಗೀಕಾರಗೊಂಡ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ ತಿದ್ದುಪಡಿ ವಿಧೇಯಕ ಮತ್ತು ಕರ್ನಾಟಕ ಭೂಕಂದಾಯ ಅಧಿನಿಯಮ ವಿಧೇಯಕಕ್ಕೆ ವಿಧಾನಪರಿಷತ್ ಒಪ್ಪಿಗೆ ಸೂಚಿಸಿತು.

ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ ತಿದ್ದುಪಡಿ ವಿಧೇಯಕ ಮಂಡಿಸಿದ ಸಭಾನಾಯಕರು "ಆಡಳಿತರೂಢ ಹಾಗೂ ಪ್ರತಿಪಕ್ಷಗಳ ಸದಸ್ಯರ ಸಲಹೆಯಂತೆ ಗಡಿ ತಾಲ್ಲೂಕುಗಳ ಪಟ್ಟಿಯಲ್ಲಿ ಈಗಾಗಲೇ ಇರುವ 52 ತಾಲ್ಲೂಕುಗಳು ಮಾತ್ರವಲ್ಲದೆ, ಕೈಬಿಟ್ಟು ಹೋಗಿರುವ ನಿಪ್ಪಾಣಿ, ಕಾಗವಾಡ ಸೇರಿದಂತೆ ಹೊಸ ತಾಲ್ಲೂಕು ಸೇರಿಸಲಾಗುವುದು. ಮುಂದೆಯೂ ರಚನೆಯಾಗುವ ಹೊಸ ತಾಲ್ಲೂಕುಗಳ ಸೇರ್ಪಡೆಗೆ ಅವಕಾಶವಿದೆ. ಪ್ರಾಧಿಕಾರಕ್ಕೆ ಹೆಚ್ಚು ಅನುದಾನ ಒದಗಿಸುವ ಬಗ್ಗೆಯೂ ಸಿಎಂ ಜೊತೆಗೆ ಚರ್ಚಿಸಲಾಗುವುದು," ಎಂದು ಭರವಸೆ ನೀಡಿದರು.

ಪ್ರತಿಪಕ್ಷ ನಾಯಕರು ಸೇರಿದಂತೆ ಹಲವು ಸದಸ್ಯರು, "ಗಡಿ ತಾಲ್ಲೂಕುಗಳ ಅಭಿವೃದ್ಧಿ ಜೊತೆಗೆ ಹೊರ ರಾಜ್ಯಗಳಲ್ಲಿರುವ ಕನ್ನಡ ಭಾಷಿಕರ ಹಿತರಕ್ಷಣೆ ಕಾಯಬೇಕು. ಅಲ್ಲಿನ ಶಾಲೆಗಳ ಅಭಿವೃದ್ಧಿಗೆ ಆದ್ಯತೆ ನೀಡಬೇಕು. ನಾಡಿನ ಹೊರಗೂ ಕನ್ನಡದ ಕಂಪು ಪಸರಿಸಲು ಕಾರಣರಾದ ಕನ್ನಡ ಸಂಘಟನೆಗಳ ಚಟುವಟಿಕೆ ಪ್ರೋತ್ಸಾಹಿಸಲು ಅನುದಾನ ಒದಗಿಸಬೇಕು," ಎಂದು ಸಲಹೆ ನೀಡಿದರು.

ಇನ್ನೂ ಭೂಕಂದಾಯ ತಿದ್ದುಪಡಿ ವಿಧೇಯಕ ಮಂಡಿಸಿದ ಕಂದಾಯ ಸಚಿವರು "ರೈತರು ತಮ್ಮ ಭೂಮಿಯಲ್ಲಿ ಮನೆ, ಕೈಗಾರಿಕೆ, ವಾಣಿಜ್ಯ ಮತ್ತು ಇತರೆ ಯಾವುದೇ ಬೇಸಾಯೇತರ ಉದ್ದೇಶಕ್ಕೆ ಬಳಕೆ ಮಾಡಲು ಅತೀವ ಕಾನೂನು ಸಮಸ್ಯೆ ಎದುರಿಸುತ್ತಿದ್ದಾರೆ. ಮನೆ ಕಟ್ಟಿಕೊಂಡರೆ ಸಾಲವೂ ಸಿಗದಂತಹ ಪರಿಸ್ಥಿತಿ ಇದೆ. ಹೀಗಾಗಿ, ಅವರಿಗೆ ಭೂಪರಿವರ್ತನೆಗೆ ಅವಕಾಶ ಮಾಡಿಕೊಡುವ ಉದ್ದೇಶದಿಂದ ತಿದ್ದುಪಡಿ ವಿಧೇಯಕ ಜಾರಿಗೆ ನಿರ್ಧರಿಸಲಾಗಿದೆ. ನಗರ ಪ್ರದೇಶದಲ್ಲಿ ರೈತರು ಅರ್ಜಿ ಸಲ್ಲಿಸಿದ 7 ದಿನಗಳೊಳಗೆ ಮತ್ತು ಗ್ರಾಮಾಂತರದಲ್ಲಿ 15 ದಿನಗಳೊಗೆ ಅಧಿಕಾರಿಗಳು ಅನುಮತಿ ನೀಡಬೇಕು. ನೀಡದಿದ್ದರೂ ಸಹಜವಾಗಿಯೇ ಅನುಮತಿ ದೊರೆಯುತ್ತದೆ. ರೈತರು ಆರ್‌ಟಿಸಿ, ಮ್ಯುಟೇಷನ್, 11ಎ ಸ್ಕೆಚ್ ಮತ್ತು ಅಫಿಡವಿಟ್ ಸಲ್ಲಿಸಿದರೆ ಸಾಕು. ಇದರಲ್ಲಿ ರಿಯಲ್ ಎಸ್ಟೇಟ್ ಹಿತ ಕಾಯುವ ಉದ್ದೇಶವಿಲ್ಲ," ಎಂದು ಸ್ಪಷ್ಟಪಡಿಸಿದರು.

ಆಧಾರ:ವಿಜಯಕರ್ನಾಟಕ, ದಿನಾಂಕ:27.12.2022

## 43. ಮುಳುಗಡೆ ಸಂತ್ರಸ್ತರ ನೆರವಿಗೆ ಐಎಎಸ್ ನೇಮಕ

ಜಲಾಶಯಗಳ ಸಂತ್ರಸ್ತರಿಗೆ ನಿಯಮಾನುಸಾರ ಭೂಮಿ ಮಂಜೂರು ಮಾಡಿ ನೆರವಾಗಲು ಕಾರ್ಯಕ್ಕೆ ಐಎಎಸ್ ಅಧಿಕಾರಿಗಳನ್ನು ನೇಮಿಸಬೇಕೆಂಬ ಸಲಹೆ ಬಗ್ಗೆ ಸಿಎಂ ಜೊತೆ ಚರ್ಚಿಸಿ ತೀರ್ಮಾನಿಸಲಾಗುವುದು ಎಂದು ಕಂದಾಯ ಸಚಿವರು ಹೇಳಿದರು.

ವಿಧಾನಸಭೆಯಲ್ಲಿ ಜೆಡಿಎಸ್‌ನ ಹೆಚ್.ಕೆ.ಕುಮಾರಸ್ವಾಮಿ ಪ್ರಶ್ನೋತ್ತರ ಕಲಾಪದಲ್ಲಿ ಪ್ರಸ್ತಾಪಿಸಿದ ವಿಚಾರದ ಬಗ್ಗೆ ವಿಸ್ತೃತ ಚರ್ಚೆ ನಡೆಯಿತು. ವಿಷಯ ಪ್ರಸ್ತಾಪಿಸಿದ ಹೆಚ್.ಕೆ. ಕುಮಾರಸ್ವಾಮಿ, "ಹಾಸನ ಜಿಲ್ಲೆ ಆಲೂರು ತಾಲ್ಲೂಕಿನ ಬ್ಯಾಬಾ ಫಾರೆಸ್ಟ್ ಗ್ರಾಮದಲ್ಲಿ ಹೇಮಾವತಿ ಜಲಾಶಯಕ್ಕೆ ಮುಳುಗಡೆಯಾದ ಜಮೀನಿನ ಸಂತ್ರಸ್ತರ ಪೈಕಿ 247 ಮಂದಿಗೆ ಈವರೆಗೂ ಭೂಮಿ ಮಂಜೂರಾಗಿಲ್ಲ. ದಾಖಲೆಗಳು ಸರಿಯಿಲ್ಲ, ಕಡತಗಳ ನಾಪತ್ತೆ ಇತರೆ ಕಾರಣ ಹೇಳಲಾಗುತ್ತಿದೆ. ಹೀಗಾಗಿ, ಭೂಮಿ ಮಂಜೂರಾತಿಗೆ ಆಂದೋಲನ ಮಾದರಿಯಲ್ಲಿ ಕಾಲಮಿತಿಯಲ್ಲಿ ಪೂರ್ಣಗೊಳಿಸಬೇಕು," ಎಂದು ಆಗ್ರಹಿಸಿದರು.

ಇದಕ್ಕೆ ಆರ್. ಅಶೋಕ್ ರವರು, "ದಾಖಲೆಗಳ ಪರಿಶೀಲಿಸಬೇಕಿದೆ. ಮೂಲದಾಖಲೆಗಳೂ, ಹಕ್ಕುಪತ್ರ ಒದಗಿಸಿದವರಿಗೆ ಭೂಮಿ ಮಂಜೂರು ಆಗಿದೆ. ಸೂಕ್ತ ದಾಖಲೆಗಳಿದ್ದರೆ ತಕ್ಷಣವೇ ಭೂಮಿ ಮಂಜೂರಾತಿಗೆ ಕ್ರಮ ವಹಿಸಲಾಗುವುದು," ಎಂದು ಹೇಳಿದರು. ಕಡತ ತಿಂದಿರುವುದು ಅಧಿಕಾರಿ ಹೆಗ್ಗಣಗಳು.

ಇದಕ್ಕೆ ಸಮಾಧಾನಗೊಳ್ಳದ ಕುಮಾರಸ್ವಾಮಿ, "ನೈಜತೆ ಇಲ್ಲ ಎಂದರೆ ಅದು ಆ ದಾಖಲೆ ವಿತರಿಸಿದ ಅಧಿಕಾರಿಯ ಲೋಪವಲ್ಲವೇ? ಪರಿಹಾರ ಹಾಗೂ ಪುನಶ್ಚೇತನ ವಿಭಾಗದ ಅಧಿಕಾರಿಗಳೇ

ಕಡತ ನಾಪತ್ತೆಗೆ ಹೊಣೆಯಲ್ಲವೇ? ಕಡತ ತಿಂದಿರುವ ಹೆಗ್ಗಣಗಳು ಅಧಿಕಾರಿಗಳೇ ಹೊರತು ಸಂತ್ರಸ್ತರಲ್ಲ. ಅಧಿಕಾರಿಗಳ ತಪ್ಪಿಗೆ ಸಂತ್ರಸ್ತರನ್ನ ಹೊಣೆ ಮಾಡುವುದು ಎಷ್ಟು ಸರಿ? ಭೂಮಿ ಮಂಜೂರಾತಿ ದಾಖಲೆಯಲ್ಲಿ ತಹಸೀಲ್ದಾರ್ ಸಹಿಯೇ ಇಲ್ಲ," ಎಂದು ಗಮನ ಸೆಳೆದರು.

ಇದಕ್ಕೆ ದನಿಗೂಡಿಸಿದ ಜೆಡಿಎಸ್‌ನ ಎ.ಟಿ.ರಾಮಸ್ವಾಮಿ, "ಮೂಲ ದಾಖಲಾತಿಗಳು ಕಂದಾಯ ಇಲಾಖೆಯಲ್ಲಿ ಇರಬೇಕಲ್ಲವೇ? ದಾಖಲೆಗಳಿಲ್ಲ ಎಂದರೆ ಕಳೆದವರು ಯಾರು?," ಎಂದು ಪ್ರಶ್ನಿಸಿದರು.

ಬಳಿಕ ಅಶೋಕ್, "ಮಂಜೂರಾತಿ ಪತ್ರದಲ್ಲಿ ಸರ್ವೆ ನಂಬರ್ ಇಲ್ಲದೇ ಭೂಮಿ ಮಂಜೂರು ಮಾಡಲಾಗಿದೆ. ತಹಸೀಲ್ದಾರ್ ಸಹಿಯಿಲ್ಲದ ದಾಖಲೆ ಆಧಾರದಲ್ಲಿ ಭೂಮಿ ಮಂಜೂರು ಮಾಡುವುದು ಹೇಗೆ? " ಎಂದರು.

ಆಗ ಮಧ್ಯಪ್ರವೇಶಿಸಿದ ಸ್ಪೀಕರ್ ಅವರು "ಹೇಮಾವತಿ ಮಾತ್ರವಲ್ಲದೆ ರಾಜ್ಯದ ಇತರೆಡೆಯ ಮುಳುಗಡೆ ಸಂತ್ರಸ್ಥರ ಗೋಳು ಇದೇ ರೀತಿ ಇದೆ. ಭೂಮಿ ತ್ಯಾಗ ಮಾಡಿದವರು ಈ ರೀತಿ ಸಂಕಷ್ಟಕ್ಕೆ ಸಿಲುಕಬಾರದು. ಭೂಮಿ ಮಂಜೂರು ಮಾಡುವ ಕಾರ್ಯಕ್ಕೆ ನೆರವಾಗಲು ಐಎಎಸ್ ಅಧಿಕಾರಿ ನೇಮಿಸುವ ಬಗ್ಗೆ ಸಿ.ಎಂ. ಜೊತೆಗೆ ಚರ್ಚಿಸುವುದು ಸೂಕ್ತ. ಆ ಮೂಲಕ ನಿಮ್ಮ ರಾಜಕೀಯ ಇಚ್ಛಾಶಕ್ತಿ ಪ್ರದರ್ಶಿಸಿ ಸಂದೇಶ ರವಾನಿಸಿದರೆ ಉತ್ತಮ," ಎಂದು ಸಲಹೆ ನೀಡಿದರು.

ಇದಕ್ಕೆ ಪ್ರತಿಕ್ರಿಯಿಸಿದ ಆರ್. ಅಶೋಕ್, "ಈ ಬಗ್ಗೆ ಕಾನೂನು ಸಚಿವರೊಂದಿಗೆ ಚರ್ಚಿಸಿ ಸಿಎಂ ಜೊತೆ ಸಮಾಲೋಚಿಸಲಾಗುವುದು. ಅನುಭೋಗದಾರರ ಪೂರ್ವಜರ ಮಹಜರು ನಡೆಸಿದರೆ ವಾಸ್ತವಾಂಶ ತಿಳಿಯಲಿದೆ. ಹೆಚ್.ಡಿ.ಕೋಟೆಯಲ್ಲೂ ಕಬಿನಿ ಡ್ಯಾಂ ಸಂತ್ರಸ್ತರಿಗೆ 1,300 ಎಕರೆ– ಮಂಜೂರಾಗಿದ್ದರೂ ಈವರೆಗೆ ಅರಣ್ಯ ಇಲಾಖೆ ತಕರಾರಿನಿಂದ ನೋಂದಣಿ ಆಗಿಲ್ಲ. ಹೇಮಾವತಿ ಜಲಾಶಯ ಮುಳುಗಡೆ ಸಂತ್ರಸ್ತರ ಹೆಸರಿಲ್ಲ ಸಾವಿರಾರು ಎಕರೆ ಲೂಟಿಯಾಗಿದೆ. ಒಬ್ಬರು 2 ಎಕರೆ ಭೂಮಿ ಕಳೆದುಕೊಂಡಿದ್ದರೆ ನಾಲ್ಕು ಮಂದಿ ಅದೇ ಭೂಮಿಗೆ ಒಟ್ಟು 16 ಎಕರೆ ಪಡೆದಿದ್ದಾರೆ. ಈ ಬಗ್ಗೆ ತನಿಖೆ ನಡೆಯುತ್ತಿದೆ. ದಾಖಲೆಗಳು ನೈಜವಾಗಿರುವ ಪ್ರಕರಣದಲ್ಲಿ ತ್ವರಿತವಾಗಿ ಭೂಮಿ ಮಂಜೂರಾತಿಗೆ ಕ್ರಮ ವಹಿಸಲಾಗುವುದು" ಎಂದು ಭರವಸೆ ನೀಡಿ ಚರ್ಚೆಗೆ ತೆರೆ ಎಳೆದರು.

ಆಧಾರ:ವಿಜಯಕರ್ನಾಟಕ, ದಿನಾಂಕ:27.12.2022

## 44. ಶೇ.40 ಕಮಿಷನ್ ಚರ್ಚೆಗೆ ಸಭಾಧ್ಯಕ್ಷರ ಅನುಮತಿ

ವಿವಿಧ ಇಲಾಖೆಗಳಲ್ಲಿ ಭ್ರಷ್ಟಾಚಾರ ನಡೆಯುತ್ತಿದೆ ಎಂಬ ಆರೋಪದ ಬಗ್ಗೆ ಸದನದಲ್ಲಿ 69ನೆಯ ನಿಯಮದಡಿ ಚರ್ಚೆ ನಡೆಸಲು ಸಭಾಧ್ಯಕ್ಷರು ಕಲ್ಪಿಸಿದ್ದಾರೆ. ಇದರಿಂದಾಗಿ ಇನ್ನೆರಡು ದಿನಗಳಲ್ಲಿ ಶೇ.40 ರಷ್ಟು ಕಮಿಷನ್ ಆರೋಪದ ಕುರಿತು ಸದನದಲ್ಲಿ ಕಾವೇರಿದ ಚರ್ಚೆ ನಡೆಯುವ ಸಾಧ್ಯತೆ ಇದೆ.

ಶೂನ್ಯವೇಳೆಯಲ್ಲಿ ಈ ವಿಷಯ ಪ್ರಸ್ತಾಪಿಸಿದ ವಿರೋಧ ಪಕ್ಷದ ನಾಯಕರು 'ನಿಯಮ 60 ರಡಿ ವಿವಿಧ ಇಲಾಖೆಗಳಲ್ಲಿ ಭ್ರಷ್ಟಾಚಾರದ ಕುರಿತು ಚರ್ಚೆಗೆ ಅವಕಾಶ ನೀಡಬೇಕು' ಎಂದು ನಿಲುವಳಿ ಸೂಚಿಸಲು ಮುಂದಾದರು.

ಆದರೆ ಕಾಗೇರಿ ಅವರು 'ವಿವಿಧ ಇಲಾಖೆಯಂದು ಹೇಳಿದ್ದೀರಿ. ನಿಖರವಾದ ವಿಷಯದ ಬಗ್ಗೆಯಾದಗ ನಿಲುವಳಿ ಸೂಚಿಸಲು ಅನುಮತಿ ನೀಡಬಹುದು. ಇಲ್ಲದಿದ್ದಲ್ಲಿ ಈ ನಿಯಮದಡಿ ಸಾಧ್ಯವಿಲ್ಲ ಎಂದು ಸ್ಪಷ್ಟಪಡಿಸಿದರು.

ಈ ವೇಳೆ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಮಾಧುಸ್ವಾಮಿ ಮಾತನಾಡಿ, 'ನಿಯಮದ ಪ್ರಕಾರ ನೋಟಿಸ್ ನೀಡಿ. ನಾವು ಚರ್ಚೆಗೆ ಸಿದ್ದವಿದ್ದೇವೆ. ಯಾರ್ಯಾರ ಕಾಲದಲ್ಲಿ ಎಷ್ಟೆಷ್ಟು ಭ್ರಷ್ಟಾಚಾರವಿತ್ತು. ಎಷ್ಟೆಷ್ಟು ಕಮಿಷನ್ ಇತ್ತು ಎಂಬ ಬಗ್ಗೆ ಚರ್ಚೆ ನಡೆಸಬಹುದು ಎಂದರು. ಕೊನೆಗೆ

ಸಭಾಧ್ಯಕ್ಷರು ಮಾತನಾಡಿ ಈ ನೋಟಿಸನ್ನು ನಿಯಮ 69ರಡಿ ಪರಿವರ್ತಿಸಿ ಚರ್ಚೆಗೆ ಅವಕಾಶ ಕಲ್ಪಿಸುವುದಾಗಿ ತಿಳಿಸಿ ಈ ಮೂಲಕ ಚರ್ಚೆಗೆ ತೆರೆ ಎಳೆದರು.

ಆಧಾರ:ಕನ್ನಡ ಪ್ರಭ, ದಿನಾಂಕ:27.12.2022

## 45. Breach of privilege: Speaker hints at review of rules

Speaker Vishweshwar Hegde, Kageri indicated that he would review rules governing breach of privilege after Sringeri Congress MLA TD Rajegowda protested in the Legislative Assembly accusing the government of releasing grants to the BJP's defeated candidate in his constituency.

Rajegowda's grouse was that BPJ's DN Jeevaraj, who lost in the 2018 Assembly election was being given prominence in terms of Sringeri development.

"The defeated candidate was given grants as MLA of Sringeri," Rajegowda said, insisting that it was a breach of his privilege. He also claimed that Jeevaraj was being invited to ground-breaking ceremonies for public projects.

Leader of the Opposition Siddaramaiah said such a practice was happening in several constituencies. "Rajegowda is an elected MLA whereas Jeevaraj is the defeated candidate. It is not correct to give grants in the name of the defeated candidates. Do they pass the budget in this House? It's simply undemocratic," he said.

Kageri reminded Siddaramaiah that even BJP MLA's when they were in the Opposition had similar complaints.

JD(S) MLA KM Shivalinge Gowda quipped that apart from those defeated; even "would be" candidates were gaining prominence. Law & Parliamentary Minister J.C.Madhuswamy argued that Rajegowda's case was not a breach of privilege.

"When rules were framed in parliamentary democracy, no MLA was imagined to become an executive involved in development. The work of an MLA had no connection with development activity. Over time, we have become executives and it has become a practice to release grants by asking MLAs," he said.

"Gone are the days when someone would be challenged for announcing grants without Cabinet or finance department concurrence. Precedelence is running the shows," he added.

Former Speaker, Ramesh Kumar urged Madhuswamy not to "survive on technicalities," and pointed out that privileges" and pointed out that privileges are not codified.

Admitting that Rajegowda's case was not a breach, Kumar said. "Neglecting an elected MLA indirectly amounts to nepotism".

Intervening, Chief Minister said the government had the power to release grants. "We will either convert all those works as government works or we'll cancel the grant itself" he said.

Finally Kageri said he would discuss the matter with the Business Advisory Committee.

Courtesy: Deccan Herald, Dated: 28.12.2022

## 46. ಬೆಂಗಳೂರು ಸಂಚಾರ ನಿರ್ವಹಣೆಗೆ ಪ್ರಾಧಿಕಾರ

ಬೆಂಗಳೂರು ನಗರದಲ್ಲಿ ಸಾಮೂಹಿಕ ಸಾರಿಗೆ, ವಾಹನಗಳ ಸಂಚಾರದ ಅಭಿವೃದ್ಧಿ ಕಾರ್ಯಾಚರಣೆ ನಿರ್ವಹಣೆ, ಮೇಲುಸ್ತುವಾರಿ ಮತ್ತು ಮೇಲ್ವಿಚಾರಣೆಗಾಗಿ ಬೆಂಗಳೂರು ಮಹಾನಗರ ಭೂಸಾರಿಗೆ ನಿಗಮ ರಚನೆಗಾಗಿ ಬೆಂಗಳೂರು ಮಹಾನಗರ ಭೂಸಾರಿಗೆ ಪ್ರಾಧೀಕಾರ ಮಸೂದೆ–2022ಕ್ಕೆ ವಿಧಾನಸಭೆ ಒಪ್ಪಿಗೆ ನೀಡಿದೆ.

ಮುಖ್ಯಮಂತ್ರಿಯವರ ಪರವಾಗಿ ಕಾನೂನು ಸಂಸದೀಯ ಸಚಿವ ಜೆ.ಸಿ. ಮಾಧುಸ್ವಾಮಿ ಮಸೂದೆಯನ್ನು ಮಂಡಿಸಿ ಬೆಂಗಳೂರು ನಗರದ ಸಂಚಾರ ದಟ್ಟಣೆ ನಿವಾರಿಸುವುದಕ್ಕಾಗಿ ಪ್ರಾಧೀಕಾರವೊಂದರ ಅವಶ್ಯಕತೆ ಇದ್ದು, ಈ ಸಂಬಂಧ ಕೇಂದ್ರ ಸರ್ಕಾರ ಮಸೂದೆಯನ್ನು ರೂಪಿಸಿದೆ. ಅದಕ್ಕೆ ಪೂರಕವಾಗಿ ಈ ಮಸೂದೆ ರೂಪಿಸಲಾಗಿದೆ ಎಂದರು.

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಮಹಾನಗರ ವಲಯ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಸಂಚಾರ ಪೊಲೀಸ್, ಬಿಎಂಟಿಸಿ, ಬಿಬಿಎಂಪಿ ಮೆಟ್ರೊ ರೈಲು ನಿಗಮ ಮತ್ತು ಸಾರಿಗೆ ಇಲಾಖೆ ಸೇರಿ ವಿವಿಧ ಏಜೆನ್ಸಿಗಳನ್ನು ಈ ಪ್ರಾಧಿಕಾರದ ವ್ಯಾಪ್ತಿಗೆ ತಂದು ವಿಸ್ತೃತ ಯೋಜನೆಗಳನ್ನು ರೂಪಿಸಲಾಗುವುದು ಎಂದು ಮಾಧುಸ್ವಾಮಿ ಅವರು ತಿಳಿಸಿದರು.

ಮಸೂದೆಯ ಕುರಿತು ಹೆಚ್ಚಿನ ವಿವರಣೆ ನೀಡಿದ ಮುಖ್ಯಮಂತ್ರಿಯವರು ಬೆಂಗಳೂರು ನಗರ ದೊಡ್ಡ ಪ್ರಮಾಣದಲ್ಲಿ ಮತ್ತು ಅತಿವೇಗವಾಗಿ ಬೆಳೆಯುತ್ತಿದೆ. ಆದರೆ, ಯೋಜನಾಬದ್ಧವಾಗಿ ಬೆಳೆದಿಲ್ಲ. ಪುರಸಭೆಗಳಿಗೆ ಮಾತ್ರ ಮತ್ತು 110 ಹಳ್ಳಿಗಳು ಸೇರಿಕೊಂಡಿವೆ. ಆದರೆ, ಕಳೆದ 20–25 ವರ್ಷಗಳಿಂದ ರಸ್ತೆ ಅಗಲಗೊಂಡಿಲ್ಲ. ಇವೆಲ್ಲವನ್ನೂ ಪ್ರಾಧಿಕಾರದ ವ್ಯಾಪ್ತಿಗೆ ಸೇರಿಸಲಾಗುವುದು ಎಂದು ಹೇಳಿದರು. ಚರ್ಚೆ ನಡೆದ ಬಳಿಕ ಮಸೂದೆಗೆ ವಿಧಾನಸಭೆ ಅನುಮೋದನೆ ನೀಡಿತು.

**ಮಸೂದೆಯ ಪ್ರಮುಖ ಅಂಶಗಳು:**

- ವಾಹನ ನಿಲುಗಡೆ ನೀತಿ, ಮೋಟಾರು ವಾಹನೇತರ ಸಾರಿಗೆ ನೀತಿ, ಸಾಗಣೆ ಆಧಾರಿತ ಅಭಿವೃದ್ಧಿ ನೀತಿ, ಬಹುಮಾದರಿ ಸಂಯೋಜಿತ ನೀತಿ. ಸರಕು ಸಾಗಣೆ ನೀತಿ ಮತ್ತು ಇತರೆ ಸಂಚಾರ ನೀತಿ ರೂಪಿಸಲಾಗುವುದು.
- ನಗರ ಸಂಚಾರ ಪ್ರದೇಶದಲ್ಲಿ ಯೋಜಿತ ಅಭಿವೃದ್ಧಿಗಾಗಿ ಒಂದು ಸಮಗ್ರ ಯೋಜನೆಯನ್ನು ಸಿದ್ಧಪಡಿಸಲಾಗುವುದು.
- ವಿವಿಧ ಮಾದರಿಗಳ ಮೂಲಸೌಕರ್ಯ, ಸೌಲಭ್ಯಗಳು ಮತ್ತು ಕಾಮಗಾರಿಗಳು, ನಗರದಲ್ಲಿ ಸಂಪೂರ್ಣವಾದ ರಸ್ತೆ ಜಾಲ (ಒಂದು ಚದರ ಕಿ.ಮೀ ಗ್ರೀಡ್ ಆಧ್ಯತೆಯನ್ನು ಒಳಗೊಂಡಿರಬೇಕು) ಸಾರ್ವಜನಿಕ ಸಾರಿಗೆಯ ಈಗಿನ ಮತ್ತು ಉದ್ದೇಶಿತ ಮಾರ್ಗದ ಯೋಜನೆಗಳು ಪ್ರಮಾಣದ ಬೇಡಿಕೆ ಆಧಾರದ ಮೇಲೆ ಸ್ಥಾಪಿಸಲಾದ ರಸ್ತಗಳ ಶ್ರೇಣಿಯ ಎಲ್ಲಾ ಮಟ್ಟಗಳ ರಸ್ತೆಗಳನ್ನು ನಿರ್ಮಿಸುವುದಕ್ಕೆ ಬೇಕಾದ ಮಾನದಂಡಗಳು.

- ಪಾದಚಾರಿ ಮಾರ್ಗ, ಸೈಕಲ್ ಟ್ರಾಕ್‌ಗಳು ಒಳಚರಂಡಿಗಳು ಮತ್ತು ಅವುಗಳ ನಿರ್ವಹಣೆಯ ಮಾನದಂಡ.

- ಅಂಗವಿಕಲ ವ್ಯಕ್ತಿಗಳ ಹಕ್ಕುಗಳ ಅಧಿನಿಯಮ 2016ರ ಮೇರೆಗೆ ಪರಿಭಾಷಿಸಲಾದಂತೆ, ನಿರ್ದಿಷ್ಟ ಮಾನದಂಡದ ಅಂಗವಿಕಲತೆ ಇರುವ ಮತ್ತು ಅಂಗವಿಕಲ ವ್ಯಕ್ತಿಗಳಿಗಾಗಿ ಸಂಚಾರ ಮತ್ತು ಸಾರಿಗೆ ಸುಲಭವಾಗಿ ಲಭ್ಯವಾಗುವಂತೆ ಮಾಡುವುದು.

**ಜನಸಂಖ್ಯೆ ಮೀರುವ ವಾಹನ ಸಂಖ್ಯೆ:** ನಗರದಲ್ಲಿ 1.25 ಕೋಟಿ ಜನಸಂಖ್ಯೆ ಇದ್ದು, 103 ಲಕ್ಷ ವಾಹನಗಳಿವೆ, ಪ್ರತಿ ದಿನ 5,000 ಹೊಸ ವಾಹನಗಳು ರಸ್ತೆಗೆ ಬರುತ್ತಿವೆ. ಕೆಲವೆ ವರ್ಷಗಳಲ್ಲಿ ಜನಸಂಖ್ಯೆಯನ್ನು ವಾಹನಗಳ ಸಂಖ್ಯೆ ಮೀರಿಸಲಿದೆ. ಇದರಿಂದ ಉದ್ಭವಿಸುವ ಸಮಸ್ಯೆಗಳನ್ನು ವಿವಿಧ ಇಲಾಖೆಗಳು ಪ್ರತ್ಯೇಕವಾಗಿ ಬಗೆಹರಿಸಲು ಸಾಧ್ಯವಿಲ್ಲ. ಒಂದು ಪ್ರಾಧಿಕಾರದಲ್ಲಿ ಸಂಬಂಧಿಸಿದ ಇಲಾಖೆಗಳು ಇದ್ದಾಗ ಬಗೆಹರಿಸಲು ಸಾಧ್ಯ ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ಬೆಂಗಳೂರಿನ ಸಂಚಾರ ಸಮಸ್ಯೆಯ ಬಗ್ಗೆ ಭಾರತೀಯ ವಿಜ್ಞಾನ ಸಂಸ್ಥೆಯಿಂದ ಹೊಸದಾಗಿ ವೈಜ್ಞಾನಿಕ ಅಧ್ಯಯನ ನಡೆಸಿ ವರದಿ ಪಡೆಯಲಾಗುವುದು. ಅಲ್ಲದೆ ಬೆಂಗಳೂರಿನಷ್ಟೇ ಸಂಚಾರ ಸಮಸ್ಯೆಯನ್ನು ಹೊಂದಿರುವ ಶಾಂಘೈ, ಲಂಡನ್ ಮತ್ತು ನ್ಯೂಯಾರ್ಕ್ ನಗರಗಳಲ್ಲಿ ಸಮಸ್ಯೆಯನ್ನು ಹೇಗೆ ಬಗೆಹರಿಸಿದ್ದಾರೆ ಎಂಬುದರ ವರದಿ ಪಡೆಯಲಾಗುವುದು ಎಂದು ಹೇಳಿದರು.

ನಗರದ ಸಂಚಾರ ಸಮಸ್ಯೆ ನಿವಾರಣೆ ಮಾಡುವ ದಿಸೆಯಲ್ಲಿ ಈಗಾಗಲೇ ಕೆಲವು ಕ್ರಮ ತೆಗೆದುಕೊಳ್ಳಲಾಗುವುದು. ಇದರ ಪರಿಣಾಮವಾಗಿ ಹೆಬ್ಬಾಳ ಫ್ಲೈಓವರ್ ದಾಟಲು ಹಿಂದೆ 25 ನಿಮಿಷ ಬೇಕಾಗುತ್ತಿಲ್ಲ. ಈಗ 7–8 ನಿಮಿಷಗಳಲ್ಲಿ ದಾಟಬಹುದಾಗಿದೆ. ಅಲ್ಲಿ ಹೆಚ್ಚು ಸಿಬ್ಬಂದಿ ನಿಯೋಜಿಸಲಾಗಿದೆ, ಸಂಚಾರ ಸುಗಮವಾಗಿದೆ ಎಂದರು.

**7,000 ಸಿ.ಸಿ.ಟಿ.ವಿ ಕ್ಯಾಮರಾ:** ನಿರ್ಭಯಾ ನಿಧಿಯಡಿ ನಗರದಲ್ಲಿ 7,000 ಕಡೆಗಳಲ್ಲಿ ಸಿಸಿಟಿ.ವಿ ಕ್ಯಾಮರಾ ಅಳವಡಿಸಲಾಗಿದೆ. ಎಡಿ ಕ್ಯಾಮರ ಮತ್ತು  ಸ್ವಿರಲ್ ಕ್ಯಾಮೆರಾಗಳನ್ನು ಸಿಗ್ನಲ್ ಜಂಪ್ ಮಾಡುವವರನ್ನು ನಿಲ್ಲಿಸಿಕೊಂಡು ದಂಡ ಕಟ್ಟುವ ವ್ಯವಸ್ಥೆ ನಿಲ್ಲಿಸಲಾಗಿದ್ದು, ಕ್ಯಾಮರಾ ಮೂಲಕ ಸಿಗ್ನಲ್ ಜಂಪ್ ಪತ್ತೆ ಮಾಡಿ ಎಸ್‌ಎಂಎಸ್ ಮೂಲಕ ನೋಟಿಸ್ ಕಳಿಸಿ, ದಂಡ ಪಾವತಿಸಲು ಸೂಚಿಸಲಾಗುವುದು. ಇದರಿಂದ ದಂಡ ಸಂಗ್ರಹ ಪ್ರಮಾಣ ಹೆಚ್ಚಾಗಿದೆ ಎಂದರು.

ಆಧಾರ:ಪ್ರಜಾವಾಣಿ ದಿನಾಂಕ:28.12.2022

## 47. ಕಾಡುಗೊಲ್ಲರಿಗೆ ಎಸ್ಟಿ ಸ್ಥಾನಮಾನ : ಮಾಧುಸ್ವಾಮಿ

ಕಾಡುಗೊಲ್ಲ ಸಮುದಾಯವನ್ನು ಪರಿಶಿಷ್ಟ ಪಂಗಡದ ಜಾರಿಗಳ ಪಟ್ಟಿಗೆ ಸೇರಿಸಲು ರಾಜ್ಯ ಸರ್ಕಾರ ಬದ್ಧವಾಗಿದೆ. ಜನವರಿ ಮೊದಲ ಅಥವಾ ಎರಡನೇ ವಾರದಲ್ಲಿ ಮುಖ್ಯಮಂತ್ರಿಯವರು ಕೇಂದ್ರ ಸಚಿವರನ್ನು ಭೇಟಿ ಮಾಡಿ ಚರ್ಚಿಸಲಿದ್ದಾರೆ ಎಂದು ಕಾನೂನು  ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ. ಮಾಧುಸ್ವಾಮಿ ತಿಳಿಸಿದ್ದಾರೆ.

ಶೂನ್ಯ ವೇಳೆಯಲ್ಲಿ ಬಿಜೆಪಿ ಸದಸ್ಯ ಗೂಳಿಹಟ್ಟಿ ಶೇಖರ್ ಪ್ರಸ್ತಾಪಕ್ಕೆ ಉತ್ತರಿಸಿದ ಅವರು ಫೆಬ್ರವರಿ ಒಳಗಾಗಿ ಅನುಮೋದನೆ ದೊರೆಯುವ ಸಾಧ್ಯತೆಯಿದೆ ಎಂದು ವಿಶ್ವಾಸ ವ್ಯಕ್ತಪಡಿಸಿದರು. ಕಾಡುಗೊಲ್ಲ ಸಮುದಾಯವನ್ನು ಎಸ್.ಟಿ.ಮೀಸಲಾತಿಗೆ ಸೇರಿಸಲು 2014ರಲ್ಲೇ ಶಿಫಾರಸ್ಸು ಸಲ್ಲಿಸಲಾಗಿದೆ. ಈ ಬಗ್ಗೆ ಕೇಂದ್ರ ಸರ್ಕಾರಕ್ಕೆ ಎಲ್ಲ ರೀತಿಯ ಸ್ಪಷ್ಟನೆಗಳನ್ನು ನೀಡಲಾಗಿದೆ. ಜನವರಿಯಲ್ಲಿ ಮುಖ್ಯಮಂತ್ರಿ ನೇತೃತ್ವದಲ್ಲಿ ಕೇಂದ್ರ ಸಾಮಾಜಿಕ ನ್ಯಾಯ ಸಬಲೀಕರಣ ಸಚಿವರನ್ನು ಭೇಟಿ ಮಾಡಿ ಚರ್ಚಿಸಲಾಗುವುದು ಎಂದರು.

ತೀರಾ ಹಿಂದುಳಿದಿರುವ ಕಾಡು ಗೊಲ್ಲರನ್ನು ಎಸ್.ಟಿಗೆ ಸೇರಿಸಿ ಎಂದು ಗೂಳಿಹಟ್ಟಿ ಶೇಖರ್ ಒತ್ತಾಯಿಸಿದ್ದರು.

ಆಧಾರ:ಕನ್ನಡಪ್ರಭ, ದಿನಾಂಕ:28.12.2022

## 48. ಒಂದಿಂಚೂ ಭೂಮಿ ಬಿಟ್ಟು ಕೊಡಲ್ಲ

ಕರ್ನಾಟಕದ ಒಂದಿಂಚನ್ನೂ ಮಹಾರಾಷ್ಟ್ರಕ್ಕೆ ಬಿಟ್ಟುಕೊಡುವ ಪ್ರಶ್ನೆಯೇ ಇಲ್ಲ, ಗಡಿಯಾಚೆಗಿನ ಕನ್ನಡಿಗರ ರಕ್ಷಣೆಗೆ ಬದ್ಧ ಎಂದು ವಿಧಾನ ಪರಿಷತ್ ಕಲಾಪದಲ್ಲಿ ನಿರ್ಣಯ ಕೈಗೊಂಡು ಕೇಂದ್ರ ಸರ್ಕಾರಕ್ಕೆ ಕಳುಹಿಸಲು ತೀರ್ಮಾನ ಕೈಗೊಳ್ಳಲಾಯಿತು.

ನಿಯಮ 68ರ ಮೇರೆಗೆ ಪ್ರತಿಪಕ್ಷ ನಾಯಕ ಹರಿಪ್ರಸಾದ್ ಸೇರಿದಂತೆ ಪ್ರತಿಪಕ್ಷಗಳ ಸದಸ್ಯರು ಮಹತ್ವದ ಚರ್ಚೆ ಆರಂಭಿಸಿದರು. ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ. ಮಾಧುಸ್ವಾಮಿ ನಿರ್ಣಯ ಮಂಡಿಸಿದರು. ಪಕ್ಷಾತೀತವಾಗಿ ಎಲ್ಲರೂ ಮಹಾರಾಷ್ಟ್ರದ ನಡೆ ಖಂಡಿಸಿದರು. ಸಭಾಪತಿಗಳು ಮತಕ್ಕೆ ಹಾಕಿದಾಗ ಸರ್ವಪಕ್ಷಗಳ ಸದಸ್ಯರು ಮೇಜು ಕುಟ್ಟಿ ಅನುಮೋದಿಸಿದರು. ಆಗ ಕೆ.ಎ. ತಿಪ್ಪೇಸ್ವಾಮಿ ಸುಪ್ರಿಂಕೋರ್ಟ್‌ಗೂ ಈ ನಿರ್ಣಯ ಕಳುಹಿಸಬಹುದು ಎಂದು ಸಲಹೆ ನೀಡಿದರು.

ಮಾಧುಸ್ವಾಮಿ ಮಾತನಾಡಿ ಪ್ರತಿಪಕ್ಷಗಳು ಹೇಳಿದಂತೆ ಅಮಿತ್ ಶಾ ಎರಡು ರಾಜ್ಯಗಳ ಜೊತೆ ಸಂಧಾನ ಮಾಡಿಲ್ಲ ಕೇಂದ್ರ ಗೃಹ ಸಚಿವರಾಗಿ ಎರಡು ರಾಜ್ಯಗಳು ಶಾಂತಿ ಕಾಪಾಡಬೇಕು. ಜನರಿಗೆ ತೊಂದರೆ ನೀಡಬಾರದು ಎಂದು ಸಲಹೆ ನೀಡಿದಾರಷ್ಟೆ ಎಂದು ಹೇಳಿದರು.

ಮಹಾರಾಷ್ಟ್ರದ ಇಬ್ಬರು ಸಚಿವರು ನಮ್ಮ ಸಿಎಂ ಬಗ್ಗೆ ಲಘುವಾಗಿ ಅಸಂವಿಧಾನಿಕವಾಗಿ ಮಾತನಾಡಿದ್ದಾರೆ. ಅದು ಅತಿರೇಕಕೆ ಹೋದರೆ ಸಹಿಸಲು ಸಾಧಯವಿಲ್ಲ ಎಂದು ಎಚ್ಚರಿಕೆ ನೀಡಿದ ಅವರು ಮಹಾಜನ್ ವರದಿ ನಮಗೆ ತೀರಾ ಖುಷಿ ತರದಿದ್ದರೂ ನಾನು ತಿರಸ್ಕರಿಸಲಿಲ್ಲ. ಆದರೆ ಆ ಕೆಲಸವನ್ನು ಮಹಾರಾಷ್ಟ್ರ ಮಾಡಿತು. ಈಗ ಅವರೇ ಸುಪ್ರೀಂಕೋರ್ಟ್‌ಗೆ ಹೋಗಿದ್ದು ಅದು ಅಡ್ಮಿಟ್ ಆಗಿಲ್ಲ. ಅಡ್ಮಿಟ್ ಮಾಡಿಕೊಳ್ಳಬಾರದು ಎಂಬುದು ನಮ್ಮ ಉದ್ದೇಶ. ಇದಕ್ಕಾಗಿ ನಾವು ನಿವೃತ್ತ ನ್ಯಾ. ಶಿವರಾಜ್ ಪಾಟೀಲ್ ನೇತೃತ್ವದ ವಕೀಲರ ತಂಡ ನೇಮಕ ಮಾಡಲಾಗಿದೆ ಎಂದು ತಿಳಿಸಿದರು.

ಚರ್ಚೆ ಶುರು ಮಾಡಿದ ಪ್ರತಿಪಕ್ಷ ನಾಯಕ ಹರಿಪ್ರಸಾದ್, ಬೆಳಗಾವಿಯಲ್ಲಿ ಅಧಿವೇಶನ ಶುರುವಾಗುವಾಗ ಗಡಿ ವಿವಾದ ಚರ್ಚೆಗೆ ಬರುತ್ತದೆ. ಇದಕ್ಕೆ ಮಹಾರಾಷ್ಟ್ರದ ಕುಮ್ಮಕ್ಕು ಇರುವುದು ಸ್ಪಷ್ಟ. ಮರಾಠಿ ಮೇಳಾವ್ ನಡೆಸುವುದು ಗಡಿಯಲ್ಲಿ ಭಯದ ವಾತಾವರಣ ಸೃಷ್ಟಿಸುವುದು ಕೆಲವು ಪುಂಡರ ಉದ್ದೇಶ. ಗಡಿಯಲ್ಲಿ ವಾಸಿಸುತ್ತಿರುವ ಕನ್ನಡಿಗರಲ್ಲಿ ಭಯದ ವಾತಾವರಣ ಮನೆ ಮಾಡಿದೆ. ಇಂತಹ ಘಟನೆಗಳು ಒಕ್ಕೂಟದ ವ್ಯವಸ್ಥೆಗೆ ತಕ್ಕದಲ್ಲ ಎಂದು ಒಕ್ಕೂಟ ವ್ಯವಸ್ಥೆ ಜಾರಿಗೆ ಬಂದ ಇತಿಹಾಸ ನೆನಪಿಸಿದರು.

ಇಂತಹ ವಿಷಯಗಳಲ್ಲಿ ನಾವೆಲ್ಲ ರಾಜಕೀಯ ಮರೆತು ಸಂದೇಶ ನೀಡಬೇಕಿದೆ. ಅದಕ್ಕೆ ನಮ್ಮ ಸಂಪೂರ್ಣ ಬೆಂಬಲ ಇದೆ ಎಂದು ಹೇಳಿದರು.

ಸದಸ್ಯರಾದ ಡಾ:ಸಾಬಣ್ಣ ತಳವಾರ್ ನಾಗಾರಾಜ್ ಪ್ರಕಾಶ್ ಹುಕ್ಕೇರಿ ಮೋಹನ್ ಕೊಂಡಜ್ಜಿ ಮಾತನಾಡಿ ಇಲ್ಲಿ ಜನರಿಗೆ ಯಾವುದೇ ಸಮಸ್ಯೆ ಇಲ್ಲ ಕನ್ನಡಿಗರು ಮರಾಠಿಗರು ಸೌಹಾರ್ದತೆಯಿಂದ ಇದ್ದಾರೆ. ಆದರೆ, ಕೆಲ ಪುಂಡರಿಂದ ಸಮಸ್ಯೆ ಆಗುತ್ತದೆ. ಸ್ಥಳೀಯ ಸಂಸ್ಥೆ ಚುನಾವಣೆಗಳು ಬಂದಾಗ ಗಡಿ ಸಮಸ್ಯೆ ಮೈದೆಳೆಯುತ್ತೆ ಎಂಬುದನ್ನು ಗಮನಿಸಬೇಕು ಎಂದರು.

ಸದಸ್ಯರಾದ ಎನ್ ರವಿಕುಮಾರ್, ತೇಜಸ್ವಿನಿ, ಯು.ಬಿ ವೆಂಕಟೇಶ್, ಎಸ್. ರವಿ, ಕೆ.ಎಸ್. ನವೀನ್, ಟಿ.ಎ. ಶರವಣ, ನಿರಣಿ ಹನುಮಂತಪ್ಪ ರುದ್ರಪ್ಪ, ಪಿ.ಆರ್. ರಮೇಶ್, ಪ್ರತಾಪ್ ಸಿಂಹ ನಾಯಕ ನಿರ್ಣಯ ಬೆಂಬಲಿಸಿ ಅಭಿಪ್ರಾಯ ಮಂಡಿಸಿದರು.

**ಮಹಾನಿರ್ಣಯಕ್ಕೆ ಸಿ.ಎಂ ಖಂಡನೆ:** ಗಡಿ ವಿವಾದ ಸಂಬಂಧ ಮಹಾರಾಷ್ಟ್ರ ಸರ್ಕಾರ ವಿಧಾನಸಭೆಯಲ್ಲಿ ಮಂಡಿಸಿರುವ ನಿರ್ಣಯ ಖಂಡಿಸುವುದಾಗಿ ಮುಖ್ಯಮಂತ್ರಿಯವರು ಹೇಳಿದರು.

ಸುವರ್ಣಸೌಧದಲ್ಲಿ ಸುದ್ದಿಗರರ ಜೊತೆ ಮಾತನಾಡಿ ರಾಜ್ಯ ಪುನರ್ ರಚನಾ ಕಾಯಿದೆ ರೂಪಿಸಿ ಸಾಕಷ್ಟು ವರ್ಷಗಳಾಗಿವೆ. ಎರಡು ಕಡೆ ಜನ ನೆಮ್ಮದಿಯಿಂದಿದ್ದಾರೆ. ರಾಜಕಾರಣಕ್ಕಾಗಿ ಈ ರೀತಿಯ ಹೇಳಿಕೆ ನೀಡಿ ನಿರ್ಣಯ ಕೈಗೊಳ್ಳುತ್ತಿದ್ದಾರೆ ಎಂದು ಕಿಡಿಕಾರಿದರು.

ನಮ್ಮ ನಿಲುವಿನಲ್ಲಿ ಸ್ಪಷ್ಟತೆ ಇದೆ. ಒಂದಿಚೂ ಜಾಗ ಬಿಟ್ಟುಕೊಡುವ ಪ್ರಶ್ನೆಯೇ ಇಲ್ಲ. ಗಡಿಯಿಂದಾಚೆಯಿರುವ ಕನ್ನಡಿಗರ ರಕ್ಷಣೆಗೆ ಸರ್ಕಾರ ಬದ್ಧ ನಾವು ನಮ್ಮ ಭೂಮಿ ಬಿಟ್ಟುಕೊಡುವುದಿಲ್ಲ ಎಂದರೆ ಅವರು ನಮ್ಮ ಜಾಗ ಪಡೆಯುವುದಾಗಿ ನಿರ್ಣಯ ಮಂಡಿಸಿದ್ದಾರೆ. ಇದು ನಮಗೂ ಅವರಿಗಿರುವ ವ್ಯತ್ಯಾಸ ಎಂದು ಹೇಳಿದರು. ರಾಜ್ಯಕ್ಕೆ ಸುಪ್ರೀಂ ಕೋರ್ಟ್‌ನಲ್ಲಿ ನ್ಯಾಯ ದೊರೆಯುವ ವಿಶ್ವಾಸವಿದೆ. ನಮ್ಮ ನಿಲುವು ಸಂವಿಧಾನ ಬದ್ಧ ಹಾಗೂ ನ್ಯಾಯಸಮ್ಮತವಾಗಿದೆ. ಕಾನೂನು ವ್ಯಾಪ್ತಿಯಲ್ಲಿ ನಮ್ಮ ನಿರ್ಣಯ ಇದೆ. ವ್ಯತಿರಿಕ್ತವಾದ ಮಹಾರಾಷ್ಟ್ರ ನಿರ್ಣಯ ಜವಾಬ್ದಾರಿಯುತವಾಗಿಲ್ಲ. ಇಡೀ ದೇಶ ಇದನ್ನು ಗಮನಿಸುತ್ತಿದೆ. ಒಕ್ಕೂಟ ವ್ಯವಸ್ಥೆಗೆ ಧಕ್ಕೆ ತರುವಂತಿದೆ. ನಾವು ಖಂಡಿಸುತ್ತೇವೆ ಎಂದರು.

**ಮುಂಬಯಿ ಕೇಂದ್ರಾಡಳಿತ ಪ್ರದೇಶವಾಗಲಿ:** ಬೆಳಗಾವಿ, ಕಾರವಾರ, ನಿಪ್ಪಾಣಿ ಕೇಂದ್ರಾಡಳಿತ ಪ್ರದೇಶವಾಗಲು ಅರ್ಹತೆ ಹೊಂದಿಲ್ಲ. ಆದರೆ, ಮುಂಬಯಿ ಆ ಅರ್ಹತೆ ಹೊಂದಿದ್ದು ನಾವು ಅದನ್ನೇ ಕೇಂದ್ರಾಡಳಿತ ಪ್ರದೇಶ ಮಾಡಲು ಒತ್ತಾಯಿಸಬೇಕು ಎಂದು ಪ್ರತಿಪಕ್ಷ ನಾಯಕ ಹರಿಪ್ರಸಾದ್ ಹೇಳಿದರು. ಆ ನಂತರ ಕೆಲವು ಸದಸ್ಯರು ಇದನ್ನು ಅನುಮೋದಿಸಿದರು. ಸಚಿವ ಮಾಧುಸ್ವಾಮಿ ಕೂಡ ಅಲ್ಲಿ ಶೇ.20 ರಷ್ಟು ಮಂದಿ ಕೊಂಕಣಿ ಕನ್ನಡ ಭಾಷಿಕರಿದ್ದಾರೆ. ಹಿಂದಿ ಸೇರಿ ಇತರೆ ಭಾಷೆಗಳು ಮಾತನಾಡುವ ಜನರೂ ಇದ್ದಾರೆ. ಈ ನಗರ ನಿಜಕ್ಕೂ ಕೇಂದ್ರಾಡಳಿತ ಪ್ರದೇಶವಾಗುವ ಅರ್ಹತೆ ಹೊಂದಿದೆ ಎಂದರು.

ಎಂ.ಇ.ಎಸ್ ಬ್ಯಾನ್ ಮಾಡಿ: ಬೆಳಗಾವಿಯಲ್ಲಿ ಮಹಾರಾಷ್ಟ್ರ ಏಕೀಕರಣ ಪರಿಷತ್ ಬ್ಯಾನ್ ಮಾಡಬೇಕು ಎಂದು ಪ್ರತಿಪಕ್ಷ ಮುಖ್ಯ ಸಚೇತಕ ಪ್ರಕಾಶ ರಾಥೋಡ್ ಸಲಹೆ ನೀಡಿದರು. ಕೆಲ ಸದಸ್ಯರು ತಮ್ಮ ಅಭಿಪ್ರಾಯ ಮಂಡನೆಯಲ್ಲಿ ಎಇಎಸ್ ಬ್ಯಾನ್ ಬಗ್ಗೆ ಸಹಮತ ವ್ಯಕ್ತಪಡಿಸಿದರು.

ಆಧಾರ: ಕನ್ನಡಪ್ರಭ, ದಿನಾಂಕ:28.12.2022

## 49. ರಾಜ್ಯವನ್ನು ಉತ್ಪಾದನಾ ತಾಣ ಮಾಡಲು ಮಸೂದೆ

ರಾಜ್ಯದಲ್ಲಿ ಕೈಗಾರಿಕಾ ವಲಯದಲ್ಲಿ ಉದ್ಯಮಿ ಸ್ನೇಹಿಯನ್ನಾಗಿಸುವ, ರಾಜ್ಯವನ್ನು ಜಾಗತೀಕ ಉತ್ಪಾದನಾ ಪ್ರಮುಖ ತಾಣವಾಗಿ ಮಾಡುವ ಕರ್ನಾಟಕ ವಿಶೇಷ ಹೂಡಿಕೆ ಪ್ರದೇಶ ವಿಧೇಯಕ 2022ಕ್ಕೆ ವಿಧಾನಸಭೆಯಲ್ಲಿ ಸರ್ವಾನುಮತದಿಂದ ಅಂಗೀಕರಿಸಲಾಯಿತು.

ಹೂಡಿಕೆದಾರರ ಅಕರ್ಷಿಸಲು ಈ ಕಾಯ್ದೆ ಅನುಕೂಲವಾಗಲಿದೆ. ಜೊತೆಗೆ ಕೈಗಾರಿಕಾ ಪ್ರದೇಶಗಳ ನಿರ್ವಹಣೆ, ಅಭಿವೃದ್ಧಿಗೆ ಈ ಅಧಿನಿಯಮ ಸಹಕಾರಿಯಾಗಲಿದೆ. ಇನ್ನು ಪರಿಷತ್‌ನಲ್ಲಿ ಈ ವಿಧೇಯಕ ಅಂಗೀಕಾರವಾಗುವುದು ಬಾಕಿಯಿದೆ.

ಗುಜರಾತ್, ರಾಜಸ್ಥಾನದಲ್ಲಿ ಈ ಮಾದಿಯ ಅಧಿನಿಯಮ ಜಾರಿಗೊಳಿಸಲಾಗಿದೆ. ರಾಜ್ಯದಲ್ಲಿ ದೊಡ್ಡ ಅಥವಾ ಅತಿದೊಡ್ಡ ಅಥವಾ ಬೃಹತ್ ಗಾತ್ರದ ಹೂಡಿಕೆ ಪ್ರದೇಶಗಳು ಮತ್ತು ಕೈಗಾರಿಕಾ ಪ್ರದೇಶ ಕ್ಲಸ್ಟರ್ ಸ್ಥಾಪಿಸಲು, ನಡೆಸಲು ನಿಯಂತ್ರಿಸಲು ಮತ್ತು ನಿರ್ವಹಿಸಲು ರಾಜ್ಯವನ್ನು ಜಾಗತಿಕ ಉತ್ಪಾದನಾ ಪ್ರಮುಖ ತಾಣವಾಗಿ ಉಳಿಸಿಕೊಳ್ಳಲು ವಿಶ್ವ ದರ್ಜೆಯ ಮೂಲಸೌಕರ್ಯ ಕಲ್ಪಿಸಲು ಪೂರ್ವ ಭಾವಿ ನೀತಿ ಚೌಕಟ್ಟಿನಲ್ಲೇ ವಿಶೇಷ ಹೂಡಿಕಾ ವಿಧೇಯಕದ ಉದ್ದೇಶವಾಗಿದೆ.

ವಿಧಾನಸಭೆಯಲ್ಲಿ ವಿಶೇಷ ಹೂಡಿಕೆ ಪ್ರದೇಶದ ವಿಧೇಯಕವನ್ನು ಮಂಡಿಸಿದ ಕೈಗಾರಿಕಾ ಸಚಿವ ಮುರುಗೇಶ ನಿರಾಣಿ, ಈಗಾಗಲೇ ರಾಜ್ಯದಲ್ಲಿರುವ 1250 ಎಕರೆ ಜಮೀನುವುಳ್ಳ ಕೈಗಾರಿಕಾ ಪ್ರದೇಶ

ಹಾಗೂ ಹೊಸದಾಗಿ 2,500 ಎಕರೆ ಪ್ರದೇಶವುಳ್ಳ ಕೈಗಾರಿಕಾ ಪ್ರದೇಶಗಳನ್ನು ಈ ಅಧಿನಿಯಮ ಬರುತ್ತವೆ. ವಿಶೇಷ ಹೂಡಿಕೆ ಪ್ರದೇಶವೆಂದು ಘೋಷಿಸಲಾಗುವುದು. ಇವುಗಳ ನಿರ್ವಹಣೆಗೆ ಅಧಿನಿಯಮದಡಿ ವಿಶೇಷ ಹೂಡಿಕೆ ಆಗ್ರ ಪ್ರಾಧಿಕಾರ ರಚಿಸುವುದು, ಪ್ರಾಧಿಕಾರದ ಮೂಲಕ ಆ ಪ್ರದೇಶಗಳನ್ನು ನಿರ್ವಹಣೆ ಹಾಗೂ ಅಭಿವೃದ್ಧಿ ಪಡಿಸುವುದಾಗಿದೆ. ಇಲ್ಲಿ ಹೂಡಿಕೆದಾರರಿಗೆ ಮಾಲಿನ್ಯ ನಿಯಂತ್ರಣ ಮಂಡಳಿಯ ಅನುಮತಿ ಹೊರತುಪಡಿಸಿ ಉಳಿದ ಎಲ್ಲ ಅನುಮತಿಗಳನ್ನು ಈ ಪ್ರಾಧಿಕಾರವೇ ನೀಡಲಿವೆ. ಈ ಪ್ರಾಧಿಕಾರಕ್ಕೆ ಕೆಐಡಿಎಬಿ, ಆರ್‌ಡಿಪಿಆರ್ ಇಲಾಖೆಗಳಿಂದ ಒಪ್ಪಿಗೆ ಪಡಯಲಾಗಿದೆ. ಈ ಪ್ರದೇಶಗಳಿಂದ ಸಂಗ್ರಹವಾಗುವ ತೆರೆಗೆಯನ್ನು ಇದೇ ಪ್ರಾಧಿಕಾರ ಸಂಗ್ರಹಿಸುತ್ತದೆ.

ಅದರಲ್ಲಿ ಶೇ.30ರಷ್ಟು ಸ್ಥಳೀಯ ಸಂಸ್ಥೆಗೆ ನೀಡಿದರೆ ಉಳಿದ ಶೇ.70ರಷ್ಟು ತೆರಿಗೆಯಲ್ಲಿ ಆ ಪ್ರದೇಶದ ಅಭಿವೃದ್ಧಿಗೆ ಬಳಸಿಕೊಳ್ಳುತ್ತದೆ ಎಂದು ವಿವಿರಿಸಿದರು.

ಆಗ ಮಧ್ಯಪ್ರವೇಶಿಸಿದ ಕಾಂಗ್ರೆಸ್ ಸದಸ್ಯ ಆರ್. ವಿ. ದೇಶಪಾಂಡೆ ಇದು ಒಳ್ಳೆಯ ಮಸೂದೆ. ಆದರೆ ಇದರ ಅನುಷ್ಠಾನ ಕಷ್ಟವಾಗಲಿದೆ. ಉಳಿದ ಇಲಾಖೆಗಳು ಇದಕ್ಕೆ ಅನುಮತಿಸುತ್ತವೆ ಎಂಬ ನಂಬಿಕೆಯಿಲ್ಲ ಎಂದು ತಿಳಿಸಿದರು.

ಅದಕ್ಕೆ ಮುಖ್ಯಮಂತ್ರಿಯವರು, 2013ರಲ್ಲಿ ಎಲೆಕ್ಟ್ರಾನಿಕ್ ಸಿಟಿಯ ಟೌನ್‌ಶಿಫ್‌ಗೆ ಸಂಬಂಧಪಟ್ಟಂತೆ ನೀವೆ ಒಂದು ಬಿಲ್ ತಂದಿದ್ದೀರಿ. ಅದು ಅದರನ್ವಯವೇ ಎಲೆಕ್ಟ್ರಾನಿಕ್ ಸಿಟಿ ಅಭಿವೃದ್ಧಿ ಪಡಿಸಲಾಗಿದೆ. ಅದೇ ಮಾದರಿಯಲ್ಲಿ ಈ ಮಸೂದೆಯನ್ನು ತರಲಾಗಿದೆ. ಇದು ಬಂಡವಾಳ ಹೂಡಿಕೆದರರರನ್ನು ಆಕರ್ಷಿಸುತ್ತದೆ ಎಂದರು. ಅಂಗೀಕಾರ  ಬಳಿಕ ಈ ಮಸೂದೆಯನ್ನು ಧ್ವನಿಮತದ ಮೂಲಕ ಸದನದಲ್ಲಿ ಸರ್ವಾನುಮತದಿಂದ ಅಂಗೀಕರಿಸಲಾಯಿತು.

**ಉದ್ದಿಮೆ ಸ್ಥಾಪಿಸದಿದ್ರೆ ಭೂಮಿ ವಾಪಸ್**: ನಿವೇಶನ ಪಡೆದು ಕೈಗಾರಿಕೆ ಸ್ಥಾಪನೆ ಮಾಡದಿದ್ದರೆ ಅಂತಹ ನಿವೇಶನಗಳನ್ನು ವಾಪಸ್ಸ್ ಪಡೆಯಲಾಗುವುದು. ಈ ಸಂಬಂಧ ಈಗಾಗಲೇ ಪರಿಶೀಲನೆ ನಡೆಸಲಾಗುತ್ತಿದೆ ಎಂದು ಮುಖ್ಯಮಂತ್ರಿಯುವರು ತಿಳಿಸಿದರು. ಕರ್ನಾಟಕ ವಿಶೇಷ ಹೂಡಿಕೆ ಪ್ರದೇಶ ವಿಧೇಯಕ 2022 ಕುರಿತು ಜೆಡಿಎಸ್ ಸದಸ್ಯ ಶಿವಲಿಂಗೇಗೌಡ ಪ್ರಸ್ತಾಪಿಸಿದ ವಿಷಯಕ್ಕೆ ಪ್ರತಿಕ್ರಿಯಿಸಿದ ಅವರು, ರಾಜ್ಯದಲ್ಲಿ ಹಲವಡೆ 8–10 ವರ್ಷಗಳ ಹಿಂದೆಯೇ ಕೆಲ ಹೂಡಿಕೆದಾರರು ಕೈಗಾರಿಕೆ ಸ್ಥಾಪಿಸುವುದಾಗಿ ನಿವೇಶನಗಳನ್ನು ಪಡೆದಿದ್ದಾರೆ. ಜೊತೆಗೆ ನೀರಿನ ಹಂಚಿಕೆ ಪಡೆದು ಬಳಕೆ ಮಾಡಿಕೊಂಡಿಲ್ಲ. ಈವರೆಗೂ ಅಲ್ಲಿ ಕೈಗಾರಿಕೆಗಳನ್ನೇ ಸ್ಥಾಪಿಸಿಲ್ಲ ಇದರಿಂದಾಗಿ ಅಲ್ಲಿ ಬೇರೆ ಕೈಗಾರಿಕೆ ಸ್ಥಾಪಿಸಲು ಅವಕಾಶವಿಲ್ಲದಂತಾಗಿದೆ. ಹೀಗಾಗಿ ರಾಜ್ಯದಲ್ಲಿ ಉದ್ದಿಮೆ ಸ್ಥಾಪನೆ ಮಾಡದ ನಿವೇಶನಗಳು ಎಷ್ಟಿವೆ ಎಂದು ಆಡಿಟ್ ನಡೆಸಲು ಹೇಳಿದ್ದೇನೆ ಎಂದರು.

ಆಧಾರ:ಕನ್ನಡಪ್ರಭ, ದಿನಾಂಕ:28.12.2022

## 50. ಉಗ್ರರ ನಿಗ್ರಹದಲ್ಲಿ ರಾಜಿ ಇಲ್ಲ

ಭಯೋತ್ಪಾದನೆ ನಿಗ್ರಹ ವಿಚಾರದಲ್ಲಿ ಯಾವುದೇ ರಾಜಿ ಇಲ್ಲ. ಆದರೆ, ಉಗ್ರರ ಕೃತ್ಯದ ಬಗ್ಗೆ ಹಗುರವಾಗಿ ಮಾತನಾಡುವುದರಿಂದ ಮುಂದೆ ಆಗುವ ಅನಾಹುತ ಕಡೆಗಣಿಸಲಾಗದು. ಹಾಗಾಗಿ ಭಯೋತ್ಪಾದನೆ ವಿಚಾರವಾಗಿ ಹಗುರ ಮಾತು ಬೇಡ ಎಂದು ಮುಖ್ಯಮಂತ್ರಿಯವರು ವಿಧಾನಸಭೆಯಲ್ಲಿ ಪ್ರತಿಪಾದಿಸಿದರು.

ಇದಕ್ಕೆ ದನಿಗೂಡಿಸಿದ ಸ್ಪೀಕರ್ ವಿಶ್ವೇಶ್ವರ ಹೆಗಡೆ, ಕಾಗೇರಿ ಸಮಾಜದಲ್ಲಿ ಶಾಂತಿ–ಸುವ್ಯವಸ್ಥೆ ಪ್ರೀತಿ ಬೆಳೆಸುವ ವಾತಾವರಣ ಸೃಷ್ಟಿಸುವಂತೆ ಎಲ್ಲರೂ ನಡೆದುಕೊಳ್ಳಬೇಕು. ಜವಾಬ್ದಾರಿಯುತ ಸ್ಥಾನದಲ್ಲಿರುವ 225 ಶಾಸಕರು ಎಚ್ಚರಿಕೆಯಿಂದ ಮಾತನಾಡಬೇಕು. ಬೇಜವಾಬ್ದಾರಿಯಿಂದ ಮಾತನಾಡಿ

ಸಮಾಜದ ಹಿತ ಕಡೆಗಣಿಸಬಾರದು ಎಂದು ಸದಸ್ಯರಿಗೆ ಕಿವಿಮಾತು ಹೇಳುವ ಮೂಲಕ ಚರ್ಚೆಗೆ ತೆರೆ ಎಳೆದರು.

ಮಂಗಳೂರಿನಲ್ಲಿ ಸಂಭವಿಸಿದ ಕುಕ್ಕರ್ ಬಾಂಬ್ ಸ್ಫೋಟ ಪ್ರಕರಣದ ಹಿನ್ನಲೆಯಲ್ಲಿ ರಾಜ್ಯದಲ್ಲಿ ಭಯೋತ್ಪಾದನಾ ಕೃತ್ಯ ತಡೆಗಟ್ಟುವ ಕುರಿತಂತೆ ಬಿಜೆಪಿಯ ಸಿ.ಟಿ.ರವಿ ಸಾರ್ವಜನಿಕ ಮಹತ್ವದ ಜರೂರು ವಿಷಯದಡಿ ವಿಷಯ ಪ್ರಸ್ತಾಪಿಸಿದರು. ಜಾಗತಿಕ ಮಟ್ಟದಲ್ಲಿ ಭಯೋತ್ಪಾದನೆ ಹುಟ್ಟು ಭಾರತದ ಮೇಲಾದ ಪರಿಣಾಮ, ರಾಜ್ಯದಲ್ಲಿ ಸಂಭವಿಸಿದ ಘಟನೆಗಳ ಬಗ್ಗೆ ವಿವರಿಸಿ ಸದನದ ಗಮನ ಸೆಳೆದರು.

ಮಂಗಳೂರು ಹಾಗೂ ರಾಮನಗರದಲ್ಲಿ ಕೆಲವರ ಬಂಧನವಾಗಿದೆ. 2008ರಲ್ಲಿ ಬೆಂಗಳೂರಿನಲ್ಲಿ 8 ಕಡೆ ಲಘು ಬಾಂಬ್ ಸ್ಫೋಟ ಸಂಭವಿಸಿತ್ತು. ಶಾಸಕ ತನ್ವೀರ್ ಸೇಠ್ ಮೇಲೂ ಮಾರಣಾಂತಿಕ ಹಲ್ಲೆ ನಡೆದು ಕೂದಲೆಳೆ ಅಂತರದಲ್ಲಿ ಪ್ರಾಣಾಪಾಯದಿಂದ ಪಾರಾದರೂ. ಸಾಮಾಜಿಕ ಜಾಲತಾಣದಲ್ಲಿ ಒಂದು ಪೋಸ್ಟ್ ಹಾಕಿದ್ದಕ್ಕೆ ಕೆ.ಜಿ. ಹಳ್ಳಿ, ಡಿ.ಜೆ. ಹಳ್ಳಿ ಹೊತ್ತಿ ಉರಿಯಿತು. ಶಾಸಕರ ಮನೆಗೂ ಬೆಂಕಿ ಬಿತ್ತು. ಇಂತಹ ಘಟನೆಗಳು ಕರ್ನಾಟಕ ಸುರಕ್ಷಿತವಲ್ಲ ಎಂಬಂತೆ ಮಾಡಿವೆ ಎಂದರು.

ಘಜ್ನಿ ಮಹಮ್ಮದ್‌ನ ಮನಸ್ಥಿತಿಯವರೇ ಈಗ ಊರು ಸುಡುವ ಕೆಲಸ ಮಾಡಿದರು. ಇವರನ್ನು ಮಾನಸಿಕತೆಯ ಹಿನ್ನೆಲೆಯಲ್ಲಿ ನೋಡಬೇಕೇ ಹೊರತು ಮತಬ್ಯಾಂಕ್ ದೃಷ್ಟಿಯಿಂದ ನೋಡಬಾರದು ಕೆ.ಜಿ.ಹಳ್ಳಿಯಲ್ಲಿ ಹೊತ್ತಿ ಉರಿದ ಬೆಂಕಿ ಬೆಂಗಳೂರಿಗೆ ವಿಸ್ತರಿಸಲು ನಂತರ ರಾಜ್ಯವ್ಯಾಪಿ ಹರಡಲು ಹೆಚ್ಚು ಸಮಯ ಬೇಕಿಲ್ಲ ಎಂದು ಆತಂಕ ವ್ಯಕ್ತಪಡಿಸಿದರು.

ಪರಿಸ್ಥಿತಿ ಹೀಗಿರುವಾಗ ಕುಕ್ಕರ್ ಸ್ಫೋಟ ಪ್ರಕರಣದ ಬಗ್ಗೆ ಸದನದ ಸದಸ್ಯರು ಆದ ರಾಷ್ಟ್ರೀಯ ಪಕ್ಷವೊಂದರ ರಾಜ್ಯಾಧ್ಯಕ್ಷರು ಹಿರಿಯ ಪೊಲೀಸ್ ಅಧಿಕಾರಿಯ ಹೇಳಿಕೆಗೆ ಆಕ್ಷೇಪ ವ್ಯಕ್ತಪಡಿಸಿದ್ದಾರೆ. ಮತಿಯ ಉನ್ಮಾದದ ಲಾಭ ಬಳಸಿಕೊಂಡು ಮತದ ಬೆಳೆ ಬೆಳೆಯುವಂತಹ ಹೇಳಿಕೆ ಸರಿಯಲ್ಲ ಕೂಡಲೇ ಆ ಸದಸ್ಯರು ಹೇಳಿಕೆ ವಾಪಸ್ ಪಡೆದು ರಾಜ್ಯದ ಜನರ ಬೇಷರತ್ ಕ್ಷಮೆ ಯಾಚಿಸಬೇಕು ಎಂದು ಆಗ್ರಹಿಸಿದರು.

ಕಾಂಗ್ರೆಸ್‌ನ ಡಿ.ಕೆ. ಶಿವಕುಮಾರ್, ಸಿ.ಟಿ. ರವಿ ಅವರ ಮಾತು ಅವರ ಅಜೆಂಡಾ ಬಗ್ಗೆ ನಮ್ಮ ತಕರಾರಿಲ್ಲ, ಹಣ ಒಡವೆ, ಚಪ್ಪಲಿ ಇತರೆ ವಸ್ತು ಕದಿಯುವುದನ್ನು ಕೇಳಿದ್ದೇವೆ. ಆದರೆ, ಮತದಾರರ ಮಾಹಿತಿಯನ್ನೇ ಕಳವು ಕೇಳಿರಲಿಲ್ಲ. ಚಿಲುಮೆ ಸಂಸ್ಥೆ ಮೂಲಕ ನಿಯಮಬಾಹಿರವಾಗಿ 8000 ಬಿಎಲ್‌ಒ ನೇಮಿಸಿ ಮತದಾರರ ಮಾಹಿತಿಯನ್ನು ಅಕ್ರಮವಾಗಿ ಸಂಗ್ರಹಿಸಲಾಗಿದೆ. ನಾವು ಭಯೋತ್ಪಾದನೆಗೆ ನಮ್ಮ ನಾಯಕರನ್ನು ಕಳೆದುಕೊಂಡಿದ್ದು, ಭಯೋತ್ಪಾದನೆ ವಿರುದ್ಧ ಇದ್ದೇವೆ ಎಂದು ಸ್ಪಷ್ಟಪಡಿಸಿದರು.

ಆಗ ಮಧ್ಯ ಪ್ರವೇಶಿಸಿದ ಮುಖ್ಯಮಂತ್ರಿ ಮತದಾರರ ಮಾಹಿತಿ ಕಳವು ಮತದಾರರ ಪಟ್ಟಿಗೆ ಹೊಸ ಸೇರ್ಪಡೆ ರದ್ಧತಿ, ಹೊರರಾಜ್ಯದ ಮತದಾರರ ಸೇರ್ಪಡೆ ರದ್ಧತಿ ಇತರೆ ಚಟುವಟಿಕೆಗಳು ನಮ್ಮ ಸಂಸ್ಕೃತಿಯಲ್ಲ ಅದರಲ್ಲಿ ಅವರಿಗೆ (ಕಾಂಗ್ರೆಸ್) ಹೆಚ್ಚಿನ ಅನುಭವವಿದೆ. ಹಿಂದೆ ಅವರ ಸರ್ಕಾರದ ಅವಧಿಯಲ್ಲೇ 2017ರಲ್ಲಿ ತಹಸೀಲ್ದಾರ್ ಬಿಎಲ್‌ಒ ನೇಮಕ ಮಾಡಿಕೊಂಡು ಎಸ್‌ವಿಇಇಪಿ ಜಾಗೃತಿ ಕಾರ್ಯಕ್ರಮ ನಡೆಸಲು ಅವಕಾಶ ನೀಡಿತ್ತು. ಅದನ್ನು ನಾವು ಮುಂದುವರಿಸಿದ್ದೇವೆ ಎಂದು ಸದನಕ್ಕೆ ಸ್ಪಷ್ಟಪಡಿಸಿದರು.

ಅಕ್ರಮ ಆರೋಪ ಹಿನ್ನೆಲೆಯಲ್ಲಿ ಚಿಲುಮೆ ಸಂಸ್ಥೆಯ ಕಚೇರಿ ಜಪ್ತಿ ಮಾಡಲಾಗಿದ್ದು, ತಪ್ಪಿತಸ್ಥರ ವಿರುದ್ಧವೂ ಕಠಿಣ ಕ್ರಮ ಜರುಗಿಸೋಣ. ಆದರೆ, ಈ ಪ್ರಕರಣದ ವಿಚಾರವಾಗಿ ಭಯೋತ್ಪಾದನೆ ಕೃತ್ಯದ ಬಗ್ಗೆ ಹಗುರವಾಗಿ ಮಾತನಾಡಿ ಮುಚ್ಚಿಹಾಕಲು ಯತ್ನಿಸಲಾಗುತ್ತಿದೆ ಎನ್ನುವುದು ಎಷ್ಟು ಸರಿ. ಶಂಕಿತ ಉಗ್ರನನ್ನು ಅಮಾಯಕ ಎಂದರೆ ಸಹಿಸಿಕೊಳ್ಳಬೇಕೆ ಎಂದು ಕಿಡಿ ಕಾರಿದರು.

ಸರ್ಕಾರ ವಿಷಯಾಂತರ ಮಾಡಲು ಯತ್ನಿಸಿದರೆ ಬಿಡಬೇಡಿ. ನಾವು ವಿಷಯಾಂತರ ಮಾಡುವ ಪ್ರಶ್ನೆಯೇ ಇಲ್ಲ. ಎನ್‌ಐಎ ಪ್ರಕರಣ ತೆಗೆದುಕೊಂಡಿದೆ ಎಂದರೆ ಗಂಭಿರತೆ ಗೊತ್ತಾಗಲಿದೆ. ಚಿಲುಮೆ

ಅಕ್ರಮ ಮುಚ್ಚಿ ಹಾಕುವ ಪ್ರಶ್ನೆಯೇ ಇಲ್ಲ. ಭಯೋತ್ಪಾದನೆ ವಿರುದ್ಧ ಹಗುರವಾಗಿ ಮಾತನಾಡಿ ಮುಂದೆ ಸಂಭವಿಸುವ ಅನಾಹುತ ಕಡೆಗಣಿಸಲಾಗದು ಎಂದು ಹೇಳಿದರು.

ಆಗ ಡಿಕೆಶಿ ಭಯೋತ್ಪಾದಕ ಕೃತ್ಯ ಎಸಗಿದವನನ್ನು ಅಮಾಯಕ ಎನ್ನಲು ನನಗೇನು ತಲೆ ಕೆಟ್ಟಿದೆಯೇ, ಭಯೋತ್ಪಾದನೆ ಮಾತ್ರವಲ್ಲ ನೈತಿಕ ಪೊಲೀಸ್‌ಗಿರಿಯನ್ನು ನಿರಂತರವಾಗಿ ವಿರೋಧಿಸುತ್ತೇವೆ ಎಂದು ಹೇಳಿದರು. ಅದಕ್ಕೆ ಮುಖ್ಯಮಂತ್ರಿಯವರು ಭಯೋತ್ಪಾದನೆ ವಿರೋಧಿಸುವ ನಿಲುವಿದ್ದಿದ್ದರೆ ಈ ರೀತಿ ಮಾತನಾಡುತ್ತಿರಲಿಲ್ಲ ಎಂದು ತಿರುಗೇಟು ನೀಡಿದರು, ಆಗ ಸ್ವಲ್ಪ ಗದ್ದಲ ಉಂಟಾಯಿತು.

ಕಾಂಗ್ರೆಸ್‌ನ ಯು.ಟಿ. ಖಾದರ್ ಭಯೋತ್ಪಾದಕ ಕೃತ್ಯದ ವಿರುದ್ಧ ಮೃದು ಧೋರಣೆಯ ಪ್ರಶ್ನೆಯೇ ಇಲ್ಲ. ಆದರೆ, ಮಂಗಳೂರು ಘಟನೆಯ ಆರೋಪಿ ಈ ಹಿಂದೆ ಅಪರಾಧ ಕೃತ್ಯದಲ್ಲಿ ಭಾಗಿಯಾಗಿ ಜೈಲು ಸೇರಿ, ನಂತರ ಬಿಡುಗಡೆಯಾದ ಬಳಿಕ ಆತನ ಮೇಲೆ ನಿಗಾ ವಹಿಸುವಲ್ಲಿ ಪೊಲೀಸ್ ಇಲಾಖೆ ವಿಫಲವಾಗಿದೆ. ಮೂರು ತಿಂಗಳು ನಾಪತ್ತೆಯಾಗಿದ್ದ ಪೊಲೀಸರಿಗೆ ಗೊತ್ತಿರಲಿಲ್ಲ. ದೇವರ ದಯೆಯಿಂದ ಆಟೋದಲ್ಲೇ ಕುಕ್ಕರ್ ಬಾಂಬ್ ಸ್ಫೋಟವಾಯಿತು. ಒಂದೊಮ್ಮೆ ರೈಲು ನಿಲ್ದಾಣದಲ್ಲಿ ಸಂಭವಿಸಿದ್ದರೆ ಅನಾಹುತ ಊಹಿಸಲಾಗದು. ಭಯೋತ್ಪಾದನೆ ವಿಚಾರದಲ್ಲಿ ರಾಜಕೀಯ ಬೇಡ ಯಾವುದೇ ಅಪರಾಧ ಕೃತ್ಯ ನಡೆದಾಗ ಕೃತ್ಯವಾಗಿ ನೋಡಬೇಕೆ ಹೊರತು ಜಾತಿ ಧರ್ಮ ಪರಿಗಣಿಸಬಾರದು ಎಂದರು.

ಸಮಾಜದ ಹಿತ ಬಯಸುವಂತೆ ಜನಪ್ರತಿನಿಧಿಗಳ ಮಾತು ಇರಬೇಕು. ಭಯೋತ್ಪಾದನೆ ವಿಚಾರದಲ್ಲಿ ರಾಜಿ ಪ್ರಶ್ನೆಯೇ ಇಲ್ಲ ಆದರೆ, ಯಾವುದೇ ಸಂದರ್ಭದಲ್ಲೂ ಹಗುರ ಮಾತುಗಳನ್ನಾಡದಂತೆ ನಿಯಂತ್ರಿಸಿಕೊಳ್ಳಬೇಕು.

ವಿಶ್ವೇಶ್ವರ ಹೆಗಡೆ ಕಾಗೇರಿ, ಸಭಾಧ್ಯಕ್ಷರು.

**ಬಾಂಬ್‌ಗೆ ಜಾತಿ ಧರ್ಮ ಇಲ್ಲ ಕೊಲ್ಲುವುದಷ್ಟೇ ಅದರ ಕೆಲಸ:** ಗೃಹ ಸಚಿವ ಆರಗ ಜ್ಞಾನೇಂದ್ರ ಮಂಗಳೂರು ಪ್ರಕರಣದ ಆರೋಪಿ ಹಿಂದೂ ವ್ಯಕ್ತಿಯೊಬ್ಬರ ಆಧಾರ್ ಕಾರ್ಡ್ ದುರ್ಬಳಕೆ ಮಾಡಿಕೊಂಡು ಮೊಬೈಲ್ ಸಿಮ್ ಪಡೆದಿದ್ದ, ಆತ ನಮ್ಮೂರು ತೀರ್ಥಹಳ್ಳಿಯವನು ಎಂಬುದು ದುರ್ದೈವ. ನನ್ನ ಮೇಲೆ ಬಾಂಬ್ ಹಾಕಿಲ್ಲ ಪುಣ್ಯ. ಶಿವಮೊಗ್ಗದಲ್ಲಿ ಈಶ್ವರಪ್ಪ ಅವರ ಮನೆಯಿಂದ ಒಂದು ಫರ್ಲಾಂಗ್ ದೂರದಲ್ಲಿ ಬಾಂಬ್‌ನ ಪ್ರಯೋಗಾರ್ಥ ಪರೀಕ್ಷೆ ನಡೆಸಿದ್ದಾನೆ ಎಂದು ಹೇಳಿದರು. ಭಯೋತ್ಪಾದಕರ ಬಗ್ಗೆ ಆಡುವ ಸಣ್ಣ ಒಳ್ಳೆಯ ಮಾತು ಸಹ ಪ್ರಚೋದನೆ ಕೊಟ್ಟಾಂತಾಗಲಿದೆ. ಈ ವಿಚಾರದಲ್ಲಿ ರಾಜಕಾರಣ ಬೇಡ. ಬಾಂಬ್‌ಗೆ ಜಾತಿ, ಧರ್ಮವಿಲ್ಲ. ಎಲ್ಲರನ್ನೂ ಕೊಲ್ಲುವುದಷ್ಟೇ ಅದರ ಕೆಲಸ. ಆರೋಪಿಯ ಜಾಡು ಪತ್ತೆ ಹಚ್ಚಿದ ರಾಜ್ಯ ಪೊಲೀಸ್ ಮಹಾನಿದೇಶಕರನ್ನು ಪ್ರಶಂಸಿಸುವ ಬದಲಿಗೆ ವಿಶ್ವಾಸಾರ್ಹತೆಯನ್ನು ಪ್ರಶ್ನಿಸಿದನ್ನು ತೀವ್ರವಾಗಿ ಖಂಡಿಸುತ್ತೇನೆ ಎಂದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:28.12.2022

## 51. ಭ್ರಷ್ಟರ ವಿರುದ್ಧ ಕ್ರಮ : ಭರವಸೆಗಳ ಸಮಿತಿ ಅತೃಪ್ತಿ

ಅವ್ಯವಹಾರ ಹಣ ದುರುಪಯೋಗದಂತಹ ಪ್ರಕರಣಗಳಲ್ಲಿ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳದೇ ಅಂತಹ ಆರೋಪಿಗಳು ಸರ್ಕಾರದ ಎಲ್ಲ ಸೌಲಭ್ಯ ಪಡೆದುಕೊಳ್ಳಲು ಅವಕಾಶ ಕಲ್ಪಿಸಿರುವ ಕ್ರಮಕ್ಕೆ ವಿಧಾನಸಭೆಯ ಭರವಸೆಗಳ ಸಮಿತಿ ಆಕ್ಷೇಪ ವ್ಯಕ್ತಪಡಿಸಿದೆ.

ಬಿಜೆಪಿಯ ಕೆ.ರಘುಪತಿ ಭಟ್ ಅಧ್ಯಕ್ಷತೆಯ ಸಮಿತಿಯು ಲೋಕೋಪಯೋಗಿ, ಆರ್ಥಿಕ, ವಸತಿ, ಸಾರಿಗೆ ಇಲಾಖೆಗಳಿಗೆ ಸಂಬಂಧಿಸಿದಂತೆ ಸಿದ್ಧಪಡಿಸಿದ ವರದಿಯನ್ನು ವಿಧಾನಸಭೆಯಲ್ಲಿ ಮಂಡಿಸಲಾಯಿತು.

ವಿಧಾನಸಭೆಯಲ್ಲಿ ಪ್ರಶ್ನೋತ್ತರ ಗಮನಸೆಳೆಯುವ ಸೂಚನೆ, ಬಜೆಟ್ ಮೇಲಿನ ಚರ್ಚೆ ವೇಳೆ ಸಚಿವರು ನೀಡಿದ ಭರವಸೆ ಈಡೇರಿವೆಯೇ ಎಂಬ ಬಗ್ಗೆ ಸಮಿತಿ ಪರಿಶೀಲಿಸಿದೆ. ಇಲಾಖೆ ಅಧಿಕಾರಿಗಳಿಂದ ವಿವರಣೆಯನ್ನೂ ಕೇಳಿದೆ. ಅದರ ಆಧಾರದ ಮೇಲೆ ತನ್ನ ತಕರಾರರನ್ನು ದಾಖಲಿಸಿದೆ. ಸಚಿವರು ನೀಡಿದ ಭರವಸೆಗಳು ಅನೇಕ ವರ್ಷ ಕಳೆದರೂ ಈಡೇರಿಲ್ಲ ಎಂದು ಸಮಿತಿ ಆಕ್ಷೇಪಿಸಿದೆ.

ಅದರಲ್ಲೂ ಅವ್ಯವಹಾರದ ಪ್ರಕರಣಗಳಲ್ಲಿ ಕ್ರಮವನ್ನೇ ಜರುಗಿಸಿಲ್ಲ ಇಲಾಖೆಯ ಮುಖ್ಯಸ್ಥರೇ ತಮ್ಮ ಅಧೀನ ಸಿಬ್ಬಂದಿಗೆ ರಕ್ಷಣೆ ನೀಡುವಲ್ಲಿ ಸಹಕಾರ ನೀಡುತ್ತಿರಬಹುದು ಎಂದು ಸಮಿತಿ ಅಭಿಪ್ರಾಯಪಟ್ಟಿದೆ.

2011–12ರಲ್ಲಿ ಲೋಕೋಪಯೋಗಿ ಇಲಾಖೆಯ ಮಾಗಡಿ ಉಪವಿಭಾಗದಲ್ಲಿ ಕಾಮಗಾರಿಗಳಿಗೆ ಟೆಂಡರ್ ಕರೆಯುವಾಗ ನಿಯಮಗಳನ್ನು ಉಲ್ಲಂಘಿಸಲಾಗಿತ್ತು. ಈ ಬಗ್ಗೆ ಸದನ ಸಮಿತಿ ರಚಿಸಿ ವಿಚಾರಣೆ ನಡೆಸಲಾಗಿತ್ತಲ್ಲದೇ ವರದಿಯನ್ನು ಸದನದಲ್ಲಿ ಮಂಡಿಸಲಾಗಿತ್ತು. ಅಧಿಕಾರಿಗಳ ಮೇಲೆ ಕ್ರಮ ಜರುಗಿಸಲಾಗಿದೆಯೇ ಎಂದು 2013ರಲ್ಲಿ ಶಾಸಕರಾಗಿದ್ದ ಕೆ.ಬಿ. ಕೋಳಿವಾಡ ಪ್ರಶ್ನೆ ಕೇಳಿದ್ದರು.

ನಿಯಮ ಉಲ್ಲಂಘನೆ ಮತ್ತು ಹಣ ದುರುಪಯೋಗವಾಗಿರುವ ಬಗ್ಗೆ ಸದನ ಸಮಿತಿಯ ಶಿಫಾರಸ್ಸಿನಂತೆ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ ಕೈಗೊಳ್ಳಲು ದೋಷಾರೋಪಣಾ ಪಟ್ಟಿ ಸಲ್ಲಿಸಲಾಗಿತ್ತು. ಮುಖ್ಯ ಎಂಜಿನಿಯರ್ ಸೇರಿದಂತೆ 15 ಜನ ಅಧಿಕಾರಿ/ನೌಕರರ ವಿರುದ್ಧ ಹಣ ದುರುಪಯೋಗದ ಆರೋಪ ಹೊರಿಸಲಾಗಿತ್ತು.

ಈ ಪೈಕಿ 12 ಜನ ಅಧಿಕಾರಿಗಳ ವಿರುದ್ಧ ಜಂಟಿ ವಿಚಾರಣೆಗೆ 2016ರಲ್ಲಿ ಆದೇಶಿಸಲಾಗಿತ್ತು. ಅಂದು ಲೋಕೋಪಯೋಗಿ ಇಲಾಖೆಯ ಆಂತರಿಕ ಲೆಕ್ಕ ಪರಿಶೋಧಕರಾಗಿದ್ದ ಆರ್. ಗೋವಿಂದರಾಜು ಅವರ ಹೆಸರು ಇತ್ತು. ಇವರು ರಾಜ್ಯ ಲೆಕ್ಕಪತ್ರ ಇಲಾಖೆಯ ಜಂಟಿ ನಿಯಂತ್ರಕರಾಗಿದ್ದು, ಇವರ ವಿರುದ್ಧದ ತನಿಖೆಯನ್ನು ಮಾತೃ ಇಲಾಖೆಯಾದ ಆರ್ಥಿಕ ಇಲಾಖೆಗೆ ವರ್ಗಾಯಿಸಲಾಗಿತ್ತು. ಆರ್ಥಿಕ ಇಲಾಖೆಯು ತನಿಖೆ ನಡೆಸಲು ಲೋಕಾಯುಕ್ತಕ್ಕೆ ವಹಿಸಿತ್ತು. ಏತನ್ಮಧ್ಯೆ, 2021ರ ಮಾರ್ಚ್ 3 ರಂದು ಆಡಳಿತ ಮತ್ತು ಸಿಬ್ಬಂದಿ ಇಲಾಖೆ ಹೊರಡಿಸಿದ್ದ ಆದೇಶದಲ್ಲಿ ಗೋವಿಂದರಾಜು ಹೆಸರನ್ನು ಪಟ್ಟಿಯಿಂದ ಕೈಬಿಟ್ಟು, ತಿದ್ದುಪಡಿ ಮಾಡಲಾಗಿದೆ. ಈ ರೀತಿಯ ಕ್ರಮ ಸರಿಯಲ್ಲ ಎಂದು ವರದಿ ಹೇಳಿದೆ.

ಆಧಾರ:ಪ್ರಜಾವಾಣಿ, ದಿನಾಂಕ:29.12.2022

## 52. ಕಾಲೋನಿಗಿಂತ ಸ್ಮಶಾನ ಅಭಿವೃದ್ಧಿಗೆ ಹೆಚ್ಚು ಅನುದಾನ

ಸಮಾಜ ಕಲ್ಯಾಣ ಇಲಾಖೆಯು ಪರಿಶಿಷ್ಟರು ನೆಲೆಸಿರುವ ಕಾಲೋನಿಗಳ ಅಭಿವೃದ್ಧಿಗಿಂತಲೂ ಸ್ಮಶಾನ ಅಭಿವೃದ್ಧಿಗೆ ಹೆಚ್ಚಿನ ಅನುದಾನ ನೀಡಿರುವ ಬಗ್ಗೆ ಕಾಂಗ್ರೆಸ್‌ನ ಕೃಷ್ಣ ಭೈರೇಗೌಡ ಅವರು ವಿಧಾನಸಭೆಯ ಗಮನ ಸೆಳೆದರು.

ಪ್ರಶ್ನೋತ್ತರ ಕಲಾಪಗಳಲ್ಲಿ ಕಾಂಗ್ರೆಸ್‌ನ ರೂಪಕಲಾ ಶಶಿಧರ್ ಪರ ಪ್ರಶ್ನೆ ಕೇಳಿದ ಅವರು ಕೆಜಿಎಫ್ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಸ್ಮಶಾನಗಳ ಅಭಿವೃದ್ಧಿಗೆ ನೀಡಿರುವ ಅನುದಾನ ರೂ.21 ಕೋಟಿ ಆದರೆ, ಪರಿಶಿಷ್ಟರ ಕಾಲೋನಿಗಳಿಗೆ ಕೊಟ್ಟಿರುವ ಅನುದಾನ ಕೇವಲ ರೂ.4 ಕೋಟಿ. ಸ್ಮಶಾನಕ್ಕಿಂತ ಬದುಕಿರುವವರ ನೆಲೆ ಅಭಿವೃದ್ಧಿ ಪಡಿಸಬೇಕಲ್ಲವೇ ಎಂದು ಹೇಳಿದರು.

ರೂ.21 ಕೋಟಿ ವೆಚ್ಚದಲ್ಲಿ ಕೈಗೊಳ್ಳಲಾದ ಸ್ಮಶಾನಗಳ ಅಭಿವೃದ್ಧಿ ಕಾಮಗಾರಿಗೆ 4ಜಿ ವಿನಾಯಿತಿ ಪಡೆದು ಟೆಂಡರ್ ಇಲ್ಲದೆಯೇ ಕಾಮಗಾರಿ ನಡೆಸಲಾಗುತ್ತಿದೆ. ಟೆಂಡರ್ ಇಲ್ಲದ ಕಾರಣ ಭಷ್ಟಾಚಾರ ನಡೆದಿರುವ ಸಾಧ್ಯತೆಯಿದೆ. ಕೂಡಲೇ ಕಾಮಗಾರಿ ಸ್ಥಗಿತಗೊಳಿಸಿ ಈ ಬಗ್ಗೆ ತನಿಖೆ ನಡೆಸಬೇಕು ಎಂದು ಆಗ್ರಹಿಸಿದರು.

ಇದಕ್ಕೆ ಉತ್ತರಿಸಿದ ಸಚಿವ ಕೋಟ ಶ್ರೀನಿವಾಸ ಪೂಜಾರಿ ಟೆಂಡರ್ ಇಲ್ಲದೇ ಕಾಮಗಾರಿ ನಡೆಯುತ್ತಿರುವ ಬಗ್ಗೆ ಈಗಾಗಲೇ ಮುಖ್ಯಮಂತ್ರಿಗಳೊಂದಿಗೆ ಚರ್ಚಿಸಿದ್ದೇನೆ. ಈ ಟೆಂಡರ್ ಪ್ರಕ್ರಿಯೆಯನ್ನು ಲೋಕೋಪಯೋಗಿ ಇಲಾಖೆಯಿಂದ ನಡೆಸಲಾಗುವುದು. ಅಗತ್ಯವಿದ್ದರೆ ತನಿಖೆಗೂ ಸಿದ್ಧ ಎಂದು ಭರವಸೆ ನೀಡಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:29.12.2022

## 53. ಆಸ್ತಿ ನೋಂದಣಿ ಅಕ್ರಮ ತಡೆಗೆ ಹೊಸ ಪದ್ಧತಿ

ಕಂದಾಯ ಇಲಾಖೆಯಲ್ಲಿ ಹಲವಾರು ಸುಧಾರಣೆ ಸರಳೀಕರಣ ಮಾಡುವ ಮೂಲಕ ಜನಸ್ನೇಹಿ ಮಾಡಲಾಗುತ್ತಿದ್ದು, ಮುಂದುವರೆದು ಕೆ–2 ಸಾಫ್ಟ್‌ವೇರ್ ಮೂಲಕ ಜಮೀನು, ಆಸ್ತಿಗಳನ್ನು ಅಪ್‌ಲೋಡ್ ಮಾಡುವ ವ್ಯವಸ್ಥೆಯನ್ನು ಜಾರಿಗೆ ತರಲು ಉದ್ದೇಶಿಸಿದ್ದು, ಪ್ರಾಯೋಗಿಕವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲಾಗಿದೆ.

ಈ ಪ್ರಯೋಗ ಯಶಸ್ವಿಯಾದರೆ ರಾಜ್ಯಾದ್ಯಂತ ಜಾರಿಗೆ ತರಲಾಗುವುದು ಎಂದು ಕಂದಾಯ ಸಚಿವ ಆರ್. ಆಶೋಕ್ ತಿಳಿಸಿದರು. ಕಾಂಗ್ರೆಸ್‌ನ ಗೋವಿಂದರಾಜು ಪರವಾಗಿ ಕೆ.ಎ. ತಿಪ್ಪೇಸ್ವಾಮಿ ಕೇಳಿದ ಪ್ರಶ್ನೆಗೆ ಉತ್ತರಿಸಿದ ಸಚಿವರು ಕೆ–2 ಸಾಫ್ಟ್‌ವೇರ್‌ನಲ್ಲಿ ಕಂದಾಯ ಇಲಾಖೆಯ ಎಲ್ಲ ಆಸ್ತಿ ದಾಖಲಾಗಿರುತ್ತದೆ ಯಾರೂ ಕೂಡ ದಾಖಲೆಗಳನ್ನು ಸಲ್ಲಿಸುವ ಪ್ರಶ್ನೆಯೇ ಬರುವುದಿಲ್ಲ. ಒಂದು ಆಸ್ತಿಯ ಮೇಲೆ ಜನರು ಹಕ್ಕು ಪ್ರತಿಪಾದಿಸಿ ನಕಲಿ ದಾಖಲೆ ಸಲ್ಲಿಸಲು ಅಥವಾ ತಿದ್ದುಪಡಿ ಮಾಡಲು ಅವಕಾಶವೇ ಇರುವುದಿಲ್ಲ ಎಂದರು.

ಆದರೆ ಯಾವುದೇ ಒಂದು ಕುಟುಂಬದ ಸದಸ್ಯರು ತಮ್ಮೊಳಗೆ ಆಸ್ತಿಯನ್ನು ಹಂಚಿಕೆ ಮಾಡಿ ನಕ್ಷೆಯಲ್ಲಿ ಗುರುತಿಸುವ ಜೊತೆಗೆ ಆಧಾರ್ ಮಾಹಿತಿಯನ್ನು ಆ್ಯಪ್‌ಮೂಲಕ ಅಪ್‌ಲೋಡ್ ಮಾಡಿದರೆ ಅವರ ಹೆಸರಿಗೆ ಆಸ್ತಿ ಹಂಚಿಕೆ ಮಾಡಲಾಗುವುದು ಎಂದು ತಿಳಿಸಿದರು. ತಾವು ಸಚಿವರಾದ ನಂತರ ಇಲಾಖೆಯಲ್ಲಿ ಹಲವಾರು ಸುಧಾರಣೆ ತರಲಾಗಿದೆ. ಟೇಬಲ್‌ಗಳ ಸಂಖ್ಯೆ ಕಡಿಮೆಯಾದರೆ ಭ್ರಷ್ಟಾಚಾರ ಕಡಿಮೆಯಾಗುತ್ತದೆ ಕಡತಗಳ ವಿಳಂಬ ಕಡಿಮೆ ಮಾಡಲಾಗಿದೆ ಎಂದರು.

**ಸರ್ವೆಯರ್ ನೇಮಕ:** ಪೋಡಿ ಸೇರಿದಂತೆ ಹಲವಾರು ಪ್ರಕರಣಗಳ ಇತ್ಯರ್ಥಕ್ಕೆ ಸರ್ವೇಯರ್ ಕೊರತೆ ತೀವ್ರವಾಗಿತ್ತು. ಈಗ 3000 ಸರ್ವೇಯರ್‌ಗಳನ್ನು ಮೂರು ವರ್ಷದ ಅವಧಿಗೆ ನೇಮಕ ಮಾಡಿಕೊಳ್ಳಲಾಗಿದೆ. ಇವರಿಗೆ ನಿರ್ದಿಷ್ಟ ಕೆಲಸವನ್ನು ಮಾತ್ರ ನೀಡಲಾಗುವುದು. ಒಂದು ಆಸ್ತಿಯ ಸರ್ವೆಗೆ ರೂ.1200 ನೀಡಲಾಗುವುದು ಎಂದು ಪ್ರಶ್ನೆಯೊಂದಕ್ಕೆ ಉತ್ತರಿಸಿದರು.

**ಸರ್ವೇ ನಂಬರ್‌ಗಳಲ್ಲಿ ಪಿ. ನಂಬರ್‌ಗೆ ಕೋಕ್:** ರಾಜ್ಯದಲ್ಲಿ ಗೋಮಾಳ ಅಥವಾ ಸರ್ಕಾರಿ ಭೂಮಿಯಲ್ಲಿ ಉಳುಮೆ ಮಾಡುತ್ತಿರುವ ರೈತರಿಗೆ ಪಿ. ನಂ (ಪೈಕಿ ನಂ.) ತೆಗೆದು ಹೊಸ ಸರ್ವೇ ನಂಬರ್ ನೀಡುವ ಪದ್ಧತಿಯನ್ನು ರಾಜ್ಯಾದ್ಯಂತ ಜಾರಿಗೆ ತರಲು ಚಿಂತನೆ ಮಾಡಲಾಗುತ್ತಿದೆ ಎಂದು ಕಂದಾಯ ಸಚಿವ ಆರ್. ಅಶೋಕ್ ತಿಳಿಸಿದ್ದಾರೆ.

ಗೋಮಾಳ ಜಮೀನಿನಲ್ಲಿ ಹಲವಾರು ದಶಕಗಳಿಂದ ರೈತರು ಕೃಷಿ ಮಾಡುತ್ತಿದ್ದಾರೆ. ಆದರೆ, ಈ ಭೂಮಿ ಆಧರಿಸಿ ಸಾಲ ಪಡೆಯುವುದು ಸೇರಿದಂತೆ ಯಾವುದೇ ಸೌಲಭ್ಯ ಸಿಗುತ್ತಿಲ್ಲ. ಆದರೆ ರಾಜ್ಯದ ಕೋಲಾರ ಜಿಲ್ಲೆಗೆ ಮಾತ್ರ ಪಿ. ನಂಬರ್ ತೆಗೆದು ಹೊಸ ಸರ್ವೇ ನಂಬರ್ ಕೊಡುವ ಮೂಲಕ ಕೆಲವು ಸೌಲಭ್ಯ ನೀಡಲಾಗುತ್ತಿದೆ. ರಾಜ್ಯಾದ್ಯಂತ ಈ ವ್ಯವಸ್ಥೆ ಜಾರಿಗೆ ತರಲು ಯೋಚಿಸಲಾಗುತ್ತಿದೆ. ವಿಶೇಷವಾಗಿ ಗೋಮಾಳ ಅಥವಾ ಸರ್ಕಾರಿ ಜಮೀನಿನ ಪ್ರಮಾಣ ಇರುವುದಕ್ಕಿಂತ ಕಡಿಮೆ ಜಮೀನನ್ನು ರೈತರಿಗೆ ಕೊಟ್ಟಿದ್ದರೆ ಮಾತ್ರ ಪಿ.ನಂ ಕೊಡುವ ಚಿಂತನೆ ಇದೆ ಎಂದರು.

ಕೆಲವು ಕಡೆ ನಕಲಿ ದಾಖಲೆ ಸೃಷ್ಟಿಸಿರುವ ಪರಿಣಾಮ ಗೋಮಾಳ ಪ್ರದೇಶ ಇರುವ ವಿಸ್ತೀರ್ಣಕ್ಕಿಂತ ಹೆಚ್ಚು ಪ್ರದೇಶದ ಹಕ್ಕು ಕೇಳಿ ಅರ್ಜಿ ಸಲ್ಲಿಕೆ ಮಾಡಲಾಗುತ್ತಿದೆ. ಇಂತಹ ಕಡೆ ಪಿ ನಂಬರ್ ಕೊಡುವುದು ಕಷ್ಟ, ಇದಕ್ಕಾಗಿ ಸರ್ವೇ ಕಾರ್ಯ ಮಾಡಬೇಕಾಗುತ್ತದೆ. ಜೊತೆ ಕೇವಲ ಸುತ್ತೋಲೆಯಿಂದ ಸಮಸ್ಯೆ ಬಗೆಹರಿಸಲು ಅಸಾಧ್ಯ. ಹೊಸ ಕಾಯ್ದೆ ಜಾರಿಗೆ ತರಲು ಜನಪ್ರತಿನಿಧಿಗಳ ಸಭೆ ಕರೆದು ಸೂಕ್ತ ಪರಿಹಾರ ಕಂಡುಕೊಳ್ಳಲಾಗುವುದು ಎಂದು ಹೇಳಿದರು.

ಆಧಾರ:ಕನ್ನಡಪ್ರಭ. ದಿನಾಂಕ:29.12.2022

## 54. ಕಾವೇರಿ–2 ಆನ್‌ಲೈನ್ ಸೇವೆ ಶೀಘ್ರವೇ ರಾಜ್ಯಕ್ಕೆ ವಿಸ್ತರಣೆ

ಆಸ್ತಿ ಮೌಲ್ಯ ಮಾಪನ, ನೋಂದಣಿ ಹಾಗೂ ವಹಿವಾಟು ಸೇವೆಯನ್ನು ಆನ್‌ಲೈನ್‌ನಲ್ಲಿ ಒದಗಿಸುವ ಕಾವೇರಿ–2 ಪೋರ್ಟಲ್ ಹೊಸದಾಗಿ ಅಭಿವೃದ್ಧಿಪಡಿಸಿದ್ದು, ಶೀಘ್ರವೇ ರಾಜ್ಯಕ್ಕೆ ವಿಸ್ತರಣೆಯಾಗಲಿದೆ ಎಂದು ಕಂದಾಯ ಸಚಿವ ಆರ್. ಅಶೋಕ್ ಪ್ರಕಟಿಸಿದರು.

ವಿಧಾನ ಪರಿಷತ್‌ನಲ್ಲಿ ಜೆಡಿಎಸ್‌ನ ಗೋವಿಂದರಾಜು ಪರವಾಗಿ ಕೆ.ಎ. ತಿಪ್ಪೇಸ್ವಾಮಿ ಕೇಳಿದ ಪ್ರಶ್ನೆಗೆ ಉತ್ತರಿಸಿದ ಅವರು ಬಳ್ಳಾರಿ ಜಿಲ್ಲೆಯಲ್ಲಿ ಕಾವೇರಿ–2 ಪ್ರಾಯೋಗಿಕವಾಗಿ ಅನುಷ್ಠಾನಕ್ಕೆ ಬಂದಿದ್ದು, ಒಂದು ತಿಂಗಳ ಕಾಲಮಿತಿಯಿದೆ. ಸಾಧಕ ಬಾಧಕ ಪರಿಶೀಲಿಸಿ ಅಗತ್ಯವಿದ್ದರೆ ಪರಿಷ್ಕರಿಸಿ ರಾಜ್ಯದ ಜನರ ಬಳಕೆಗೆ ಅನುವು ಮಾಡಿಕೊಡಲಾಗುವುದು ಎಂದರು.

ಹೊಸ ತಂತ್ರಜ್ಞಾನ ಬಳಸಿಕೊಂಡು ಕಾವೇರಿ–2 ಪೋರ್ಟಲ್ ಸುಧಾರಿಸಲಾಗಿದೆ. ಜನಸ್ನೇಹಿ, ಸರಳ ಮತ್ತು ಪಾರದರ್ಶಕ ಕ್ರಮಗಳನ್ನು ಒಳಗೊಂಡಿದೆ. ಆಸ್ತಿ ನೋಂದಣಿಗಾಗಿ ಸಬ್ ರಿಜಿಸ್ಟಾರ್ ಕಚೇರಿಗೆ ಅಲೆಯಬೇಕಿಲ್ಲ. ಬೋಗಸ್ ದಾಖಲೆಗಳ ಹಾವಳಿಯು ತಪ್ಪಲಿದೆ ಎಂದು ವಿವರಿಸಿದರು.

**ಉನ್ನತ ಮಟ್ಟದ ಸಭೆ:** ದಕ್ಷಿಣಕನ್ನಡ, ಉಡುಪಿ, ಕೊಡಗು, ಶಿವಮೊಗ್ಗ ಮತ್ತಿತರ ಜಿಲ್ಲೆಗಳ ಕುಮ್ಕಿ, ದಾಣಿ, ಕಾಣಿ, ಸೊಪ್ಪಿನ ಬೆಟ್ಟ ಜಮ್ಮಾ ಜಮೀನಿನಲ್ಲಿ ಸಾಗುವಳಿ ಸಕ್ರಮಕ್ಕೆ ಸಂಬಂಧಿಸಿದಂತೆ ನನ್ನದೇ ಅಧ್ಯಕ್ಷತೆಯಲ್ಲಿ ಸಚಿವ ಸಂಪುಟದ ಉಪ ಸಮಿತಿ ರಚನೆಯಾಗಿದೆ.

ಸಮಿತಿ ಈಗಾಗಲೇ ಎರಡು ಸುತ್ತಿನ ಸಭೆ ನಡೆಸಿದ್ದು, ನಾಲ್ಕೂವರೆ ಲಕ್ಷ ಎಕರೆ ಅಧೀಕ ಜಮೀನು ಸಾಗುವಳಿ ಸಕ್ರಮಕ್ಕೆ ಹಲವು ಕಾನೂನು ತೊಡಕುಗಳಿವೆ. ಮತ್ತೊಂದು ಸುತ್ತಿನ ಸಭೆ ಅಧಿಕಾರಿಗಳ ಜೊತೆ ನಡೆಸಿ ಕಾನೂನಾತ್ಮಕ ಅಡ್ಡಿ ನಿವಾರಿಸಲಾಗುವುದು ಎಂದು ಆರ್ ಅಶೋಕ್ ಹೇಳಿದರು.

ಬಿಜೆಪಿಯ ಕೆ.ಪ್ರತಾಪಸಿಂಹ ನಾಯಕ್ ಕೇಳಿದ ಪ್ರಶ್ನೆಗೆ ಪ್ರತಿಪಕ್ಷ ನಾಯಕ ಬಿ.ಕೆ. ಹರಿಪ್ರಸಾದ್ ಧ್ವನಿಗೂಡಿಸಿದಾಗ ಪ್ರತಿಕ್ರಿಯಿಸಿದ ಅವರು, ಅರಣ್ಯ ಇಲಾಖೆ ಆಕ್ಷೇಪ ಭೂರಹಿತರ ಸಮಸ್ಯೆ ಹೆಚ್ಚಿನ ಪ್ರಮಾಣದ ಭೂಹಿಡುವಳಿ ಮತ್ತಿತರ ಅಡೆತಡೆಗಳಿವೆ ಎಂಬ ಮಾಹಿತಿ ನೀಡಿದರು.

ಅಂತಿಮವಾಗಿ ಅಧಿಕಾರಿಗಳ ಜೊತೆಗೆ ಸಭೆ ನಡೆಸಿದ ನಂತರ ಸಂಬಂಧಿಸಿದ ಸಚಿವರು ಶಾಸಕರ ಜೊತೆಗೆ ಉನ್ನತ ಮಟ್ಟದ ಸಭೆ ಕರೆಯಲು ನಿರ್ಧರಿಸಿದ್ದು, ಕಾನೂನು ಸಮಸ್ಯೆ ಇತ್ಯರ್ಥದ ಮಾರ್ಗೋಪಾಯ ಕಂಡುಕೊಳ್ಳಲಾಗುವುದು ಎಂದು ಆರ್. ಅಶೋಕ್ ತಿಳಿಸಿದರು.

**1 ಲಕ್ಷ ಕಂದಾಯ ಗ್ರಾಮಗಳ ಘೋಷಣೆ:** ಮುಂದಿನ ಒಂದು ತಿಂಗಳ ಅವಧಿಯಲ್ಲಿ ಒಂದು ಲಕ್ಷ ಲಂಬಾಣಿ ತಾಂಡಾ, ಅಲೆಮಾರಿ ಜನರು ವಾಸಿಸುವ ಹಟ್ಟಿಗಳನ್ನು ಕಂದಾಯ ಗ್ರಾಮಗಳನ್ನಾಗಿ ಘೋಷಿಸಲಾಗುವುದು ಎಂದು ಕಂದಾಯ ಸಚಿವ ಆರ್. ಅಶೋಕ್ ಹೇಳಿದರು.

ವಿಧಾನ ಪರಿಷತ್‌ನಲ್ಲಿ ಭೂಕಂದಾಯ ಮೂರನೇ ತಿದ್ದುಪಡಿ ವಿಧೇಯಕದ ಮೇಲೆ ಚರ್ಚೆಗೆ ಆರ್. ಅಶೋಕ್ ಉತ್ತರಿಸಿ ಕಾಫಿ ತೋಟದ ಮಧ್ಯೆ ಸಿಲುಕಿರುವ ಸರ್ಕಾರಿ ಜಮೀನು 30 ವರ್ಷಗಳ

ಗುತ್ತಿಗೆ ನೀಡಿ ರೂ.300 ರಿಂದ 400 ಕೋಟಿ ಆದಾಯ ಸಂಗ್ರಹಿಸುವುದು ಸರ್ಕಾರಿ ಜಮೀನು ರಕ್ಷಣೆ ಈ ಮಸೂದೆ ಉದ್ದೇಶವೆಂದರು.

ಕಾಫಿ ತೋಟದ ಮಧ್ಯೆ 2005ಕ್ಕಿಂತ ಮುನ್ನ ಒತ್ತುವರಿಯಾದ ಗರಿಷ್ಠ 25 ಎಕರೆ ಜಮೀನು 30 ವರ್ಷಗಳ ಗುತ್ತಿಗೆ ನೀಡಲಿದ್ದು, ನಿಯಮಗಳನ್ನು ರೂಪಿಸುವ ಕಾಲಕ್ಕೆ ಶುಲ್ಕ ದಂಡ ವಿಧಿಸುವುದು ಸೇರಿ ಇನ್ನಿತರ ಸಲಹೆಗಳನ್ನು ಪರಿಶೀಲಿಸಲಾಗುವುದು. ಒಟ್ಟು ಒತ್ತುವರಿಯಾದ ಜಮೀನಿನಲ್ಲಿ 10 ಎಕರೆ ಒಳಗಿನ ಹಿಡುವಳಿದಾರರ ವಶದಲ್ಲಿ 80,500 ಎಕರೆಯಿದೆ. 20–25 ಎಕರೆ ಹಿಡುವಳಿದಾರರು 95, 15–20 ಎಕರೆ ಉಳ್ಳವರು 846 ಮತ್ತು 10 ರಿಂದ 15 ಎಕರೆ ಜಮೀನು ಉಳ್ಳವರು 554 ರೈತರು ಎಂದು ವಿವರಿಸಿದರು.

ಚರ್ಚೆ ಆರಂಭಿಸಿದ ಪ್ರತಿಪಕ್ಷ ನಾಯಕ ಬಿ.ಕೆ. ಹರಿಪ್ರಸಾದ್ ಉಳ್ಳವರಷ್ಟೇ ಅಲ್ಲ ಬಡವರು ಹಾಗೂ ಶೋಷಿತರಿಗೆ ನೆರವು ನೀಡುವ ಕಾಯ್ದೆಯನ್ನೂ ತನ್ನಿರಿ ಎಂದು ಸಲಹೆ ನೀಡಿದರು. ದುರ್ಬಳಕೆ, ಕಾನೂನು ತೊಡಕು ಉಂಟಾಗದಂತೆ ಎಚ್ಚರಿಕೆ ವಹಿಸಬೇಕು ಎಂದು ಜೆಡಿಎಸ್‌ನ ಕೆ. ತಿಪ್ಪೇಸ್ವಾಮಿ, ಸಿಎನ್ ಮಂಜೇಗೌಡ ಸಲಹೆ ನೀಡಿದರು. ಬಿಜೆಪಿಯ ಭಾರತಿಶೆಟ್ಟಿ ಎಂ.ಪಿ. ಕುಶಾಲಪ್ಪ, ತೇಜಸ್ವಿನಿಗೌಡ, ಡಿಎಸ್ ಅರುಣ್ ತುಳಸಿ ಮುನಿರಾಜುಗೌಡ, ಕಾಂಗ್ರೆಸ್‌ನ ನಸೀರ್ ಅಹ್ಮದ್, ಪಿ.ಆರ್. ರಮೇಶ್ ಇನ್ನಿತರರು ಭಾಗವಹಿಸಿದ್ದರು.

**ವಿನಾಯಿತಿಗೆ ಚಿಂತನೆ:** ಭೂ ಮಂಜೂರಾದ ಸರ್ಕಾರಿ ನಂಬರ್‌ಗಳಲ್ಲಿ ಪಿ. ಸರ್ವೆ ನಂಬರ್‌ಗಳನ್ನು ತೆಗೆದು ಹೊಸದಾಗಿ ಕಾಯಂ ಸರ್ವೇ ನಂಬರ್ ನೀಡಲು ನಮೂನೆ 6 ರಿಂದ 10 ಸಲ್ಲಿಸಬೇಕಾಗುತ್ತದೆ. ಕೋಲಾರ ಜಿಲ್ಲೆಗೆ ನಮೂನೆ 6 ರಿಂದ 10ಕ್ಕೆ ವಿನಾಯಿತಿ ನೀಡಲಾಗಿದ್ದು, ರಾಜ್ಯವ್ಯಾಪಿ ವಿನಾಯಿತಿಗೆ ಚಿಂತನೆಯಿದೆ ಎಂದು ಆರ್.ಅಶೋಕ್ ಹೇಳಿದರು. ಕಾಂಗ್ರೆಸ್‌ನ ಎಂ.ಎಲ್. ಅನಿಲ್‌ಕುಮಾರ್ ಪ್ರಶ್ನೆಗೆ ಉತ್ತರಿಸಿದ ಅವರು ಕೋಲಾರ ಜಿಲ್ಲೆಯಲ್ಲಿ 2,655 ಜಮೀನುಗಳಿಗೆ ನಮೂನೆ–1 ರಿಂದ 5ನ್ನು ಸಿದ್ಧಪಡಿಸಿದ್ದು ಅಳತೆಗೆ ಅರ್ಹವಿರುವ ಪ್ರಕರಣಗಳಲ್ಲಿ ಅಳತೆ ಮಾಡಿ ಆಕಾರ ಬಂದ್ ಸರಿಪಡಿಸಿ ಹೊಸ ಸರ್ವೇ ನಂಬರ್‌ಗಳನ್ನು ನೀಡಲಾಗುವುದು ಎಂದು ತಿಳಿಸಿದರು.

**ಮೂರು ವಿಧೇಯಕ ಅಂಗೀಕಾರ:** ಭೂಕಂದಾಯ ಮೂರನೇ ತಿದ್ದುಪಡಿ ಮಸೂದೆ ಹಾಗೂ ಬೆಂಗಳೂರು ಮಹಾನಗರ ಭೂಸಾರಿಗೆ ಪ್ರಾಧಿಕಾರ ವಿಧೇಯಕ ವಿಸ್ತೃತ ಚರ್ಚೆ, ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ವಿಧೇಯಕ ಯಾವುದೇ ಚರ್ಚೆಯಿಲ್ಲದೆ ಅಂಗೀಕಾರವಾದವು.

## 55. ರೈತರಿಗೆ ನಿತ್ಯ ರೂ.6.66 ಕೋಟಿ ನಷ್ಟ

ಚಳಿಗಾಲ ಅಧಿವೇಶನದಲ್ಲಿ ವಿಧಾನಸಭೆ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಅವರು ಕೃಷಿ ಬಿಕ್ಕಟ್ಟಿನ ಬಗ್ಗೆ ದನಿ ಎತ್ತಿದರು. ರಾಜ್ಯದಲ್ಲಿ ಕುಂಠಿತಗೊಳ್ಳುತ್ತಿರುವ ಕೃಷಿ ಚಟುವಟಿಕೆಗಳು ನಷ್ಟದಲ್ಲಿರುವ ರೈತರು ಸಾಂಕ್ರಾಮಿಕ ರೋಗಗಳಿಂದ ಹಾನಿಗೀಡಾದ ಬೆಳೆಗಳು ಮತ್ತು ಅವುಗಳ ಬಗ್ಗೆ ಸರ್ಕಾರ ಕೈಗೊಳ್ಳಬೇಕಾದ ಪರಿಹಾರ ಕ್ರಮಗಳ ಬಗ್ಗೆ ಮಾತನಾಡಿದರು.

**ಅವರ ಮಾತುಗಳ ಪ್ರಮುಖಾಂಶಗಳು ಹೀಗಿವೆ:**

- ಹಸಿರು ಕಾಂತ್ರಿಯ ನಂತರ ಜನರಿಗೆ ಆಹಾರ ಭದ್ರತೆ ಸಿಕ್ಕಿದೆ. ಎಲ್ಲರಿಗೂ ಆಹಾರ, ಎಲ್ಲರಿಗೂ ಶಿಕ್ಷಣ, ಎಲ್ಲರಿಗೂ ವಸತಿ, ಎಲ್ಲರಿಗೂ ಆರೋಗ್ಯ ಹೀಗೆ ಮೂಲಭೂತ ಸೌಕರ್ಯಗಳು ಎಲ್ಲರಿಗೂ ಸಿಗಬೇಕು ಎಂಬುದು ಅತ್ಯಂತ ಅವಶ್ಯ. ಆಹಾರ ಭದ್ರತೆ ಸಿಕ್ಕಮೇಲೆ ಬಹಳಷ್ಟು ಜನ ಅನ್ನದಾತರು ಕೃಷಿಯಿಂದ ವಿಮುಖರಾಗುತ್ತಿದ್ದಾರೆ. ವಿಶೇಷವಾಗಿ ಯುವಜನರು ಕೃಷಿ ತೊರೆದು ಬೇರೆ ಉದ್ಯೋಗಗಳನ್ನು ಅರಸಿ ಪಟ್ಟಣಗಳಿಗೆ ವಲಸೆ ಹೋಗುತ್ತಿದ್ದಾರೆ. ಕೃಷಿ ಲಾಭದಾಯಕ ಉದ್ಯೋಗವಲ್ಲ ಎಂಬುದೇ ಇದಕ್ಕೆ ಕಾರಣ.

- ಕೃಷಿ ಶೇ.50 ಜನರಿಗೆ ಉದ್ಯೋಗಾವಕಾಶ ಕಲ್ಪಿಸಿದೆ. ರಾಜ್ಯದಲ್ಲಿ ಸುಮಾರು 3 ಕೋಟಿ ಜನ ಕೃಷಿ ಮೇಲೆ ಅವಲಂಭಿತರಾಗಿದ್ದಾರೆ. 2001ರಲ್ಲಿ ಹಿಡುವಳಿದಾರರ ಸಂಖ್ಯೆ 62 ಲಕ್ಷ ಕುಟುಂಬಗಳು, 2016ರಲ್ಲಿ ಅದು 87 ಲಕ್ಷ ಕುಟುಂಬಗಳಾಗಿ ಒಡೆದಿವೆ. ವ್ಯವಸಾಯಕ್ಕೆ ಯೋಗ್ಯವಾದ ಜಮೀನು ಅಷ್ಟೇ ಇದ್ದರೂ ಹಿಡುವಳಿದಾರರ ಸಂಖ್ಯೆ ಏರಿಕೆಯಾಗಿದೆ. ಹಿಡುವಳಿಯ ಗಾತ್ರ ಕಡಿಮೆಯಾದಂತೆ ಅದರಿಂದ ಬರುವ ಆದಾಯದ ಪ್ರಮಾಣವೂ ಕಡಿಮೆಯಾಗುತ್ತಾ ಹೋಗುತ್ತದೆ.

- ಕೃಷಿ ಕುಟುಂಬವೊಂದರ ಸರಾಸರಿ ವಾರ್ಷಿಕ ಆದಾಯ ರೂ.10,208 . ಒಂದು ರೈತ ಕುಟುಂಬದಲ್ಲಿ ನಾಲ್ಕು ಮಂದಿ ಸದಸ್ಯರಿದ್ದಾರೆ ಎಂದು ಅಂದಾಜು ಮಾಡಿದರೆ ಕುಟುಂಬದ ಪ್ರತಿಯೊಬ್ಬನ ತಲಾ ಆದಾಯ ರೂ.2250 . ಅಂದರೆ ಒಬ್ಬನ ನಿತ್ಯದ ಆದಾಯ ರೂ.80 ಮಾತ್ರ, ಅಂತಾರಾಷ್ಟ್ರೀಯ ಮಾನದಂಡಗಳ ಪ್ರಕಾರ ಒಬ್ಬನ ದೈನಂದಿನ ಆದಾಯ ರೂ.1.90 ಡಾಲರ್‌ಗಿಂತ ಕಡಿಮೆ ಇದ್ದರೆ ಅವರು ಕಡುಬಡವರು ಎಂದು ಪರಿಗಣಿಸಬೇಕು. ನಮ್ಮಲ್ಲಿ ಒಬ್ಬ ರೈತನ ಆದಾಯ ಒಂದು ಡಾಲರ್‌ಗಿಂತ ಕಡಿಮೆ ಇದೆ. ನಮ್ಮ ದೇಶದ ರೈತರಲ್ಲಿ ಹೆಚ್ಚು ಬಡವರಿದ್ದಾರೆ.

- 5 ವರ್ಷದ ಹಿಂದೆ ನಮ್ಮ ಸರ್ಕಾರ ಇದ್ದಾಗ ಹೈನುಗಾರರಿಗೆ ಪ್ರತಿ ಲೀಟರ್ ಹಾಲಿಗೆ ನೀಡುತ್ತಿದ್ದ ಪ್ರೋತ್ಸಾಹ ಧನವೂ ಸೇರಿ ಒಟ್ಟು ಲೀಟರ್‌ಗೆ ರೂ.32 ಸಿಗುತ್ತಿತ್ತು. ಈಗ ಪ್ರೋತ್ಸಾಹ ಧನವು ಸೇರಿ ಲೀಟರ್‌ಗೆ ರೂ. 35, ರೂ.37 ಸಿಗುತ್ತಿದೆ. ಆದರೆ, ಹಿಂಡಿ, ಬೂಸಾ ಮತ್ತು ಮೇವಿನ ಬೆಲೆ ನೂರಾರು ಪಟ್ಟು ಹೆಚಾಗಿದೆ. ಹಾಲಿನ ಬೆಲೆಯಲ್ಲಿ ಶೇಕಡ 30 ರಷ್ಟು ಹೆಚ್ಚಾಗಿದೆ. 2017–18ರಲ್ಲಿ ರೂ.49, ಕೆ.ಜಿ. ಬೂಸಾದ ಬೆಲೆ ರೂ.450 ಇದ್ದದದು ಈಗ ರೂ.1300 ರಿಂದ ರೂ.1350 ಆಗಿದೆ 30 ಕೆ.ಜಿ. ಹಿಂಡಿಯ ಬೆಲೆ ರೂ.400 ಇದ್ದದ್ದು ಈಗ ರೂ.1400ಗಿಂತ ಹೆಚಾಗಿದೆ. ಕೆಎಂಎಫ್‌ನವರು ಕೊಡುವ ಫೀಡ್ ಬೆಲೆ ಕಳೆದ ಬಾರಿ ರೂ.200 ಜಾಸ್ತಿಯಾಗಿದೆ. ಇವುಗಳ ಜೊತೆಗೆ ಚರ್ಮ ಗಂಟು ರೋಗ ಬಂದಿದೆ. ಇದರಿಂದ ಸುಮಾರೂ 25,000 ರಾಸುಗಳು ಸಾವನ್ನಪ್ಪಿವೆ. 1 ಕೋಟಿ 29 ಲಕ್ಷ ಜಾನುವಾರಗಳ ಪೈಕಿ 69 ಲಕ್ಷ ಜಾನುವರುಗಳಿಗೆ ಲಸಿಕೆ ಹಾಕಲಾಗಿದೆ. ಬಾಕಿ ಉಳಿದ ಶೇಕಡ 50ರಷ್ಟು ಜಾನುವಾರಗಳಿಗೆ ಸರ್ಕಾರ ಕೂಡಲೇ ಲಸಿಕೆ ನೀಡಬೇಕಿದೆ. ಚರ್ಮಗಂಟು ರೋಗದಿಂದ ಸಾವನ್ನಪ್ಪುವ ಜಾನುವಾರುಗಳಿಗೆ ನೀಡುವ ಪರಿಹಾರವನ್ನು ಸರ್ಕಾರ ಹೆಚ್ಚಿಸಬೇಕು.

- 94 ಲಕ್ಷ ಲೀಟರ್ ಹಾಲಿನ ಉತ್ಪಾನೆ ಇದ್ದದ್ದು, 76 ಲಕ್ಷ ಲೀಟರ್‌ಗೆ ಇಳಿಕೆ ಕಂಡಿದೆ. ಚರ್ಮಗಂಟು ರೋಗದಿಂದಾಗಿ ನಿತ್ಯ 2 ಲಕ್ಷ ಲೀಟರ್ ಹಾಲಿನ ಉತ್ಪಾದನೆ ಕಡಿಮೆಯಾಗಿದೆ. ಇದಕ್ಕೆ ರೈತರು ಹೊಣೆಯಲ್ಲ. ಸರ್ಕಾರವೇ ಹೊಣೆ. ನಿತ್ಯ ರೂ.6 ಕೋಟಿ 66 ಲಕ್ಷ ಹಣ ರೈತರಿಗೆ ನಷ್ಟವಾಗುತ್ತಿದೆ. ಹೈನುಗಾರಿಕೆಯಿಂದ ಜನ ವಿಮುಖರಾಗುತ್ತಿದ್ದಾರೆ.

- ಸುಮಾರು 15 ಲಕ್ಷ ಹೆಕ್ಟೇರ್‌ಗಳಲ್ಲಿ ಕಬ್ಬು ಬೆಳೆಯುತ್ತಾರೆ. ಸುಮಾರೂ 25 ಲಕ್ಷ ರೈತ ಕುಟುಂಬಗಳು ಇದರ ಮೇಲೆ ಅವಲಂಭಿತರಾಗಿದ್ದಾರೆ. ರಾಜ್ಯದಲ್ಲಿ ಸುಮಾರು 6.5 ಕೋಟಿ ಟನ್ ಕಬ್ಬು ಉತ್ಪಾದನೆಯಾಗುತ್ತದೆ. 2012–13ರಲ್ಲಿ ಪ್ರತಿ ಟನ್‌ಗೆ ಎಫ್‌ಆರ್‌ಪಿ ಬೆಲೆ ರೂ.1700 ಇತ್ತು. ಇಳುವರಿ 9.5 ಇತ್ತು. 2017–18ರಲ್ಲಿ ಎಫ್‌ಆರ್‌ಪಿ ಬೆಲೆ ರೂ.2550 ಇತ್ತು. ಇಳುವರಿ 9.5 ಇತ್ತು. 2022–23ರಲ್ಲಿ ಎಫ್‌ಆರ್‌ಪಿ ಬೆಲೆ ರೂ.3050 ಆಗಿದೆ. ಇಳುವರಿ 10.25 ಎಂದು ನಿಗದಿ ಮಾಡಲಾಗಿದೆ. ಒಂದೆಡೆ ಇಳುವರಿ ಹೆಚ್ಚಿಸಿ ಮತ್ತೊಂದು ಕಡೆ ಸರ್ಕಾರ ರೂ.150 ಹೆಚ್ಚಿಗೆ ನೀಡಿದೆ ಎಂದು ಪ್ರಚಾರ ಪಡೆಯುತ್ತಿದ. ಪ್ರತಿ ಎಕರೆಗೆ ಕಬ್ಬು ಬೆಳೆಗಾರನಿಗೆ ರೂ.12,000 ನಷ್ಟವಾಗುತ್ತಿದೆ. ಇದೇನಾ ರೈತರ ಆದಾಯವನ್ನು ಡಬ್ಬಲ್ ಮಾಡುವುದು ಎಂದರೆ

- ಅಡಕೆ ಬೆಳೆಗಾರರನ್ನು ಸರ್ಕಾರವೇ ನಾಶ ಮಾಡಲು ಹೊರಟಂತಿದೆ. ಭೂತಾನ್, ಮ್ಯಾನ್ಮಾರ್, ವಿಯೆಟ್ನಾಂನಿಂದ ಅಡಕೆ ಆಮದು ಮಾಡಿಕೊಳ್ಳಲಾಗುತ್ತಿದೆ. ಸುಮಾರೂ 17,000 ಟನ್ ಅಡಿಕೆ ಆಮದು ಮಾಡಿಕೊಳ್ಳಲಾಗಿದೆ ಇದರಿಂದ 55,000 ಒಂದು ಕ್ವಿಂಟಾಲ್‌ಗೆ ಇದ್ದ ಬೆಲೆ ಇಂದು 35,000–40,000ಕ್ಕೆ ಇಳಿದಿದೆ. ಅಡಿಕೆ ಬೆಳೆಗೆ ಎಲೆಚುಕ್ಕೆ ರೋಗ ಬಂದಿದ್ದರೂ ಅದಕ್ಕೆ ಪರಿಹಾರ ಹುಡುಕುವ ಕೆಲಸ ಆಗುತ್ತಿಲ್ಲವೇಕೆ, ಸರ್ಕಾರ ಕೂಡಲೇ ಆಡಕೆ ಬೆಳೆಗಾರರ ಸಂಕಷ್ಟಕ್ಕೆ ಧಾವಿಸಬೇಕು

ಆಧಾರ:ವಿಜಯ ಕರ್ನಾಟಕ, ದಿನಾಂಕ:29.12.2022

## 56. ಬೆಳೆಗಳಿಗೆ ಬೇಕಿದೆ ಬೆಂಬಲ

ರೈತ ವಿರೋಧಿ ನೀತಿ ಬಿಟ್ಟು ರೈತಪರ ನಿಲುವುಗಳನ್ನು ತೆಗೆದುಕೊಳ್ಳುವ ಮೂಲಕ ಸರ್ಕಾರ ಎಲ್ಲ ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆ (ಎಂಎಸ್‌ಪಿ) ಘೋಷಣೆ ಮಾಡಬೇಕು ಎಂದು ಸಿದ್ದರಾಮಯ್ಯ ಒತ್ತಾಯಿಸಿದರು.

ವಿಧಾನ ಸಭೆ ಅಧಿವೇಶನದಲ್ಲಿ ನಿಯಮ 69ರಡಿಯಲ್ಲಿ ತೆಗೆದುಕೊಂಡು ಚರ್ಚೆಯಲ್ಲಿ ಅವರು ಮಾತನಾಡಿದರು. ರಾಜ್ಯದಲ್ಲಿ ಪ್ರಸ್ತುತ 7 ಕೋಟಿ ಜನಸಂಖ್ಯೆ ಇದ್ದು, ಈ ಪೈಕಿ ಶೇ.60 ಗ್ರಾಮೀಣ ಪ್ರದೇಶದ ಜನತೆ ಹಳ್ಳಿಗಳಲ್ಲಿ ವಾಸವಿದ್ದಾರೆ. ಆಹಾರ ಭದ್ರತೆ ಸಿಕ್ಕಮೇಲೆ ಬಹಳಷ್ಟು ರೈತರು ಕೃಷಿಯಿಂದ ವಿಮುಖರಾಗುತ್ತಿದ್ದಾರೆ. ವಿಶೇಷವಾಗಿ ಯುವ ಜನರು ಕೃಷಿ ತೊರೆದು ಬೇರೆ ಉದ್ಯೋಗಗಳನ್ನು ಅರಸಿ ಪಟ್ಟಣಗಳಿಗೆ ವಲಸೆ ಹೋಗುತ್ತಿದ್ದಾರೆ. ಅದಾಯ ಕ್ಷೀಣಿಸಿರುವುದೇ ಅದಕ್ಕೆ ಪ್ರಮುಖ ಕಾರಣ ಎಂದರು.

**3 ಕೋಟಿ ಜನತೆಗೆ ಕೃಷಿ ಜೀವನಾಧಾರ**: ಕೃಷಿ ಶೇ.50 ಜನರಿಗೆ ಉದ್ಯೋಗಾವಕಾಶ ಕಲ್ಪಿಸಿದೆ. ರಾಜ್ಯದಲ್ಲಿ ಸುಮಾರು 3 ಕೋಟಿ ಜನ ಕೃಷಿ ಮೇಲೆ ಅವಲಂಬಿತರಾಗಿದ್ದಾರೆ. ಕೃಷಿಯಲ್ಲಿನ ಬಿಕ್ಕಟ್ಟಿನಿಂದಾಗಿ ರೈತರು ಕಷ್ಟ ಎದುರಿಸುತ್ತಿದ್ದಾರೆ ಎಂದು ಸಿದ್ದರಾಮಯ್ಯ ಹೇಳಿದರು. 2011ರಲ್ಲಿ 62 ಲಕ್ಷ ಹಿಡುವಳಿದಾರರ ಕುಟುಂಬಗಳಿದ್ದವು, 2016ರಲ್ಲಿ ಅದು 87 ಲಕ್ಷ ಕುಟುಂಬಗಳಾಗಿ ಒಡೆದಿದೆ. ವ್ಯವಸಾಯಕ್ಕೆ ಯೋಗ್ಯವಾದ ಜಮೀನು ಇದ್ದರೂ ಹಿಡುವಳಿದಾರರ ಸಂಖ್ಯೆ ಏರಿಕೆಯಾಗಿದೆ. ಹಿಡುವಳಿ ಗಾತ್ರ ಕಡಿಮೆಯಾದಂತೆ ಅದರಿಂದ ಬರುವ ಆದಾಯದ ಪ್ರಮಾಣವು ಕಡಿಮೆಯಾಗುತ್ತ ಹೋಗುತ್ತದೆ ಎಂದರು.

**ಕೀಟನಾಶಕ್ಕೆ ರೂ.20 ಸಾವಿರ ಕೋಟಿ ಖರ್ಚು**: ಪ್ರತಿ ವರ್ಷ ರಾಜ್ಯದ ಆಂತರಿಕ ಉತ್ಪನ್ನಕ್ಕೆ ಕೃಷಿ ತೋಟಗಾರಿಕೆ, ಮೀನುಗಾರಿಕೆ, ಪಶುಪಾಲನೆ ಮತ್ತು ರೇಷ್ಮೆ ಎಲ್ಲವೂ ಸೇರಿ ಎರಡೂವರೆ ಲಕ್ಷ ಕೋಟಿ ಆದಾಯವಿದೆ. ಆದರೆ, ಪ್ರತಿವರ್ಷ ಬೀಜ–ಗೊಬ್ಬರ, ಕೀಟನಾಶಕಗಳಿಗೆ ರಾಜ್ಯದ ರೈತರು ರೂ.20 ಸಾವಿರ ಕೋಟಿಗಳನ್ನು ಖರ್ಚು ಮಾಡುತ್ತಿದ್ದಾರೆ ಎಂದು ಸಿದ್ದರಾಮಯ್ಯ ಹೇಳಿದರು.

**ಅಡಕೆ ಬೆಳೆಗಾರರ ಸರ್ವನಾಶ:** ಅಡಕೆ ಬೆಳೆಗಾರರನ್ನು ಸರ್ಕಾರವೇ ನಾಶ ಮಾಡಲು ಹೊರಟಂತಿದೆ. ಭೂತಾನ್, ಬರ್ಮಾ, ವಿಯೆಟ್ನಾಂನಿಂದ ಅಡಕೆ ಆಮದು ಮಾಡಿಕೊಳ್ಳಲಾಗುತ್ತಿದೆ. ಬರ್ಮಾದಿಂದ ಕದ್ದು ಅಡಕೆ ಸಾಗಾಟ ಮಾಡಲಾಗುತ್ತಿದೆ ಎಂದು ಸಿದ್ದರಾಮಯ್ಯ ಆರೋಪಿಸಿದರು. 17 ಸಾವಿರ ಟನ್ ಅಡಕೆ ಆಮದು ಮಾಡಿಕೊಳ್ಳಲಾಗಿದೆ. ಇದರಿಂದ ರೂ.55 ಸಾವಿರಗಳಿಗೆ ಒಂದು ಕ್ವಿಂಟಾಲ್ ಇದ್ದ ಬೆಲೆ ಈಗ ಕ್ವಿಂಟಾಲ್‌ಗೆ ರೂ.35 ರಿಂದ 40 ಸಾವಿರಗಳಿಗೆ ಇಳಿದಿದೆ. ಅಡಕೆ ಬೆಳೆಗೆ ಎಲೆಚುಕ್ಕೆ ರೋಗ ಬಂದಿದೆ. ನಮ್ಮ ಸರ್ಕಾರದ ಅವಧಿಯಲ್ಲಿ ಅಡಕೆಗೆ ಹಳದಿ ರೋಗ ಬಂದ ಸಂದರ್ಭದಲ್ಲಿ ರೂ.80 ಕೋಟಿ ಪರಿಹಾರವಾಗಿ ನೀಡಿದೆ. ಈ ಸರ್ಕಾರವೂ ಪರಿಹಾರ ನೀಡಬೇಕು ಎಂದು ಸಿದ್ದರಾಮಯ್ಯ ಒತ್ತಾಯಿಸಿದರು.

**ವೈಶ್ಯವಾಣಿ ಸಮುದಾಯ 3ಬಿಗೆ ಸೇರಿಸಲು ಆಯೋಗದ ವರದಿ:** ವೈಶ್ಯವಾಣಿ ಸಮುದಾಯವನ್ನು 3ಬಿಗೆ ಸೇರಿಸುವುದಕ್ಕೆ ಹಿಂದುಳಿದ ವರ್ಗಗಳ ಆಯೋಗ ಸರ್ಕಾರಕ್ಕೆ ವರದಿ ನೀಡಿದ್ದು, ಈ ವಿಷಯದಲ್ಲಿ ಸರ್ಕಾರ ಮುಂದಿನ ದಿನಗಳಲ್ಲಿ ತೀರ್ಮಾನಿಸಲಿದೆ ಎಂದು ಸಮಾಜ ಕಲ್ಯಾಣ ಸಚಿವ ಕೋಟ ಶ್ರೀನಿವಾಸ ಪೂಜಾರಿ ಹೇಳಿದರು. ಪ್ರಶ್ನೋತ್ತರ ಕಲಾಪದಲ್ಲಿ ವಿಷಯ ಪ್ರಸ್ತಾಪಿಸಿದ ಶಾಸಕ ಹರತಾಳು ಹಾಲಪ್ಪ, ವೈಶ್ಯವಾಣಿ ಮಾತ್ರವಲ್ಲದೇ ಉಪಜಾತಿಗಳನ್ನು ಸೇರಿಸಬೇಕು ಎಂದು ಆಗ್ರಹಿಸಿದರು. ಇದಕ್ಕೆ ಪ್ರತಿಕ್ರಿಯಿಸಿದ ಕೋಟ ಶ್ರೀನಿವಾಸ್ ಪೂಜಾರಿ ಯಾವುದೇ ಜಾತಿಯನ್ನು ಮೀಸಲಿಗೆ ಸೇರಿಸಿದರೆ ಅದರೊಂದಿಗೆ ಇರುವ ಉಪಜಾತಿಗಳನ್ನು ಸೇರಿಸಲಾಗುವುದು. ಅದ್ದರಿಂದ ಈ ಬಗ್ಗೆ ಕ್ರಮವಹಿಸಲಾಗುವುದು ಎಂದು ಭರವಸೆ ನೀಡಿದರು.

**ಟನ್ ಕಬ್ಬಿಗೆ ರೂ.3500 ನೀಡಲು ಒತ್ತಾಯ:** ತಮಿಳುನಾಡು ರಾಜ್ಯದಲ್ಲಿ ಅಲ್ಲಿಯ ಸಕ್ಕರೆ ಕಾರ್ಖಾನೆಗಳು ಪ್ರತಿಟನ್ ಕಬ್ಬಿಗೆ ರೂ.3500 ನೀಡುತ್ತಿವೆ. ಅದೇ ಮಾದರಿಯಲ್ಲಿ ರಾಜ್ಯ ಸರ್ಕಾರವೂ ಕೂಡ ಟನ್ ಕಬ್ಬಿಗೆ ರೂ.3,500 ನೀಡಬೇಕು ಎಂದು ಸಿದ್ದರಾಮಯ್ಯ ಒತ್ತಾಯಿಸಿದರು. ಪ್ರತಿ ವರ್ಷ ಕಬ್ಬು ನುರಿಸುವ ಹಂಗಾಮು ಪ್ರಾರಂಭವಾಗುವುದಕ್ಕಿಂತ ಮುಂಚೆ ಬೆಳೆಗಾರರು ಪ್ರತಿಭಟನೆ ನಡೆಸುತ್ತಾರೆ. ಆದರೆ, ಸರ್ಕಾರ ಅವರ ಬೇಡಿಕೆಗೆ ಸ್ಪಂದಿಸುತ್ತಿಲ್ಲ ಎಂದರು. ರಾಜ್ಯದ 15 ಲಕ್ಷ ಹೆಕ್ಟೇರ್‌ಗಳಲ್ಲಿ ಕಬ್ಬು ಬೆಳೆಯುತ್ತಾರೆ. 25 ಲಕ್ಷ ರೈತ ಕುಟುಂಬಗಳು ಕಬ್ಬಿನ ಬೆಳೆಯನ್ನು ಅವಲಂಬಿಸಿವೆ. ತೆಲಂಗಾಣದಲ್ಲಿ ಕಬ್ಬಿನ ಇಳುವರಿ ಶೇ.9ರಷ್ಟಿದೆ. ಎಫ್‌ಆರ್‌ಪಿ ರೂ.3,200 ಇದೆ. ತಮಿಳುನಾಡಿನಲ್ಲಿ ಇಳುವರಿ 9.5 ಇದ್ದರೆ ರೂ.3,500 ನೀಡಲಾಗುತ್ತಿದೆ. ಅದರ ಮೇಲೆ ರೂ.190 ಇನ್ಸಂಟೀವ್ ನೀಡಲಾಗುತ್ತಿದೆ. ಪಂಜಾಬ್‌ನಲ್ಲಿ ರೂ.3,800, ಉತ್ತರಪದ್ರೇಶದಲ್ಲಿ ರೂ.3500, ಗುಜರಾತ್‌ನಲ್ಲಿ ಟನ್ ಕಬ್ಬಿಗೆ ರೂ.4,400 ನೀಡಲಾಗುತ್ತಿದೆ. ನಮ್ಮಲ್ಲಿ ರೂ.3050 ನೀಡುವುದು ಸರಿಯೇ ಎಂದು ಪ್ರಶ್ನಿಸಿದರು.

**ವಿಯೆಟ್ನಾಂನೊಂದಿಗೆ ಸ್ಪರ್ಧೆ ಸಾಧ್ಯವಿಲ್ಲ:** ಕಾಳು ಮೆಣಸು ಕೆ.ಜಿ. ರೂ.800 ರಿಂದ ರೂ.500ಕ್ಕೆ ಇಳಿದಿದೆ. ಇದನ್ನು ಕೂಡ ವಿಯೆಟ್ನಾಂನಿಂಸ ಅಮದು ಮಾಡಿಕೊಳ್ಳಲಾಗುತ್ತಿದೆ. ನಾಡಿನ ರೈತರು ವಿಯೆಟ್ನಾಂನ ಬೆಳೆಗಾರರ ಜೊತೆ ಸ್ಪರ್ಧೆ ಮಾಡಲು ಸಾಧ್ಯವಿಲ್ಲ ಎಂದು ವಿರೋದ ಪಕ್ಷದ ನಾಯಕ ಸಿದ್ದರಾಮಯ್ಯ ಹೇಳಿದರು. ರಾಜ್ಯದಲ್ಲಿ 5 ಲಕ್ಷ ಹೆಕ್ಟೇರ್‌ನಲ್ಲಿ ತೆಂಗು ಬೆಳೆಯಲಾಗುತ್ತದೆ. ದೇಶದ ಒಟ್ಟು ತೆಂಗು ಉತ್ಪಾದನೆಯಲ್ಲಿ ಕರ್ನಾಟಕದ ಪಾಲು ಶೇ.31. ಕೊಬ್ಬರಿ ಒಂದು ಕ್ವಿಂಟಾಲ್‌ಗೆ ರೂ.19 ಸಾವಿರ ಇತ್ತು. ಈಗದು ರೂ.11 ಸಾವಿರಕ್ಕೆ ಇಳಿದಿದೆ. ನಮ್ಮ ಸರ್ಕಾರದ ಅವಧಿಯಲ್ಲಿ ಬರಗಾಲದಿಂದ ಕೊಬ್ಬರಿ ಬೆಳೆ ಇಳಿಕೆಯಾಗಿತ್ತು. ತಿಪಟೂರಿನ ಕೊಬ್ಬರಿ ಬೆಳೆಗಾರರನ್ನು ಕರೆದು ಮಾತನಾಡಿ, ಮರ ಒಣಗಿ ಹೋದರೆ ಒಂದು ಮರಕ್ಕೆ ಸುಮಾರು ರೂ.1000 ಪರಿಹಾರ ನೀಡಿದ್ದೆ ಎಂದರು.

**ಪರಿಷತ್‌ನಲ್ಲಿ ವಿಜಯವಾಣಿ ವರದಿ ಪ್ರಸ್ತಾಪ:** ರಾಜ್ಯದ ನಂ 1ರ ದಿನಪತ್ರಿಕೆ ವಿಜಯವಾಣಿಯಲ್ಲಿ ಡಿಸೆಂಬರ್ 24ರಂದು ನಗರೋತ್ಥಾನ ಯೋಜನೆ ಮಾರ್ಗಸೂಚಿ ಉಲ್ಲಂಘನೆ ಹೆಸರಿನಲ್ಲಿ ಪ್ರಕಟವಾಗಿದ್ದ ವರದಿಯನ್ನು ಪರಿಷತ್‌ನಲ್ಲಿ ಯು.ಬಿ. ವೆಂಕಟೇಶ್ ಪ್ರಸ್ತಾಪಿಸಿ ಗಮನ ಸೆಳೆದರು.

ಮಹಾನಗರ ಪಾಲಿಕೆಗಳು ಮುಖ್ಯಮಂತ್ರಿ ನಗರೋತ್ಥಾನ ಯೋಜನೆ ಮಾರ್ಗಸೂಚಿ ಉಲ್ಲಂಘಿಸಿರುವುದನ್ನು ಲೆಕ್ಕ ನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರ ವರದಿ ಬಯಲಿಗೆಳೆದಿದೆ. ಹತ್ತು ಮಹಾನಗರ ಪಾಲಿಕೆಗಳಲ್ಲಿ ಮೂಲಸೌಕರ್ಯ ಮತ್ತು ನಾಗರಿಕ ಸೌಲಭ್ಯಗಳನ್ನು ಮೇಲ್ದರ್ಜೆಗೇರಿಸುವ ಉದ್ದೇಶದಿಂದ ಒಂದು ಸಾವಿರ ಕೋಟಿ ವೆಚ್ಚದ ಕ್ರಿಯಾಯೋಜನೆ ರೂಪಿಸಲಾಗಿತ್ತು. ಅಲ್ಲದೆ ರೂ.108 ಕೋಟಿ ಮೊತ್ತದ ಕಾಮಗಾರಿಗಳನ್ನು ಬೇರೆ ಉದ್ದೇಶಕ್ಕೆ ಬಳಸಿರುವುದು ಸಿಎಜಿ ವರದಿಯಲ್ಲಿ ಉಲ್ಲೇಖಿಸಿದೆ. ಮಾಡಿದ ಸಾಲಕ್ಕೆ ಬಡ್ಡಿ ಮರುಪಾವತಿ ಮಾಡದ ಕಾರಣ ರೂ.15.09 ಕೋಟಿ ಹೆಚ್ಚುವರಿ ಬಡ್ಡಿ ಪಾವತಿಸಲಾಗಿದೆ. ಅನರ್ಹರಿಗೆ ಕಾಮಗಾರಿಗೆ ನೀಡಲಾಗಿದೆ. ತನಿಖೆ ನಡೆಸಿ ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳಬೇಕು ಎಂದು ಒತ್ತಾಯಿಸಿದರು.

**ಎಪಿಎಂಸಿ ತಿದ್ದುಪಡಿ ಕಾಯ್ದೆ ಹಿಂಪಡೆಯಲಿ:** ರಾಜ್ಯ ಸರ್ಕಾರ ಈಗ ಕೇವಲ 19 ಕೃಷಿ–ತೋಟಗಾರಿಕೆ ಬೆಳೆಗಳಿಗೆ ಬೆಂಬಲ ಬೆಲೆ ನೀಡುತ್ತಿದ್ದು, ಅದನ್ನು ಎಲ್ಲ ಬೆಳೆಗಳಿಗೆ ನೀಡಬೇಕು ಜೊತೆಗೆ ಎಪಿಎಂಸಿ ಕಾಯ್ದೆಯನ್ನು ಹಿಂಪಡೆಯಬೇಕು ಎಂದು ಸಿದ್ದರಾಮಯ್ಯ ಒತ್ತಾಯಿಸಿದರು.

ಆಧಾರ:ವಿಜಯವಾಣಿ, ದಿನಾಂಕ:29.12.2022

## 57. ಕಾಂಗ್ರೆಸ್‌ನ ದೇಶಪಾಂಡೆ ಅತ್ಯುತ್ತಮ ಶಾಸಕ

ಹಳಿಯಾಳ ಕ್ಷೇತ್ರದ ಕಾಂಗ್ರೆಸ್ ಶಾಸಕ ಆರ್.ವಿ. ದೇಶಪಾಂಡೆ ಅವರಿಗೆ ವಿಧಾನಸಭೆಯಲ್ಲಿ 2022ನೇ ಸಾಲಿನ ಅತ್ಯುತ್ತಮ ಶಾಸಕ ಪ್ರಶಸ್ತಿ ಪ್ರಧಾನ ಮಾಡಲಾಯಿತು.

ಕಲಾಪ ಆರಂಭವಾಗುತ್ತಿದ್ದಂತೆ ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಪ್ರಶಸ್ತಿಗೆ ದೇಶಪಾಂಡೆ ಅವರನ್ನು ಆಯ್ಕೆ ಮಾಡಿರುವುದಾಗಿ ಪ್ರಕಟಿಸಿದರು. ಬಳಿಕ ಮುಖ್ಯಮಂತ್ರಿಯವರು, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ. ಮಾಧುಸ್ವಾಮಿ, ವಿರೋಧ ಪಕ್ಷ ನಾಯಕ ಸಿದ್ದರಾಮಯ್ಯ ಜೊತೆ ಪ್ರಶಸ್ತಿ ಪ್ರಧಾನ ಮಾಡಿದರು.

ಎಂಟು ಬಾರಿ ಶಾಸಕರಾಗಿ ಸಚಿವರಾಗಿ ಆಯ್ಕೆಯಾಗಿರುವ ಅವರು ಸಣ್ಣ ಕೈಗಾರಿಕೆ, ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸೇರಿದಂತೆ ಅನೇಕ ಖಾತೆಗಳನ್ನು ನಿರ್ವಹಿಸಿದ್ದಾರೆ. ಸದನದ ಚೌಕಟ್ಟು ಮೀರದಂತೆ ಮಾತನಾಡುವ ಅನುಭವ ಅವರದ್ದು ಎಂದರು.

ದೇಶಪಾಂಡೆ ಅವರನ್ನು ಅತ್ಯುತ್ತಮ ಶಾಸಕ ಪ್ರಶಸ್ತಿಗೆ ಆಯ್ಕೆ ಮಾಡಿರುವುದು ಪ್ರಶಸ್ತಿಯ ಗೌರವ ಹಾಗೂ ಮೌಲ್ಯ ಹೆಚ್ಚಿಸಿದೆ ಎಂದು ಮುಖ್ಯಮಂತ್ರಿಯವರು ಹೇಳಿದರು.

ಅತ್ಯುತ್ತಮ ಸಂಸದೀಯ ಪಟುವಾಗಿರುವ ಆರ್.ವಿ. ದೇಶಪಾಂಡೆ ಅವರು ಪ್ರಶಸ್ತಿಗೆ ಆಯ್ಕೆಯಾಗಿರುವುದು ಸಂತಸದ ವಿಷಯ ಎಂದು ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ ಹೇಳಿದರು.

ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ದೇಶಪಾಂಡೆ ರಾಜಕಾರಣಿಗಳ ಬಗ್ಗೆ ಜನಾಭಿಪ್ರಾಯ ಬದಲಾಗಿರುವುದು ಕಳವಳದ ಸಂಗತಿ. ಸಾರ್ವಜನಿಕ ಜೀವನದಲ್ಲಿ ರಾಜಕಾರಣಿ ಎಂದು ಪರಿಚಯಿಸಿಕೊಳ್ಳಲು ಹಿಂದೇಟು ಹಾಕುವಂತಾಗಿದೆ. ಶಾಸಕರಾದವರು ಶಾಸನ ಸಭೆಯ ಗೌರವ, ಶಿಸ್ತು ಕಾಪಾಡಿಕೊಳ್ಳಬೇಕು ಎಂದರು.

**ಸಿದ್ದರಾಮಯ್ಯ ಹಾಸ್ಯ ಚಟಾಕಿ:** ಸಿದ್ದರಾಮಯ್ಯ ಅವರ ವಯಸ್ಸಿನ ಬಗ್ಗೆ ತನಿಖೆ ನಡೆಸುವ ಕುರಿತು ವಿಧಾನಸಭೆಯಲ್ಲಿ ಸ್ವಾರಸ್ಯಕರ ಚರ್ಚೆ ನಡೆಯಿತು.

ದೇಶಪಾಂಡೆಯವರು ನನಗೂ ನಾಲ್ಕೈದು ತಿಂಗಳು ವ್ಯತ್ಯಾಸ ಅವನು ಸ್ವಲ್ಪ ವಯಸ್ಸಾದವನಂತೆ ಕಾಣ್ತಾನೆ. ನಂಗಿನ್ನೂ ವಯಸ್ಸಾಗಿಲ್ಲ ಎಂದು ಸಿದ್ದರಾಮಯ್ಯ ಚಟಾಕಿ ಹಾರಿಸಿದರು. ಹೀಗೆ ಹೇಳುತ್ತಿದ್ದಂತೆ ನಿಮ್ಮ ಜನನ ಪ್ರಮಾಣ ಪತ್ರದ ನಿಖರತೆ ಬಗ್ಗೆಯೇ ಅನುಮಾನವಿದೆ. ನಿಮಗೆ ಅಷ್ಟು ವಯಸ್ಸಾಗಿಲ್ಲ ಬಿಡಿ. ತನಿಖೆಗೆ ಒಳಪಡಿಸಿದರೆ ನಿಜ ಗೊತ್ತಾಗುತ್ತದೆ ಎಂದು ಕಾಂಗ್ರೆಸ್ ಕೃಷ್ಣಬೈರೇಗೌಡ ಹೇಳಿದಾಗ ಚರ್ಚೆ ಮತ್ತೊಂದು ಮಗ್ಗುಲಿಗೆ ತಿರುಗಿತು.

ಮಧ್ಯಪ್ರವೇಶಿಸಿದ ಕಾಗೇರಿ ತನಿಖೆಗೆ ಆದೇಶಿಸುವುದು ಕಷ್ಟ. ಸದನ ಸಮಿತಿಯನ್ನೇ ಮಾಡಬೇಕು ಎಂದಾಗ ಸದನ ನಗೆಗಡಲಾಯಿತು.

ಆಧಾರ:ಪ್ರಜಾವಾಣಿ, ದಿನಾಂಕ:29.12.2022

**ದಿನಾಂಕ: 28.12.2022ರಂದು ಬೆಳಗಾವಿಯ ಅಧಿವೇಶನದಲ್ಲಿ ಹಿರಿಯ ಶಾಸಕರು, ಮಾಜಿ ಸಚಿವರಾದ ಶ್ರೀ ಆರ್.ವಿ. ದೇಶಪಾಂಡೆರವರಿಗೆ 2022ನೇ ಸಾಲಿನ ಅತ್ಯುತ್ತಮ ಶಾಸಕ ಪ್ರಶಸ್ತಿಯನ್ನು ಸನ್ಮಾನ್ಯ ಮುಖ್ಯಮಂತ್ರಿಯವರು, ಸನ್ಮಾನ್ಯ ವಿರೋಧ ಪಕ್ಷದ ನಾಯಕರು ಹಾಗೂ ಸನ್ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಸಣ್ಣ ನೀರಾವರಿ ಸಚಿರೊಂದಿಗೆ ನೀಡಿ ಗೌರವಿಸುತ್ತಿರುವ ಸಂದರ್ಭ;**



## 58. ಸುವರ್ಣಸೌಧ ಆವರಣದಲ್ಲಿ 4 ಪ್ರತಿಮೆ ಸ್ಥಾಪನೆಗೆ ಇಂದು ಶಂಕು

ಸುವರ್ಣಸೌಧದ ಆವರಣದಲ್ಲಿ ಕಿತ್ತೂರು ರಾಣಿ ಚೆನ್ನಮ್ಮ, ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ, ಮಹಾತ್ಮಗಾಂಧಿ, ಡಾ.ಬಿ.ಆರ್. ಅಂಬೇಡ್ಕರ್ ಅವರ ಪ್ರತಿಮೆಗಳನ್ನು ಸ್ಥಾಪಿಸುವ ಸಂಬಂಧ ಶಂಕುಸ್ಥಾಪನೆ ನೆರವೇರಲಿದೆ.

ಬೆಳಿಗ್ಗೆ 10.15ಕ್ಕೆ ಕಾರ್ಯಕ್ರಮ ನಡೆಯಲಿದ್ದು ಮುಖ್ಯಮಂತ್ರಿಯವರು ಗುದ್ದಲಿ ಪೂಜೆ ನೆರವೇರಿಸಲಿದ್ದಾರೆ. ವಿಧಾನಸಭೆ ಅಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ, ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ಉಭಯ ಸದನಗಳ ವಿರೋಧ ಪಕ್ಷ ನಾಯಕರಾದ ಸಿದ್ದರಾಮಯ್ಯ, ಬಿ.ಕೆ. ಹರಿಪ್ರಸಾದ್ ಸಚಿವ ಸಂಪುಟ ಸದಸ್ಯರು ಶಾಸಕರು ಸರ್ಕಾರದ ಹಿರಿಯ ಅಧಿಕಾರಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಲಿದ್ದಾರೆ.

ಕಳೆದ ವರ್ಷ ಅಧಿವೇಶನದಲ್ಲಿ ಈ ಕುರಿತು ಸರ್ಕಾರ ಘೋಷಣೆ ಮಾಡಿತ್ತು. ಅದರಂತೆ ಇದೀಗ ಗುದ್ದಲಿ ಪೂಜೆ ನೆರವೇರಲಿದೆ ಎಂದು ಮುಖ್ಯಮಂತ್ರಿಯ ಕಚೇರಿಯ ಮೂಲಗಳು ತಿಳಿಸಿವೆ.

ಆಧಾರ:ಕನ್ನಡಪ್ರಭ, ದಿನಾಂಕ:29.12.2022

## 59. ಅಡಿಕೆಗೆ ಪ್ರೋತ್ಸಾಹ ಬೇಡ

ಮಲೆನಾಡಿನ ಅಡಕೆ ಬೆಳೆ ಪ್ರದೇಶ ಮಿತಿಮೀರಿ ವಿಸ್ತರಣೆ ಆಗುತ್ತಿರುವುದರಿಂದ ಬೆಳೆ ಪ್ರದೇಶ ವಿಸ್ತರಣೆಗೆ ಸರ್ಕಾರದಿಂದ ಯಾವುದೇ ಪ್ರೋತ್ಸಾಹ ನೀಡದಿರುವುದು ಒಳ್ಳೆಯದು ಎಂದು ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಮತ್ತು ಗೃಹ ಸಚಿವ ಆರಗ ಜ್ಞಾನೇಂದ್ರ ಸರ್ಕಾರದ ಗಮನ ಸೆಳೆದರು.

ವಿಧಾನಸಭೆಯಲ್ಲಿ ರಾಜ್ಯಾದ್ಯಂತ ಅತಿವೃಷ್ಟಿ ಹಾಗೂ ರೈತರು ಎದುರಿಸುತ್ತಿರುವ ಸಂಕಷ್ಟಗಳ ಮೇಲಿನ ಚರ್ಚೆಯಲ್ಲಿ ಮಾತನಾಡಿದ ಆರಗ ಜ್ಞಾನೇಂದ್ರ ಒಂದು ಕಾಲದಲ್ಲಿ ಮಲೆನಾಡಿಗೆ ಸೀಮಿತವಾಗಿದ್ದ ಅಡಕೆ ಬೆಳೆ ಆನಂತರ ಅರೆ ಮಲೆನಾಡು, ಬಯಲು ಸೀಮೆಗೂ ವಿಸ್ತರಿಸಿತು.

ಕರ್ನಾಟಕದಲ್ಲಿ ಮಾತ್ರವಲ್ಲ ನೆರೆಯ ಆಂಧ್ರ ಮಹಾರಾಷ್ಟ್ರದಲ್ಲೂ ಭಾರಿ ಪ್ರಮಾಣದಲ್ಲಿ ಬೆಳೆಯಲಾಗುತ್ತಿದೆ ಎಂದರು.

ಅಡಕೆ ನರ್ಸರಿ ವಹಿವಾಟು ವಾರ್ಷಿಕ ರೂ.1 ಕೋಟಿ ಆಗಿದೆ. ವಿದೇಶಗಳು ಹಾಗೂ ವಿಶ್ವ ಬ್ಯಾಂಕ್‌ನಿಂದ ಸಾವಿರಾರು ಕೋಟಿ ಸಾಲ ಪಡೆದು, ಜಲಾಶಯ ಕಟ್ಟಿ ಷರತ್ತು ಉಲ್ಲಂಘಿಸಿ ಆಹಾರ ಬೆಳೆಗಳ ಬದಲು ಅಡಕೆ ತೋಟ ಅಭಿವೃದ್ಧಿಪಡಿಸಲಾಗುತ್ತಿದೆ. ಇದರಿಂದ ಮುಂದಿನ ದಿನಗಳಲ್ಲಿ ಸಾಂಪ್ರದಾಯಿಕವಾಗಿ ಅಡಕೆ ಬೆಳೆದು ಬದುಕು ಕಟ್ಟಿಕೊಂಡಿರುವ ಮಲೆನಾಡು ಹಾಗೂ ಕರಾವಳಿ ರೈತರು ಸಂಕಷ್ಟಕ್ಕೆ ತುತ್ತಾಗುವ ಆತಂಕ ಆವರಿಸಿದೆ ಎಂದು ಕಳವಳ ವ್ಯಕ್ತಪಡಿಸಿದರು.

ಇದಕ್ಕೆ ದನಿಗೂಡಿಸಿದ ಸ್ಪೀಕರ್ ಕಾಗೇರಿ ಮಲೆನಾಡಿನಲ್ಲಿ ಅರ್ಧ ಒಂದು ಎಕರೆಯಲ್ಲಿ ರೈತರು ಜೀವನೋಪಾಯಕ್ಕೆ ಸಂಪ್ರದಾಯಿಕವಾಗಿ ಅಡಕೆ ಬೆಳೆಯುತ್ತಿದ್ದಾರೆ. ಅಲ್ಲಿ ಬೇರಾವ ಬೆಳೆ ಬೆಳೆಯಲು ಸಾಧ್ಯವೆ ಇಲ್ಲ ಬಯಲು ಪ್ರದೇಶದಲ್ಲಿ 50–100 ಎಕರೆ ಅಡಕೆ ತೋಟ ಮಾಡಿ ಮಲೆನಾಡಿನ ಸಣ್ಣ ರೈತರಿಗೆ ಉಳಿಗಾಲ ಇಲ್ಲದಂತೆ ಆಗಿದೆ ಎಂದರು.

ಈ ವೇಳೆ ಜೆ.ಡಿ.ಎಸ್‌ನ ಹೆಚ್.ಡಿ. ರೇವಣ್ಣ ಅವರಿಗೆ ನೀವೆಷ್ಟು ಅಡಕೆ ತೋಟ ಮಾಡಿದ್ದೀರ ಎಂದು ಸ್ಪೀಕರ್ ಪ್ರಶ್ನಿಸಿದರು. ಇದಕ್ಕೆ ರೇವಣ್ಣ 45–50 ಎಕರೆ ಅಷ್ಟೆ ಎಂದಿದ್ದಕ್ಕೆ ಉಳಿದ ಭೂಮಿ ಏಕೆ ಬಿಟ್ಟಿದ್ದೀರ ಅದಕ್ಕೂ ಅಡಕೆ ಹಾಕಿ ಎಂದಾಗ ಇಡಿ ಸದನ ನಗೆಯಾಡಿತು.

ಚರ್ಚೆ ಮುಂದುವರಿಸಿದ ಆರಗ ಜ್ಞಾನೇಂದ್ರ ಅಡಕೆ ಬೆಳೆ ಪ್ರದೇಶ ವಿಸ್ತರಿಸಬೇಡಿ ಎಂದು ಹೇಳುವುದು ಸರ್ಕಾರದಿಂದ ಕಡಿವಾಣ ಹಾಕುವುದು, ರೈತರಿಗೆ ತಡೆಯೊಡ್ಡುವುದು ಸಾಧ್ಯವಿಲ್ಲ ಹಾಗೆ ಹೇಳುವುದಕ್ಕೆ ರೈತರಿಂದ ಆಕ್ಷೇಪವನ್ನೂ ಎದುರಿಸಿದ್ದೇವೆ. ಅಡಕೆ ಬೆಳೆಗೆ ಬೆಲೆಯೇ ಒಂದು ಶಾಪ. ಹೀಗಾಗಿ ಅನ್ನ ಬೆಳೆಯುವ ರೈತರು ಅಡಕೆ ತೋಟ ಮಾಡುತ್ತಿದ್ದಾರೆ. ಸರ್ಕಾರದಿಂದ ಅಡಕೆ ತೋಟ ಅಭಿವೃದ್ಧಿಗೆ ಪ್ರೋತ್ಸಾಹ ನೀಡಬಾರದು ಎಂದು ಕೋರಿದರು.

ಈಗ ನಮಗೆ ಅದರ ಬೆಲೆ ಕಣ್ಣು ಕುಕ್ಕುತ್ತದೆ. ಆದರೆ, ಆಹಾರ ಉತ್ಪಾದನೆಯೇ ಇಲ್ಲದೆ ಅಡಕೆ ಉತ್ಪಾದನೆ ಮೀತಿಮೀರಿ ಏರಿಕೆ ಆಗುವುದು ನೋಡಿದಾಗ ಮುಂದಿನ 5–10 ವರ್ಷಗಳಲ್ಲಿ ಅಡಕೆ ಮರಗಳನ್ನೇ ಕಡಿಯಬೇಕಾದ ಪರಿಸ್ಥಿತಿ ಬಂದರೆ ಅಶ್ವರ್ಯವಿಲ್ಲ ಎಂದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:29.12.2022

## 60. ಬೆಳಗಾವಿಯಲ್ಲಿ ವಿಕ ಸದನ ಶೂರರು ಲೋಕಾರ್ಪಣೆ

ರಾಜ್ಯ ವಿಧಾನಸಭೆಗೆ 70 ವರ್ಷ ತುಂಬಿರುವ ಹಿನ್ನಲೆಯಲ್ಲಿ ವಿಜಯ ಕರ್ನಾಟಕ ಪ್ರಕಟಿಸಿರುವ ವಿಕ ಸದನ ಶೂರರು ಕಾಫಿ ಟೇಬಲ್ ಪುಸ್ತಕವನ್ನು ಬೆಳಗಾವಿಯಲ್ಲಿ ಬಿಡುಗಡೆ ಮಾಡಲಾಯಿತು.

ಸಂಕಂ ರೆಸಿಡೆನ್ಸಿ ಹೋಟೇಲ್‌ನಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿಯವರು ಪುಸ್ತಕ ಬಿಡುಗಡೆ ಮಾಡಿದರು. ಮುಖ್ಯ ಅತಿಥಿಗಳಾಗಿ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಭಾಗವಹಿಸಿದ್ದರು. ವಿಧಾನ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರು ಅಧ್ಯಕ್ಷತೆ ವಹಿಸಿದ್ದರು. ವಿಜಯ ಕರ್ನಾಟಕ ಸಂಪಾದಕ ಸುದರ್ಶನ ಚನ್ನಂಗಿಹಳ್ಳಿ ಪಾಲ್ಗೊಂಡಿದ್ದರು.

**ಮೆಚ್ಚುಗೆಗೆ ಪಾತ್ರ:** ರಾಜ್ಯ ವಿಧಾನಸಭೆಗೆ 70 ವರ್ಷ ತುಂಬಿದ ಹಿನ್ನೆಲೆಯಲ್ಲಿ ಮಾಧ್ಯಮ ಸಂಸ್ಥೆಯೊಂದು ಅದರ ದಾಖಲೀಕರಣ ಮಾಡಿರುವುದನ್ನು ಮುಖ್ಯಮಂತ್ರಿಗಳು ಸಭಾಧ್ಯಕ್ಷರು ಪ್ರತಿಪಕ್ಷ ನಾಯಕರು ಮುಕ್ತ ಕಂಠದಿಂದ ಶ್ಲಾಘಿಸಿದರು. ಇದೊಂದು ಉತ್ತಮವಾದ ಕಾರ್ಯ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಸದನ ಶೂರ ಗೌರವಕ್ಕೆ ಪಾತ್ರರಾದ ಶಾಸಕರಿಗೆ ಗಣ್ಯ ಅತಿಥಿಗಳು ಅಭಿನಂದಿಸಿದರು. ಸಚಿವರಾದ ಮುರುಗೇಶ್ ನಿರಾಣಿ, ಸಿ.ಸಿ. ಪಾಟೀಲ್ ಸೇರಿದಂತೆ ಸಂಪುಟ ಸದಸ್ಯರು ಶಾಸಕರಾದ ಕೆ.ಎಂ ಶಿವಲಿಂಗೇಗೌಡ, ಸುಭಾಷ್ ಗುತ್ತೇದರ್, ಡಾ: ಅಜಯ್ ಧರ್ಮಸಿಂಗ್, ಎಸ್. ಸುರೇಶ್

ಕುಮಾರ್, ಶ್ರೀಮಂತ ಪಾಟೀಲ್, ಮಹೇಶ್ ಕಮಟಗಿ, ಪ್ರೀತಂ ಗೌಡ, ವಿಧಾನ ಪರಿಷತ್ತಿನ ಸದಸ್ಯರಾದ ಟಿ.ಎ. ಶರವಣ, ಎನ್ ರವಿಕುಮಾರ್ ಹಾಗೂ ಹಲವು ಹಿರಿಯ , ಕಿರಿಯ ಶಾಸಕರು ಪಾಲ್ಗೊಂಡಿದ್ದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:29.12.2022

**ದಿನಾಂಕ: 28.12.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿಯಲ್ಲಿ ವಿಜಯ ಕರ್ನಾಟಕ ಪತ್ರಿಕೆಯವರು ಕರ್ನಾಟಕ ವಿಧಾನ ಸಭೆಗೆ 70 ವರ್ಷ ತುಂಬಿದ ಪ್ರಯುಕ್ತ ಪ್ರಕಟಿಸಿರುವ "ಸದನ ಶೂರರು" ಎಂಬ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ ಬೊಮ್ಮಾಯಿ ಪ್ರತಿಪಕ್ಷದ ನಾಯಕರಾದ ಶ್ರೀ ಸಿದ್ಧರಾಮಯ್ಯ, ವಿಜಯ ಕರ್ನಾಟಕ ಪತ್ರಿಕೆಯ ಸಂಪಾದಕರಾದ ಶ್ರೀ ಸುದರ್ಶನ್ ಹಾಗೂ ಇತರೆ ಪ್ರಮುಖರು ಉಪಸ್ಥಿತರಿದ್ದರು.**






## 61. ಅಧಿವೇಶನಕ್ಕೆ ಇಂದು ತೆರೆ

ಮುಖ್ಯಮಂತ್ರಿ, ಸಚಿವರು ಮತ್ತು ಶಾಸಕರಿಗೆ ಕಾರ್ಯಕ್ರಮಗಳ ಒತ್ತಡದ ಹಿನ್ನೆಲೆಯಲ್ಲಿ ಚಳಿಗಾಲದ ವಿಧಾನ ಮಂಡಲದ ಅಧಿವೇಶನವನ್ನು ಡಿಸೆಂಬರ್20ರಂದೇ ಅಂತ್ಯಗೊಳಿಸುವುದಾಗಿ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ಘೋಷಿಸಿದ್ದಾರೆ.

ವಿದಾನಸಭೆ ಕಲಾಪದ ನಡುವೆ ಸದಸ್ಯರನ್ನು ಉದ್ದೇಶಿಸಿ ಮಾತನಾಡಿದ ಅವರು ಕಲಾಪವನ್ನು ಡಿಸೆಂಬರ್ 30ರ ಮಧ್ಯಾಹ್ನದವರೆಗೆ ನಡೆಸಲು ತೀರ್ಮಾನಿಸಲಾಗಿತ್ತು. ಆದರೆ, ಕಾರ್ಯಕ್ರಮಗಳ ಒತ್ತಡದ ಹಿನ್ನಲೆಯಲ್ಲಿ ಬಿಜೆಪಿ ಕಾಂಗ್ರೆಸ್ ಮತ್ತು ಜೆ.ಡಿ.ಎಸ್ ನಾಯಕರೊಂದಿಗೆ ನಡೆಸಿದ ಸಭೆಯಲ್ಲಿ ಈ ತೀರ್ಮಾನ ಕೈಗೊಳ್ಳಲಾಗಿದೆ ಎಂದು ಮಾಹಿತಿ ನೀಡಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:29.12.2022

## 62. ಅಭಿವೃದ್ಧಿಯ ಮುನ್ನೋಟ ನೀಡದ ಅಧಿವೇಶನ 10 ದಿನ

ರಾಜ್ಯದ ಅದರಲ್ಲೂ ಉತ್ತರ ಕರ್ನಾಟಕದ ಅಭಿವೃದ್ದಿಗೆ ಯಾವುದೇ ಮುನ್ನೋಟವನ್ನು ನೀಡದೇ ಮಾಮೂಲಿ ಜಾಡಿಗೆ ಬಿದ್ದ ಕಲಾಪದಂತೆಯೇ ಚಳಿಗಾಲದ ಅಧಿವೇಶನ ಮುಕ್ತಾಯವಾಗಿದೆ. ಹತ್ತು ದಿನಗಳ ಅಧಿವೇಶನ ನಡೆಯಬೇಕಿತ್ತಾದರೂ ನಡೆದಿದ್ದು ಎಂಟು ದಿನಗಳು ಮಾತ್ರ. ರಾಜಕೀಯ ಕಾರಣಗಳಿಗಾಗಿಯೇ ಅಧಿವೇಶನ ಒಂದು ದಿನ ಮೊದಲೇ ಮೊಟಕಾಗಿದೆ. ಕಲಾಪ ನಡೆದ ದಿನಗಳಲ್ಲಿ ಅರ್ಥಗರ್ಭಿತ ಚರ್ಚೆ ನಡೆದಿದ್ದು ಕಡಿಮೆಯೆ.

ಮುಖ್ಯಮಂತ್ರಿಗಳು ದೆಹಲಿ ಪ್ರವಾಸ, ಅಭಿವೃದ್ಧಿ ಯೋಜನೆಗಳಿಗೆ ಚಾಲನೆ ನೀಡಲು ವಿವಿಧ ಕ್ಷೇತ್ರಗಳಿಗೆ ಪ್ರವಾಸ ತೆರಳುತ್ತಿದ್ದರು. ಇದರಿಂದ ಕಲಾಪಕ್ಕೆ ಬಂದು ಹೋಗುತ್ತಿದ್ದರು. ಬೆಳಗಾವಿ ಅಧಿವೇಶನ ನಡೆದಾಗಲೆಲ್ಲ ಎರಡು ದಿನಗಳ ಕಾಲ ಉತ್ತರ ಕರ್ನಾಟಕದ ಅಭಿವೃದ್ಧಿ ವಿಚಾರಗಳಿಗೆ ಮೀಸಲಿರುತ್ತಿತ್ತು. ಆದರೆ, ಈ ಬಾರಿ ಆದರಲ್ಲೂ ಚುನಾವಣೆಗೆ ಹೋಗುವ ಸಂದರ್ಭದಲ್ಲಿ ಚರ್ಚೆ ಅಧಿವೇಶನ ಮುಕ್ತಾಯಕ್ಕೆ ಒಂದು ದಿನ ಮೊದಲು ಆರಂಭವಾಯಿತ್ತಷ್ಟೇ. ಆದರೆ, ನಿರೀಕ್ಷಿತ ಮಟ್ಟದಲ್ಲಿ ನಡೆಯಲಿಲ್ಲ.

ಉತ್ತರ ಕರ್ನಾಟಕದ ಸಮಗ್ರ ಅಭಿವೃದ್ಧಿಯ ಆಶಯಗಳನ್ನು ಹೊತ್ತು ಇಲ್ಲಿನ ಸುವರ್ಣಸೌಧದಲ್ಲಿ ನಡೆದ ಹತ್ತು ದಿನಗಳ ವಿಧಾನಮಂಡಲದ ಅಧಿವೇಶನ ಸಮುದ್ರಕ್ಕೆ ನೀರು ಹೊತ್ತಂತೆ ಆಗಿದೆ.

ಉಭಯ ಸದನಗಳ ಮಹತ್ವದ ಚರ್ಚೆಗಳು ನಡೆಯದೆ ಅಧಿವೇಶನ ಅಂತ್ಯಗೊಂಡಿದೆ. ಬೆಳಗಾವಿಯಲ್ಲಿ ನಡೆದ ಹನ್ನೊಂದನೇ ಅಧಿವೇಶನ ಇದು. ಮೊದಲ ಒಂದೆರಡು ಹೊರತು ಇನ್ನುಳಿದ ಯಾವುದೇ ಆಧಿವೇಶನಗಳಂತೆ ಈ ಬಾರಿಯೂ ಒಣ ಚರ್ಚೆಗಷ್ಟೇ ಸೀಮಿತವಾಯಿತು. ಅಧಿವೇಶನ ಆರಂಭಿಸಿದ ಸಂದರ್ಭದಲ್ಲಿ ಮರಾಠಿಗರ ಪ್ರಾಬಲ್ಯ ಹೆಚ್ಚಿತ್ತು. ಅಧಿವೇಶನದ ಮೂಲಕ ಅವರ ಪ್ರಭಾವವನ್ನು ಸಾಕಷ್ಟು ತಗ್ಗಿಸಲಾಗಿದೆ. ಅದರ ಮುಂದಿನ ಭಾಗವಾಗಿ ಉತ್ತರ ಕರ್ನಾಟಕ ಅಭಿವೃದ್ಧಿ ಬಗ್ಗೆ ಚರ್ಚೆ ಮಾಡಿ ಪರಿಹಾರ ರೂಪಿಸಿ ಇಲ್ಲಿನ ಜನರಲ್ಲಿ ಸರ್ಕಾರ ನಮ್ಮ ಪರವಾಗಿದೆ ಎಂಬ ವಿಶ್ವಾಸ ಮೂಡಿಸುವ ಕೆಲಸ ಅಧಿವೇಶನದ ಮೂಲಕ ಆಗಬೇಕಾಗಿತ್ತು. ಆದರೆ ಸರ್ಕಾರ ಹಾಗೂ ಪ್ರತಿಪಕ್ಷ ನಡೆದುಕೊಂಡ ರೀತಿ ನೋಡಿದಾಗ ಕಾಟಾಚಾರದ ಅಧಿವೇಶನ ಎಂಬುದು ಈ ಭಾಗದ ಜನರಿಗೆ ಭಾಸವಾಗಿದೆ. ಅದರಿಂದ ಇಲ್ಲಿನ ಅಧಿವೇಶನದ ಬಗ್ಗೆ ವಿಶೇಷ ನಿರೀಕ್ಷೆಯನ್ನೇನು ಇಟ್ಟುಕೊಂಡಿಲ್ಲ.

ಈ ಅಧಿವೇಶನದಲ್ಲಿ ಮೊದಲ ವಾರದಲ್ಲಿ ಹೆಚ್ಚಿನ ಚರ್ಚೆಗಳಾಗಲಿಲ್ಲ. ಪ್ರತಿಪಕ್ಷಗಳು ತರುವ ವಿಚಾರಗಳು ಹೆಚ್ಚಿನ ಚರ್ಚೆಯಾಗದಂತೆ ಅಥವಾ ಉತ್ತರ ಬಾರದಂತೆ ನೋಡಿಕೊಳ್ಳುವಲ್ಲಿ ಆಡಳಿತ ಪಕ್ಷ ಅತ್ಯಂತ ಜಾಣ್ಮೆ ತೋರಿಸಿದ್ದು ಅಧಿವೇಶನದ ವಿಶೇಷವೂ ಹೌದು. ರಚನಾತ್ಮಕವಾದ ಚರ್ಚೆಗೆ ಸಮಯವನ್ನು ಸದನ ನೀಡಲಿಲ್ಲ.

**ಮೀಸಲಾತಿಯೇ ಹೆಚ್ಚು ಚರ್ಚೆ**: ಅಧಿವೇಶನ ನಡೆಯುವ ಸಂದರ್ಭದಲ್ಲಿ ಹೆಚ್ಚಿನ ಚರ್ಚೆಗೆ ಒಳಗಾಗಿದ್ದು ಮೀಸಲಾತಿಯ ವಿಚಾರ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಮೀಸಲಾತಿ ಹೆಚ್ಚಳಕ್ಕೆ ಸದನದಲ್ಲಿ ವಿಧೇಯಕ ಅಂಗೀಕಾರವಾಗಿದ್ದು ಒಂದೆಡೆಯಾದರೆ ಪಂಚಮಸಾಲಿ ಮೀಸಲಾತಿ ಸೇರಿದಂತೆ ಸಾಕಷ್ಟು ಸಮುದಾಯಗಳ ಮೀಸಲಾತಿಯ ವಿಚಾರ ಸುವರ್ಣಸೌಧದ ಒಳಗೆ ಹಾಗೂ ಹೊರಗೆ ಸಾಕಷ್ಟೂ ಚರ್ಚೆಗೆ ಒಳಗಾಗಿತ್ತು. ಬೆಳಗಾವಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ವಿಧೇಯಕ, ಖಾಸಗಿ ವಿವಿಗಳ ವಿಧೇಯಕ, ಕಾಫಿ ತೋಟಗಳು ಲೀಸ್ ನೀಡುವುದು ಸೇರಿ ಕೆಲವೂ ವಿಧೇಯಕಗಳ ಮೇಲೆ ಚರ್ಚೆಯಾಗಿದ್ದು ವಿಶೇಷ. ಆದರೆ ಗದ್ದಲವಾಗಲಿಲ್ಲ. ಅಧಿವೇಶನ ಸಂದರ್ಭದಲ್ಲಿಯೂ ಸಂಪುಟ ವಿಸ್ತರಣೆ ಚರ್ಚೆಗೆ ಬಂದಿತ್ತು. ಮುಖ್ಯಮಂತ್ರಿ ದೆಹಲಿಗೆ ಹೋಗಿ ಬಂದ ನಂತರ ಬಿಜೆಪಿ ವಲಯದಲ್ಲಿ ಚರ್ಚೆ ಹೆಚ್ಚಾಗುವಂತೆ ಮಾಡಲಾಗುತ್ತಿತ್ತು.

**ಚರ್ಚೆಗೆ ಬಾರದ ವಿಷಯಗಳು:** ಪ್ರತಿಪಕ್ಷ ಕಾಂಗ್ರೆಸ್ ಹಾಗೂ ಜೆಡಿಎಸ್ ರಾಜ್ಯ ಸರ್ಕಾರದ ವಿರುದ್ಧ ಚರ್ಚೆಯಾಗುತ್ತಿರುವ ನಲವತ್ತು ಪರ್ಸೆಂಟ್ ಸೇರಿದಂತೆ ಕೆಲವು ವಿಚಾರಗಳಲ್ಲಿ ಆಡಳಿತಪಕ್ಷವನ್ನು ತುದಿಗಾಲಿನಲ್ಲಿ ನಿಲ್ಲಿಸುವಂತೆ ಮಾಡುತ್ತೇವೆ ಎಂಬ ನಿರೀಕ್ಷೆ ಇತ್ತು. ಆದರೆ ಆ ವಿಚಾರ ಚರ್ಚೆಗೆ ಬರಲಿಲ್ಲ. ಪ್ರತಿಪಕ್ಷ ಸಹ ಒತ್ತಾಯಿಸಲು ಹೋಗಲಿಲ್ಲ. ಪ್ರತಿ ಪಕ್ಷದ ಕೈಯಲ್ಲಿ ಸಾಕಷ್ಟು ಅಸ್ತ್ರಗಳಿದ್ದರೂ ಏಕೆ ಅವುಗಳನ್ನು ಪ್ರಯೋಗಿಸುವಲ್ಲಿ ಮುಂದಾಗಲಿಲ್ಲ.

**ಬಾರದ ಉತ್ತರಗಳು**: ನೀರಾವರಿ ವಿಚಾರಗಳ ಬಗ್ಗೆ ಸರಿಯಾದ ಚರ್ಚೆಯೇ ಆಗಲಿಲ್ಲ. ಪ್ರಾಣಿಗಳ ಹಾವಳಿ ಸಮರ್ಪಕ ಚರ್ಚೆಯಾಗಲಿಲ್ಲ. ಚರ್ಮಗಂಟು ರೋಗ ರೈತರ ಸಂಕಷ್ಟ, ನಿರುದ್ಯೋಗ ಮೊದಲಾದ ವಿಚಾರಗಳು ಚರ್ಚೆಗೆ ಒಳಪಡಲಿಲ್ಲ.

**ಉತ್ತರ ಕನ್ನಡಗೆ ಸಿಹಿ:** ಅಧಿವೇಶನದಲ್ಲಿ ಉತ್ತರ ಕರ್ನಾಟಕದ ಸಮಸ್ಯೆ, ಪರಿಹಾರ, ಅಭಿವೃದ್ಧಿ ಬಗ್ಗೆ ಸಮರ್ಥ ಚರ್ಚೆಯಾಗದಿದ್ದರೂ, ಕೊನೆಯ ದಿನ ಕಳಸಾ –ಬಂಡೂರಿ ಯೋಜನೆ ವಿಚಾರದಲ್ಲಿ ಸಿಹಿ ಸುದ್ದಿ ಸಿಕ್ಕಿದ್ದು ವಿಶೇಷ. ಆದರೆ ಆ ಸಂತಸ ಅನುಭವಿಸವುದಕ್ಕೂ ಶಾಸಕರ ಸಂಖ್ಯೆ ವಿರಳವಾಗಿತ್ತು. ಬೆಳಗಾವಿ ಅಧಿವೇಶನ ವಿಧಾನ ಪರಿಷತ್‌ನ ಸಭಾಪತಿ ಹಾಗೂ ಉಪ ಸಭಾಪತಿ ಆಯ್ಕೆಗೆ ಸಾಕ್ಷಿಯಾಯಿತು.

**ಮಹಾರಾಷ್ಟ್ರಕ್ಕೆ ತಿರುಗೇಟು:** ಪದೇಪದೇ ಕೆದಕುವ ಮಹಾರಾಷ್ಟ್ರಕ್ಕೆ ತಿರುಗೇಟು ನೀಡುವ ಉದ್ದೇಶದಿಂದ ಆ ರಾಜ್ಯದ ನಾಯಕರ ಹೇಳಿಕೆಯನ್ನು ಖಂಡಿಸುವ ನಿರ್ಣಯವನ್ನು ವಿಧಾನಮಂಡಲ ಅಂಗೀಕರಿಸಿದೆ. ಆದರೆ ಮಹಾರಾಷ್ಟ್ರ ಮತ್ತೊಮ್ಮೆ ರಾಜ್ಯದ ಭೂ ಪ್ರದೇಶದ ಮೇಲೆ ಕಣ್ಣಾಕುವ ನಿರ್ಣಯ ಮಾಡಿದೆ. ಅದಕ್ಕೆ ಅಧಿವೇಶನದ ಮೂಲಕವೇ ಉತ್ತರ ನೀಡಿ ಕರ್ನಾಟಕಕ್ಕೆ ಸೇರಬೇಕಾದ ಮಹಾರಾಷ್ಟ್ರದ ಭೂ ಭಾಗ ಕೇಳುವ ನಿರ್ಣಯ ಮಾಡಲಿಲ್ಲ.

**ಸ್ಪೀಕರ್ ಅಸಮಾಧನ**: ಸಚಿವರೇ ಇಲ್ಲವೆಂದು ಕಲಾಪ ಮುಂದೂಡಿದ ಘಟನೆಗೂ ಇದೇ ಮೊದಲ ಬಾರಿಗೆ ಬೆಳಗಾವಿ ಅಧಿವೇಶನ ಸಾಕ್ಷಿಯಾಯಿತು. ಈ ವಿಚಾರವಾಗಿ ಸಚಿವ ಮಾಧುಸ್ವಾಮಿ ವಿರುದ್ಧ ಸ್ಪೀಕರ್ ಕಿಡಿಕಿಡಿಯಾದರು, ಎಂದಿನಂತೆ ಪ್ರತಿಪಕ್ಷದ ನಾಯಕ ಸಿದ್ಧರಾಮಯ್ಯ ರಮೇಶ್ ಕುಮಾರ್, ಶಿವಲಿಂಗೇಗೌಡ ಪ್ರಿಯಾಂಕ್ ಖರ್ಗೆ, ಕೃಷ್ಣ ಬೈರೇಗೌಡ, ಬಂಡೆಪ್ಪ ಕಾಶೆಂಪೂರ್ ಇದರ ಅವಕಾಶವನ್ನು ಬಳಸಿಕೊಂಡರು, ಸಚಿವರ ಪೈಕಿ ಮಾಧುಸಾಮಿ, ಕೋಟ ಶ್ರೀನಿವಾಸ ಪೂಜಾರಿ, ಅಶೋಕ್, ಗೋವಿಂದ ಕಾರಜೋಳ ಸರ್ಕಾರದ ಪರ ಬ್ಯಾಟಿಂಗ್ ಮಾಡಿದರು.

ಆಧಾರ:ವಿಜಯ ವಾಣಿ ದಿನಾಂಕ:30.12.2022

## 63. ಖಾಸಗಿ ವಿವಿ ವಿಧೇಯಕ ಹಿಂಪಡೆದ ಸರ್ಕಾರ

ತರಾತುರಿಯಲ್ಲಿ ಮಂಡಿಸಿದ ಜೆ.ಎಂ ವಿಶ್ವವಿದ್ಯಾಲಯ ವಿಧೇಯಕ ಬಗ್ಗೆ ಹೆಚ್ಚಿನ ಚರ್ಚೆಗೆ ಅನುವಾಗುವಂತೆ ಮುಂದಿನ ಅಧಿವೇಶನದಲ್ಲಿ ತೆಗೆದುಕೊಳ್ಳುವಂತೆ ಪಕ್ಷಾತೀತವಾಗಿ ಒತ್ತಾಯಿಸಿದ್ದರಿಂದ ಸರ್ಕಾರವು ವಿಧೇಯಕ ವಾಪಸ್ ಪಡೆಯಿತು.

ರಾಜ್ಯ ಸರ್ಕಾರ ಮುಂದಿನ ಶೈಕ್ಷಣಿಕ ವರ್ಷದಿಂದಲೇ ಆರು ಹೊಸ ಖಾಸಗಿ ವಿಶ್ವವಿದ್ಯಾಲಯ ಆರಂಭಕ್ಕೆ ಅನುಮತಿ ನೀಡಲು ಪ್ರಸಕ್ತ ಅಧಿವೇಶನದಲ್ಲಿ ವಿಧೇಯಕ ಮಂಡಲನೆಗೆ ಸಿದ್ಧವಾಗಿತ್ತು. ಈ ಸಂಬಂಧ ಎರಡೂ ದಿನಗಳ ಹಿಂದೆ ತುರ್ತು ಸಚಿವ ಸಂಪುಟದಲ್ಲಿ ಅನುಮೋದನೆ ಕೂಡ ಪಡೆದುಕೊಂಡಿತ್ತು. ಅಧಿವೇಶನದ ಕಡೆ ದಿನವಾದ ಗುರುವಾರ ಹಲವು ಮಹತ್ವದ ವಿಧೇಯಕಗಳು ಚರ್ಚೆಗೆ ಬಂದ ಹಿನ್ನಲೆಯಲ್ಲಿ ಖಾಸಗಿ ವಿಶ್ವವಿದ್ಯಾಲಯಗಳ ವಿಧೇಯಕ ಮಂಡಿಸುವ ಹೊತ್ತಿಗೆ ಸಂಜೆ 5 ಗಂಟೆ ಆಯಿತು.

ಕೊನೆಯಲ್ಲಾದರೂ ಎಡರೂ ಸದನಗಳಲ್ಲಿ ಅನುಮೋದನೆ ಪಡೆಯುವ ವಿಶ್ವಾಸದೊಂದಿಗೆ ಉನ್ನತ ಶಿಕ್ಷಣ ಸಚಿವ ಡಾ: ಸಿ.ಎನ್. ಅಶ್ವಥನಾರಾಯಣ ಮುಂದಾದರು. ಮೊದಲಿಗೆ ವಿಧಾನಸಭೆಯಲ್ಲಿ ವಿಧೇಯಕ ಮಂಡಿಸಿದರು. ವಿದ್ಯಾರ್ಥಿಗಳಿಗೆ ಅತ್ಯುತ್ತಮ ಸೌಲಭ್ಯಗಳೊಂದಿಗೆ, ಕಲಿಕೆಗೆ ಹೆಚ್ಚು ಅವಕಾಶ ಇರುವ ಮತ್ತು ಸ್ಪರ್ಧಾತ್ಮಕ ಕೋರ್ಸ್‌ಗಳು ಲಭ್ಯವಾಗಲಿವೆ. ಪ್ರವೇಶಾತಿಯಲ್ಲಿ ಸರ್ಕಾರ ಮತ್ತು ವಿಶ್ವವಿದ್ಯಾಲಯ ನಡುವೆ 40:60 ಪ್ರಮಾಣ ಇರಲಿದೆ. ವಿದೇಶಿ ವಿವಿ ಮತ್ತು ಉದ್ಯಮಗಳೊಂದಿಗೆ ಒಡಂಬಡಿಕೆ ಮಾಡಿಕೊಂಡು ವಿದ್ಯಾರ್ಥಿಗಳಿಗೆ ವಿಶ್ವಮಟ್ಟದಲ್ಲಿ ತೆರೆದುಕೊಳ್ಳುವ ಅವಕಾಶವಿರುತ್ತದೆ ಎಂದು ಸದನದ ಗಮನ ಸೆಳೆದರು.

ಆಗ ಕಾಂಗ್ರೆಸ್‌ನ ಹಿರಿಯ ಸದಸ್ಯ ಎಚ್. ಕೆ. ಪಾಟೀಲ್ ಆರು ವಿಶ್ವವಿದ್ಯಾಲಯಗಳ ಆರಂಭಕ್ಕೆ ಕಾನೂನು ರೂಪಿಸಲು ಕೊನೆ ಹಂತದಲ್ಲಿ ವಿಧೇಯಕ ತರಲಾಗಿದೆ. ವಿಶ್ವವಿದ್ಯಾಲಯಗಳ ಸ್ವರೂಪ ಬದಲಾವಣೆ ಮಾಡುವಂತಹ ವಿಧೇಯಕದ ಬಗ್ಗೆ ಒಂದಿಬ್ಬರು ಮಾತನಾಡಿ ಅನುಮೋದನೆ ನೀಡುವುದು ಸದಸನಕ್ಕೆ ಅಗೌರವ ತರುತ್ತದೆ. ನೀವು ಬೇಕಾದರೆ ಸುಗ್ರಿವಾಜ್ಞೆ ಮೂಲಕ ಜಾರಿಗೊಳಿಸಿ ಮುಂದಿನ ಅಧಿವೇಶನದಲ್ಲಿ ಹೆಚ್ಚಿನ ಸಮಯ ಕೊಟ್ಟು ಚರ್ಚಿಸೋಣ. ಈ ಹಿಂದೆ ಅಜೀತ್ ಪ್ರೇಮ್‌ಜಿ ವಿವಿಗೆ ಅನುಮತಿ ನೀಡಿ ಅದರಲ್ಲಿ ರಾಜ್ಯದ ವಿದ್ಯಾರ್ಥಿಗಳಿಗೆ ಎಷ್ಟರ ಮಟ್ಟಿಗೆ ಅನುಕೂಲವಾಗಿದೆ ಎಂಬುದರ ಮಾಹಿತಿ ತರಿಸಿ ನೋಡಿದರೆ ಸತ್ಯಸಂಗತಿ ಗೊತ್ತಾಗುತ್ತದೆ ಎಂದು ಹೇಳಿದರು.

ಇದಕ್ಕೆ ಆಡಳಿತರೂಢ ಪಕ್ಷದ ಅರವಿಂದ ಲಿಂಬಾವಳಿ, ವೀರಣ್ಣ ಚಿರಂತಿಮಠ, ಬಸನಗೌಡ ಪಾಟೀಲ್ ಯನ್ನಾಳ್, ಜೆಡಿಎಸ್‌ನ ಬಂಡೆಪ್ಪ ಕಾಶೆಂಪುರ ದನಿಗೂಡಿಸಿದರು. ಅಲ್ಲದೆ ಪಕ್ಷಾತೀತವಾಗಿಯೂ ಸದಸ್ಯರು ದನಿ ಎತ್ತಿದರು. ಇದರಿಂದ ಸಚಿವರೂ ವಿಧೇಯಕ ಹಿಂಪಡೆದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:30.12.2022

## 64. ಎನ್‌ಪಿಎಸ್ ರದ್ದಿಲ್ಲ, ಓಪಿಎಸ್ ಜಾರಿ ಮಾಡಲ್ಲ

ಎನ್‌ಪಿಎಸ್ ರದ್ದಿಲ್ಲ, ಓಪಿಎಸ್ ಜಾರಿಗೊಳಿಸುವ ಪ್ರಸ್ತಾವನೆ ಇಲ್ಲ ಎಂಬ ಸರ್ಕಾರದ ಉತ್ತರಕ್ಕೆ ಅಸಮಾಧಾನ ವ್ಯಕ್ತಪಡಿಸಿದ ವಿಧಾನ ಪರಿಷತ್ತಿನ ಆಡಳಿತರೂಢ ಮತ್ತು ಪ್ರತಿಪಕ್ಷಗಳ ಕೆಲ ಸದಸ್ಯರು ಸಭಾತ್ಯಾಗ ಮಾಡಿದರು.

ಪ್ರಶ್ನೋತ್ತರ ಅವಧಿಯಲ್ಲಿ ಮತ್ತೊಮ್ಮೆ ಹೊಸ ಪಿಂಚಣಿ ಯೋಜನೆ ಚರ್ಚೆಗೆ ಬಂದಾಗ ಸರ್ಕಾರ ನೀಡಿದ ಉತ್ತರದಿಂದ ಬೇಸರಗೊಂಡ ಬಿಜೆಪಿ ಹಿರಿಯ ಸದಸ್ಯ ಆಯನೂರು ಮಂಜುನಾಥ್, ಶಶಿಲ್ ನಮೋಶಿ ಮತ್ತು ಜೆಡಿಎಸ್‌ನ ಮರಿತಿಬ್ಬೇಗೌಡ ಅವರು ಸದನದಿಂದ ಹೊರ ನಡೆದರು.

ಡಾ:ತಳವಾರ್ ಸಾಬಣ್ಣ, ಪ್ರತಾಪ ಸಿಂಹ, ಶಶಿಲ್ ನಮೋಶಿ ಅವರು ಎನ್‌ಪಿಎಸ್ ವಿಚಾರ ಪ್ರಸ್ತಾಪಿಸಿದರು. ಬೆಂಗಳೂರಿನಲ್ಲಿ 75 ದಿನಗಳಿಂದ ಧರಣಿ ನಡೆಸುತ್ತಿರುವ ನೌಕರರಿಗೆ ನ್ಯಾಯ ಒದಗಿಸಬೇಕು. ಇವರಿಗೆ ನಿವೃತ್ತಿ ಬಳಿಕ ಮಾಸಿಕ ರೂ.10 ಸಾವಿರ ಕೂಡ ನಿವೃತ್ತಿ ವೇತನ ಸಿಗದಂತಾಗಿದೆ. ನಿಮ್ಮ ಹಣವನ್ನು ಷೇರುಪೇಟೆಯಲ್ಲಿ ತೊಡಗಿಸುವುದರಿಂದ ನಿವೃತ್ತಿ ಬಳಿಕ ದೊಡ್ಡ ಮೊತ್ತದ ವೇತನ

ಸಿಗುತ್ತದೆ ಎಂದು ಬಿಂಬಿಸಲಾಗಿತ್ತು. ಆದರೆ, ಈಗ 10 ಸಾವಿರ ಕೂಡ ಸಿಗುತ್ತಿಲ್ಲ ಎಂದು ಗಮನ ಸೆಳೆದರು.

ಇದಕ್ಕೆ ಮುಖ್ಯಮಂತ್ರಿಗಳ ಪರವಾಗಿ ಉತ್ತರಿಸಿದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ. ಮಾಧುಸ್ವಾಮಿ ಆರ್‌ಬಿಐ ಶಿಫಾರಸ್ಸು ಅನ್ವಯ ಕೇಂದ್ರ ಸರ್ಕಾರ 2004ರಲ್ಲಿ ಎನ್‌ಪಿಎಸ್ ಜಾರಿಗೊಳಿಸಿತು. ರಾಜ್ಯದಲ್ಲಿ 2006 ಏಪ್ರಿಲ್ 1 ರಿಂದ ಸರ್ಕಾರಿ ಸೇವೆಗೆ ಸೇರಿದವರಿಗೆ ಎನ್‌ಪಿಎಸ್ ಅನ್ವಯವಾಗಿದೆ. ಕೆಲಸಕ್ಕೆ ಸೇರುವಾಗ ಎನ್‌ಪಿಎಸ್‌ಗೆ ಒಪ್ಪಿ ಈಗ ಓಪಿಎಸ್ ಕೊಡಿ ಎಂದರೆ ಸಾಧ್ಯವಿಲ್ಲ. ಸರ್ಕಾರಿ ನೌಕರರ ವೇತನಕ್ಕೆ ವಾರ್ಷಿಕ ರೂ.70–80 ಸಾವಿರ ಕೋಟಿ ಹಾಗೂ ಪಿಂಚಣಿಗೆ ರೂ.20 ರಿಂದ 30 ಸಾವಿರ ಕೋಟಿ ಹಣ ಹೋಗುತ್ತಿದೆ. ವೇತನ ಮತ್ತು ಪಿಂಚಣಿಗೆ ದೊಡ್ಡ ಮೊತ್ತದ ಹಣ ಖರ್ಚಾಗುತ್ತಿದೆ. ಇದೇ ವಿಷಯವಾಗಿ ವಿಧಾನಸಭೆಯಲ್ಲೂ ಚರ್ಚೆ ನಡೆದಾಗ ಮುಖ್ಯಮಂತ್ರಿ ಬೊಮ್ಮಾಯಿ ಅವರು ಹಣಕಾಸಿನ ಪರಿಸ್ಥಿತಿ ನೋಡಿಕೊಂಡು ನಿರ್ಧಾರ ಕೈಗೊಳ್ಳುವುದಾಗಿ ಭರವಸೆ ನೀಡಿದ್ದಾರೆ ಎಂದು ಹೇಳಿದರು.

ಇದಕ್ಕೆ ಅಕ್ಷೇಪ ವ್ಯಕ್ತಪಡಿಸಿದ ಆಯನೂರು ಮಂಜುನಾಥ್ ಸಚಿವರು ಸದನಕ್ಕೆ ತಪ್ಪು ಮಾಹಿತಿ ನೀಡುತ್ತಿದ್ದಾರೆ. ಕೇಂದ್ರ ಸರ್ಕಾರ 2004ರಲ್ಲೇ ಎನ್‌ಪಿಎಸ್ ಜಾರಿಗೊಳಿಸಿದರೂ ನಮ್ಮ ರಾಜ್ಯದಲ್ಲಿ 2010 ರಲ್ಲಿ 2006 ರಿಂದ ಪೂರ್ವಾನ್ವಯ ಆಗುವಂತೆ ಜಾರಿ ಮಾಡಲಾಯಿತು. ನೌಕರರು ಒಪ್ಪದೆ ಇದ್ದರೂ ಬಲವಂತವಾಗಿ ಹೇರಲಾಯಿತು. ಜೆಡಿಎಸ್ ಕಾಂಗ್ರೆಸ್ ಸರ್ಕಾರದ ಅವಧಿಯಲ್ಲಿ ಎನ್‌ಪಿಎಸ್‌ಗೆ ಸೂಕ್ತ ಬದಲಾವಣೆ ಅಥವಾ ಮಾರ್ಪಾಡು ಮಾಡಲು ಅಧಿಕಾರಿಗಳನ್ನು ಒಳಗೊಂಡ ಸಮಿತಿ ರಚಿಸಲಾಗಿತ್ತು, ಆದರೆ. ಅಧಿಕಾರಿಗಳು ಒಂದೇ ಒಂದು ಸಭೆ ಕೂಡ ನಡೆಸಿಲ್ಲ. 2006ರ ಬಳಿಕ ಶಾಸಕರಾದವರಿಗೆ ಹಳೆ ಪಿಂಚಣಿ ನೀಡಲಾಗುತ್ತಿದೆ. ಆದರೆ, ಸರ್ಕಾರಿ ನೌಕರರಿಗೆ ಇಲ್ಲದಂತಾಗಿದೆ. ಇಂತಹ ತಾರತಮ್ಮ ಏಕೆ ಶಾಸಕರಿಗೂ ಎನ್‌ಪಿಎಸ್ ಜಾರಿ ಮಾಡಿ ಶಾಸಕರಿಗೂ ಎನ್‌ಪಿಎಸ್ ಜಾರಿ ಮಾಡಿ ಎಂದು ಆಗ್ರಹಿಸಿದರು.

ಆಗ ಸಚಿವ ಮಾಧುಸ್ವಾಮಿ ಎನ್‌ಪಿಎಸ್ ವಿಷಯದಲ್ಲಿ ಸಿಎಂ ಹೇಳಿಕೆ ಹೊರತಾಗಿ ಬೇರೆ ಯಾವುದೇ ಹೇಳಿಕೆ ನೀಡಲು ಸಾಧ್ಯವಿಲ್ಲ ಎಂದು ಕೈ ಚೆಲ್ಲಿದರು.

ಇದರಿಂದ ಅಸಮಾಧಾನಗೊಂಡ ಆಯನೂರು ಮಂಜುನಾಥ್ ನಮ್ಮ ನೌಕರರ ವಿಷಯದಲ್ಲಿ ನಮ್ಮದೇ ಸರ್ಕಾರದ ಉತ್ತರ ಬೇಸರ ಮೂಡಿಸಿದೆ. ಹೀಗಾಗಿ ಇದಕ್ಕೆ ಪ್ರತಿಭಟನೆ ಸೂಚಿಸುವ ಸಲುವಾಗಿ ಸದನದಿಂದ ಹೊರಗೆ ಹೋಗುತ್ತೇನೆ ಎಂದು ಸಭಾತ್ಯಾಗ ಮಾಡಿದರು. ಸದಸ್ಯರಾದ ಶಶಿಲ್ ನಮೋಶಿ ಮತ್ತು ಮರಿತಿಬ್ಬೇಗೌಡ ಅವರು ಹೊರನಡೆದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:30.12.2022

## 65. ಹಳೇ ಪಿಂಚಣಿ ವ್ಯವಸ್ಥೆಗೆ ಆಗ್ರಹ

ಸರ್ಕಾರಿ ನೌಕರರಿಗೆ ಹಳೇ ಪಿಂಚಣಿ ವ್ಯವಸ್ಥೆ ಜಾರಿಗೊಳಿಸುವಂತೆ ಆಗ್ರಹಿಸಿ ಆಡಳಿತ ಮತ್ತು ಪ್ರತಿಪಕ್ಷದ ಕೆಲ ಸದಸ್ಯರು ಸಭಾತ್ಯಾಗ ನಡೆಸಿದ ಪ್ರಸಂಗ ನಡೆಯಿತು. ಪ್ರಶ್ನೋತ್ತರ ಅವಧಿಯಲ್ಲಿ ಸದಸ್ಯರಾದ ತಳವಾರ್ ಸಾಬಣ್ಣ, ಶಶೀಲ್ ನಮೋಶಿ, ಎಸ್.ವಿ.ಸಂಕನೂರ ಮತ್ತಿತರರು, ಹೊಸ ಪಿಂಚಣಿ ವ್ಯವಸ್ಥೆ (ಎನ್‌ಪಿಎಸ್) ಬದಲು ಹಳೇ ಪಿಂಚಣಿ ಯೋಜನೆ (ಒಪಿಎಸ್) ಮರು ಜಾರಿಗೊಳಿಸುವ ಕುರಿತು ಪ್ರಶ್ನಿಸಿದಾಗ, ಮುಖ್ಯಮಂತ್ರಿಯರ ಪರವಾಗಿ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ ಉತ್ತರಿಸಿ, ಒಪಿಎಸ್ ಜಾರಿಗೊಳಿಸುವ ಆಲೋಚನೆ ಸರ್ಕಾರದ ಮುಂದೆ ಇಲ್ಲ ಎಂದರು.

ಆಧಾರ: ಪ್ರಜಾವಾಣಿ, ದಿನಾಂಕ:30.12.2022.

## 66. ಮಹನೀಯರ ಪುತ್ಥಳಿ ಸ್ಥಾಪನೆಗೆ ಭೂಮಿಪೂಜೆ

ಇಲ್ಲಿನ ಸುವರ್ಣ ಸೌಧದ ಸುತ್ತ ನಾಲ್ಕು ಮಹನೀಯರ ಪ್ರತಿಮೆಗೆ ಸ್ಥಾಪನೆಗೆ ಸಿಎಂ ಬಸವರಾಜು ಬೊಮ್ಮಾಯಿಯವರು ಭೂಮಿಪೂಜೆ ನೆರೆವೇರಸಿದರು.

ಕಿತ್ತೂರು ರಾಣಿ ಚನ್ನಮ್ಮ, ಸಂಗೊಳ್ಳಿ ರಾಯಣ್ಣ, ಬಾಬಾ ಸಾಹೇಬ್ ಅಂಬೇಡ್ಕರ್, ಮಹಾತ್ಮ ಗಾಂಧೀಜಿ ಪುತ್ಥಳಿಯನ್ನು ಸ್ಥಾಪಿಸಲಾಗುತ್ತದೆ. ಚನ್ನಮ್ಮ ಹಾಗೂ ರಾಯಣ್ಣ ಪ್ರತಿಮೆ ಕುರಿತು ಸಿಎಂ ಕಳೆದ ವರ್ಷ ಘೋಷಣೆ ಮಾಡಿದ್ದರು. ಕಾರ್ಯಕ್ರಮದಲ್ಲಿ ಸ್ಪೀಕರ್ ವಿಶ್ವೇಶ್ವರ ಹೆಗಡೆ, ಕಾಗೇರಿ, ಸಭಾಪತಿ ಬಸವರಾಜ್ ಹೊರಟ್ಟಿ, ಸಚಿವ ಸಿ.ಸಿ. ಪಾಟೀಲ್, ಶಶಿಕಲಾ ಜೊಲ್ಲೆ, ಕೋಟ ಶ್ರೀನಿವಾಸ್ ಪೂಜಾರಿ, ಗೋವಿಂದ್ ಕಾರಜೋಳ, ಮಾಜಿ ಸಚಿವ ಕೆ.ಎಸ್.ಈಶ್ವರಪ್ಪ, ಶಾಸಕಿ ಲಕ್ಷ್ಮೀ ಹೆಬ್ಬಾಳ್ಕರ್, ಸಂಸದೆ ಮಂಗಳಾ ಅಂಗಡಿ ಉಪಸ್ಥಿರಿದ್ದರು.

ಆಧಾರ: ವಿಶ್ವ ವಾಣಿ, ದಿನಾಂಕ:30.12.2022.

**ದಿನಾಂಕ: 29.12.2022ರಂದು ಸನ್ಮಾನ್ಯ ಸಭಾಧ್ಯಕ್ಷರು, ಸನ್ಮಾನ್ಯ ಸಭಾಪತಿಗಳು, ವಿಧಾನ ಪರಿಷತ್ತು, ಸನ್ಮಾನ್ಯ ಮುಖ್ಯಮಂತ್ರಿಯವರೊಂದಿಗೆ ಹಾಗೂ ಇತರೆ ಸಚಿವರುಗಳು/ಗಣ್ಯರುಗಳೊಂದಿಗೆ ಬೆಳಗಾವಿಯ ಸುವರ್ಣ ವಿಧಾನಸೌಧದ ಆವರಣದಲ್ಲಿ ಮಹಾತ್ಮಾ ಗಾಂಧೀಜಿ, ಡಾ. ಬಿ.ಆರ್. ಅಂಬೇಡ್ಕರ್, ಕಿತ್ತೂರು ರಾಣಿ ಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣ ಅವರ ಪ್ರತಿಮೆ ಸ್ಥಾಪನೆಗೆ ಭೂಮಿ ಪೂಜೆ ನೆರವೇರಿಸಿದರು.**





## 67. ಹಣಕಾಸು ಆಯೋಗದಿಂದ ರಾಜ್ಯಕ್ಕೆ ಅನ್ಯಾಯ:ಸಿಎಂ

15ನೇ ಹಣಕಾಸು ಆಯೋಗದಿಂದ ರಾಜ್ಯಕ್ಕೆ ತೀವ್ರ ಅನ್ಯಾಯವಾಗಿದ್ದು ಶೇ.25ರಷ್ಟು ಅನುದಾನ ಕಡಿತಗೊಂಡಿದೆ ಎಂದು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಹಾಗೂ ಸದಸ್ಯ ಕೃಷ್ಣ ಬೈರೇಗೌಡ ಆಕ್ಷೇಪ ವ್ಯಕ್ತಪಡಿಸಿದ್ದು, ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ರಾಜ್ಯಕ್ಕೆ ಅನ್ಯಾಯವಾಗಿರುವುದನ್ನು ಒಪ್ಪಿಕೊಂಡು ಬೇಸರ ವ್ಯಕ್ತಪಡಿಸಿದ ಘಟನೆ ನಡೆಯಿತು.

ಪೂರಕ ಅಂದಾಜುಗಳ ಮೇಲಿನ ಚರ್ಚೆ ವೇಳೆ ಕಾಂಗ್ರೆಸ್ ಸದಸ್ಯ ಕೃಷ್ಣ ಬೈರೇಗೌಡ, ರಾಜ್ಯದ ಬಜೆಟ್ ಗಾತ್ರ ಜಿಎಸ್‌ಡಿಪಿಯ(ರಾಜ್ಯದ ಒಟ್ಟು ಆಂತರಿಕ ಉತ್ಪನ್ನ)ಶೇ.14 ರಷ್ಟು ಮಾತ್ರ ಇದೆ. ಆದರೆ, ಬೇರೆ ರಾಜ್ಯಗಳ ಗಾತ್ರ ಶೇ.28 ರಿಂದ 30ರಷ್ಟಿದೆ. ಬೇರೆ ರಾಜ್ಯಗಳಿಗಿಂತ ತೆರಿಗೆ ಆದಾಯ ಹೆಚ್ಚಿದ್ದರೂ ನಮ್ಮ ರಾಜ್ಯದ ಬಜೆಟ್ ಗಾತ್ರ ಕಡಿಮೆ ಇರಲು ಕೇಂದ್ರದ ಅನುದಾನ ಹಂಚಿಕೆಯಲ್ಲಿ ಆಗುತ್ತಿರುವ ತಾರತಮ್ಯ ಕಾರಣ. ಕೇಂದ್ರದ ಒಟ್ಟು ತೆರಿಗೆ ಪಾಲಿನಲ್ಲಿ ರಾಜ್ಯಕ್ಕೆ ಶೇ.1.3 ರಷ್ಟು ಪಾಲು ಮಾತ್ರ ನೀಡಲಾಗುತ್ತಿದೆ. ಬಿಹಾರಕ್ಕೆ ಶೇ9.68 ನೀಡಲಾಗುತ್ತಿದೆ. ನಮ್ಮ ರಾಜ್ಯಕ್ಕಿಂತ ಕಡಿಮೆ ತೆರಿಗೆ ಪಾವತಿಸುವ ಬಿಹಾರಕ್ಕೆ ನಮ್ಮ ರಾಜ್ಯಕ್ಕಿಂತ ಎಂಟು ಪಟ್ಟು ಹೆಚ್ಚು ತೆರಿಗೆ ಪಾಲು ನೀಡುತ್ತೀರಿ ಎಂದರೆ ಏನರ್ಥ ಎಂದು ಪ್ರಶ್ನಿಸಿದರು.

ಈ ವೇಳೆ ಮಧ್ಯೆ ಪ್ರವೇಶಿಸಿದ ಸಿದ್ದರಾಮಯ್ಯ, 14ನೇ ಹಣಕಾಸು ಆಯೋಗದಲ್ಲಿ ಶೇ.4.7 ರಷ್ಟು ಅನುದಾನವನ್ನು ರಾಜ್ಯಕ್ಕೆ ನೀಡಲು ಶಿಫಾರಸ್ಸು ಮಾಡಲಾಗಿತ್ತು. ಆದರೆ, 15ನೇ ಹಣಕಾಸು ಆಯೋಗದಲ್ಲಿ ಶೇ3.6 ರಷ್ಟು ಮಾತ್ರ ಹಂಚಿಕೆ ಮಾಡಲಾಗಿತ್ತು. ಇದರಿಂದ ಒಟ್ಟು ಅನುದಾನದ ಪ್ರಮಾಣ ಶೇ.25 ಕಡಿಮೆ ಆಗಿಬಿಟ್ಟಿದೆ. ಇದು 15ನೇ ಹಣಕಾಸು ಆಯೋಗ ಮಾಡಿರುವ ಅನ್ಯಾಯ ಎಂದು ಕಿಡಿಕಾರಿದರು.

ಜೊತೆಗೆ ಹಣಕಾಸು ಆಯೋಗವು ಮಧ್ಯಂತರ ವರದಿಯಲ್ಲಿ ರೂ.15 ಸಾವಿರ ಕೋಟಿ ಪ್ಯಾಕೇಜ್ ನೀಡುವಂತೆ ಹೇಳಿತ್ತು. ಆದರೆ, ನಮ್ಮ ರಾಜ್ಯದಿಂದ ರಾಜ್ಯ ಸಭೆ ಸದಸ್ಯರಾಗಿರುವ ಕೇಂದ್ರ ಹಣಕಾಸು ಸಚಿವರಾದ ನಿರ್ಮಲಾ ಸೀತಾರಾಮನ್ ಅವರು ರೂ.15 ಸಾವಿರ ಕೋಟಿ ವಿಶೇಷ ಪ್ಯಾಕೇಜ್‌ನ್ನು ತಡೆ ಹಿಡಿಯುವಂತೆ ಪತ್ರ ಬರೆದರು ಎಂದು ಅಸಮಾಧಾನ ವ್ಯಕ್ತಪಡಿಸಿದರು.

**ಅನುದಾನ ಕಡಿಮೆ ಆಗಿದೆ: ಸಿಎಂ:** ಇದನ್ನು ಸಮರ್ಥಿಸಿದ ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಅವರು, ಹಣಕಾಸು ಆಯೋಗವು ಸ್ವಯತ್ತ ಸಂಸ್ಥೆಯಾಗಿದ್ದು ಬೇರೆ ಯಾರೂ ಹೇಳಲು ಬರುವುದಿಲ್ಲ. ಅದರಲ್ಲಿ ಆಗಿರುವ ಅನ್ಯಾಯ ಸರಿಪಡಿಸಲು ಪಿಆರ್‌ಆರ್ ರಸ್ತೆಗೆ ರೂ.6 ಸಾವಿರ ಕೋಟಿ ನೀಡುವುದಾಗಿ ನಿರ್ಮಲಾ ಸೀತಾರಾಮನ್ ಅವರು ಒಪ್ಪಿಕೊಂಡಿದ್ದಾರೆ. ಇನ್ನೂ 15ನೇ ಹಣಕಾಸು ಆಯೋಗದ ಅಧ್ಯಕ್ಷ ನಂದ ಕಿಶೋರ್ ಸಿಂಗ್ ಅವರನ್ನೂ ಪ್ರಶ್ನಿಸಿದ್ದು, ಅವರ ಸ್ಪಷ್ಟನೆಗಳು ನನಗೆ ಸಮಾಧಾನ ತಂದಿಲ್ಲ ಎಂದು ಸ್ಪಷ್ಟಪಡಿಸಿದರು.

ಈ ವೇಳೆ ಸಿದ್ದರಾಮಯ್ಯ ಅವರು, 'ಮತ್ತೆ ರಾಜ್ಯಕ್ಕೆ ಅನ್ಯಾಯ ಆಗಿದೆ ಎಂದು ಹೇಳಿ' ಎಂದು ಆಗ್ರಹಿಸಿದರು. ಇದಕ್ಕೆ ಬೊಮ್ಮಾಯಿ ಅವರು, 'ಅನುದಾನ ಕಡಿಮೆಯಾಗಿದೆ ಎಂದರೆ ಅನ್ಯಾಯ ಆಗಿದೆ' ಎಂದೇ ಅರ್ಥವಲ್ಲವೇ ಎಂದು ಹೇಳಿ ರಾಜ್ಯಕ್ಕೆ ಅನ್ಯಾಯ ಆಗಿರುವುದನ್ನು ಒಪ್ಪಿಕೊಂಡರು.

ಆಧಾರ: ಕನ್ನಡ ಪ್ರಭ, ದಿನಾಂಕ:30.12.2022.

## 68. 8,001 ಕೋಟಿ ಪೂರಕ ಅನುಮೋದನೆ

ರಾಜ್ಯದ ಎರಡನೇ ಕಂತಿನ ರೂ.8,001 ಕೋಟಿ ಪೂರಕ ಅಂದಾಜು (ಸಪ್ಲಿಮೆಂಟರಿ ಬಜೆಟ್) ಗಳಿಗೆ ವಿಧಾನಸಭೆಯಲ್ಲಿ ಅನುಮೋದನೆ ದೊರೆತಿದೆ.

ಕಲಾಪದಲ್ಲಿ ಪ್ರಸ್ತಾಪ ಮಂಡಿಸಿದ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಮಾತನಾಡಿ, ಕಳೆದ ಮೂರು ವರ್ಷಗಳಿಂದ ಆರ್ಥಿಕ ಶಿಸ್ತನ್ನು ಪಾಲಿಸುವುದರ ಜೊತೆಗೆ ವಿವಿಧ ಖರ್ಚು–ವೆಚ್ಚಗಳನ್ನು

ಸರ್ಕಾರ  ಉತ್ತಮವಾಗಿ ನಿಭಾಯಿಸುತ್ತಿದೆ. 2022–23ನೇ ಸಾಲಿನ ಪೂರಕ ಅಂದಾಜುಗಳ ಎರಡನೇ ಕಂತು ರೂ.8001.13 ಕೋಟಿಗಳಷ್ಟಿದ್ದು, ಇದು ಪ್ರಸಕ್ತ ಸಾಲಿನ ಆಯವ್ಯಯ ಗಾತ್ರದ ಶೇ.8.38 ಇದೆ ಎಂದರು.

ರಾಜ್ಯ ವಿಪತ್ತು ನಿರ್ವಹಣೆಗೆ, ರೂ.1,396 ಕೋಟಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ  ರೂ.200 ಕೋಟಿ. ವಿಧಾನಸಭೆಯ ಸಾರ್ವತ್ರಿಕ ಚುನಾವಣೆಗೆ ರೂ.300 ಕೋಟಿ ವೆಚ್ಚವೂ ಸೇರಿ ಒಟ್ಟು ರೂ.8,001 ಕೋಟಿ ಪೂರಕ ಅಂದಾಜಿನ ವಿವರಗಳನ್ನು ನೀಡಿದರು.

ಕೇಂದ್ರ ಸರ್ಕಾರದಿಂದ ರೂ.10,550 ಕೋಟಿ ಜಿಎಸ್‌ಟಿ ಪಾಲು ಬಿಡುಗಡೆಯಾಗಿದೆ. ರೂ.3,399 ಕೋಟಿ ಬಂಡವಾಳ ಹೂಡಿಕೆಗೆ ಉದ್ದೇಶಿಸಲಾಗಿದ್ದು ರೂ.1,700 ಕೋಟಿ ಬಿಡುಗಡೆ ಮಾಡಲಾಗಿದೆ.  ರಾಜ್ಯವು ಜಿಎಸ್‌ಟಿ ಸಂಗ್ರಹದಲ್ಲಿ ದೇಶದಲ್ಲಿಯೇ ಎರಡನೇ ಸ್ಥಾನದಲ್ಲಿದೆ. ತೆರಿಗೆ ಸಂಗ್ರಹ ಸಾಮರ್ಥ್ಯವೂ ಹೆಚ್ಚಳವಾಗಿದೆ. ವಾಣಿಜ್ಯ ತೆರಿಗೆ ಮೂಲಕ ರೂ.79,010 ಕೋಟಿ ತೆರಿಗೆ ಸಂಗ್ರಹದ ಗುರಿ ಹೊಂದಲಾಗಿದೆ ಎಂದು ಹೇಳಿದರು.

**ರಾಜ್ಯಕ್ಕೆ ಶೇ.25 ಅನುದಾನ ಕಡಿತ:** ವಿಧಾನಸಭೆಯ ವಿತ್ತೀಯ ಕಲಾಪದ ವೇಳೆ  ಚರ್ಚೆಯಲ್ಲಿ ಮಾತನಾಡಿದ ಶಾಸಕ ಕೃಷ್ಣ ಬೈರೇಗೌಡ, 15ನೇ ಹಣಕಾಸು ಆಯೋಗದಿಂದ ರಾಜ್ಯಕ್ಕೆ ಶೇ.25 ಅನುದಾನ ಕಡಿತವಾಗಿದೆ. ಇದನ್ನು ಮರಳಿ ತರುವುದಕ್ಕಾಗಿ ಸರ್ಕಾರ ಪ್ರಯತ್ನಿಸಬೇಕು. 'ಚಿನ್ನದ ಮೊಟ್ಟೆ ಇಡುವ ಕೋಳಿಗೆ  ಹೊಟ್ಟೆಗೆ ಹಾಕದಿದ್ದರೆ ಹೇಗೆ' ಎಂದು ಪ್ರಶ್ನಿಸಿದರು. 2023ರ ಮಾರ್ಚ್ 31ಕ್ಕೆ ಸರ್ಕಾರದ ಅಂದಾಜು  ಸಾಲದ ಮೊತ್ತ ರೂ.5.40 ಲಕ್ಷ ಕೋಟಿ ಮೀರುವ ಸಾಧ್ಯತೆಯಿದೆ. ಆರ್ಥಿಕ ಶಿಸ್ತು ಹದಗೆಟ್ಟರೆ. ಆರ್ಥಿಕ ಬಿಕ್ಕಟ್ಟು ಉಲ್ಬಣಿಸುವುದಕ್ಕಿಂತ ಮೊದಲೇ ಸರ್ಕಾರ ಎಚ್ಚೆತ್ತುಕೊಳ್ಳಬೇಕು ಎಂದು ಸಲಹೆ ನೀಡಿದರು. ಮಧ್ಯಪ್ರದೇಶ, ಬಿಹಾರ ಸೇರಿ ವಿವಿಧ ರಾಜ್ಯಗಳಿಗೆ ಕೇಂದ್ರ ಸರ್ಕಾರ ನೀಡುತ್ತಿರುವ ಅನುದಾನವನ್ನು ಹೋಲಿಕೆ ಮಾಡಿದಾಗ ನಮ್ಮ ರಾಜ್ಯಕ್ಕೆ ನೀಡುತ್ತಿರುವ ಅನುದಾನ ತುಂಬಾ ಕಡಿಮೆ ಎಂದು ಸಿದ್ದರಾಮಯ್ಯ  ಹೇಳಿದರು.

**ಲಕ್ಷ ಹುದ್ದೆಗಳ ಭರ್ತಿಗೆ ನಿರ್ಧಾರ:** ರಾಜ್ಯದಲ್ಲಿ ಒಂದು ಲಕ್ಷ ಹುದ್ದೆಗಳನ್ನು ಭರ್ತಿ ಮಾಡಲು ನಿರ್ಧರಿಸಲಾಗಿದ್ದು, ಅದರಲ್ಲಿ 30 ಸಾವಿರ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರನ್ನು ನೇಮಕ ಮಾಡಲಾಗುತ್ತಿದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು. ವಿಧಾನಪರಿಷತ್‌ನಲ್ಲಿ ಪೂರಕ ಬಜೆಟ್ ಚರ್ಚೆಯ ವೇಳೆ ಸದಸ್ಯರು ಪ್ರಸ್ತಾಪಿಸಿದ ವಿಷಯಗಳ ಕುರಿತು ಮಾತನಾಡಿದ ಅವರು, ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿ ಉಳಿದಿರುವ ಹುದ್ದೆಗಳನ್ನು ಹಂತ ಹಂತವಾಗಿ ಭರ್ತಿ ಮಾಡಲಾಗುತ್ತಿದೆ. 15 ಸಾವಿರ ಶಿಕ್ಷಕರ ನೇಮಕಾತಿ ಪ್ರಕ್ರಿಯೆ ಪ್ರಗತಿ ಹಂತದಲ್ಲಿದೆ. ಬಾಕಿ ಉಳಿದಿರುವ 15 ಸಾವಿರ ಶಿಕ್ಷಕರ ನೇಮಕಾತಿಗೆ ಆದೇಶ ನೀಡಲಾಗುವುದು ಎಂದು ಹೇಳಿದರು. ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಅವಶ್ಯಕತೆ, ಶಿಕ್ಷಕ ಅರ್ಹತೆ, ಕೆಲಸ ಅವಧಿ ಕುರಿತು ವಿವಿಧ ಮಾನದಂಡಗಳ ಒಳಗೊಂಡಿರುವ ಹೊಸ ಯೋಜನೆಗೆ ರೂಪಿಸಲಾಗುತ್ತಿದ್ದು, ಮುಂಬರುವ ಬಜೆಟ್‌ನಲ್ಲಿ ಘೋಷಣೆ ಮಾಡಲಾಗುವುದು. ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ವಿದೇಶದಲ್ಲಿ ಅಧ್ಯಯನ ಕೈಗೊಳ್ಳಲು ಅವಶ್ಯಕತೆ ಇರುವ ಅನುದಾನ ಕೂಡಲೆ ಬಿಡುಗಡೆ ಮಾಡಲಾಗುವುದು ಎಂದು ಹೇಳಿದರು.

**7ಡಿ ತಿದ್ದುಪಡಿ:** ಕೂಡಲೇ 7ಡಿ ವಿಧೇಯಕ್ಕೆ ತಿದ್ದುಪಡಿ ತರಬೇಕಾದ ಅಗತ್ಯವಿದೆ. ಇದರಿಂದ ಎಸ್‌ಸಿಪಿ/ ಟಿಎಸ್‌ಪಿ ಯೋಜನೆಯಡಿ ಅನುದಾನ ಕೊಡಲು ಸರ್ಕಾರಕ್ಕೆ ಸಾಧ್ಯವಾಗಲಿದೆ. ರಾಜ್ಯದ ಅನೇಕ ದಲಿತಪರ ಸಂಘಟನೆಗಳು ಪ್ರತಿಭಟನೆ ಮಾಡಿವೆ ಎಂದು ಸಿದ್ದರಾಮಯ್ಯ ಹೇಳಿದರು.

ಆಧಾರ: ವಿಜಯವಾಣಿ, ದಿನಾಂಕ:30.12.2022.

## 69. MLAs skip session, debates turn farce

THE special discussion on the burning issues of North Karnataka was rendered a farce, and both Houses failed to have meaningful and result-oriented discussions as not more than 30 of the 225 members were present during the debates. Moreover, most of the legislators from North Karnataka skipped the session.

The major debate in the Assembly and Council revolved around the Karnataka – Maharashtra border dispute. Cutting across party lines, members of the Upper House condemned the Maharastra government's stand. A day before the start of the session, Assembly Speaker Vishveshwar Hegde, Kageri, in a press conference, had claimed that maximum time would be spent on discussing issues of North Karnataka. He had also said that all legislators must participate as it would the last session of the present government. Permisssion to remain absent from the session would be given only in exceptional cases. From Day 1, the number of legislators did not cross 100 mark. Around.10,000 people, including students from North Karnataka, witnessed debates from the gallery. Business was held for 41 hours and 20 minutes in the Assembly, but not even two hours were devoted to the issues of the region.

The Council held discussions for 45 hours on various bills, questions and issues of the state, and passed six bills.

On evening, Muddebihal MLA AS Patil Nadhalli spoke for 30 minutes on the implementation of Upper Krishna Project, developing North Karnataka in to a toruism hub and bringing in railway projects and ports to boost trade. On Hungund MLA Doddangouda Patil threw light on losses incurred by tur growers and demanded compensation.

Bidar South MLA Bandeppa Kashampur said a super-speciality hospital shoud be sanctioned for Bidar and urged the government to make financial inclusion in Article 371 for the development of North Karnataka. Jewargi MLA Dr Ajay Singh demanded for lease of funds for the construction of Samuday Bhavan a centre for minorities.

Courtesy: Indian Express, Dated:30.12.2022.

## 70. ಕಳಸಾ ಬಂಡೂರಿಗೆ ನಾವೇ ಅಡಿಗಲ್ಲು ಹಾಕುತ್ತೇವೆ: ಸಿಎಂ

ಕಳಸಾ ಬಂಡೂರಿ ವಿಸ್ತೃತ ಯೋಜನಾ ವರದಿಗೆ (ಡಿಪಿಆರ್) ಕೇಂದ್ರ ಜಲ ಆಯೋಗದ ಅನುಮೋದನೆಯೊಂದಿಗೆ ಕೇಂದ್ರ ಸರ್ಕಾರದ ಕಡೆಯಿಂದ ಇದ್ದ ಎಲ್ಲಾ ಅನುಮತಿಗಳು ಸಿಕ್ಕಿದಂತಾಗಿದ್ದು, ಶೀಘ್ರದಲ್ಲಿ ನಾವೇ ಈ ಯೋಜನೆಗೆ ಅಡಿಗಲ್ಲು ಹಾಕುತ್ತೇವೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದ್ದಾರೆ.

ಕೇಂದ್ರ ಜಲ ಆಯೋಗ ಕಳಸಾ ಬಂಡೂರಿ ಡಿಪಿಆರ್‌ಗೆ ಅನುಮೋದನೆ ನೀಡಿರುವ ಕುರಿತು ವಿಧಾನಸಭೆಯಲ್ಲಿ ಪ್ರಕಟಿಸಿದ ಅವರು, ಅದಕ್ಕಾಗಿ ಪ್ರಧಾನಿ ನರೇಂದ್ರ ಮೋದಿ ಅವರನ್ನು ಅಭಿನಂದಿಸಿದರು. ಬೆಳಗಾವಿಯಲ್ಲಿ ಅಧಿವೇಶನ ನಡೆಯುವಾಗಲೇ ಪ್ರಧಾನಿ ಮೋದಿ ಸಿಹಿ ಸುದ್ದಿ

ನೀಡಿದ್ದಾರೆ. ಕೂಡಲೇ ಕಾಮಗಾರಿ ಕೈಗೊಳ್ಳಲು ಕ್ರಮಕೈಗೊಳ್ಳುತ್ತೇವೆ. ನಾವೇ ಅಡಿಗಲ್ಲು ಹಾಕಿ ದೊಡ್ಡ ಕಾರ್ಯಕ್ರಮದ ಮೂಲಕ ಜನರಿಗೆ ಆತ್ಮವಿಶ್ವಾಸ ಮೂಡಿಸುವ ಕೆಲಸ ಮಾಡುತ್ತೇವೆ ಎಂದು ತಿಳಿಸಿದರು.

ರಾಜ್ಯದ ಉತ್ತರ ಕರ್ನಾಟಕ ಭಾಗದ ಕಳಸಾ ಬಂಡೂರಿ ಯೋಜನೆ ಆಗಬೇಕೆಂದು 3–4 ದಶಕದಿಂದ ಹೋರಾಟ ನಡೆಯುತ್ತಿತ್ತು, ಅಣೆಕಟ್ಟೆ ಕಟ್ಟಲು ಗೋವಾದವರು ಅವಕಾಶ ಕೊಡಲಿಲ್ಲ. ಅಂತಾರಾಜ್ಯ ವಿವಾದವಾಯಿತು. ಬಳಿಕ 2018ರಲ್ಲಿ ನ್ಯಾಯಧೀಕರಣ ರಚನೆಯಾಯಿತು. ನ್ಯಾಯಧೀಕರಣ ತೀರ್ಪು ನಮಗೆ ಪೂರ್ಣ ಪ್ರಮಾಣದಲ್ಲಿ ಸಮಾಧಾನ ಸಿಗದಿದ್ದರೂ, ಯೋಜನೆಗೆ ಅನುಮತಿ ಸಿಕ್ಕಿತು. ಅಧಿಸೂಚನೆ ಕೂಡ ಆಗಿತ್ತು. ಇದಾದ ಮೇಲೆ ತಕರಾರು ಎದುರಾಗಿತ್ತು. ಆದರೂ ಕೂಡ, ನಾವು ಡಿಪಿಆರ್ ಸಲ್ಲಿಸಿದ್ದೆವು. ನಂತರ ನೀಲನಕ್ಷೆ ಕೂಡ ಅಧ್ಯಯನ ಆಯಿತು. ಜಲ ಆಯೋಗ ಕೂಡ ಒಪ್ಪಿ ಕೇಂದ್ರಕ್ಕೆ ಸಲ್ಲಿಕೆಯಾಗಿತ್ತು. ಇದೀಗ ಕೇಂದ್ರ ಸರ್ಕಾರ ಒಪ್ಪಿಗೆ ಸೂಚಿಸಿದೆ ಎಂದು ವಿವರಿಸಿದರು.

ಬಹಳ ದಿನಗಳ ಕನಸು ನನಸಾಗುವುದಿದೆ. ಇಡೀ ಕರ್ನಾಟಕದ ಜನತೆ, ವಿಶೇಷವಾಗಿ ಉತ್ತರ ಕರ್ನಾಟಕದ ಜನತೆಗೆ, ಪ್ರಧಾನಿಯವರಿಗೆ ಅಭಿನಂದನೆ ಸಲ್ಲಿಸುವೆ. ಬಹಳಷ್ಟು ಸಹಾಯ ಮಾಡಿದ ಕೇಂದ್ರದ ನೀರಾವರಿ ಸಚಿವರು, ನಿರಂತರ ಪ್ರಯತ್ನ ನಡೆಸಿದ ನಮ್ಮ ನೀರಾವರಿ ಸಚಿವ ಗೋವಿಂದ ಕಾರಜೋಳ ಅವರಿಗೆ ಅಭಿನಂದಿಸುವೆ ಎಂದರು. ಡಿಪಿಆರ್ ಒಪ್ಪಿಗೆ ಆಗಿರುವುದರಿಂದ ಮುಂದಿನ ಪ್ರಕ್ರಿಯೆ ಆರಂಭಿಸಿ ಟೆಂಡರ್ ಪ್ರಕ್ರಿಯೆ ನಡೆಸುತ್ತವೆ. ಕಾಮಗಾರಿ ನಡೆಸಲು ಸರ್ಕಾರ ತಡಮಾಡದೇ ಕ್ರಮಕೈಗೊಳ್ಳಲಿದೆ ಎಂದು ಹೇಳಿದರು. ಇದೇ ವೇಳೆ ಸಚಿವರಾದ ಸಿ.ಸಿ. ಪಾಟೀಲ್, ಶಂಕರ್ ಪಾಟೀಲ್ ಮುನೇನ ಕೊಪ್ಪ, ಗೋವಿಂದ ಕಾರಜೋಳ ಕೂಡ ಪ್ರಧಾನಿಯವರಿಗೆ ಕೃತಜ್ಞತೆ ಸಲ್ಲಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:30.12.2022.

## 71. 2023 ರ ಅಂತ್ಯಕ್ಕೆ ಏರ್ ಪೋರ್ಟ್‌ಗೆ ಮೆಟ್ರೋ

ಕೆಂಪೇಗೌಡ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ 2023ರ ಡಿಸೆಂಬರ್ ಅಂತ್ಯಕ್ಕೆ ಮೆಟ್ರೋ ರೈಲು ಸಂಪರ್ಕ ಒದಗಿಸಲಾಗುವುದು ಎಂದು ಸಿಎಂ ಬಸವರಾಜ ಬೊಮ್ಮಾಯಿ ಹೇಳಿದರು.

ವಿಧಾನ ಪರಿಷತ್‌ನಲ್ಲಿ ಕಾಂಗ್ರೆಸ್‌ನ ಡಾ.ಕೆ. ಗೋವಿಂದ ರಾಜು ಪ್ರಶ್ನೆಗೆ ಉತ್ತರಿಸಿ ಮಾತನಾಡಿದ ಅವರು, "ಮೆಟ್ರೋ ರೈಲು ಯೋಜನೆ 2ನೇ ಹಂತದ ಕಾಮಗಾರಿಯು ಭೂ ಸ್ವಾಧೀನ, ಮರಗಳ ತೆರವು, ಕೋವಿಡ್ ಕಾರಣದಿಂದಾಗಿ ಆರಂಭದಲ್ಲಿ ವಿಳಂಭವಾಗಿತ್ತು. ಆದರೆ, ನಂತರದಲ್ಲಿ ಚುರುಕು ನೀಡಲಾಗಿದೆ," ಎಂದರು.

"ಪ್ರಸ್ತುತ 6 ಮಾರ್ಗಗಳಲ್ಲಿ ಯಲಚೇನಹಳ್ಳಿ–ರೇಷ್ಮೆ ಸಂಸ್ಥೆ ಮತ್ತು ಮೈಸೂರು ರಸ್ತೆ–ಕೆಂಗೇರಿ ಮಾರ್ಗವನ್ನು ಸಾರ್ವಜನಿಕರ ಸೇವೆಗೆ ಮುಕ್ತಗೊಳಿಸಲಾಗಿದೆ. ಕೆಂಗೇರಿ–ಚಲ್ಲಘಟ್ಟ ನಡುವಿನ 2.05 ಕಿ.ಮೀ ಮಾರ್ಗವನ್ನು 2023ರ ಮೇ, ನಾಗಸಂದ್ರ–ಮಾದವಾರ ನಡುವಿನ 3.14 ಕಿ.ಮೀ ಮಾರ್ಗವನ್ನು 2023ರ ಆಗಸ್ಟ್, ಬೈಯಪ್ಪನಹಳ್ಳಿ–ವೈಟ್‌ಫೀಲ್ಡ್ ನಡುವಿನ 19.81 ಕಿ.ಮೀ. ಮಾರ್ಗವನ್ನು 2023ರ ಮಾರ್ಚ್, ಆರ್.ವಿ ರಸ್ತೆಯಿಂದ ಬೊಮ್ಮಸಂದ್ರ ನಡುವಿನ 19.15 ಕಿ.ಮೀ. ಮಾರ್ಗವನ್ನು 2023ರ ಸೆಪ್ಟಂಬರ್ ಹಾಗೂ ಕಾಳೇನ ಅಗ್ರಹರದಿಂದ ನಾಗವಾರ ನಡುವಿನ 21.26 ಕಿ.ಮೀ ಮಾರ್ಗವನ್ನು 2024ರ ಅಂತ್ಯದೊಳಗೆ ಸಾರ್ವಜನಿಕ ಸೇವೆಗೆ ಮುಕ್ತಗೊಳಿಸಲಾಗುವುದು," ಎಂದು ಮಾಹಿತಿ ನೀಡಿದರು.

**ಕೆಂಪೇಗೌಡ ಬಡಾವಣೆ ವಿವಾದ ವಿಶೇಷ ತನಿಖೆಗೆ:** "ಬೆಂಗಳೂರು ದಕ್ಷಿಣ ತಾಲ್ಲೂಕು ಭೀಮನ ಕುಪ್ಪೆಯಲ್ಲಿ ನಾಡಪ್ರಭೂ ಕೆಂಪೇಗೌಡ ಬಡಾವಣೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ವಿಶೇಷ ತನಿಖೆ ನಡೆಸಲಾಗುವುದು," ಎಂದು ಸಿಎಂ ಬಸವರಾಜ ಬೊಮ್ಮಾಯಿ ಭರವಸೆ ನೀಡಿದರು.

ವಿಧಾನಪರಿಷತ್‌ನಲ್ಲಿ ಮರಿತಿಬ್ಬೇಗೌಡ ಅವರ ಪ್ರಶ್ನೆಗೆ ಉತ್ತರಿಸಿ, "ಹಲವು ವರ್ಷಗಳಿಂದ ವ್ಯಾಜ್ಯಕ್ಕೆ ಸಿಲುಕಿ ಸುಪ್ರೀಂಕೋರ್ಟ್ ಮೆಟ್ಟಿಲೇರಿದೆ. ಬಿಡಿಎನಲ್ಲಿ ನೂರಾರು ಸಂಖ್ಯೆಯಲ್ಲಿರುವ ವಕೀಲರು ಗೊಂದಲಮಯ ಮಾಡಿದ್ದರೆ. ಪ್ರಕರಣದ ಮೇಲೆ ಸರಿಯಾಗಿ ನಿಗಾ ಇಡದ ಕಾರಣ ಗೊಂದಲಮಯವಾಗಿದೆ. ಈ ಸಂಬಂಧ ವಿಶೇಷ ತನಿಖೆ ನಡೆಸಿ ಕಾನೂನು ಕ್ರಮ ಕೈಗೊಳ್ಳಲಾಗುವುದು," ಎಂದು ಭರವಸೆ ನೀಡಿದರು.

**ಶೀಘ್ರ 110 ಹಳ್ಳಿಗಳಿಗೆ ನೀರು ಪೂರೈಕೆ:** ಕಾವೇರಿ 5ನೇ ಹಂತದ ಯೋಜನೆಯ ಕಾಮಗಾರಿ ಪೂರ್ಣಗೊಂಡ ಕೂಡಲೇ ಬಿಬಿಎಂಪಿ ವ್ಯಾಪ್ತಿಯ 110 ಹಳ್ಳಿಗಳಿಗೆ ನೀರು ಪೂರೈಕೆ ಮಾಡಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ತಿಳಿಸಿದರು.

ವಿಧಾನ ಪರಿಷತ್‌ನಲ್ಲಿ ಕಾಂಗ್ರೆಸ್‌ನ ದಿನೇಶ್ ಗೂಳಿಗೌಡ ಅವರು ಕೇಳಿದ ಪ್ರಶ್ನೆಗೆ ಉತ್ತರಿಸಿದ ಸಿಎಂ. "ಕಾವೇರಿ ನದಿಯಿಂದ ಪ್ರತಿ ವರ್ಷ 19 ಟಿಎಂಸಿ ನೀರನ್ನು ನಗರಕ್ಕೆ ಸರಬರಾಜು ಮಾಡಲಾಗುತ್ತಿದೆ. 2022ರ ನವೆಂಬರ್ ಅಂತ್ಯಕ್ಕೆ ಪಾಲಿಕೆ ವ್ಯಾಪ್ತಿಯಲ್ಲಿ 10.15 ಲಕ್ಷ ಕಾವೇರಿ ನೀರಿನ ಸಂಪರ್ಕ ಕಲ್ಪಿಸಲಾಗಿದೆ. ಪಾಲಿಕೆಗೆ ಹೊಸದಾಗಿ ಸೇರಿದ 110 ಹಳ್ಳಿಗಳಲ್ಲಿ, 2.50 ಲಕ್ಷಕ್ಕಿಂತ ಹೆಚ್ಚು ಸಂಪರ್ಕಗಳಿಗೆ ಬೇಡಿಕೆ ಇದೆ," ಎಂದು ಹೇಳಿದರು.

ಕಳೆದ ಮೂರು ವರ್ಷಗಳಲ್ಲಿ ಎಷ್ಟು ಬಾರಿ ನೀರಿನ ದರ ಪರಿಷ್ಕರಣೆ ಮಾಡಲಾಗಿದೆ ಎಂದು ದಿನೇಶ್ ಗೂಳಿಗೌಡ ಕೇಳಿದ ಪ್ರಶ್ನೆಗೆ ಉತ್ತರಿಸಿದ ಅವರು, "2014 ರಿಂದ ಜಲಮಂಡಳಿಯು ನೀರಿನ ದರ ಪರಿಷ್ಕರಣೆ ಮಾಡಿಲ್ಲ. ನಗರದಲ್ಲಿ ನೀರು ಪೂರೈಕೆಯಿಂದ ಜಲಮಂಡಳಿಗೆ ಪ್ರತಿ ತಿಂಗಳು ಸುಮಾರು ರೂ.115 ಕೋಟಿ ಆದಾಯ ಸಂಗ್ರಹವಾಗುತ್ತಿದೆ," ಎಂದು ತಿಳಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:30.12.2022.

## 72. 41 ಗಂಟೆ ಕಲಾಪ ಯಶಸ್ವಿ

ಇಲ್ಲಿನ ಸುವರ್ಣ ವಿಧಾನಸೌಧದಲ್ಲಿ ಡಿಸೆಂಬರ್ 19 ರಿಂದ 29ರವರೆಗೆ ಜರುಗಿದ ಚಳಿಗಾಲ ಅಧಿವೇಶನದಲ್ಲಿ 41.20 ಗಂಟೆ ಕಲಾಪ ಯಶಸ್ವಿಯಾಗಿ ನಡೆಸಲಾಗಿದೆ ಎಂದು ವಿಧಾನಸಭೆ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ತಿಳಿಸಿದರು.

ಜಿಲ್ಲಾಧಿಕಾರಿ ಕಚೇರಿ ಸಭಾಂಗಣದಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ಅಧಿವೇಶನದಲ್ಲಿ 2,125 ಪ್ರಶ್ನೆ ಸ್ವೀಕರಿಸಲಾಗಿದ್ದು, ಸದನದಲ್ಲಿ 146 ಪ್ರಶ್ನೆಗಳಿಗೆ ಮಾತ್ರ ಉತ್ತರಿಸಲಾಗಿದೆ. 1,614 ಪ್ರಶ್ನೆಗಳಿಗೆ ಲಿಖಿತವಾಗಿ ಉತ್ತರ ಸ್ವೀಕರಿಸಲಾಗಿದೆ. ಶೇ.74 ಶಾಸಕರ ಹಾಜರಾತಿ ಇತ್ತು. ಆದರೆ, ನಿರೀಕ್ಷೆ ಮೀರಿದ ಗೈರು ಇರಲಿಲ್ಲ ಎಂದರು.

ಕರ್ನಾಟಕ ವಿಧಾನ ಮಂಡಲದ ಸಾರ್ವಜನಿಕ ಲೆಕ್ಕಪತ್ರ ಸಮಿತಿ ಸೇರಿ ವಿವಿಧ ಸಮಿತಿಗಳ ಎಂಟು ವರದಿಗಳನ್ನು ಸದನದಲ್ಲಿ ಮಂಡಿಸಲಾಗಿದೆ. ಉತ್ತರ ಕರ್ನಾಟಕ ಭಾಗದ ಸಮಸ್ಯೆಗಳ ಕುರಿತು ವಿಶೇಷ ಚರ್ಚೆ ನಡೆಸಲಾಗಿದೆ. ಈ ಭಾಗದ ಶಾಸಕರಿಗೂ ಹೆಚ್ಚಿನ ಅವಕಾಶ ನೀಡಲಾಗಿದೆ ಎಂದು ತಿಳಿಸಿದರು. ಅಧಿವೇಶನದಲ್ಲಿ ವಸತಿ, ಊಟೋಪಹಾರ, ಸಾರಿಗೆ ಸೇರಿ ಪ್ರತಿಯೊಂದು ವ್ಯವಸ್ಥೆಯನ್ನು ಬೆಳಗಾವಿ ಜಿಲ್ಲಾಡಳಿತ ಅಚ್ಚುಕಟ್ಟಾಗಿ ಒದಗಿಸಿದೆ. ಅಧಿವೇಶನ ನಡೆಯುವ ವೇಳೆ ಭದ್ರತೆ, ಸಾರಿಗೆ ವ್ಯವಸ್ಥೆ ನಿಯಂತ್ರಣ, ಗಣ್ಯರ ಭದ್ರತೆ ಸವಾಲಿನ ಕೆಲಸ ಬೆಳಗಾವಿ ಪೊಲೀಸ್ ಇಲಾಖೆಯು ಅದನ್ನು ಸಮರ್ಪಕವಾಗಿ ನಿಭಾಯಿಸಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ವಿಧಾಸಭೆ ಕಾರ್ಯದರ್ಶಿ ಎಂ.ಕೆ. ವಿಶಾಲಾಕ್ಷಿ, ಎಸ್.ಪಿ.ಡಾ.ಸಂಜೀವ ಪಾಟೀಲ, ಅಪರ ಜಿಲ್ಲಾಧಿಕಾರಿ ಅಶೋಕ ದುಡಗುಂಟಿ, ಡಾ.ಪ್ರವೀಣ ಬಗೇವಾಡಿ, ಗೀತ ಕೌಲಗಿ, ಡಾ.ರುದ್ದೇಶ ಘಾಳಿ ಇತರರಿದ್ದರು.

ಆಧಾರ: ವಿಜಯವಾಣಿ, ದಿನಾಂಕ:31.12.2022.

## 73. ಸದನಕ್ಕೆ ಗೈರು: ಸಭಾಧ್ಯಕ್ಷ ಕಾಗೇರಿ ಬೇಸರ

ಚಳಿಗಾಲದ ಅಧಿವೇಶನದಲ್ಲಿ ಶೇ.74ರಷ್ಟು ಮಾತ್ರ ಹಾಜರಾತಿ ಕಂಡುಬಂದಿದೆ. ಪೂರ್ಣ ಹಾಜರಾತಿ ಕಡ್ಡಾಯವೆಂದು ನಾನು ಹೇಳಿದ್ದೆ. ಆದರೂ, ಕೆಲವರು ಬೇಜವಾಬ್ದಾರಿ ತೋರಿ ಸದನದಿಂದ ದೂರ ಉಳಿದಿದ್ದಾರೆ ಎಂದು ವಿಧಾನಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ಬೇಸರ ವ್ಯಕ್ತಪಡಿಸಿದರು.

ಸುದ್ದಿಗೋಷ್ಠಿಯಲ್ಲಿ ಮಾತನಾಡಿ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜನರಿಂದ ಆಯ್ಕೆಯಾಗದವರು ತಾವು ಎಂಬುದನ್ನು, ಗೈರಾದವರು ಅರ್ಥ ಮಾಡಿಕೊಳ್ಳಬೇಕು. ದಿನೇಶ ಗುಂಡೂರಾವ್, ಡಿ.ಸಿ.ಗೌರಿಶಂಕರ್, ಹರೀಶ್ ಪೂಂಜಾ, ಎಂ.ಕೃಷ್ಣಪ್ಪ, ಶರತ್ ಕುಮಾರ ಬಚ್ಚೇಗೌಡ, ಸಿ.ಎಸ್.ಪುಟ್ಟರಾಜು, ರವೀಂದ್ರ ಶ್ರೀಕಂಠಯ್ಯ, ಜಮೀರ್ ಅಹಮದ್ ಖಾನ್ ಹಾಗೂ ಅನಿತಾ ಕುಮಾರಸ್ವಾಮಿ ಅವರು ಅನುಮತಿ ಪಡೆಯದೇ ಗೈರಾಗಿದ್ದಾರೆ ಎಂದು ವಿವರಿಸಿದರು. ಎಚ್.ಡಿ. ಕುಮಾರಸ್ವಾಮಿ, ಜಿ.ಟಿ. ದೇವೆಗೌಡ, ಎ.ಎಸ್.ರಾಮದಾಸ, ರವೀಂದ್ರನಥ, ಡಿ.ಸಿ. ತಮ್ಮಣ್ಣ ಅನುಮತಿ ಪಡೆದು ಗೈರಾಗಿದ್ದಾರೆ ಎಂದು ವಿವರಿಸಿದರು. ಜನರು ಸದನಕ್ಕೆ ಬರಲಾಗುವುದಿಲ್ಲ ಎಂದು ಪ್ರತಿನಿಧಿಗಳನ್ನು ಕಳುಹಿಸುತ್ತಾರೆ. ಪ್ರತಿನಿಧಿಗಳೇ ಬರದಿದ್ದರೆ ಜನರ ಸಮಸ್ಯೆ ಇನ್ಯಾರು ಚರ್ಚಿಸಬೇಕು? ಶಾಸಕರು ತಮ್ಮ ಸ್ಥಾನದ ಮಹತ್ವ ಅರಿಯಬೇಕು. ಜನರು ಕೂಡ ಜಾಗೃತರಾಗಬೇಕು, ತಮ್ಮೂರಿನ ಜಾತ್ರೆಗೂ, ಹಬ್ಬಕ್ಕೂ ಕರೆಯಲು ದುಂಬಾಲು ಬೀಳುವ ಬದಲು ಸದನಕ್ಕೆ ಹೋಗಿ ಎಂದು ಎಚ್ಚರಿಸಬೇಕು ಎಂದು ಸಲಹೆ ನೀಡಿದರು.

**ಮುಖ್ಯಾಂಶಗಳು:**

- ಈ ಬಾರಿ 41 ಗಂಟೆ 21 ನಿಮಿಷ ಅಧಿವೇಶನ ನಡೆದಿದೆ. 13 ಮಸೂದೆ ಮಂಡಿಸಿದ್ದೇವೆ. 9 ವಿಧೇಯಕ ಅಂಗೀಕರಿಸಿದ್ದೇವೆ. 150 ಪ್ರಶ್ನೆಗಳ ಪೈಕಿ 146ಕ್ಕೆ ಉತ್ತರಿಸಿದ್ದೇವೆ.
- 9 ದಿನಗಳಲ್ಲಿ 20 ಸಾವಿರಕ್ಕೂ ಹೆಚ್ಚು ಜನ ಕಲಾಪ ವೀಕ್ಷಿಸಿದರು. ಇವರಲ್ಲಿ ಶಾಲಾ ಕಾಲೇಜು ಮಕ್ಕಳೇ ಹೆಚ್ಚಾಗಿದ್ದು ವಿಶೇಷ. 80 ಬೃಹತ್ ಪ್ರತಿಭಟನೆಗಳು, 20 ಮನವಿಗಳು ಸೇರಿ 100 ಹೋರಾಟಗಳು ಎದುರಾಗಿವೆ. ಸಂಬಂಧಿಸಿದವರು ಸೂಕ್ತವಾಗಿ ಸ್ಪಂದಿಸಿದ್ದಾರೆ.
- ಅಧಿವೇಶನ ವೇಳೆಯಲ್ಲಿ 40 ಶಾಸಕರು ಕೋವಿಡ್ ಬೂಸ್ಟರ್ ಡೋಸ್ ಪಡೆದಿದ್ದಾರೆ. ಇನ್ನುಳಿದವರು ಮುಂಚೆಯೇ ಪಡೆದಿದ್ದಾರೆ. ಅಧಿಕಾರಿಗಳು–ಸಿಬ್ಬಂದಿ ಸೇರಿ 700 ಮಂದಿಗೆ ಈ ಲಸಿಕೆ ನೀಡಲಾಗಿದೆ.

ಆಧಾರ: ವಿಶ್ವವಾಣಿ, ದಿನಾಂಕ:31.12.2022.

**ದಿನಾಂಕ: 30.12.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ಅಧಿವೇಶನವು ಉತ್ತಮವಾಗಿ ಯಾವುದೇ ಗೊಂದಲಗಳಿಲ್ಲದೆ ಸರ್ವ ಸಿದ್ಧತೆಗಳೊಂದಿಗೆ ಯಶಸ್ವಿಯಾಗಿ ನಡೆಯಲು ಸಹಕರಿಸಿದ ಜಿಲ್ಲಾಡಳಿತ ಸೇರಿದಂತೆ ಸಂಬಂಧಪಟ್ಟ ಎಲ್ಲಾ ಇಲಾಖೆಗಳ ಅಧಿಕಾರಿಗಳ ಸಭೆ ನಡೆಸಿ ಅಭಿನಂದನೆ ಸಲ್ಲಿಸಿದರು. ನಂತರ ಪತ್ರಿಕಾಗೋಷ್ಠಿ ಕರೆದು ಅಧಿವೇಶನದ ವಿವರ ಒದಗಿಸಿದರು, ಈ ಸಂದರ್ಭದಲ್ಲಿ ವಿಧಾನಸಭೆ ಕಾರ್ಯದರ್ಶಿಗಳು, ಬೆಳಗಾವಿ ಜಿಲ್ಲಾಧಿಕಾರಿಗಳು, ಪೊಲೀಸ್ ಆಯುಕ್ತರು, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ಪಾಲಿಕೆ ಆಯುಕ್ತರು ಹಾಗೂ ಇಲಾಖೆಗಳ ಹಿರಿಯ ಅಧಿಕಾರಿಗಳು ಉಪಸ್ಥಿತರಿದ್ದರು.**





# 74. ಕರ್ನಾಟಕ ವಿಧಾನಸಭೆ 15ನೇ ವಿಧಾನಸಭೆಯ ದಿನಾಂಕ:19.12.2022ರಿಂದ 29.12.2022 ರವರೆಗೆ ನಡೆದ ಹದಿನಾಲ್ಕನೇ ಅಧಿವೇಶನದಲ್ಲಿ ಮಂಡಿಸಿದ/ಅಂಗೀಕರಿಸಿದ ಹಾಗೂ ಹಿಂಪಡೆಯಲಾದ ವಿಧೇಯಕಗಳ ಪಟ್ಟಿ

| ಕ್ರ .ಸಂ. Sl. No | ವಿಧೇಯಕಗಳ ಹೆಸರು Name of the Bill | ವಿಧೇಯಕಗಳು | | | ಷರಾ Remarks |
|---|---|---|---|---|---|
| | | ವಿಧಾನಸಭೆ Legislative Assembly | | ವಿಧಾನ ಪರಿಷತ್ತು Legislative Council | |
| | | ಮಂಡಿಸಿದ ದಿನಾಂಕ Date of Introduction | ಅಂಗೀಕರಿಸಿದ ದಿನಾಂಕ Date of Passing | ಅಂಗೀಕರಿಸಿದ ದಿನಾಂಕ Date of Passing | |
| 1 | 2 | 3 | 4 | 6 | 7 |
| 1 | ಕರ್ನಾಟಕ ಭೂಕಂದಾಯ (ಎರಡನೇ ತಿದ್ದುಪಡಿ) ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:30)<br>The Land Revenue (Second Amendment) Bill, 2022 (L.A. Bill No. 30 of 2022) | **20.12.2022** | **22.12.2022** | **26.12.2022** | |
| 2 | ಕರ್ನಾಟಕ ಅನುಸೂಚಿತ ಜಾತಿಗಳು ಮತ್ತುಅನುಸೂಚಿತ ಪಂಗಡಗಳು (ಶೈಕ್ಷಣಿಕ ಸಂಸ್ಥೆಗಳಲ್ಲಿನ ಸ್ಥಾನಗಳಲ್ಲಿ ಮತ್ತು ಸೇವೆಗಳಲ್ಲಿನ ನೇಮಕಾತಿಅಥವಾ ಹುದ್ದೆಗಳಲ್ಲಿ ಮೀಸಲಾತಿ) ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:31)<br>The Karnataka Scheduled Castes and Scheduled Tribes Reservation of seats in Educational Institutions and of Appointments or posts in the services under the State) Bill, 2022 (L.A. Bill No. 31 of 2022) | **20.12.2022** | **26.12.2022** | **27.12.2022** | |
| 3 | ಕರ್ನಾಟಕ ವಿಶೇಷ ಹೂಡಿಕೆ ಪ್ರದೇಶ ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:32)<br>The Karnataka Special Investment Bill, 2022 (L.A. Bill No. 32 of 2022) | **20.12.2022** | **27.12.2022** | **29.12.2022** | |

| | | | | | |
|---|---|---|---|---|---|
| 4 | ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ) ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:33) The Karnataka Board Area Development Authority (Amendment) Bill, 2022 (L.A. Bill No. 33 of 2022) | **20.12.2022** | **22.12.2022** | **26.12.2022** | |
| 5 | ಕರ್ನಾಟಕ ಸ್ಟಾಂಪು (ನಾಲ್ಕನೇ ತಿದ್ದುಪಡಿ) ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:34) The Karnataka Stamp (Fourth Amendment) Bill, 2022 (L.A. Bill No. 34 of 2022) | **21.12.2022** | **23.12.2022** | **27.12.2022** | |
| 6 | ಕರ್ನಾಟಕ ಧನವಿನಿಯೋಗ (ಸಂಖ್ಯೆ:4) ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:35) The Karnataka Appropriation Bill, 2022 (No. 35) (L.A. Bill No. 4 of 2022) | **29.12.2022** | **29.12.2022** | **29.12.2022** | |
| 7 | ರಾಜ್ಯ ಒಕ್ಕಲಿಗರ ಸಂಘ ವಿಶ್ವವಿದ್ಯಾಲಯ ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:36) RajyaVokkaligaraSangha University Bill, 2022) (L.A. Bill No. 36 of 2022) | **29.12.2022** | | | |
| 8 | ಕಿಷ್ಕಿಂದ ವಿಶ್ವವಿದ್ಯಾಲಯ ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:37) The Kishkinda University Bill, 2022 (L.A. Bill No. 37 of 2022) | **29.12.2022** | | | |
| 9 | ಜಿ.ಎಮ್. ವಿಶ್ವವಿದ್ಯಾಲಯ ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:38) The G. M. University Bill, 2022 (L.A. Bill No. 38 of 2022) | **29.12.2022** | | | |

| | | | | | |
|---|---|---|---|---|---|
| 10 | ಟಿ. ಜಾನ್ ವಿಶ್ವವಿದ್ಯಾಲಯ ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:39)<br>The T. John University Bill, 2022 (L.A. Bill No. 39 of 2022) | **29.12.2022** | | | |
| 11 | ಸಪ್ತಗಿರಿ ಎನ್‌ಪಿಎಸ್ ವಿಶ್ವವಿದ್ಯಾಲಯ ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:40)<br>The Sapthagiri NPS University Bill, 2022 (L.A. Bill No. 40 of 2022) | **29.12.2022** | | | |
| 12 | ಆಚಾರ್ಯ ವಿಶ್ವವಿದ್ಯಾಲಯ ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:41)<br>The Acharya University Bill, 2022 (L.A. Bill No. 41 of 2022) | **29.12.2022** | | | |
| 13 | ಬೆಂಗಳೂರು ಮಹಾನಗರ ಭೂ ಸಾರಿಗೆ ಪ್ರಾಧಿಕಾರ ವಿಧೇಯಕ, 2022 (2022ರ ವಿ.ಸ.ವಿ. ಸಂಖ್ಯೆ:29)<br>The Bengaluru Metropolitan Land Transport Authority (Amendment) Bill, 2022 (L.A. Bill No. 29 of 2022) | **23.09.2022** | **27.12.2022** | **28.12.2022** | ಸದರಿ ವಿಧೇಯಕವನ್ನು ವಿಧಾನಸಭೆಯಲ್ಲಿ ತಿದ್ದುಪಡಿಯೊಂದಿಗೆ ಅಂಗೀಕರಿಸಲಾಗಿದೆ |

| ವಿಧಾನ ಪರಿಷತ್ತಿನಿಂದ ಅಂಗೀಕಾರವಾದ ರೂಪದಲ್ಲಿರುವ ಹಾಗೂ ವಿಧಾನಸಭೆಯಲ್ಲಿ ಅಂಗೀಕಾರಗೊಂಡಿರುವ ವಿಧೇಯಕಗಳು | | | | |
|---|---|---|---|---|
| ವಿಧೇಯಕಗಳ ಹೆಸರು<br>Name of the Bill | ವಿಧೇಯಕಗಳು | | | ಷರಾ<br>Remarks |
| | ವಿಧಾನ ಪರಿಷತ್ತು<br>Legislative Council | | ವಿಧಾನಸಭೆ<br>Legislative Assembly | |
| | ಮಂಡಿಸಿದ ದಿನಾಂಕ<br>Date of Introduction | ಅಂಗೀಕರಿಸಿದ ದಿನಾಂಕ<br>Date of Passing | ಅಂಗೀಕರಿಸಿದ ದಿನಾಂಕ<br>Date of Passing | |
| 2 | 3 | 4 | 5 | 6 |
| 1.ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ (ತಿದ್ದುಪಡಿ) (2022ರ ವಿ.ಪ.ವಿ. ಸಂಖ್ಯೆ:01)<br>The Karnataka Private Medical Establishments Bill, 2021 (L.C. Bill No. 01 of 2022) | **28.12.2022** | **28.12.2022** | **29.12.2022** | |
| 2.ಕರ್ನಾಟಕ ಭೂ ಕಂದಾಯ (ಮೂರನೇ ತಿದ್ದುಪಡಿ) (2022ರ ವಿ.ಪ.ವಿ. ಸಂಖ್ಯೆ:02)<br>The Karnataka Land Revenue (Third Amendment) Bill, 2022 (L.C. Bill No. 02 of 2022) | **28.12.2022** | **28.12.2022** | **29.12.2022** | |

| ವಿಧಾನಸಭೆಯಲ್ಲಿ ಹಿಂಪಡೆಯಲಾದ ವಿಧೇಯಕ | | | | |
|---|---|---|---|---|
| ಬಂದಿಗಳ ಗುರುತಿಸುವಿಕೆ (ಕರ್ನಾಟಕತಿದ್ದುಪಡಿ) ವಿಧೇಯಕ, 2021 (2021ರ ವಿಸ.ವಿ.ಸಂಖ್ಯೆ:25)<br>The Identification of Prisoners (Karnataka Amendment) Bill, 2021 (L.A. Bill No. 25 of 2021) | **14.09.2021** | **17.09.2021** | | ವಿಧಾನಮಂಡಲದ ಉಭಯ ಸದನಗಳಲ್ಲಿ ಮಂಡಿಸಿ, ಅಂಗೀಕಾರವಾಗಿದ್ದ ಸದರಿ ವಿಧೇಯಕವನ್ನು ವಿಧಾನಸಭೆಯಲ್ಲಿ ದಿನಾಂಕ:22.12.2022ರಂದು ಹಿಂಪಡೆಯಲಾಗಿದೆ. |

* * * * *

## 75. 15ನೇ ವಿಧಾನಸಭೆಯ 14ನೇ ಅಧಿವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ

15ನೇ ವಿಧಾನ ಸಭೆಯ 14ನೇ ಅಧಿವೇಶನವು ದಿನಾಂಕ 19ನೇ ಡಿಸೆಂಬರ್, 2022ರಂದು ಬೆಳಗಾವಿ ಸುವರ್ಣ ವಿಧಾನಸೌಧದ ವಿಧಾನ ಸಭೆಯ ಸಭಾಂಗಣದಲ್ಲಿ ಪ್ರಾರಂಭವಾಗಿ 29ನೇ ಡಿಸೆಂಬರ್, 2022 ರವರೆಗೆ 09 ದಿನಗಳ ಕಾಲ ಸುಮಾರು 41 ಗಂಟೆ 20 ನಿಮಿಷಗಳ ಕಾಲ ಕಾರ್ಯಕಲಾಪ ನಡೆಸಲಾಗಿದೆ.

- ಇತ್ತೀಚೆಗೆ ನಿಧನ ಹೊಂದಿದ ಗಣ್ಯರುಗಳಿಗೆ ಸಂತಾಪ ಸೂಚನಾ ನಿರ್ಣಯವನ್ನು ಮಂಡಿಸಿ, ಅಂಗೀಕರಿಸಲಾಗಿದೆ.
- ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಬಗ್ಗೆ ಕಾರ್ಯದರ್ಶಿಯವರ ವರದಿಯನ್ನು ಮಂಡಿಸಲಾಗಿದೆ.
- ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ನೀಡಿರುವ ಮಹಾನಗರ ಪಾಲಿಕೆಗಳಲ್ಲಿ ಮುಖ್ಯಮಂತ್ರಿಗಳ ನಗರೋತ್ಥಾನ ಯೋಜನೆ (ಹಂತ–III)ರ ಮೇಲಿನ ಕಾರ್ಯನಿರ್ವಹಣಾ ಲೆಕ್ಕಪರಿಶೋಧನಾ ವರದಿ ಮತ್ತು 2021–22ನೇ ಸಾಲಿನ ಧನವಿನಿಯೋಗ ಲೆಕ್ಕಗಳು ಮತ್ತು ಹಣಕಾಸಿನ ಲೆಕ್ಕಗಳ (ಸಂಪುಟI ಮತ್ತುII)ನ್ನು ಸದನದಲ್ಲಿ ಮಂಡಿಸಲಾಗಿದೆ.
- 2021–22ನೇ ಸಾಲಿನ ವಿಧಾನಮಂಡಲದ ವಿವಿಧ ಜಂಟಿ ಸಮಿತಿಗಳು ಮತ್ತು ವಿಧಾನಸಭೆಯ ವಿವಿಧ ಸಮಿತಿಗಳನ್ನು ಪುನರ್‌ರಚನೆ ಮಾಡಲು ಸದನವು ಮಾನ್ಯ ಸಭಾಧ್ಯಕ್ಷರವರಿಗೆ ದಿನಾಂಕ: 27.12.2022 ರಂದು ಅಧಿಕಾರ ನೀಡಲಾಗಿರುತ್ತದೆ.
- ಒಂದು ಹಕ್ಕುಚ್ಯುತಿ ಪ್ರಸ್ತಾವವನ್ನು ಸದನದಲ್ಲಿ ಮಂಡಿಸಿದ್ದು, ಈ ಬಗ್ಗೆ ಚರ್ಚಿಸಿ ತಿರಸ್ಕರಿಸಲಾಗಿದೆ.
- ಸದನದಲ್ಲಿ ಅತ್ಯುತ್ತಮ ಶಾಸಕ ಪ್ರಶಸ್ತಿ ಪ್ರದಾನ ಮಾಡಲಾಗಿದೆ.
- 2022–23ನೇ ಸಾಲಿನ ಪೂರಕ ಅಂದಾಜುಗಳ ಎರಡನೇ ಕಂತು ಹಾಗೂ 2022–23ನೇ ಸಾಲಿನ ರಾಜ್ಯ ಹಣಕಾಸಿನ ಮಧ್ಯವಾರ್ಷಿಕ ಪರಿಶೀಲನಾ ವರದಿಯನ್ನು ದಿನಾಂಕ:26.12.2022ರಂದು ಮಂಡಿಸಿದ್ದು, ದಿನಾಂಕ:29.12.2022ರಂದು ಮತಕ್ಕೆ ಹಾಕಿ ಅಂಗೀಕರಿಸಲಾಗಿದೆ.
- 2021ನೇ ಸಾಲಿನ ಬಂದಿಗಳ ಗುರುತಿಸುವಿಕೆ (ಕರ್ನಾಟಕ ತಿದ್ದುಪಡಿ) ವಿಧೇಯಕವನ್ನು ಹಿಂಪಡೆಯಲಾಗಿದೆ.
- ಈ ಅಧಿವೇಶನದಲ್ಲಿ 12 ವಿಧೇಯಕಗಳನ್ನು ಮಂಡಿಸಲಾಗಿದ್ದು, ಕಳೆದ ಅಧಿವೇಶನದಲ್ಲಿ ಬಾಕಿ ಇದ್ದ 01 ವಿಧೇಯಕ, ವಿಧಾನ ಪರಿಷತ್ತಿನಿಂದ ಅಂಗೀಕಾರವಾದ ರೂಪದಲ್ಲಿರುವ 02 ವಿಧೇಯಕಗಳು ಹಾಗೂ ಧನವಿನಿಯೋಗ ವಿಧೇಯಕವೂ ಸೇರಿದಂತೆ ಒಟ್ಟು 09 ವಿಧೇಯಕಗಳನ್ನು ಅಂಗೀಕರಿಸಲಾಗಿದೆ.
- ನಿಯಮ 60 ರಡಿಯಲ್ಲಿ ನೀಡಿದ್ದ ನಿಲುವಳಿ ಸೂಚನೆಗಳನ್ನು ನಿಯಮ 69ಕ್ಕೆ ಪರಿವರ್ತಿಸಿರುವುದನ್ನು ಸೇರಿಸಿ ಒಟ್ಟು 17 ಸೂಚನೆಗಳನ್ನು ನಿಯಮ 69 ರಡಿಯಲ್ಲಿ ಸ್ವೀಕರಿಸಿದ್ದು, 05 ಸೂಚನೆಗಳನ್ನು ನಿಯಮ 69ರಡಿಯಲ್ಲಿ ಚರ್ಚಿಸಲಾಗಿರುತ್ತದೆ.
- ಮಹಾರಾಷ್ಟ್ರದ ಜನತೆಯು ಅನಾವಶ್ಯಕವಾಗಿ ಸೃಷ್ಟಿಸಿರುವ ಗಡಿ ವಿವಾದವನ್ನು ಖಂಡಿಸಿ ರಾಜ್ಯದ ಹಿತರಕ್ಷಣೆಗೆ ಕಟಿಬದ್ಧರಾಗಿರುವುದಾಗಿ ಸದನವು ನಿರ್ಣಯವನ್ನು ಸರ್ವಾನುಮತದಿಂದ ಅಂಗೀಕರಿಸಿದೆ.

- ಉತ್ತರ ಕರ್ನಾಟಕ ಅಭಿವೃದ್ಧಿ ಕುರಿತು ಸದನದಲ್ಲಿ ವಿಶೇಷ ಚರ್ಚೆ ನಡೆಸಲಾಗಿದೆ.
- ಕರ್ನಾಟಕ ವಿಧಾನಮಂಡಲದ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ಸೇರಿದಂತೆ ವಿವಿಧ ಸಮಿತಿಗಳ 08 ವರದಿಗಳನ್ನು ಸದನದಲ್ಲಿ ಮಂಡಿಸಲಾಗಿರುತ್ತದೆ.
- ಸಭೆಯ ಮುಂದಿಡಲಾದ ಕಾಗದ ಪತ್ರಗಳ 1, 2 ಮತ್ತು 3ನೇ ಪಟ್ಟಿಯಿಂದ 24 ಅಧಿಸೂಚನೆಗಳು, 01 ಅಧ್ಯಾದೇಶ, 106 ವಾರ್ಷಿಕ ವರದಿಗಳು ಹಾಗೂ 122 ಲೆಕ್ಕಪರಿಶೋಧನಾ ವರದಿಗಳನ್ನು ಸದನದಲ್ಲಿ ಮಂಡಿಸಲಾಗಿರುತ್ತದೆ.
- ಒಟ್ಟು 2125 ಪ್ರಶ್ನೆಗಳನ್ನು ಸ್ವೀಕರಿಸಲಾಗಿದ್ದು, ಸದನದಲ್ಲಿ ಉತ್ತರಿಸಬೇಕಾಗಿದ್ದ 150 ಪ್ರಶ್ನೆಗಳ ಪೈಕಿ 146 ಪ್ರಶ್ನೆಗಳಿಗೆ ಹಾಗೂ ಲಿಖಿತ ಮೂಲಕ ಉತ್ತರಿಸುವ 1923 ಪ್ರಶ್ನೆಗಳ ಪೈಕಿ 1614 ಪ್ರಶ್ನೆಗಳಿಗೆ ಉತ್ತರಗಳನ್ನು ಸ್ವೀಕರಿಸಲಾಗಿದೆ.
- ನಿಯಮ 351 ರಡಿಯಲ್ಲಿ 160 ಸೂಚನೆಗಳನ್ನು ಅಂಗೀಕರಿಸಿದ್ದು, 101 ಸೂಚನೆಗಳ ಉತ್ತರಗಳನ್ನು ಸ್ವೀಕರಿಸಲಾಗಿದೆ.
- ಗಮನ ಸೆಳೆಯುವ 289 ಸೂಚನೆಗಳ ಪೈಕಿ 85 ಸೂಚನೆಗಳನ್ನು ಚರ್ಚಿಸಲಾಗಿದೆ/ಮಂಡಿಸಲಾಗಿದೆ. ಒಟ್ಟಾರೆಯಾಗಿ 190 ಸೂಚನೆಗಳಿಗೆ ಉತ್ತರವನ್ನು ಸ್ವೀಕರಿಸಲಾಗಿದೆ.
- ಶೂನ್ಯ ವೇಳೆಯಲ್ಲಿ ಒಟ್ಟು40 ಸೂಚನೆಗಳನ್ನು ಚರ್ಚಿಸಲಾಗಿದೆ.
- ಸುವರ್ಣ ವಿಧಾನಸೌಧದ ವಿಧಾನಸಭೆಯ ಸಭಾಂಗಣದಲ್ಲಿ ವಿಶ್ವಗುರು ಬಸವಣ್ಣ, ಮಹಾತ್ಮಾ ಗಾಂಧೀಜಿ, ಡಾ. ಬಾಬಾ ಸಾಹೇಬ್‌ಅಂಬೇಡ್ಕರ್, ಸರ್ದಾರ್ ವಲ್ಲಭಾಯಿ ಪಟೇಲ್, ಸ್ವಾಮಿ ವಿವೇಕಾನಂದ, ನೇತಾಜಿ ಸುಭಾಷಚಂದ್ರ ಬೋಸ್ ಮತ್ತು ವೀರ್ ಸಾವರ್ಕರ್ ಇವರುಗಳ ಭಾವಚಿತ್ರಗಳನ್ನು ದಿನಾಂಕ:19.12.2022ರಂದು ಅನಾವರಣಗೊಳಿಸಲಾಗಿದೆ ಹಾಗೂ ದಿನಾಂಕ:29.12.2022 ರಂದು ಸುವರ್ಣವಿಧಾನಸೌಧದ ಆವರಣದಲ್ಲಿವೀರ ಮಹಿಳೆ ಕಿತ್ತೂರುರಾಣಿಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಡಾ. ಬಾಬಾ ಸಾಹೇಬ್‌ಅಂಬೇಡ್ಕರ್ ಮತ್ತು ಮಹಾತ್ಮಾಗಾಂಧೀಜಿ ಇವರುಗಳ ಪ್ರತಿಮೆ ನಿರ್ಮಾಣ ಕಾಮಗಾರಿಯ ಭೂಮಿ ಪೂಜೆ ಮಾಡಿರುವುದು ವಿಶೇಷವಾಗಿದೆ.

ಸದನ ನಡೆಸಲು ಸಹಕರಿಸಿದ ಸಭಾ ನಾಯಕರಾದ ಮಾನ್ಯ ಮುಖ್ಯಮಂತ್ರಿಯವರಿಗೆ, ಮಾನ್ಯ ವಿರೋಧ ಪಕ್ಷದ ನಾಯಕರಿಗೆ, ಸಚಿವ ಸಂಪುಟದ ಸದಸ್ಯರಿಗೆ, ಸರ್ಕಾರಿ ಹಾಗೂ ವಿರೋಧ ಪಕ್ಷದ ಮುಖ್ಯ ಸಚೇತಕರಿಗೆ, ಎಲ್ಲಾ ಸದಸ್ಯರುಗಳಿಗೆ, ಮಾಧ್ಯಮ ಪ್ರತಿನಿಧಿಗಳಿಗೆ, ಇಲಾಖಾ ಮುಖ್ಯಸ್ಥರು, ಅಧಿಕಾರಿ–ಸಿಬ್ಬಂದಿಯವರಿಗೆ, ಬೆಳಗಾವಿಯಲ್ಲಿ ವಸತಿ ಮತ್ತು ಸಾರಿಗೆ ವ್ಯವಸ್ಥೆ ಮಾಡಿಕೊಟ್ಟು ಶಾಸಕರ ಸೌಕರ್ಯಕ್ಕೆ ನಿರಂತರವಾಗಿ ಪ್ರಯತ್ನಿಸಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ ಎಲ್ಲರಿಗೂ ಹಾಗೂ ವಿಶೇಷವಾಗಿ ಬೆಳಗಾವಿ ಜಿಲ್ಲಾಡಳಿತದವರಿಗೆ ಹಾಗೂ ಕಾನೂನು ಸುವ್ಯವಸ್ಥೆಯ ಜವಾಬ್ದಾರಿಗಳನ್ನು ಸೂಕ್ತವಾಗಿ ನಿರ್ವಹಿಸಿದ ಪೊಲೀಸ್ ವರಿಷ್ಠಾಧಿಕಾರಿ ಮತ್ತು ಸಿಬ್ಬಂದಿಗಳಿಗೆ ಹಾಗೂ ವಿಧಾನಸಭೆ ಸಚಿವಾಲಯದ ಅಧಿಕಾರಿ ಹಾಗೂ ಸಿಬ್ಬಂದಿಯವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಕೊರೋನಾ ಕುರಿತು ಮುಂಜಾಗ್ರತೆ ವಹಿಸುವಂತೆ ಕೋರುತ್ತಾ ನಾಡಿನ ಜನತೆಗೆ 2023ರ ಹೊಸ ವರ್ಷದ ಶುಭಾಶಯಗಳನ್ನು ತಿಳಿಸುತ್ತೇನೆ.

**ಈಗ ರಾಷ್ಟ್ರಗೀತೆಯೊಂದಿಗೆ ಸದನವನ್ನು ಅನಿರ್ದಿಷ್ಟ ಅವಧಿಗೆ ಮುಂದೂಡುತ್ತಿದ್ದೇನೆ.**

*****

## 76. ಕರ್ನಾಟಕ ವಿಧಾನ ಪರಿಷತ್ತು ನೂರನಲವತ್ತೆಂಟನೆಯ ಅಧಿವೇಶನದ ದಿನಾಂಕ: 19.12.2022ರಿಂದ29.12.2022ರವರೆಗೆ ವಿಧಾನ ಸಭೆಯಲ್ಲಿ ಅಂಗೀಕೃತಗೊಂಡು ವಿಧಾನ ಪರಿಷತ್ತಿನ ಸಹಮತಿ ಪಡೆದಿರುವ ವಿಧೇಯಕಗಳ ವಿವರ

| ಕ್ರ ಸಂ | ವಿಧೇಯಕದ ಹೆಸರು | ಬಿಲ್ ಸಂಖ್ಯೆ | ವಿ ಸ ಅಂಗೀಕರಿಸಿರುವ ದಿನಾಂಕ | ವಿ ಪ ಅಂಗೀಕರಿಸಿರುವ ದಿನಾಂಕ |
|---|---|---|---|---|
| 1. | ಬೆಂಗಳೂರು ಮಹಾನಗರ ಭೂಸಾರಿಗೆ ಪ್ರಾಧಿಕಾರ ವಿಧೇಯಕ,2022 | 29 | 27.12.2022 | 28.12.2022 |
| 2. | ಕರ್ನಾಟಕ ಭೂಕಂದಾಯ 2 ನೇ ತಿದ್ದುಪಡಿ ವಿಧೇಂ 2022 | 30 | 22.12.2022 | 26.12.2022 |
| 3. | ಕರ್ನಾಟಕಅನುಸೂಚಿತ ಜಾತಿಗಳು ಮತ್ತುಅನುಸೂಚಿ ಪಂಗಡಗಳು (ಶೈಕ್ಷಣಿಕ ಸಂಸ್ಥೆಗಳಲ್ಲಿನ ಸ್ಥಾನಗಳಲ್ಲಿ ಮತ್ತುರಾಜ್ಯಾಧೀನ ಸೇವೆಗಳಲ್ಲಿನ ನೇಮಕಾತಿಅಥವಾ ಹುದ್ದೆಗಳಲ್ಲಿ ಮೀಸಲಾತಿ) ವಿಧೇಯಕ, 2022. | 31 | 26.12.2022 | 27.12.2022 |
| 4. | ಕರ್ನಾಟಕ ವಿಶೇಷ ಹೂಡಿಕೆ ಪ್ರದೇಶ ವಿಧೇಯಕ,2022, | 32 | 27.12.2022 | 29.12.2022 |
| 5 | ಕರ್ನಾಟಕಗಡಿ ಪ್ರದೇಶಅಭಿವೃದ್ಧಿ ಪ್ರಾಧಿಕಾರ(ತಿದ್ದುಪಡಿ) ವಿಧೇಯಕ, 2022, | 33 | 22.12.2022 | 26.12.2022 |
| 6. | ಕರ್ನಾಟಕ ಸ್ಟಾಂಪು (ನಾಲ್ಕನೇ ತಿದ್ದುಪಡಿ) ವಿಧೇಯಕ, 2022 | 34 | 23.12.2022 | 27.12.2022 |
| 7. | ಕರ್ನಾಟಕಧನವಿನಿಯೋಗ (ಸಂಖ್ಯೆ:4) ವಿಧೇಯಕ, 2022 | 35 | 29.12.2022 | 29.12.2022 |

**ವಿಧಾನ ಪರಿಷತ್ತಿನಲ್ಲಿಅಂಗೀಕೃತಗೊಂಡು ವಿಧಾನ ಸಭೆಯಲ್ಲಿ ಸಹಮತಿ ಪಡೆದಿರುವ ವಿಧೇಯಕಗಳ ವಿವರ**

| ಕ್ರ ಸಂ | ವಿಧೇಯಕದ ಹೆಸರು | ಬಿಲ್ ಸಂಖ್ಯೆ | ವಿ ಪ ಮಂಡಿಸಿರುವ/ ಅಂಗೀಕರಿಸಿರುವ ದಿನಾಂಕ | ವಿ ಸ ಅಂಗೀಕರಿಸಿರುವ ದಿನಾಂಕ |
|---|---|---|---|---|
| 1 | ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ (ತಿದ್ದುಪಡಿ) ವಿಧೇಯಕ, 2022<br>**ವಿಧಾನ ಪರಿಷತ್ತಿನ ವಿಧೇಯಕ** | 1 | 28.12.2022 | 29.12.2022 |
| 2. | ಕರ್ನಾಟಕ ಭೂಕಂದಾಯ (ಮೂರನೇತಿದ್ದುಪಡಿ) ವಿಧೇಯಕ, 2022<br>**ವಿಧಾನ ಪರಿಷತ್ತಿನ ವಿಧೇಯಕ** | 2 | 28.12.2022 | 29.12.2022 |

**ವಿಧಾನ ಸಭೆಯಲ್ಲಿ ಹಿಂಪಡೆಯಲಾಗಿದ್ದು, ವಿಧಾನ ಪರಿಷತ್ತಿನಲ್ಲಿ ಹಿಂಪಡೆದಿರುವ ಬಗ್ಗೆ ಪ್ರಕಟಿಸಿರುವ ವಿಧೇಯಕಗಳ ಕುರಿತ ವಿವರ**

| ಕ್ರ ಸಂ | ವಿಧೇಯಕದ ಹೆಸರು | ಬಿಲ್ ಸಂಖ್ಯೆ | ವಿ ಸ ಹಿಂಪಡೆದಿರುವ ದಿನಾಂಕ | ವಿ ಪ ಹಿಂಪಡೆದಿರುವ ದಿನಾಂಕ |
|---|---|---|---|---|
| 1. | 2021ನೇ ಸಾಲಿನ ಬಂದಿಗಳ ಗುರುತಿಸುವಿಕೆ (ಕರ್ನಾಟಕತಿದ್ದುಪಡಿ) ವಿಧೇಯಕ" (2021ನೇ ಸಾಲಿನ ವಿಧಾನ ಸಭೆಯ ವಿಧೇಯಕ ಸಂಖ್ಯೆ:25) | 25 | 22.12.2022 | 23.12.2022 ಹಿಂಪಡೆದಿರುವ ಬಗ್ಗೆ ಪ್ರಕಟಿಸಲಾಗಿದೆ |
| 3. | **ಕರ್ನಾಟಕಅಗ್ನಿಶಾಮಕ ದಳ (ತಿದ್ದುಪಡಿ) ವಿಧೇಯಕ,2022**<br>ವಿಧಾನ ಪರಿಷತ್ತಿನ ವಿಧೇಯಕ | 3 | 29.12.2022 | |
| 8 | ಕನ್ನಡ ಭಾಷಾ ಸಮಗ್ರಅಭಿವೃದ್ಧಿ ವಿಧೇಯಕ,2022 | 26 | | |
| 9 | **ರಾಜ್ಯಒಕ್ಕಲಿಗರ ಸಂಘ ವಿಶ್ವವಿದ್ಯಾಲಯ ವಿಧೇಯಕ,2022,** | 36 | | |
| 10 | **ಕಿಷ್ಕಿಂದ ವಿಶ್ವವಿದ್ಯಾಲಯ ವಿಧೇಯಕ,2022,** | 37 | | |
| 11 | **ಜಿ.ಎಂ ವಿಶ್ವವಿದ್ಯಾಲಯ ವಿಧೇಯಕ,2022,** | 38 | | |
| 12 | **ಟಿ. ಜಾನ್ ವಿಶ್ವವಿದ್ಯಾಲಯ ವಿಧೇಯಕ,2022,** | 39 | | |
| 13 | **ಸಪ್ತಗಿರಿಎನ್.ಪಿ.ಎಸ್. ವಿಶ್ವವಿದ್ಯಾಲಯ ವಿಧೇಯಕ,2022,** | 40 | | |

| | | | | |
|---|---|---|---|---|
| 14 | **ಆಚಾರ್ಯ ವಿಶ್ವವಿದ್ಯಾಲಯ ವಿಧೇಯಕ, 2022,** | 41 | | |
| 15 | **ಕರ್ನಾಟಕ ಲೋಕಾಯುಕ್ತ (ತಿದ್ದುಪಡಿ) ವಿಧೇಯಕ 2022**<br>**(2022ರ ವಿಧಾನಸಭೆಯ ವಿಧೇಯಕ ಸಂಖ್ಯೆ:23)** | ೨೩ | | |
| 16 | ಕನ್ನಡ ಭಾಷಾ ಸಮಗ್ರ ಅಭಿವೃದ್ಧಿ ವಿಧೇಯಕ, 2<br>**(2022ರ ವಿಧಾನಸಭೆಯ ವಿಧೇಯಕ ಸಂಖ್ಯೆ:26)** | ೨೬ | | |
| 17 | ಬೆಂಗಳೂರು ಮಹಾನಗರ ಭೂಸಾರಿಗೆ ಪ್ರಾಧಿಕಾರ ವಿಧೇಯಕ, 2022<br>**2022ರ ವಿಧಾನಸಭೆಯ ವಿಧೇಯಕ ಸಂಖ್ಯೆ:29)** | ೨೯ | | |

## 77. ಕರ್ನಾಟಕ ವಿಧಾನ ಪರಿಷತ್ತಿನ 148ನೇ ಅಧಿವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ

**ಮಾನ್ಯ ಸಭಾಪತಿಯವರು:**

ವಿಧಾನ ಪರಿಷತ್ತಿನ 148ನೇ ಅಧಿವೇಶನದಲ್ಲಿ ನಡೆದಿರುವ ಕಾರ್ಯಕಲಾಪಗಳ ವಿವರವನ್ನು ಸದನಕ್ಕೆ ತಿಳಿಸಲು ಇಚ್ಛಿಸುತ್ತೇನೆ. ಪ್ರಸ್ತುತ ಅಧಿವೇಶನವು ದಿನಾಂಕ:19.12.2022 ರಿಂದ 29.12.2022 ರವರೆಗೆ ಒಟ್ಟು 09 ದಿನಗಳು ಅಂದರೆ, 45 ಗಂಟೆ ನಡೆಸಲಾಗಿರುತ್ತದೆ.

ದಿನಾಂಕ: 19.12.2022ರಂದು ಬೆಳಗ್ಗೆ 11.10 ಗಂಟೆಗೆ ಪ್ರಾರಂಭವಾಗಿ ಕಳೆದ ಅಧಿವೇಶನದಿಂದೀಚೆಗೆ ನಿಧನರಾದ ಗಣ್ಯರುಗಳಿಗೆ ಸದನವುತನ್ನ ಸಂತಾಪವನ್ನು ವ್ಯಕ್ತಪಡಿಸಿತು.

ಕಳೆದ ಅಧಿವೇಶನದಲ್ಲಿ ವರದಿಯನ್ನು ಒಪ್ಪಿಸಿದ ನಂತರ ರಾಷ್ಟ್ರಪತಿಯವರಿಂದ ಹಾಗೂ ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಪಟ್ಟಿಯನ್ನು ಕಾರ್ಯದರ್ಶಿಯವರು ಮಂಡಿಸಿದರು.

ದಿನಾಂಕ:21.12.2022ರಂದು ನಡೆದ ವಿಧಾನ ಪರಿಷತ್ತಿನ ಸಭಾಪತಿ ಸ್ಥಾನದ ಚುನಾವಣೆಯಲ್ಲಿ ಮಾನ್ಯ ಶಾಸಕರಾದ ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ ಅವರನ್ನು ಸಭಾಪತಿಯವರನ್ನಾಗಿ ಸರ್ವಾನು ಮತದಿಂದ ಚುನಾಯಿಸಲಾಯಿತು.

ದಿನಾಂಕ:23.12.2022ರಂದು ನಡೆದ ವಿಧಾನ ಪರಿಷತ್ತಿನ ಉಪ ಸಭಾಪತಿ ಸ್ಥಾನದ ಚುನಾವಣೆಯಲ್ಲಿ ಮಾನ್ಯ ಶಾಸಕರಾದ ಶ್ರೀ ಪ್ರಾಣೇಶ್ ಎಂ.ಕೆ. ಅವರನ್ನ ಉಪ ಸಭಾಪತಿಯವರನ್ನಾಗಿ ಚುನಾಯಿಸಲಾಯಿತು.

ಸಭೆಯ ಮುಂದಿಡಲಾಗುವ ಕಾಗದ ಪತ್ರಗಳ 01, 02 ಹಾಗೂ 03ನೇ ಪಟ್ಟಿಗಳನ್ನು ಮಂಡಿಸಲಾಯಿತು.

ಕರ್ನಾಟಕ ವಿಧಾನ ಮಂಡಲದ ಅನುಸೂಚಿತಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿಯ 2021–22ನೇ ಸಾಲಿನ 6ನೇ ವರದಿ, ಅಧೀನ ಶಾಸನ ರಚನಾ ಸಮಿತಿಯ 2021–22ನೇ ಸಾಲಿನ 52ನೇ ವರದಿ ಹಾಗೂ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಮಿತಿಯ 2021–22ನೇ ಸಾಲಿನ 4ನೇ ವರದಿ, ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ಸಮಿತಿಯ 2021–22ನೇ ಸಾಲಿನ 37ನೇ ವರದಿ, ಸಾರ್ವಜನಿಕ ಲೆಕ್ಕಪತ್ರಗಳ 2021–22ನೇ ಸಾಲಿನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆರೋಗ್ಯ ಕವಚ–108ಕ್ಕೆ ಸಂಬಂಧಿಸಿದ 8ನೇ ವರದಿ ಹಾಗೂ ಶಾಲಾ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆಗೆ ಸಂಬಂಧಿಸಿದ "ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ

ಅಭಿಯಾನ" 9ನೇ ವರದಿ ಮತ್ತು ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯು 02 ಅರ್ಜಿಗಳನ್ನು ಹಾಗೂ 29ನೇ ವರದಿಯನ್ನು ಮತ್ತು ಖಾಸಗಿ ವಿಧೇಯಕಗಳು ಹಾಗೂ ನಿರ್ಣಯಗಳ ಸಮಿತಿಯ ಮೊದಲನೇ ವರದಿಯನ್ನು ಮಂಡಿಸಲಾಯಿತು.

ರಾಜ್ಯದಲ್ಲಿರುವ ರಾಜ್ಯ ಮತ್ತು ಕೇಂದ್ರ ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ ಹಾಗೂ ಸರ್ಕಾರೇತರ ಸಂಸ್ಥೆಗಳಲ್ಲಿ 'ಸಿ' ಮತ್ತು 'ಡಿ' ದರ್ಜೆಯ ಹುದ್ದೆಗಳನ್ನು ಕನ್ನಡಿಗರಿಗೆ ಮೀಸಲಿಡುವ ಕುರಿತು ಖಾಸಗಿ ನಿರ್ಣಯವನ್ನು ಮಂಡಿಸಲಾಯಿತು.

ಗ್ರಾಮೀಣಾಭಿವೃದ್ಧಿ ಇಲಾಖೆಯಲ್ಲಿ ಕುಡಿಯುವ ನೀರು ಮತ್ತು ನೈರ್ಮಲ್ಯ ಯೋಜನೆಯಡಿ ಬಿಡುಗಡೆಯಾದ ಹಣ ಬಳಕೆಯಾಗದಿರುವ ಬಗ್ಗೆ ಪರಿಶೀಲಿಸಲು ರಚಿಸಲಾಗಿರುವ ವಿಶೇಷ ಸದನ ಸಮಿತಿಯು ತನ್ನ ವರದಿ ಸಲ್ಲಿಸಲು ಮುಂದಿನ 6 ತಿಂಗಳವರೆಗೆ ವಿಸ್ತರಿಸುವ ಪ್ರಸ್ತಾವವನ್ನು ಮಂಡಿಸಿ ಸದನದ ಸಹಮತಿಯನ್ನು ಪಡೆಯಲಾಯಿತು.

ಕರ್ನಾಟಕ ವಿಧಾನ ಪರಿಷತ್ತಿನ ಸ್ಥಾಯಿ ಸಮಿತಿಗಳ ಅವಧಿಯು ದಿನಾಂಕ: 05.01.2023ಕ್ಕೆ ಮುಕ್ತಾಯಗೊಳ್ಳುತ್ತಿದ್ದು, 2023ರ ವಿಧಾನ ಸಭೆಯ ಸಾರ್ವತ್ರಿಕ ಚುನಾವಣೆಯ ನಂತರ ಸಮಿತಿಗಳ ಪುನರ್ ರಚನೆ ಮಾಡುವ ಪ್ರಸ್ತಾವನೆಯನ್ನು ಮಂಡಿಸಿ ಸದನದ ಸಹಮತಿಯನ್ನು ಪಡೆಯಲಾಯಿತು.

ಸದನದಲ್ಲಿ ದಿನಾಂಕ: 27.12.2022ರಂದು ಸರ್ಕಾರವು ಕರ್ನಾಟಕದ ನೆಲ, ಜಲ, ಭಾಷೆ ಹಾಗೂ ಕನ್ನಡಿಗರ ಹಿತಾಸಕ್ತಿಯ ವಿಷಯದಲ್ಲಿ ಯಾವುದೇ ರಾಜಿ ಮಾಡಿಕೊಳ್ಳದಿರುವ ಕುರಿತು ಅಧಿಕೃತ ನಿರ್ಣಯವನ್ನು ಮಂಡಿಸಿದ್ದು ಸರ್ವಾನು ಮತದಿಂದ ಅಂಗೀಕರಿಸಲಾಗಿರುತ್ತದೆ.

ಭಾರತ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು ನೀಡಿರುವ ಮುಖ್ಯಮಂತ್ರಿಗಳ ನಗರೋತ್ತಾನಯೋಜನೆ (ಫೇಸ್–3) (2022ನೇ ವರ್ಷದ ವರದಿ ಸಂಖ್ಯೆ–6), 2021–22ನೇ ಸಾಲಿನ ಧನವಿನಿಯೋಗ ಲೆಕ್ಕಗಳು ಮತ್ತು ಹಣಕಾಸು ಲೆಕ್ಕಗಳನ್ನು (ಸಂಪುಟI ಮತ್ತುII), 2022–23ನೇ ಸಾಲಿನ ಮಧ್ಯ ವಾರ್ಷಿಕ ಪರಿಶೀಲನಾ ವರದಿ ಹಾಗೂ 2022–23ನೇ ಸಾಲಿನ ಪೂರಕ ಅಂದಾಜುಗಳ (ಎರಡನೇಕಂತು) ವರದಿಯನ್ನು ಮಂಡಿಸಲಾಯಿತು.

2022ರಲ್ಲಿ ಇಂಗ್ಲೆಂಡಿನ ಬರ್ಮಿಂಗ್ ಹ್ಯಾಮ್‌ನಲ್ಲಿ ನಡೆದ ಕಾಮನ್‌ವೆಲ್ತ್ ಕ್ರೀಡಾಕೂಟ, ಅಂತರರಾಷ್ಟ್ರೀಯ ಕ್ರಿಕೆಟ್ ಕೌನ್ಸಿಲ್‌ರವರು ಆಯೋಜಿಸಿದ್ದ ಮಹಿಳಾ ಟಿ–20 ವಿಶ್ವಕಪ್‌ಕ್ರಿಕೆಟ್, ಪುರುಷರ ಐಪಿಎಲ್ ಕ್ರಿಕೆಟ್ ಟೂರ್ನಿ, ಕಬ್ಬಡಿ ಹಾಗೂ ಇತರೆ ಕ್ರೀಡಾಕೂಟದಲ್ಲಿ ಭಾರತವು ಅತ್ಯುತ್ತಮ ಸಾಧನೆಯನ್ನು ಮಾಡಿದ್ದು, ಕ್ರೀಡಾಕೂಟದಲ್ಲಿ ಭಾಗವಹಿಸಿದ್ದ ಎಲ್ಲಾ ಕ್ರೀಡಾ ಪಟುಗಳಿಗೂ ದಿನಾಂಕ:

29.12.2022ರಂದು ವಿಧಾನ ಪರಿಷತ್ತಿನ ವಿರೋಧ ಪಕ್ಷದ ಮುಖ್ಯ ಸಚೇತಕರಾದ ಶ್ರೀ ಪ್ರಕಾಶ್ ಕೆ. ರಾಥೋಡ್‌ಅವರು ಮಂಡಿಸಿದ ಅಭಿನಂದನಾ ಪ್ರಸ್ತಾವಕ್ಕೆ ಸದನವು ಸಹಮತಿ ನೀಡಿರುತ್ತದೆ.

ಪ್ರಸ್ತುತ ಅಧಿವೇಶನದಲ್ಲಿ **1419** ಪ್ರಶ್ನೆಗಳನ್ನು ಸ್ವೀಕರಿಸಿದ್ದು, ಅದರಲ್ಲಿ **150** ಪ್ರಶ್ನೆಗಳನ್ನು ಚುಕ್ಕೆ ಗುರುತಿನ ಪ್ರಶ್ನೆಗಳನ್ನಾಗಿ ಅಂಗೀಕರಿಸಿದ್ದು, ಅವುಗಳ ಪೈಕಿ 115 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರಿಸಲಾಯಿತು ಲಿಖಿತ ಮೂಲಕ ಉತ್ತರಿಸುವ ಒಟ್ಟು **1269** ಪ್ರಶ್ನೆಗಳ ಪೈಕಿ 963 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರಗಳನ್ನು ಮಂಡಿಸಲಾಯಿತು. ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯವಿಧಾನ ಹಾಗೂ ನಡವಳಿಕೆಗಳ ನಿಯಮ 37 (ಎ)ರರೀತ್ಯಾ ದಿನಾಂಕ: 30.12.2022ರಂದು ಉತ್ತರಿಸಬೇಕಾಗಿದ್ದ 15 ಪ್ರಶ್ನೆಗಳ ಪೈಕಿ 08 ಪ್ರಶ್ನೆಗಳಿಗೆ ಹಾಗೂ ಲಿಖಿತ ಮೂಲಕ ಉತ್ತರಿಸುವ 102 ಪ್ರಶ್ನೆಗಳ ಪೈಕಿ 29 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರಗಳನ್ನು ಮಂಡಿಸಲಾಯಿತು.

ನಿಯಮ 58ರಡಿಯಲ್ಲಿ ಅರ್ಧ ಗಂಟೆ ಕಾಲಾವಧಿ ಚರ್ಚೆಗಾಗಿ ಒಟ್ಟು **04** ಸೂಚನೆಗಳನ್ನು ಸ್ವೀಕರಿಸಿದ್ದು, 01 ಸೂಚನೆಯನ್ನು ಚರ್ಚಿಸಿ ಉತ್ತರಿಸಲಾಯಿತು.

ನಿಯಮ 72ರಡಿಯಲ್ಲಿ **190** ಸೂಚನೆಗಳನ್ನು ಸ್ವೀಕರಿಸಿದ್ದು, ಅವುಗಳ ಪೈಕಿ **10** ಸೂಚನೆಗಳಿಗೆ ಉತ್ತರಿಸಲಾಯಿತು.

ನಿಯಮ 330ರಡಿಯಲ್ಲಿ **88** ಸೂಚನೆಗಳನ್ನು ಸ್ವೀಕರಿಸಿದ್ದು, ಅವುಗಳ ಪೈಕಿ **06** ಸೂಚನೆಗಳಿಗೆ ಉತ್ತರಿಸಲಾಯಿತು.

ಶೂನ್ಯ ವೇಳೆಯ ಒಟ್ಟು **72** ಸೂಚನೆಗಳ ಪೈಕಿ **14** ಸೂಚನೆಗಳಿಗೆ ಸದನದಲ್ಲಿ ಉತ್ತರಿಸಲಾಗಿದ್ದು, **22** ಸೂಚನೆಗಳಿಗೆ ಉತ್ತರಗಳನ್ನು ಸದನದಲ್ಲಿ ಮಂಡಿಸಲಾಯಿತು.

ನಿಯಮ **59**ರ ಅಡಿಯಲ್ಲಿ **07** ಸೂಚನೆಗಳನ್ನು ಸ್ವೀಕರಿಸಲಾಗಿದ್ದು, ಒಂದು ಸೂಚನೆಯನ್ನು ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ವಿಧೇಯಕದೊಂದಿಗೆ ಚರ್ಚಿಸಿ ಉತ್ತರಿಸಲಾಯಿತು. ಮೂರು ಸೂಚನೆಗಳನ್ನು ನಿಯಮ 68ಕ್ಕೆ ಪರಿವರ್ತಿಸಲಾಗಿದ್ದು, ಅವುಗಳಲ್ಲಿ ಎರಡು ಸೂಚನೆಗಳನ್ನು ಒಂದು ಗೂಡಿಸಿ ಚರ್ಚಿಸಿ ಉತ್ತರಿಸಲಾಯಿತು. ಮತ್ತೊಂದು ಸೂಚನೆಯನ್ನು ನಿಯಮ 330ಕ್ಕೆ ಪರಿವರ್ತಿಸಿ ಉತ್ತರಿಸಲಾಯಿತು ಉಳಿದ 02 ಸೂಚನೆಗಳನ್ನು ತಿರಸ್ಕರಿಸಲಾಯಿತು.

ನಿಯಮ 68ರ ಅಡಿಯಲ್ಲಿ 04 ಸೂಚನೆಗಳನ್ನು ಸ್ವೀಕರಿಸಲಾಗಿದ್ದು, ಆ ಪೈಕಿ 02 ಸೂಚನೆಗಳನ್ನು ತಿರಸ್ಕರಿಸಿದ್ದು, 01 ಸೂಚನೆಯನ್ನು ಚರ್ಚಿಸಿ ಉತ್ತರಿಸಲಾಯಿತು.

ವಿಧಾನ ಸಭೆಯಿಂದ ಅಂಗೀಕೃತ ರೂಪದಲ್ಲಿರುವ ಒಟ್ಟು 07 ವಿಧೇಯಕಗಳಲ್ಲಿ **07** ವಿಧೇಯಕಗಳನ್ನು ಹಾಗೂ ವಿಧಾನ ಸಭೆಯಿಂದ ತಿದ್ದುಪಡಿಯೊಂದಿಗೆ ಅಂಗೀಕೃತ ರೂಪದಲ್ಲಿರುವ 01 ವಿಧೇಯಕವನ್ನು ಮತ್ತುವಿಧಾನ ಪರಿಷತ್ತಿನಲ್ಲಿ ಮಂಡಿಸಿದ **02** ವಿಧೇಯಕಗಳನ್ನು ಅಂಗೀಕರಿಸಿ ವಿಧಾನ ಪರಿಷತ್ತುತನ್ನ ಸಹಮತಿಯನ್ನು ನೀಡಿರುತ್ತದೆ.

**ಮಾನ್ಯ ಸಭಾನಾಯಕರು ಹಾಗೂ ವಿರೋಧ ಪಕ್ಷದ ನಾಯಕರು ಮಾತನಾಡಿದ ನಂತರ:–**

ಮಾನ್ಯ ಮುಖ್ಯಮಂತ್ರಿಗಳಿಗೆ, ಮಾನ್ಯ ಸಭಾನಾಯಕರಿಗೆ, ವಿರೋಧ ಪಕ್ಷದ ನಾಯಕರಿಗೆ, ಎಲ್ಲಾ ಮಂತ್ರಿ ವರ್ಗದವರಿಗೆ, ಸರ್ಕಾರದ ಮುಖ್ಯ ಸಚೇತಕರಿಗೆ, ವಿರೋಧ ಪಕ್ಷದ ಮುಖ್ಯಸಚೇತಕರಿಗೆ, ಪತ್ರಿಕಾ ಹಾಗೂ ಮಾಧ್ಯಮ ವರದಿಗಾರರಿಗೆ, ವಿಧಾನ ಪರಿಷತ್ತಿನ ಸಚಿವಾಲಯದಅಧಿಕಾರಿ/ನೌಕರವರ್ಗದವರಿಗೆ ಮತ್ತು ಸರ್ಕಾರದಎಲ್ಲಾಅಧಿಕಾರಿ/ನೌಕರ ವೃಂದದವರಿಗೆ ಸದನದ ಕಾರ್ಯಕಲಾಪಗಳನ್ನು ಸುಗಮವಾಗಿ ನಡೆಸಲು ಸಹಕರಿಸಿದ್ದಕ್ಕೆ ತುಂಬು ಹೃದಯದ ಧನ್ಯವಾದಗಳನ್ನು ಸಲ್ಲಿಸುತ್ತಾ, **ಸದನವನ್ನು ಅನಿರ್ದಿಷ್ಟ ಕಾಲದವರೆಗೆ ಮುಂದೂಡುತ್ತಿದ್ದೇನೆ.**

* * * * *

**ದಿನಾಂಕ: 03–10–2022 ರಂದು ಮಾನ್ಯ ಸಭಾಪತಿಯವರ ಕಛೇರಿಯಲ್ಲಿ ನಡೆದ ದಸರಾ ಪೂಜೆಯಲ್ಲಿ ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು ಹಾಗೂ ಕಛೇರಿಯ ಸಿಬ್ಬಂದಿಗಳು ಭಾಗವಹಿಸಿದ ಸಂದರ್ಭ.**





**ದಿನಾಂಕ: 13.10.2022ರಂದು ಸನ್ಮಾನ್ಯ ಸಭಾಧ್ಯಕ್ಷರು, ಮಧ್ಯಪ್ರದೇಶದ ವಿಧಾನ ಸಭೆ ಸಭಾಧ್ಯಕ್ಷರು ಸನ್ಮಾನ್ಯ ಶ್ರೀ ಗಿರೀಶ್ ಗೌತಮ್ ಅಧಿಕಾರಿಗಳೊಂದಿಗೆ ವಿಧಾನಸೌಧಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಅವರುಗಳನ್ನು ಆತ್ಮೀಯವಾಗಿ ಸ್ವಾಗತಿಸಿ, ಸಮಿತಿಗಳ ಹಾಗೂ ಸದನದ ಕಾರ್ಯನಿರ್ವಹಣೆ ಹಾಗೂ ನಡವಳಿಗಳ ಕುರಿತು ಚರ್ಚಿಸಿ ವಿಧಾನ ಸಭೆ ಸಭಾಂಗಣಕ್ಕೆ ಭೇಟಿ ನೀಡಿದ ಸಂದರ್ಭ**





**ದಿನಾಂಕ: 13.10.2022ರಂದು ಸನ್ಮಾನ್ಯ ಸಭಾಧ್ಯಕ್ಷರು, ಅರುಣಾಚಲ ಪ್ರದೇಶದ ವಿಧಾನ ಸಭೆ ಉಪ ಸಭಾಧ್ಯಕ್ಷರು ಸನ್ಮಾನ್ಯ ಶ್ರೀ ತೆಸಮ್ ಪೊಂಗಟೆ ಅವರು ತಮ್ಮ ರಾಜ್ಯದ ವಿವಿಧ ಸಮಿತಿಗಳ ಅಧ್ಯಕ್ಷರು, ಶಾಸಕರು ಹಾಗೂ ಅಧಿಕಾರಿಗಳೊಂದಿಗೆ ವಿಧಾನಸೌಧಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಅವರುಗಳನ್ನು ಆತ್ಮೀಯವಾಗಿ ಸ್ವಾಗತಿಸಿ, ಸಮಿತಿಗಳ ಹಾಗೂ ಸದನದ ಕಾರ್ಯನಿರ್ವಹಣೆ ಹಾಗೂ ನಡವಳಿಗಳ ಕುರಿತು ಚರ್ಚಿಸಿ ವಿಧಾನ ಸಭೆ ಸಭಾಂಗಣಕ್ಕೆ ಭೇಟಿ ನೀಡಿದ ಸಂದರ್ಭ.**





**ದಿನಾಂಕ: 13.10.2022ರಂದು ಸನ್ಮಾನ್ಯ ಸಭಾಧ್ಯಕ್ಷರು ವಿಧಾನಸೌಧದ ತಮ್ಮ ಕಚೇರಿಯಲ್ಲಿ, ಅರಣ್ಯ ಒತ್ತುವರಿ ವಿಷಯದ ಕುರಿತಂತೆ ಸರ್ವೋಚ್ಚ ನ್ಯಾಯಾಲಯದಲ್ಲಿ ಅಫಿಡವಿಟ್ ಸಲ್ಲಿಸುವ ಬಗ್ಗೆ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾದ ಶ್ರೀಮತಿ ವಂದಿತ ಶರ್ಮಾ, ಅರಣ್ಯ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಜಾವೇದ್ ಅಕ್ತರ್ ಹಾಗೂ ಅರಣ್ಯ ಇಲಾಖೆಯ ಹಿರಿಯ ಅಧಿಕಾರಿಗಳು ಮತ್ತು ಕಾನೂನು, ಸಮಾಜ ಕಲ್ಯಾಣ ಇಲಾಖೆಗಳ ಅಧಿಕಾರಿಗಳೊಂದಿಗೆ ಚರ್ಚಿಸಿ ಶೀಘ್ರವಾಗಿ ತುರ್ತು ಕ್ರಮಗಳನ್ನು ಕೈಗೊಳ್ಳುವಂತೆ ಸೂಚಿಸಿದರು;**





**ದಿನಾಂಕ: 15–10–2022 ರಂದು ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಡಿಪ್ಲೋಮಾ ಇಂಜಿನೀಯರ್ಸ್ ಫೆಡರೇಶನ್ 25 ನೇ ರಾಷ್ಟ್ರೀಯ ಕೌನ್ಸಿಲ್ ಸಭೆ–2022 ಸಮಾರಂಭದಲ್ಲಿ ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು ಉದ್ಘಾಟಿಸಿದರು.**






ದಿನಾಂಕ: **01–11–2022** ರಂದು ಶಾಸಕರ ಭವನದಲ್ಲಿ ನಡೆದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವನ್ನು ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು ದೀಪ ಬೆಳಗಿಸುವ ಮೂಲಕ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮಾಜಿ ಸಭಾಪತಿಗಳು ಹಾಗೂ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಬಸವರಾಜ ಎಸ್.ಹೊರಟ್ಟಿ ರವರು, ವಿಧಾನಸಭೆಯ ಕಾರ್ಯದರ್ಶಿ ಶ್ರೀಮತಿ ಎಂ.ಕೆ ವಿಶಾಲಾಕ್ಷಿ ಮತ್ತು ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯದರ್ಶಿ ಶ್ರೀಮತಿ ಮಹಾಲಕ್ಷ್ಮಿ ರವರು ಹಾಗೂ ಸಿಬ್ಬಂದಿ ವರ್ಗದವರು ಪಾಲ್ಗೊಂಡಿದ್ದರು.








ದಿನಾಂಕ: 01–11–2022 ರಂದು ವಿಧಾನಸೌಧದ ದಿವ್ಯ ಮೆಟ್ಟಿಲುಗಳ ಮೇಲೆ ದಿ॥ ಡಾ. ಪುನೀತ್ ರಾಜಕುಮಾರ್‌ರವರಿಗೆ ಮರಣೋತ್ತರ ಕರ್ನಾಟಕ ರತ್ನ ಪ್ರಶಸ್ತಿಯನ್ನು ಶ್ರೀಮತಿ ಅಶ್ವಿನಿ ಪುನೀತ್ ರಾಜಕುಮಾರ್‌ರವರಿಗೆ ಪ್ರಧಾನ ಮಾಡಿದ ಸಂದರ್ಭದಲ್ಲಿ ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು, ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ ರವರು, ಮಾನ್ಯ ಮುಖ್ಯಮಂತ್ರಿಯವರಾದ ಶ್ರೀ ಬಸವರಾಜ ಎಸ್. ಬೊಮ್ಮಾಯಿರವರು, ಕಂದಾಯ ಸಚಿವರಾದ ಶ್ರೀ ಆರ್.ಅಶೋಕ್‌ರವರು, ಇಂಧನ, ಕನ್ನಡ ಮತ್ತು ಸಂಸ್ಕೃತಿ ಸಚಿವರಾದ ವಿ.ಸುನಿಲ್‌ಕುಮಾರ್ ರವರು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಬಿ.ಸಿ ನಾಗೇಶ್ ಹಾಗೂ ಇತರ ಸಚಿವರುಗಳು, ವಿಶೇಷ ಆಹ್ವಾನಿತರಾದ ಖ್ಯಾತ ಚಲನಚಿತ್ರ ನಟರಾದ ಶ್ರೀ ರಜನಿಕಾಂತ್, ಶ್ರೀ ಜೂನಿಯರ್ ಎನ್.ಟಿ.ಆರ್, ಇನ್ಫೋಸಿಸ್‌ನ ಸಂಸ್ಥಾಪಕರಾದ ಶ್ರೀಮತಿ ಸುಧಾಮೂರ್ತಿ ರವರು ಪಾಲ್ಗೊಂಡಿದ್ದರು.






**ದಿನಾಂಕ: 02–11–2022 ರಂದು ರಾಜಭವನದಲ್ಲಿ ಮಾನ್ಯ ಗೌರವಾನ್ವಿತ ರಾಜ್ಯಪಾಲರಾದ ಘನತೆವೆತ್ತ ಥಾವರ್‌ಚಂದ್ ಗೆಹ್ಲೋಟ್ ರವರನ್ನು ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು ಭೇಟಿ ಮಾಡಿ ಬಸವಕಲ್ಯಾಣದಲ್ಲಿ 43ನೇ ಶರಣ ಕಮ್ಮಟ ಮತ್ತು ಅನುಭವ ಮಂಟಪ ಉತ್ಸವ 2022ರ ನವೆಂಬರ್ 26 ಮತ್ತು 27ರಂದು ಜರುಗುವ ಭವ್ಯ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಭಾಗವಹಿಸಬೇಕೆಂದು ಆಹ್ವಾನಿಸಿದ ಸಂದರ್ಭ.**





**ದಿನಾಂಕ: 05.11.2022ರಂದು ಬೆಂಗಳೂರಿನಲ್ಲಿ " ವಿಸ್ತಾರ ನ್ಯೂಸ್" ಚಾನೆಲ್ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು, ಭಾಗವಹಿಸಿ ಶುಭ ಹಾರೈಸಿದ ಸಂದರ್ಭದಲ್ಲಿ ಕೇಂದ್ರ ಸಚಿವರು, ಸನ್ಮಾನ್ಯ ಮುಖ್ಯ ಮಂತ್ರಿಗಳು, ಮಾನ್ಯ ಸಚಿವರುಗಳು ಸಹ ಭಾಗವಹಿಸಿದ್ದರು;**





**ದಿನಾಂಕ: 09.11.2022**ರಂದು ಸನ್ಮಾನ್ಯ ಸಭಾಧ್ಯಕ್ಷರು ಶಿವಮೊಗ್ಗದಲ್ಲಿ ಆಯೋಜಿಸಿದ್ದ “ಚುನಾವಣಾ ಸುಧಾರಣೆ ಕ್ರಮಗಳ ಕುರಿತು ಸಂವಾದ ಕಾರ್ಯಕ್ರಮ” ದಲ್ಲಿ ಭಾಗವಹಿಸಿ, ಕಾಲೇಜು ವಿದ್ಯಾರ್ಥಿಗಳು, ಸಂಘ ಸಂಸ್ಥೆಳ ಪ್ರಮುಖರೊಂದಿಗೆ ಸಂವಾದ ನಡೆಸಿದರು. ಈ ಸಂದರ್ಭದಲ್ಲಿ ಶಿವಮೊಗ್ಗದ ಮಹಾಪೌರರಾದ ಶ್ರೀ ಶಿವಕುಮಾರ್, ಉಪಮಹಾಪೌರರಾದ ಶ್ರೀ ಲಕ್ಷ್ಮೀಶಂಕರ್ ನಾಯಕ್, ಜಿಲ್ಲಾಧಿಕಾರಿಗಳು, ಪೊಲೀಸ್ ವರಿಷ್ಠಾಧಿಕಾರಿಗಳು, ಸಿ.ಇ.ಓ, ಮಹಾನಗರ ಪಾಲಿಕೆ ಆಯುಕ್ತರು, ಕುವೆಂಪು ವಿಶ್ವವಿದ್ಯಾಲಯದ ರಿಜಿಷ್ಟ್ರಾರ್ ಶ್ರೀಮತಿ ಅನುರಾಧಾ ಹಾಗೂ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು, ನ್ಯಾಯವಾದಿಗಳು ಮತ್ತು ಸಂಘಸಂಸ್ಥೆಗಳ ಪ್ರಮುಖರು ಪಾಲ್ಗೊಂಡಿದ್ದರು.

e






**ದಿನಾಂಕ: 13–11–2022 ರಂದು  ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು ಕುಟುಂಬ ಸಮೇತರಾಗಿ ತಿರುಪತಿ ತಿರುಮಲ ಶ್ರೀ ವೆಂಕಟೇಶ್ವರನ ದರ್ಶನ ಪಡೆದ ಸಂದರ್ಭ.**



**ದಿನಾಂಕ: 14–11–2022 ರಂದು ಬೀದರ್‌ನಲ್ಲಿ ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು  ಮಕ್ಕಳ ದಿನಾಚರಣೆಯ ಶುಭಾಶಯ ಕೋರಿದರು.**



ದಿನಾಂಕ: **18-10-2022** ರಂದು ಔರಾದ್ ತಾಲ್ಲೂಕಿನ ಬಲ್ಲೂರು (ಜೆ) ಗ್ರಾಮದಲ್ಲಿ ಕೇಂದ್ರ ರಾಸಾಯನಿಕ ಹಾಗೂ ರಸಗೊಬ್ಬರ ಸಚಿವಾಲಯದ ಅಡಿಯಲ್ಲಿ ನಡೆಯುವ ಸಿಜೆಟ್ ಕೇಂದ್ರ ಕಾಮಗಾರಿಯ ಭೂಮಿ ಪೂಜೆ ಕಾರ್ಯಕ್ರಮವನ್ನು ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ ಬೊಮ್ಮಾಯಿರವರು ನೆರವೇರಿಸಿದರು. ಈ ಕಾರ್ಯಕ್ರಮದಲ್ಲಿ ಮಾನ್ಯ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲಕಾಪೂರೆ ರವರು ಹಾಗೂ ಜಲಸಂಪನ್ಮೂಲ ಸಚಿವರಾದ ಶ್ರೀ ಗೋವಿಂದ ಎಂ ಕಾರಜೋಳ ಹಾಗೂ ಪಶುಸಂಗೋಪನೆ ಸಚಿವರಾದ ಶ್ರೀ ಪ್ರಭು ಬಿ.ಚವ್ಹಾಣ್ ರವರು ಪಾಲ್ಗೊಂಡಿದ್ದರು.





**ದಿನಾಂಕ: 19.11.2022ರಂದು ಬೆಂಗಳೂರಿನಲ್ಲಿರುವ ವೇದಾಂತ ಸೊಸೈಟಿ, ನ್ಯೂಯಾರ್ಕ್ ಇದರ ಮುಖ್ಯಸ್ಥರಾದ ಶ್ರೀ ಸರ್ವಪ್ರಿಯಾನಂದ ಸ್ವಾಮೀಜಿ ಅವರನ್ನು ಸನ್ಮಾನ್ಯ ಸಭಾಧ್ಯಕ್ಷರು ಭೇಟಿ ಮಾಡಿ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಶ್ರೀ ರಾಮಕೃಷ್ಣ ಆಶ್ರಮದ ಸ್ವಾಮೀಜಿಯವರುಗಳು ಉಪಸ್ಥಿತರಿದ್ದರು. (ಸ್ಥಳ: ಶೇಷಾದ್ರಿಪುರಂ ಕಾಲೇಜ್ ಆವರಣ)**





**ದಿನಾಂಕ: 27–11–2022 ರಂದು ಅತಿವಾಳೆ ಸಾಂಸ್ಕೃತಿಕ ಪ್ರತಿಷ್ಠಾನ, ಗಂಗನಪಳ್ಳಿ ಪರಿವಾರ, ಸಿಕಿಂದ್ರಾಪೂರ, ಬೀದರ ವತಿಯಿಂದ ಶಿಕ್ಷಕ–ಸಾಹಿತಿ ಡಾ.ಸಂಜೀವಕುಮಾರ ಅತಿವಾಳೆ ಸಂಪಾದಿಸಿರುವ "ಭಾವಗಂಗೆ ಲೋಕಾರ್ಪಣೆ" ಹಾಗೂ ಸಾಹಿತಿ ಕಲಾವಿದರ ಸಂಗಮ ಸಾಂಸ್ಕೃತಿಕ ಮತ್ತು ಸನ್ಮಾನ ಸಮಾರಂಭ ಕಾರ್ಯಕ್ರಮದಲ್ಲಿ ಮಾನ್ಯ ಕರ್ನಾಟಕ ವಿಧಾನಪರಿಷತ್ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲ್ಕಾಪೂರೆ ರವರು ಹಾಗೂ ವಿಧಾನಸಭೆ ಸದಸ್ಯರಾದ ಮಾನ್ಯ ಶ್ರೀ ಬಂಡೆಪ್ಪಾ ಖಾಶೆಂಪೂರ ರವರು ಭಾಗವಹಿಸಿದ್ದರು.**



**ದಿನಾಂಕ: 30.11.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಕಲಬುರ್ಗಿಯ ಎಸ್.ಎಂ. ಪಂಡಿತ್ ಸಭಾಂಗಣದಲ್ಲಿ ಆಯೋಜಿಸಿದ್ದ "ಚುನಾವಣೆ ವ್ಯವಸ್ಥೆಯಲ್ಲಿ ಸುಧಾರಣೆಗಳ ಅಗತ್ಯತೆ ಕುರಿತು ಸಂವಾದ ಕಾರ್ಯಕ್ರಮ"ದಲ್ಲಿ ಭಾಗವಹಿಸಿ, ಕಾಲೇಜು ವಿದ್ಯಾರ್ಥಿಗಳು, ಸಂಘಸಂಸ್ಥೆಗಳ ಪ್ರಮುಖರೊಂದಿಗೆ ಸಂವಾದ ನಡೆಸಿದರು. ಈ ಸಂದರ್ಭದಲ್ಲಿ ಮಾನ್ಯ ಕಲ್ಯಾಣ ಕರ್ನಾಟಕ ಅಧ್ಯಕ್ಷರಾದ ಡಾ: ಬಸವರಾಜ ಪಾಟೀಲ್ ಸೇಡಂ, ಶಾಸಕರುಗಳಾದ ಶ್ರೀ ರಾಜಕುಮಾರ್ ಪಾಟೀಲ್ ತೆಲ್ಕೂರ್, ಶ್ರೀ ಬಸವರಾಜ್ ಮತ್ತಿಮೂಡ್, ಶ್ರೀ ಎಂ.ವೈ. ಪಾಟೀಲ್, ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಬಿ.ಜಿ. ಪಾಟೀಲ್ ಗುಲಬರ್ಗಾ ವಿಶ್ವವಿದ್ಯಾಲಯ ಉಪಕುಲಪತಿಗಳಾದ ಪ್ರೊ. ದಯಾನಂದ ಅಗ್ಸರ್, ಜಿಲ್ಲಾಧಿಕಾರಿಗಳಾದ ಶ್ರೀ ಯಶವಂತ್ ಗುರ್ಕರ್, ಹಿರಿಯ ಪೊಲೀಸ್ ಅಧಿಕಾರಿಗಳು, ಸಿ.ಇ.ಓ ಜಿಲ್ಲಾ ಪಂಚಾಯತ್, ಕಾಲೇಜುಗಳ ವಿದ್ಯಾರ್ಥಿಗಳು, ನ್ಯಾಯವಾದಿಗಳು ಮತ್ತು ಸಂಘ ಸಂಸ್ಥೆಗಳ ಪ್ರಮುಖರು, ಮಾಧ್ಯಮ ಪ್ರತಿನಿಧಿಗಳು ಪಾಲ್ಗೊಂಡಿದ್ದರು;**






ದಿನಾಂಕ: 01–12–2022 ರಂದು ಹುಲಸೂರ ತಾಲ್ಲೂಕು, ಬೀದರ್ ಜಿಲ್ಲೆಯ ಶ್ರೀ ಜಗದ್ಗುರು ಅಲ್ಲಮ ಪ್ರಭುದೇವರ ಶೂನ್ಯಪೀಠ ಅನುಭವ ಮಂಟಪ, ಶ್ರೀ ಗುರು ಬಸವೇಶ್ವರ ಸಂಸ್ಥಾನ ಮಠದಲ್ಲಿ ನಡೆದ "ಶರಣ ಸಂಸ್ಕೃತಿ ಉತ್ಸವ" ಹಾಗೂ "ವಚನ ರಥೋತ್ಸವ" ಕಾರ್ಯಕ್ರಮದಲ್ಲಿ ಮಾನ್ಯ ಕರ್ನಾಟಕ ವಿಧಾನಪರಿಷತ್ ಸಭಾಪತಿಯವರಾದ ಶ್ರೀ ರಘುನಾಥರಾವ್ ಮಲ್ಕಾಪೂರೆ ರವರಿಗೆ ಸನ್ಮಾನಿಸಿ ಗೌರವಿಸಿದರು.





ದಿನಾಂಕ: **01.12.2022**ರಂದು ಸನ್ಮಾನ್ಯ ಸಭಾಧ್ಯಕರು ಮಾಜಿ ಮುಖ್ಯಮಂತ್ರಿ, ವಿಧಾನಸೌಧ ನಿರ್ಮಾತೃ ದಿವಂಗತ ಕೆಂಗಲ್ ಹನುಮಂತಯ್ಯ ಅವರ ಪುಣ್ಯ ತಿಥಿಯ ಅಂಗವಾಗಿ ವಿಧಾನಸೌಧದಲ್ಲಿರುವ ಅವರ ಪ್ರತಿಮೆಗೆ ಪುಷ್ಪಾರ್ಚನೆ ಮಾಡಿ, ಗೌರವ ನಮನ ಸಲ್ಲಿಸಿದರು;



ದಿನಾಂಕ: **13.12.2022**ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಂಗಳೂರಿನ ವಿಧಾನಸೌಧದ ತಮ್ಮ ಕಛೇರಿಯಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾದ ಶ್ರೀಮತಿ ವಂದಿತಾ ಶರ್ಮಾ ಹಾಗೂ ಬೆಳಗಾವಿ ಉಸ್ತುವಾರಿ ಕಾರ್ಯದರ್ಶಿಗಳಾದ ಶ್ರೀ ಎಲ್.ಕೆ. ಅತೀಕ್ ಅವರೊಂದಿಗೆ ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ನಡೆಯಲಿರುವ ಅಧಿವೇಶನ ಹಾಗೂ ಇತರೆ ಆಡಳಿತಾತ್ಮಕ ವಿಷಯಗಳ ಕುರಿತು ಚರ್ಚಿಸಿದರು.





**ದಿನಾಂಕ: 19.12.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ "ಕಾರ್ಯಕಲಾಪಗಳ ಸಲಹಾ ಸಮಿತಿ" ಸಭೆ ಕರೆದು, ಅಧಿವೇಶನದ ಮುಂದಿನ ಕಾರ್ಯಕಲಾಪಗಳ ಕುರಿತಂತೆ ಚರ್ಚಿಸಿದರು. ಮಾನ್ಯ ಮುಖ್ಯಮಂತ್ರಿಗಳು, ಸಚಿವರು ಸೇರಿದಂತೆ ಹಿರಿಯ ಸದಸ್ಯರುಗಳು ಉಪಸ್ಥಿತರಿದ್ದರು**





ದಿನಾಂಕ:20–12–2022 ರಂದು ಬೆಳಗಾವಿಯ ಸುವರ್ಣಸೌಧದ 148ನೇ ಅಧಿವೇಶನದಲ್ಲಿ ಶ್ರೀ ಬಸವರಾಜ ಎಸ್ ಹೊರಟ್ಟಿ ರವರು, ಸಭಾಪತಿ ಸ್ಥಾನಕ್ಕೆ ನಾಮ ಪತ್ರವನ್ನು ವಿಧಾನಪರಿಷತ್ ಕಾರ್ಯದರ್ಶಿ ಶ್ರೀಮತಿ. ಕೆ.ಆರ್ ಮಹಾಲಕ್ಷ್ಮಿ ರವರಿಗೆ ನೀಡುವ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ ಬೊಮ್ಮಾಯಿರವರು, ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್.ಯಡಿಯೂರಪ್ಪರವರು, ಮಾನ್ಯ ಕಂದಾಯ ಸಚಿವರಾದ ಶ್ರೀ ಆರ್.ಅಶೋಕ್ ರವರು, ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರಾದ ಶ್ರೀ ಜೆ.ಸಿ ಮಾಧುಸ್ವಾಮಿರವರು, ಮಾನ್ಯ ಜಲಸಂಪನ್ಮೂಲ ಸಚಿವರಾದ ಶ್ರೀ ಗೋವಿಂದ ಎಂ.ಕಾರಜೋಳರವರು, ಮಾನ್ಯ ಸರ್ಕಾರಿ ಮುಖ್ಯ ಸಚೇತಕರಾದ ಶ್ರೀ ವೈ.ಎ ನಾರಾಯಸ್ವಾಮಿರವರು ಹಾಗೂ ಮಾನ್ಯ ವಿಧಾನಪರಿಷತ್ತಿನ ಹಲವು ಸದಸ್ಯರು ಉಪಸ್ಥಿತರಿದ್ದರು.







ಶ್ರೀ ಬಸವರಾಜ ಎಸ್ ಹೊರಟ್ಟಿ ರವರು, ಸಭಾಪತಿಗಳಾಗಿ ಅಧಿಕಾರ ಸ್ವೀಕರಿಸಿದ ಸಂದರ್ಭದಲ್ಲಿ ಮಾಜಿ ಸಚಿವರಾದ ಹೆಚ್.ಡಿ ರೇವಣ್ಣ , ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಜಗದೀಶ್ ಶೆಟ್ಟರ್, ವಿಧಾನ ಪರಿಷತ್ ಸದಸ್ಯರಾದ ಪ್ರದೀಪ್ ಶೆಟ್ಟರ್ ಹಾಗೂ ಇತರರು ಶುಭಾಷಯ ಕೋರಿದರು.





ಶ್ರೀ ಬಸವರಾಜ ಎಸ್ ಹೊರಟ್ಟಿ ಅವರು, ಮುರನೇ ಬಾರಿಗೆ ಸಭಾಪತಿಗಳಾಗಿ ಅಧಿಕಾರ ಸ್ವೀಕರಿಸಿದ ನಿಮಿತ್ತ ಕೇಂದ್ರ ಸರ್ಕಾರದ ಮಾನ್ಯ ಸಂಸದೀಯ ವ್ಯವಹಾರ, ಗಣಿ ಮತ್ತು ಕಲ್ಲಿದ್ದಲ್ಲು ಸಚಿವರಾದ ಶ್ರೀ ಪ್ರಹ್ಲಾದ್ ಜೋಷಿ ಹಾಗೂ ಮಾನ್ಯ ಮುಖ್ಯಮಂತ್ರಿಗಳಾದ ಬಸವರಾಜ ಬೊಮ್ಮಾಯಿ ರವರು ಶುಭಾಷಯ ಕೋರಿದರು.





**ದಿನಾಂಕ: 22-12-2022 ರಂದು ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಎಸ್ ಹೊರಟ್ಟಿರವರಿಗೆ, ಪರಿಸರ ರಾಯಭಾರಿ (ಸಂಪುಟ ದರ್ಜೆ)ಯಾದ ಡಾ.ಸಾಲುಮರದ ತಿಮ್ಮಕ್ಕನವರು ಶುಭಾಷಯ ಕೋರಿದರು. ಇದೇ ಸಂದರ್ಭದಲ್ಲಿ ತಮ್ಮ ಮಗನ ಮದುವೆ ಆಮಂತ್ರಣ ಪತ್ರಿಕೆ ನೀಡಿದರು.**



**ದಿನಾಂಕ: 22-12-2022 ರಂದು ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಎಸ್ ಹೊರಟ್ಟಿರವರು ಸಭಾಪತಿಗಳಾಗಿ ಅಧಿಕಾರ ಸ್ವೀಕರಿಸಿದ ಸಂದರ್ಭದಲ್ಲಿ ಮುದ್ರಣ, ವಿದ್ಯುನ್ಮಾನ ಮಾಧ್ಯಮದವರು ಶುಭಾಷಯ ಕೋರಿದರು. ಈ ಸಂದರ್ಭದಲ್ಲಿ ಮಾನ್ಯ ಸಭಾಪತಿಯವರ ವಿಶೇಷ ಕರ್ತವ್ಯಾಧಿಕಾರಿಯಾದ ಡಾ. ಮಹೇಶ್ ವಾಳ್ವೇಕರ್ ರವರು ಉಪಸ್ಥಿತರಿದ್ದರು.**



ಕರ್ನಾಟಕ ಸರ್ಕಾರ ಜಿಲ್ಲಾ ಪಂಚಾಯತ್, ಬಾಗಲಕೋಟೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಶ್ರೀಮತಿ ತುಂಗಾಬಾಯಿ ಶಿವನಗೌಡ ಪಾಟೀಲ್, ದಿ.ದೇವರಾಜ ಅರಸು ಮೆಟ್ರಿಕ್ ನಂತರದ ಬಾಲಕಿಯರ ವಸತಿ ನಿಲಯಕ್ಕೆ ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಎಸ್ ಹೊರಟ್ಟಿರವರು ಬೇಟಿ ನೀಡಿ ವಸತಿ ನಿಲಯದ ಕುಂದು-ಕೊರತೆಗಳ ಬಗ್ಗೆ ವಿಚಾರಿಸಿದರು.






ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಯಡಹಳ್ಳಿಯಲ್ಲಿರುವ ಶ್ರೀ ಶಿವಲಿಂಗಪ್ಪ ಬಸಪ್ಪ ಹೊರಟ್ಟಿ ಪಬ್ಲಿಕ್ ಶಾಲೆಗೆ ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಎಸ್ ಹೊರಟ್ಟಿರವರು ಭೇಟಿ ನೀಡಿ ಶಾಲಾ ಶಿಕ್ಷಕರೊಂದಿಗೆ ಸಮಾಲೋಚನೆ ನಡೆಸಿದರು. ಈ ವೇಳೆ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿ, ಅಪರ ಆಯುಕ್ತರು ಸೇರಿದಂತೆ ಶಿಕ್ಷಣ ಇಲಾಖಾ ಹಿರಿಯ ಅಧಿಕಾರಿಗಳು ಉಪಸ್ಥಿತರಿದ್ದರು.



ದಿನಾಂಕ: 24-12-2022 ರಂದು ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಎಸ್ ಹೊರಟ್ಟಿರವರು ಚೆನ್ನಮ್ಮನ ಕಿತ್ತೂರಿಗೆ ಭೇಟಿ ನೀಡಿ ವಿಶ್ವರೂಢ ವೀರರಾಣಿ ಕಿತ್ತೂರು ಚೆನ್ನಮ್ಮನ ಪುತ್ಥಳಿಗೆ ಮಾಲಾರ್ಪಣೆ ಮಾಡಿ ಗೌರವ ಸಲ್ಲಿಸಿದರು.





**ದಿನಾಂಕ: 29.12.2022ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ಸದನದ ಒಳಗಡೆ ಹಾಕಲಾದ ಜಗಜ್ಯೋತಿ ಬಸವಣ್ಣ, ಮಹಾತ್ಮಾ ಗಾಂಧೀಜಿ, ಸ್ವಾಮಿ ವೆವೇಕಾನಂದ, ನೇತಾಜಿ ಸುಭಾಷ್ ಚಂದ್ರ ಬೋಸ್, ಡಾ: ಬಿ.ಆರ್. ಅಂಬೇಡ್ಕರ್, ಸರದಾರ ವಲ್ಲಭಭಾಯಿ ಪಟೇಲ್, ವೀರ ಸಾವರ್ಕರ್ ಅವರ ಭಾವಚಿತ್ರಗಳನ್ನು ಚಿತ್ರಿಸಿದ ಕಲಾವಿದರುಗಳನ್ನು ಆಮಂತ್ರಿಸಿ, ಅವರನ್ನು ಪ್ರಶಂಸಿಸಿ ಸನ್ಮಾನಿಸಿದ ಸಂದರ್ಭ. ಈ ಸಂದರ್ಭದಲ್ಲಿ ಸಚಿವರಾದ ಶ್ರೀ ಸುನೀಲ್ ಕುಮಾರ್, ಶಾಸಕರಾದ ಶ್ರೀ ಸುರೇಶ್ ಕುಮಾರ್ ಹಾಗೂ ಹಿರಿಯ ಅಧಿಕಾರಿಗಳು ಉಪಸ್ಥಿತರಿದ್ದರು;**



# ಭಾಗ – 2

## ಸಂಸತ್ ಸುದ್ದಿಗಳು

### 1. ಸಂಸತ್‌ನಲ್ಲಿ ಮೊಳಗಿದ ಕನ್ನಡದ ದನಿ

ಕೋಲಾರದ ಕುಮಾರಿ ಸ್ಫೂರ್ತಿ ಸಂಸತ್ತಿನಲ್ಲಿ ಅಚ್ಚ ಕನ್ನಡದಲ್ಲಿ ಭಾಷಣ ಮಾಡುವ ಮೂಲಕ ಗಮನ ಸೆಳೆದಿದ್ದಾರೆ. ಭಾರತ ಸರ್ಕಾರದ ಶಿಕ್ಷಣ, ಕ್ರೀಡಾ ಮತ್ತು ಯುವ ಸಬಲೀಕರಣ ಸಚಿವಾಲಯ, ಪ್ರಜಾಪ್ರಭುತ್ವಕ್ಕಾಗಿ ಸಂಸದೀಯ ಸಂಶೋಧನಾ ಮತ್ತು ತರಬೇತಿ ಸಂಸ್ಥೆ, ನವೆಂಬರ್ 19ರಂದು ಜಂಟಿಯಾಗಿ ಆಯೋಜಿಸಿದ್ದ 'ರಾಷ್ಟ್ರನಾಯಕರಿಗೆ ಸಂಸತ್‌ನಲ್ಲಿ ಗೌರವ ಸಮರ್ಪಣೆ' ಕಾರ್ಯಕ್ರಮದಲ್ಲಿ ಕರ್ನಾಟಕ ರಾಜ್ಯವನ್ನು ಕೋಲಾರದ ಚಿನ್ನದ ಹುಡುಗಿ ಕುಮಾರಿ ಸ್ಫೂರ್ತಿ ಪ್ರತಿನಿಧಿಸಿದ್ದರು.

ಸಂಸತ್ ಭವನದ ಸೆಂಟ್ರಲ್ ಹಾಲ್‌ನಲ್ಲಿ ಮಾಜಿ ಪ್ರಧಾನಿ ಇಂದಿರಾಗಾಂಧಿ ಅವರ ಜನ್ಮ ದಿನದ ಕಾರ್ಯಕ್ರಮದಲ್ಲಿ ಭಾಗವಹಿಸಿ ಗಣ್ಯ–ಮಾನ್ಯರು, ಸಂಸತ್ ಸದಸ್ಯರು ಇತರೆ ರಾಜ್ಯಗಳ ಯುವ ಪ್ರತಿನಿಧಿಗಳ ಸಮ್ಮುಖದಲ್ಲಿ ತಮ್ಮ ವಿಚಾರ, ನಿಲುವುಗಳನ್ನು ಭಾಷಣದ ಮೂಲಕ ಪ್ರಸ್ತುತ ಪಡಿಸಿದ್ದಾರೆ.

ಅಚ್ಚ ಕನ್ನಡದಲ್ಲಿ ತಮ್ಮ ಭಾಷಣವನ್ನು ಪ್ರಾರಂಭಿಸಿ, ಕನ್ನಡದ ನುಡಿಗಟ್ಟುಗಳು ಸಂಸ್ಕೃತದ ಉಕ್ತಿಗಳ ಮೂಲಕ ಮಹಿಳಾ ಸಬಲೀಕರಣ, ಯುವ ಸಬಲೀಕರಣದಂತಹ ಹಲವು ಸಮಕಾಲೀನ ವಿಚಾರಗಳನ್ನು ತಮ್ಮ ಭಾಷಣದಲ್ಲಿ ಪ್ರಸ್ತುತಪಡಿಸಿ ಪಾರ್ಲಿಮೆಂಟ್‌ನ ಸೆಂಟ್ರಲ್ ಹಾಲ್‌ನಲ್ಲಿ ನೆರೆದಿದ್ದ ಎಲ್ಲರ ಮೆಚ್ಚುಗೆಗಳಿಸಿದರು.

ಆಧಾರ:ಉದಯವಾಣಿ, ದಿನಾಂಕ:02.12.2022

### 2. Parliament may take up Trademark, Forest bills

The Narendra Modi government is planning to bring 16 new bills, including one that intends to bring the trademark regime at par with the famed Madrid System and another to promote plantation in non-forest areas and conserve forests, during the winter session of Parliament starting December 7.

Altogether, the government intends to pass 23 bills in the session that ends on December 29. Besides the 16 new bills, the others likely to come up before Parliament are four passed by Lok Sabha and pending in Rajya Sabha and three others pending after Parliamentary Committees submitted their reports.

Bills like the contentious Electricity (Amendment) Bill, which is under scurtiny of a Parliamentary Standing Committee as well as Telecom Bill and Data Protection Bill, which are not cleared by Cabinet as it is still in the consultation stage, are unlikely to be placed before Parliament during the winter session.

Four of the new bills are related to revising the list of Scheduled Tribes in Karnataka, Tamil Nadu, Chhattisgarh and Himachal Pradesh.

Among the main bills are The Trademarks (Amendment) Bill, 2022, which seeks to incorporate "certain aspects" of Madrid Registration System including transformation and replacement which is needed to make the processing at par with the Madrid System.

The Madrid System is a “convenient and cost-effective solution” for registering and managing trademarks worldwide. It allows filling a single application and paying one set of fees to apply for protection in up to 128 countries.

The bill also amends procedures to provide ease in show cause hearing, opposition hearing and incorporation of electronic communication by trade mark (TM) office.

The Forest (Conservation) Amendment Bill, 2022 is another important Bill that may come up during the winter session and it envisages to remove ambiguity in the applicability of the provisions of Forest (Conservation) Act, 1980 and promote plantation in non-forest areas and conserve forests.

The Multi-State Cooperative Societies (Amendment) Bill, 2022 which the government has been planning to bring to Parliament for some time, has once taken place in the list of new bills.

The bill aims to strengthen governance, enhance transparency, increase accountability and reform electoral process in the multi-state cooperative societies by supplementing existing legislation and incorporating the provisions of 97th Constitution amendment.

The National Dental Commission Bill, which seeks to set up a National Dental Commission and to repeal the Dentists Act, 1948 and The National Nursing and Midwifery Commission which seeks to set up a National Nursing and Midwifery Commission (NNMC) and to repeal the Indian Nursing Council Act, 1947 are also listed.

The Cantonment Bill, 2022 another proposed law that has been listed earlier but not brought before Parliament is also again in the list. The bill relates to the administration of cantonments with a view to impart greater democratisation modernisation and efficiency.

It also seeks to achieve greater developmental objectives in alignment with municipalities across the country and intends to facilities ‘ease of living’ in cantonments.

The Old Grant (Regulation) Bill, 2022 which aims to regulate land given under Governor General Orders of 1836, 1827, 1838, 1849 and 1851 including their transfer subdivision and change to purpose, and enhance ease of living while ensuring effective protection of government rights over the land, could also come up in the upcoming session.

Another Bill that may see light of the day is The Coastal Aquaculture Authority (Amendment) Bill 2022. It aims to reduce the regulatory compliance burden to the stakeholders without diluting the core principles of environment protection in coastal areas as well as decriminalise “the offence(s)” under the Act and to expand the scope of the law to bring all coastal aquaculture activities under its ambit.

Courtesy: Deccan Herald, Dated: 04.12.2022

## 3. Winter Session: Cong to oppose 3 bills in 'present form

Congress has decided to oppose three bills including the Biological Diversity (Amendment) Bill, 2021, if the Narendra Modi government goes ahead with passing it in the upcoming Winter Session of Parliament.

Party General Secretary (Communications) and Rajya Sabha Chief Whip Jairam Ramesh has said the party will oppose the Multi-State Co-operative Societies (Amendment) Bill 2022 and the Forest (Conservation) Amendment Bill 2022 apart from the Biological Diversity (Amendment) Bill, 2021 "in its present form".

The decision was taken at a meeting of the Congress Parliamentary Strategy Group headed by Congress Parliamentary Party Chairperson Sonia Gandhi.

Asked whether the issue of party president Malikarjun Kharge's replacement as Leader of the Opposition to adhere to one man, one post policy was discussed, Ramesh answered in the negative and said Sonia as CPP chairperson will decide on that.

He said the Congress will insist on a discussion on border tension with China and reminded that during the 1962 was the issue was discussed in Parliament and the then Prime Minister Jawaharlal Nehru responded to the debate. "What we are asking is a debate. We know the sensitivity of the subject, but BJP should not take the monopoly of patriotism" he said.

The party will pack in issues like unemployment the rupee's decline against the dollar, price rise and farmer's demand for a law guaranteeing MSP among others when it wants a debate on the country's economy.

Courtesy: Deccan Herald, Dated: 05.12.2022

## 4. ಸಂಸತ್ ಅಧಿವೇಶನ ಇಂದಿನಿಂದ

ಬೆಲೆ ಏರಿಕೆ, ನಿರುದ್ಯೋಗ, ಆರ್ಥಿಕವಾಗಿ ದುರ್ಬಲ ವರ್ಗಗಳಿಗೆ ಮೀಸಲಾತಿ ಮತ್ತು ಭಾರತ–ಚೀನಾ ಗಡಿ ಸಂಘರ್ಷ ಕುರಿತು ಆರಂಭವಾಗಲಿರುವ ಸಂಸತ್ತಿನ ಚಳಿಗಾಲದ ಅಧಿವೇಶನದಲ್ಲಿ ಚರ್ಚೆ ನಡೆಸಲು ವಿರೋಧ ಪಕ್ಷಗಳು ಸಿದ್ಧತೆ ನಡೆಸಿವೆ. ಈ ಅಧಿವೇಶನದಲ್ಲಿ ಈ ವಿಚಾರಗಳನ್ನು ಚರ್ಚೆಗೆ ಎತ್ತಿಕೊಳ್ಳಬೇಕು ಎಂದು ವಿರೋಧ ಪಕ್ಷಗಳು ನಡೆದ ಸರ್ವ ಪಕ್ಷ ಸಭೆಯಲ್ಲಿ ಹೇಳಿವೆ.

ಸಂಸತ್ತಿನ ನೀತಿ–ನಿಯಮಗಳಿಗನುಸಾರವಾಗಿ ಈ ವಿಷಯಗಳ ಚರ್ಚೆಗೆ ಅವಕಾಶ ಮಾಡಿಕೊಡಲಾಗುತ್ತದೆ. ಎಲ್ಲಾ ಪಕ್ಷಗಳು ಸಹಕಾರ ನೀಡಬೇಕು ಎಂದು ಸರ್ಕಾರವು ಸರ್ವಪಕ್ಷಗಳ ಸಭೆಯಲ್ಲಿ ಕೋರಿದೆ. 30ಕ್ಕೂ ಹೆಚ್ಚು ಪಕ್ಷಗಳು ಈ ಸಭೆಯಲ್ಲಿ ಭಾಗಿಯಾಗಿದ್ದವು.

ಮಹಿಳಾ ಮೀಸಲಾತಿ ಮಸೂದೆಯನ್ನು ಈ ಅಧಿವೇಶನದಲ್ಲಿ ಅಂಗೀಕರಿಸಬೇಕು ಎಂದು ಬಿಜೆಪಿ ಹೇಳಿದೆ. ಜನಸಂಖ್ಯಾ ನಿಯಂತ್ರಣ ಮಸೂದೆಯನ್ನು ಅಂಗೀಕರಿಸಬೇಕು ಎಂದು ಶಿವಸೇನಾ (ಏಕನಾಥ ಶಿಂಧೆ ಬಣ) ಒತ್ತಾಯಿಸಿದೆ.

ಸಭೆಯಲ್ಲಿ ಭಾಗಿಯಾಗಿದ್ದ ಸಂಸದೀಯ ವ್ಯವಹಾರಗಳ ಸಚಿವ ಪ್ರಲ್ಹಾದ ಜೋಶಿ ಅವರು ಈ ಅಧಿವೇಶನದಲ್ಲಿ ಮಂಡಿಸಲು ಸಿದ್ಧಮಾಡಿಕೊಂಡಿರುವ ಮಸೂದೆಗಳ ಪಟ್ಟಿಯನ್ನು ಸಭೆಯ ಮುಂದಿಟ್ಟರು.

ಆಗ, ಲೋಕಸಭೆಯಲ್ಲಿನ ಕಾಂಗ್ರೆಸ್ ನಾಯಕ ಅಧಿರ್ ರಂಜನ್ ಚೌಧರಿ ಅವರು ಬೆಲೆ ಏರಿಕೆ, ನಿರುದ್ಯೋಗ ಮತ್ತು ತನಿಖಾ ಸಂಸ್ಥೆಗಳ ದುರ್ಬಳಕೆಯ ವಿಚಾರಗಳನ್ನು ಚರ್ಚೆಗೆ ಎತ್ತಿಕೊಳ್ಳಬೇಕು ಎಂದು ಒತ್ತಾಯಿಸಿದರು.

ಜೊತೆಗೆ ಭಾರತ–ಚೀನಾ ಗಡಿ ಸಂಘರ್ಷದ ಬಗ್ಗೆ ಸರ್ಕಾರವು ನಿಖರವಾದ ಮಾಹಿತಿ ನೀಡುತ್ತಿಲ್ಲ. ಹೀಗಾಗಿ ಈ ವಿಚಾರದ ಬಗ್ಗೆ ಸದನದಲ್ಲಿ ವಿಸ್ತೃತವಾದ ಚರ್ಚೆ ನಡೆಯಬೇಕು. ಕಾಶ್ಮೀರಿ ಪಂಡಿತರ ಹತ್ಯೆ ಕುರಿತು ಚರ್ಚೆ ನಡೆಯಬೇಕು ಎಂದು ಒತ್ತಾಯಿಸಿದರು.

ಆಧಾರ:ಪ್ರಜಾವಾಣಿ, ದಿನಾಂಕ:07.12.2022

## 5. ಬೆಟ್ಟ ಕುರುಬರು ಎಸ್ಟಿಗೆ: ಸಂಸತ್ತಲ್ಲಿ ಮಸೂದೆ

ಕರ್ನಾಟಕದ ಬೆಟ್ಟ ಕುರುಬ ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸುವ ಕುರಿತಾದ ತಿದ್ದುಪಡಿ ಮಸೂದೆಯನ್ನು ಕೇಂದ್ರ ಬುಡಕಟ್ಟು ವ್ಯವಹಾರಗಳ ಸಚಿವ ಅರ್ಜುನ್ ಮುಂಡಾ ಅವರು ಲೋಕಸಭೆಯಲ್ಲಿ ಮಂಡಿಸಿದರು.

ಇದೇ ವೇಳೆ, ತಮಿಳುನಾಡು, ಛತ್ತೀಸ್‌ಗಢ ಮತ್ತು ಹಿಮಾಚಲ ಪ್ರದೇಶ ರಾಜ್ಯಗಳಲ್ಲಿನ ಪರಿಶಿಷ್ಟ ಪಂಗಡದ ಪಟ್ಟಿಗೆ ಮಾರ್ಪಾಡು ಮಾಡುವ ಕುರಿತಾದ ಸಂವಿಧಾನ ತಿದ್ದುಪಡಿ ಮಸೂದೆಗಳನ್ನು ಸಹ ಮಂಡಿಸಲಾಯಿತು.

**38 ವರ್ಷಗಳ ಹೋರಾಟಕ್ಕೆ ಸಂದ ಜಯ**: ಬೆಟ್ಟ ಕುರುಬರು ಮೂಲನಿವಾಸಿಗಳಾಗಿದ್ದು, ಮೊದಲಿನಿಂದಲೂ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿಯೇ ಇದ್ದರು. ಸ್ವಾತಂತ್ರ್ಯ ನಂತರ 1950ರಲ್ಲಿ ರಚಿಸಲಾಗಿದ್ದ ಪಟ್ಟಿಯಲ್ಲಿಯೂ ಇವರನ್ನು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿಯೇ ಸೇರಿಸಲಾಗಿತ್ತು.

ಆದರೆ 1976ರಲ್ಲಿ ಎಸ್.ಜಿ.ಹಾವನೂರು ಆಯೋಗದ ವರದಿ ಜಾರಿಯಾದ ನಂತರ ಪರಿಶಿಷ್ಟ ಪಂಗಡದ ಪಟ್ಟಿಗೆ ಬೆಟ್ಟ ಕುರುಬರ ಬದಲು ಕಾಡು ಕುರುಬರು ಎಂದು ಸೇರಿಸಲಾಯಿತು. ಬೆಟ್ಟ ಕುರುಬ ಜನಾಂಗವನ್ನು ಕಾಡು ಕುರುಬ ಎಂದು ಕರೆಯಲಾಗುತ್ತದೆ. ಆದರೆ, ಆದಿವಾಸಿಗಳಾದ ಬೆಟ್ಟ ಕುರುಬರಿಗೆ ತಮ್ಮನ್ನು ಕಾಡು ಕುರುಬರು ಎಂದು ಹೇಳಿಕೊಳ್ಳುವುದು ಇಷ್ಟವಿರಲಿಲ್ಲ. ಆದರೆ, ಅಧಿಕಾರಿಗಳು ನೀವು ಬೆಟ್ಟ ಕುರುಬರು ಎಂದು ದಾಖಲಾತಿಗಳಲ್ಲಿ ಬರೆಸಿದರೆ ಯಾವುದೇ ಸೌಲಭ್ಯ ಸಿಗುವುದಿಲ್ಲ. ಕಾಡು ಕುರುಬರು ಎಂದೇ ಬರೆಸಬೇಕು ಎಂದು ತಾಕೀತು ಮಾಡುತ್ತಿದ್ದರು. ಹೀಗಾಗಿ, ಬೆಟ್ಟ ಕುರುಬರು 1984ರಿಂದಲೂ ತಮ್ಮನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸುವಂತೆ ಆಗ್ರಹಿಸಿ ರಾಜ್ಯ ಹಾಗೂ ಕೇಂದ್ರ ಸರ್ಕಾರಕ್ಕೆ ಮನವಿ ಸಲ್ಲಿಸುತ್ತಾ ಹೋರಾಟ ಮಾಡಿಕೊಂಡು ಬಂದಿದ್ದರು. ಇದೀಗ ಪರಿಶಿಷ್ಟ ಪಂಗಡದ ಪಟ್ಟಿಗೆ ಕಾಡು ಕುರುಬರನ್ನು ಸೇರಿಸಲು ಮಸೂದೆ ಮಂಡಿಸಲಾಗಿದೆ.

**ಏಕೆ ಮಸೂದೆ ?**

- ಬೆಟ್ಟ ಕುರುಬರು ಮೊದಲಿನಿಂದಲೂ ಪರಿಶಿಷ್ಟ ಪಂಗಡದ ಪಟ್ಟಿಯಲ್ಲೇ ಇದ್ದರು.
- 1976ರಲ್ಲಿ ಹಾವನೂರು ಆಯೋಗದ ವರದಿಯನ್ನು ಜಾರಿಗೆ ತರಲಾಯಿತು.
- ಆಗ ಬೆಟ್ಟ ಕುರುಬರನ್ನು ಕಾಡು ಕುರುಬರು ಎಂದೇ ಸೇರ್ಪಡೆ ಮಾಡಲಾಯಿತು.
- ಆದರೆ ಬೆಟ್ಟ ಕುರುಬರಿಗೆ ತಮ್ಮನ್ನು ಕಾಡು ಕುರುಬರು ಎನಿಸಿಕೊಳ್ಳಲು ಇಷ್ಟವಿರಲಿಲ್ಲ.
- ಹೀಗಾಗಿ 1984ರಿಂದಲೂ ಹೋರಾಟ ನಡೆಸಿದ್ದರು. ಇದೀಗ ಅದಕ್ಕೆ ಮನ್ನಣೆ ಸಿಕ್ಕಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:10.12.2022

## 6. ಏಕರೂಪ ನಾಗರಿಕ ಸಂಹಿತೆ ಗದ್ದಲ

ಏಕರೂಪ ನಾಗರಿಕ ಸಂಹಿತೆಯ (ಯುಸಿಸಿ) ಖಾಸಗಿ ಮಸೂದೆ ಮಂಡನೆ ಹಿನ್ನೆಲೆಯಲ್ಲಿ ರಾಜ್ಯ ಸಭೆಯಲ್ಲಿ ಪ್ರತಿಪಕ್ಷಗಳು ಭಾರಿ ಪ್ರತಿಭಟನೆ ನಡೆಸಿದರು. ಬಿಜೆಪಿ ಸಂಸದ ಕಿರೋಡಿ ಲಾಲ್ ಮೀನಾ ಅವರು ಏಕರೂಪ ನಾಗರಿಕ ಸಂಹಿತೆಯನ್ನು ಸಿದ್ಧಪಡಿಸಲು ಮತ್ತು ಭಾರತದಾದ್ಯಂತ ಅದರ ಅನುಷ್ಠಾನಕ್ಕಾಗಿ ರಾಷ್ಟ್ರೀಯ ತಪಾಸಣೆ ಮತ್ತು ತನಿಖಾ ಸಮಿತಿ ರಚನೆಗೆ ಅವಕಾಶ ಕಲ್ಪಿಸುವ ಮಸೂದೆಯನ್ನು ಮಂಡಿಸಿದರು.

ಮಸೂದೆ ಜಾರಿಗೆ ಬಂದರೆ ಅದು ದೇಶದಲ್ಲಿ ಪ್ರಚಲಿತದಲ್ಲಿರುವ ಸಾಮಾಜಿಕ ರಚನೆ ಮತ್ತು ವಿವಿಧತೆಯಲ್ಲಿನ ಏಕತೆಯನ್ನು ನಾಶ ಮಾಡುತ್ತದೆ ಎಂದು ಕಾಂಗ್ರೆಸ್, ತೃಣಮೂಲ ಕಾಂಗ್ರೆಸ್, ಎಂಡಿಎಂಕೆ, ಆರ್‌ಜೆಡಿ, ಎಸ್‌ಪಿ, ಸಿಪಿಐ, ಸಿಪಿಐ(ಮಾರ್ಕ್ಸಿಸ್ಟ್), ಎನ್‌ಸಿಪಿ ಸದಸ್ಯರು ಆತಂಕ ವ್ಯಕ್ತಪಡಿದರು. ಈ ಹಿಂದೆ ಮಸೂದೆಯನ್ನು ಪರಿಚಯಿಸಲು ಪಟ್ಟಿ ಮಾಡಲಾಗಿದ್ದರೂ ಅದನ್ನು ಮೇಲ್ಮನೆಯಲ್ಲಿ ಮಂಡಿಸಿರಲಿಲ್ಲ. ಈ ಮಸೂದೆಯ ಪರವಾಗಿ 63 ಮತಗಳು ಹಾಗೂ ವಿರುದ್ಧವಾಗಿ 23 ಮತಗಳು ಚಲಾವಣೆಗೊಂಡವು. ಧರ್ಮವನ್ನು ಪರಿಗಣಿಸದೆ ಎಲ್ಲಾ ನಾಗರಿಕ ವೈಯಕ್ತಿಕ ಕಾನೂನುಗಳನ್ನು ರೂಪಿಸುವ ಮತ್ತು ಕಾರ್ಯಗತಗೊಳಿಸುವ ಕೆಲಸವನ್ನು ಈ ಮಸೂದೆ ಮಾಡುತ್ತದೆ.

ಸೂಕ್ಷ್ಮ ವಿಷಯವಾಗಿರುವ ಏಕರೂಪ ನಾಗರಿಕ ಸಂಹಿತೆ ಜಾರಿ ಕುರಿತು ಕರ್ನಾಟಕ ಸೇರಿದಂತೆ ಹಲವು ರಾಜ್ಯಗಳಲ್ಲಿ ಈ ಕುರಿತು ಚರ್ಚೆಗಳಾಗಿವೆ. ಮಧ್ಯಪ್ರದೇಶ ಈ ಮಸೂದೆ ರಚನೆಗಾಗಿ ಕಳೆದ ಡಿಸೆಂಬರ್ 2 ರಂದು ಸಮಿತಿಯೊಂದನ್ನು ರಚಿಸಿತ್ತು.

**ರೂ.3.25 ಲಕ್ಷ ಕೋಟಿ ಹೆಚ್ಚುವರಿ ವೆಚ್ಚ:** ಪ್ರಸಕ್ತ ಹಣಕಾಸು ವರ್ಷದಲ್ಲಿ ರಸಗೊಬ್ಬರ ಸಬ್ಸಿಡಿ ಪಾವತಿಗೆ ರೂ. 1.09 ಲಕ್ಷ ಕೋಟಿ ಸೇರಿ ರೂ. 3.23 ಲಕ್ಷ ಕೋಟಿಗೂ ಅಧಿಕ ನಿವ್ವಳ ಹೆಚ್ಚುವರಿ ವೆಚ್ಚಕ್ಕಾಗಿ ಕೇಂದ್ರ ಸರ್ಕಾರ ಸಂಸತ್ತಿನ ಅನುಮೋದನೆ ಕೋರಿದೆ. ಈ ಹೆಚ್ಚುವರಿ ಖರ್ಚು 2022–23ರ ಬಜೆಟ್‌ನಲ್ಲಿ ಪ್ರಸ್ತಾಪಿಸಲಾದ ಮೊತ್ತಕ್ಕಿಂತ ಹೆಚ್ಚಾಗಿದೆ. ಬಜೆಟ್ ಪ್ರಕಾರ ಕಳೆದ ಹಣಕಾಸು ವರ್ಷದ ರೂ.37.70 ಲಕ್ಷ ಕೋಟಿಗೆ ಹೋಲಿಸಿದರೆ 2022–23ಕ್ಕೆ ರೂ. 39.45 ಲಕ್ಷ ಕೋಟಿಗಳ ವೆಚ್ಚವನ್ನು ಸರ್ಕಾರ ಅಂದಾಜಿಸಿದೆ. ಬಡವರಿಗೆ ಉಚಿತ ಆಹಾರ ಧಾನ್ಯ ವಿತರಿಸಲು ಆಹಾರ, ಗ್ರಾಹಕ ವ್ಯವಹಾರಗಳ ಸಚಿವಾಲಯದ ವೆಚ್ಚವನ್ನು ಪೂರೈಸಲು ರೂ. 80,348.25 ಕೋಟಿಗೆ ಅನುಮೋದನೆ ಕೋರಲಾಗಿದೆ.

**ನ್ಯಾಯಾಂಗ ಆಯೋಗ ಮಸೂದೆಗೆ ವಿರೋಧ:** ರಾಷ್ಟ್ರೀಯ ನ್ಯಾಯಾಂಗ ಆಯೋಗದ ಮೂಲಕ ನ್ಯಾಯಾಧೀಶರ ನೇಮಕವನ್ನು ನಿಯಂತ್ರಿಸುವ ಖಾಸಗಿ ಮಸೂದೆಯನ್ನು ರಾಜ್ಯಸಭೆಯಲ್ಲಿ ಸಿಪಿಐ(ಎಂ)ನ ಬಿಕಾಶ್ ಭಟ್ಟಾಚಾರ್ಯ ಮಂಡಿಸಿದರು. ಆದರೆ ಇದಕ್ಕೆ ಎಎಪಿ ಸಂಸದ ರಾಘವ್ ಚಡ್ಡಾ ವಿರೋಧ ವ್ಯಕ್ತಪಡಿಸಿದರು. ಇದರ ಪರವಾಗಿ ಹೆಚ್ಚು ಧ್ವನಿ ಮತಗಳು ಬಂದ ನಂತರ ರಾಷ್ಟ್ರೀಯ ನ್ಯಾಯಾಂಗ ಆಯೋಗ ಮಸೂದೆ (ಎನ್‌ಜೆಎಸಿ) 2022ನ್ನು ಮಂಡಿಸಲಾಯಿತು. ಭಾರತದ ಮುಖ್ಯ ನ್ಯಾಯಾಧೀಶರು ಸುಪ್ರೀಂಕೋರ್ಟ್‌ನ ನ್ಯಾಯಾಧೀಶರು ಮತ್ತು ಹೈಕೋರ್ಟ್‌ಗಳಿಗೆ ನ್ಯಾಯಾಧೀಶರ ನೇಮಕಕ್ಕೆ ಜನರನ್ನು ಶಿಫಾರಸ್ಸು ಮಾಡಲು ರಾಷ್ಟ್ರೀಯ ನ್ಯಾಯಾಂಗ ಆಯೋಗವು ಅನುಸರಿಸಬೇಕಾದ ಕಾರ್ಯವಿಧಾನವನ್ನು ಈ ಮಸೂದೆ ಹೊಂದಿದೆ. ಮಸೂದೆಗೆ ವಿರೋಧ ವ್ಯಕ್ತಪಡಿಸಿದ ಎಎಪಿ ಸದಸ್ಯ ಚಡ್ಡಾ ಅವರು, ಎನ್‌ಜೆಎಸಿ ಪರಿಕಲ್ಪನೆಯು 1993, 1998 ಮತ್ತು 2016ರಲ್ಲಿ ಮೂರು ಬಾರಿ ಸುಪ್ರೀಂಕೋರ್ಟ್ ಪರಿಗಣನೆಗೆ ಬಂದಿತ್ತು. ಮೂರು ಬಾರಿಯೂ ನ್ಯಾಯಾಂಗದ ಸ್ವಾತಂತ್ರ್ಯಕ್ಕೆ ಪ್ರಾಮುಖ್ಯತೆ ನೀಡುವಾಗ ಸುಪ್ರೀಂಕೋರ್ಟ್ ಎನ್‌ಜೆಎಸಿ ಚೌಕಟ್ಟನ್ನು ವಜಾಗೊಳಿಸಿತು ಎಂದು ಹೇಳಿದರು.

**ಕಲಾಪದ ಪ್ರಮುಖಾಂಶಗಳು:**

- ಈ ವರ್ಷ ದೇಶದಲ್ಲಿ ಕರ್ನಾಟಕದ 12,244 ಜಾನುವಾರುಗಳು ಸೇರಿ 1.55 ಲಕ್ಷಕ್ಕೂ ಹೆಚ್ಚು ಜಾನುವಾರುಗಳು ಚರ್ಮದ ಕಾಯಿಲೆ(ಲುಂಫಿ)ಯಿಂದ ಮೃತಪಟ್ಟಿವೆ ಎಂದು

ಮೀನುಗಾರಿಕೆ, ಪಶುಸಂಗೋಪನೆ ಮತ್ತು ಹೈನುಗಾರಿಕೆ ಸಚಿವ ಪುರ್ಶೋತ್ತಮ್ ರೂಪಾಲಾ ರಾಜ್ಯಸಭೆಗೆ ಲಿಖಿತ ಉತ್ತರ ನೀಡಿದ್ದಾರೆ.

- ದೇಶಾದ್ಯಂತ ಗೋಧಿಯ ಸರಾಸರಿ ಸಗಟು ಬೆಲೆಯು ಈ ವರ್ಷದ ಜನವರಿಯಲ್ಲಿ ಕ್ವಿಂಟಾಲ್‌ಗೆ ರೂ.2,228 ಗಳಿಂದ ನವೆಂಬರ್ ತಿಂಗಳಿನಲ್ಲಿ ರೂ.2,721ಗೆ ಏರಿಕೆಯಾಗಿದೆ ಎಂದು ಕೃಷಿ ಸಚಿವ ನರೇಂದ್ರಸಿಂಗ್ ತೋಮರ್ ರಾಜ್ಯಸಭೆಗೆ ತಿಳಿಸಿದ್ದಾರೆ.

- ಪಿಎಂ–ಕಿಸಾನ್ ಯೋಜನೆಯಡಿ ರೈತರಿಗೆ ನೀಡಲಾಗುತ್ತಿರುವ ವಾರ್ಷಿಕ ರೂ.6,000/– ಸಾವಿರಗಳ ನಗದು ಸಹಾಯ ಧನ ಪಡೆಯುತ್ತಿರುವ ಫಲಾನುಭವಿಗಳ ಸಂಖ್ಯೆ 8.42ಕೋಟಿಗೆ ಏರಿಕೆಯಾಗಿದೆ. 2018ರ ಡಿಸೆಂಬರ್‌ನಲ್ಲಿ ಈ ಯೋಜನೆ ಪ್ರಾರಂಭವಾದಾಗ 3.16 ಕೋಟಿ ಫಲಾನುಭವಿಗಳು ಇದರ ಲಾಭ ಪಡೆದಿದ್ದರು ಎಂದು ಕೃಷಿ ಸಚಿವರು ರಾಜ್ಯಸಭೆಗೆ ತಿಳಿಸಿದ್ದಾರೆ.

- ಭಾರತ ಮತ್ತು ಚೀನಾ ನಡುವಿನ ವ್ಯಾಪಾರ ಕೊರತೆ, ಆಮದು ಮತ್ತು ರಫ್ತು ನಡುವಿನ ವ್ಯತ್ಯಾಸವು ಈ ಹಣಕಾಸು ವರ್ಷದ ಏಪ್ರಿಲ್–ಅಕ್ಟೋಬರ್ ಅವಧಿಯಲ್ಲಿ 51.5 ಶತಕೋಟಿ ಡಾಲರ್‌ಗೆ ತಲುಪಿದೆ ಎಂದು ವಾಣಿಜ್ಯ ಮತ್ತು ಕೈಗಾರಿಕಾ ಸಚಿವ ಪಿಯೂಶ್ ಗೋಯೆಲ್ ರಾಜ್ಯಸಭೆಗೆ ತಿಳಿಸಿದ್ದಾರೆ.

- ಸೇನಾ ಪಡೆಗಳಲ್ಲಿ ಗರಿಷ್ಠ 1.18 ಲಕ್ಷ ಹುದ್ದೆಗಳಿದ್ದು 1.35 ಲಕ್ಷ ಸಿಬ್ಬಂದಿ ಕೊರತೆಯನ್ನು ಮೂರು ಸಶಸ್ತ್ರ ಪಡೆಗಳು ಎದುರಿಸುತ್ತಿವೆ ಎಂದು ರಕ್ಷಣಾ ಖಾತೆಯ ಸಹಾಯಕ ಸಚಿವ ಅಜಯ್ ಭಟ್ ತಿಳಿಸಿದ್ದಾರೆ.

- ಕೇಂದ್ರ ಸರ್ಕಾರವು ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ ಕೋವಿಡ್–19 ಲಸಿಕೆ ದಾಸ್ತಾನುಗಳನ್ನು ನಿಕಟವಾಗಿ ಮೇಲ್ವಿಚಾರಣೆ ಮಾಡುತ್ತಿದೆ. ಇದರಿಂದ ಲಸಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ವ್ಯರ್ಥವಾಗದಂತೆ ನೋಡಿಕೊಳ್ಳುತ್ತಿದೆ ಎಂದು ಕೇಂದ್ರ ಸಚಿವೆ ಭಾರತಿ ಪ್ರವೀಣ್ ಪವಾರ್ ಲೋಕಸಭೆಗೆ ತಿಳಿಸಿದ್ದಾರೆ.

- ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಿಂದ ಹಸಿವಿನಿಂದ ಸಾವು ಸಂಭವಿಸಿರುವ ಬಗ್ಗೆ ವರದಿಯಾಗಿಲ್ಲ ಎಂದು ಕೇಂದ್ರ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವೆ ಸ್ಮೃತಿ ಇರಾನಿ ತಿಳಿಸಿದ್ದಾರೆ.

- ವಾಯು ಮಾಲಿನ್ಯದಿಂದ ಉಂಟಾಗುವ ಸಾವು ಅಥವಾ ರೋಗಗಳ ನೇರ ಸಂಬಂಧವನ್ನು ಸಾಬೀತುಪಡಿಸುವ ಯಾವುದೇ ನಿರ್ಣಾಯಕ ಮಾಹಿತಿ ಲಭ್ಯವಿಲ್ಲ ಎಂದು ಆರೋಗ್ಯ ಖಾತೆಯ ಸಹಾಯಕ ಸಚಿವೆ ಭಾರತಿ ಪ್ರವೀಣ್ ಪವಾರ್ ಲೋಕಸಭೆಗೆ ತಿಳಿಸಿದ್ದಾರೆ.

- ಮೋದಿ ಸರ್ಕಾರ ಅಧಿಕಾರಕ್ಕೆ ಬಂದಾಗಿನಿಂದ ದೇಶದಲ್ಲಿ ಪಾಸ್‌ಪೋರ್ಟ್ ಸೇವೆಗಳು ಶೇ.500ರಷ್ಟು ಸುಧಾರಿಸಿದೆ ಎಂದು ವಿದೇಶಾಂಗ ವ್ಯವಹಾರಗಳ ಸಹಾಯಕ ಸಚಿವ ವಿ.ಮುರಳಿಧರನ್ ಲೋಕಸಭೆಗೆ ತಿಳಿಸಿದ್ದಾರೆ.

ಆಧಾರ:ವಿಶ್ವವಾಣಿ, ದಿನಾಂಕ:11.12.2022

## 7. ಇಂಧನ ಸಂರಕ್ಷಣಾ ವಿಧೇಯಕ ಅಂಗೀಕಾರ

ಪಳೆಯುಳಿಕೆಯೇತರ ಇಂಧನ ಮೂಲಗಳಾದ ಬಯೋಮಾಸ್, ಇಥೆನಾಲ್ ಮತ್ತು ಹಸಿರು ಹೈಡ್ರೋಜನ್ ಬಳಕೆಯನ್ನು ಕಡ್ಡಾಯಗೊಳಿಸುವ ಇಂಧನ ಸಂರಕ್ಷಣಾ ವಿಧೇಯಕ (ತಿದ್ದುಪಡಿ)–2022ಕ್ಕೆ ರಾಜ್ಯಸಭೆಯಲ್ಲಿ ಅಂಗೀಕಾರ ದೊರೆತಿದೆ.

ಈ ವರ್ಷದ ಆಗಸ್ಟ್‌ನಲ್ಲಿ ನಡೆದಿದ್ದ ಲೋಕಸಭಾ ಅಧಿವೇಶನದಲ್ಲಿ ಈ ವಿಧೇಯಕಕ್ಕೆ ಅಂಗೀಕಾರ ದೊರೆತಿತ್ತು. ರಾಜ್ಯಸಭೆಯಲ್ಲಿ ಇದನ್ನು ಧ್ವನಿಮತದ ಮೂಲಕ ಅಂಗೀಕರಿಸಲಾಯಿತು. 'ಇಂಧನ ಬಳಕೆಯ ಮಾನದಂಡಗಳನ್ನು ಅನುಸರಿಸಲು ವಿಫಲವಾಗುವ ಕೈಗಾರಿಕಾ ಘಟಕಗಳು ಅಥವಾ ಹಡಗುಗಳು ಮತ್ತು ವಾಹನ ಉತ್ಪಾದನಾ ಕಂಪನಿಗಳಿಗೆ ದಂಡ ವಿಧಿಸುವ ಅವಕಾಶವನ್ನು ಈ ಮಸೂದೆ ಕಲ್ಪಿಸಲಿದೆ. ನವೀಕರಿಸಬಹುದಾದ ಇಂಧನಗಳ ಬಳಕೆ ಉತ್ತೇಜಿಸುವ ಹಾಗೂ ಹವಾಮಾನ ಬದಲಾವಣೆಗೆ ಸಂಬಂಧಿಸಿದಂತೆ ತನ್ನ ಅಂತರರಾಷ್ಟ್ರೀಯ ಬದ್ಧತೆ ಸಾಧಿಸಲು ದೇಶಕ್ಕೆ ಈ ಮಸೂದೆ ಸಹಕಾರಿಯಾಗಿದೆ. ಪ್ಯಾರಿಸ್ ಒಪ್ಪಂದಕ್ಕೆ ಸಂಬಂಧಿಸಿದ ಸುಸ್ಥಿತ ಅಭಿವೃದ್ಧಿ ಗುರಿಗಳನ್ನು ಸಾಧಿಸಲು ಇದು ಭಾರತಕ್ಕೆ ನೆರವಾಗಲಿದೆ' ಎಂದು ಇಂಧನ ಸಚಿವ ಆರ್.ಕೆ.ಸಿಂಗ್ ಹೇಳಿದ್ದಾರೆ.

ಆಧಾರ:ವಿಶ್ವವಾಣಿ, ದಿನಾಂಕ:13.12.2022

## 8. Opposition walks out of House as government refuses to discuss China border tussle

The Opposition parties walked out of both Houses of Parliament after the government declined to allow a discussion on the India-China border issue. In the Lok Sabha, The walkout was led by Congress leader Sonia Gandhi.

As soon as the Zero Hour began. Congress leader of the House, Adhir Ranjan Chowdhury demanded a discussion on the India-China border situation and gave the example of the late former Prime Minister Jawarhalal Nehru allowing discussion in the Lok Sabha on the India-China was in 1952. “In 1962 when the India-China war took place, Jawarahalal Nehru, had given 165 MPs the chance to speak and a decision was taken on what to do only after that,” Mr.Chowdhury said.

Lok Sabha Speaker Om Birla however said a decision could be taken on the matter only in the Business Advisory Committee and continued with the proceedings of the House. As the Speaker continued with the Question Hour, members of the Congress the Dravida Munnetra Kazhagan (DMK) the Nationalist Congress and the National Conference (NC) among others walked out of the House.

Similar scenes were witnessed in the Rajya Sabha. Leader of the Opposition in the House and Congress leader Mallikarjun Kharge said the Opposition parties wanted a detailed discussion to get full information on Chinese aggression and encroachment on Indian territory and that they stood by the Army.

Deputy Chairperson of the Rajya Sabha Harivansh said no notice had been given by any of the Opposition parties on the issue and a debate could not be allowed.

"Our effort from the start has been that we get full information and the country is also informed of what the actual situation there is," Mr.Kharge said. He continued to speak but his mike was switched off.

Opposition members shouted slogans for some time before staging a walkout.

The decision to walk out if the government refused a discussion on the border skirmish was taken by 17 Opposition parties which met before both the Houses convened for the day. The meeting was hosted by the Congress president, Mr.Kharge.

Among the parties that attended the meeting apart from the Congress were the RJD the Aam Admi Party (AAP) Marumalarchi Dravida Munetra Kazhagam (MDMK), Communist Party of India-Marxist (CPI-M), Communist Party of India (CPI), Janata Dal-United (JD-U), DMK and the Telugu Desam Party (TDP).

Courtesy: The Hindu, Dated: 15.12.2022

## 9. ಏಕಕಾಲಕ್ಕೆ ಚುನಾವಣೆ ಕೇಂದ್ರ ಒಲವು

ಲೋಕಸಭೆ ಚುನಾವಣೆ ಮತ್ತು ವಿವಿಧ ರಾಜ್ಯಗಳ ವಿಧಾನಸಭೆ ಚುನಾವಣೆಗಳನ್ನು ಏಕಕಾಲಕ್ಕೆ ನಡೆಸುವುದರಿಂದ ಸರ್ಕಾರಕ್ಕೆ ಖರ್ಚಿನ ಹೊರೆ ತಗ್ಗಲಿದೆ. ಪ್ರತಿ ಚುನಾವಣೆ ಕೂಡ ಸರ್ಕಾರದ ಮೇಲೆ ದೊಡ್ಡ ಮೊತ್ತದ ವೆಚ್ಚದ ಹೊರೆಯಾಗಿದೆ ಎಂದು ಕೇಂದ್ರ ಕಾನೂನು ಸಚಿವ ಕಿರಣ್ ರಿಜಿಜು ಅವರು ರಾಜ್ಯಸಭೆಯಲ್ಲಿ ಹೇಳಿದ್ದಾರೆ. ಈ ಮೂಲಕ ಮುಂಚಿನಿಂದಲೂ ಬಿಜೆಪಿಯ ಆಶಯವಾಗಿರುವ ಏಕಕಾಲ ಚುನಾವಣೆಯ ಚರ್ಚೆಯನ್ನು ಮುನ್ನೆಲೆಗೆ ತರಲಾಗಿದೆ.

ಪ್ರಶ್ನೆಯೊಂದಕ್ಕೆ ಉತ್ತರಿಸಿರುವ ಸಚಿವರು **"**ಕಾನೂನು ಮಂಡಳಿಯು ತನ್ನ ಚುನಾವಣಾ ಸುಧಾರಣಾ ವರದಿಯಲ್ಲಿ ಆಡಳಿತದಲ್ಲಿ ಸ್ಥಿರತೆ ಕಾಯ್ದುಕೊಳ್ಳಲು ಮತ್ತು ಸರ್ಕಾರದ ವೆಚ್ಚ ಉಳಿತಾಯಕ್ಕಾಗಿ ಏಕಕಾಲಕ್ಕೆ ಲೋಕಸಭೆ ಮತ್ತು ಇತರ ವಿಧಾನಸಭೆ ಚುನಾವಣೆಗಳನ್ನು ನಡೆಸಲು ಶಿಫಾರಸ್ಸು ಮಾಡಿದೆ. ಕೇವಲ ವೆಚ್ಚ ಅಲ್ಲದೆಯೇ ಚುನಾವಣೆಗೆ ನಿಯೋಜಿತರಾಗುವ ಶಿಕ್ಷಕರು, ಅಧಿಕಾರಿ ವರ್ಗದ ಮೇಲಿನ ಒತ್ತಡ ಕೂಡ ಕಡಿಮೆಯಾಗಲಿದೆ. ರಾಜಕೀಯ ಪಕ್ಷಗಳಿಗೂ ವೆಚ್ಚ ತಗ್ಗಲಿದೆ. ಮಾದರಿ ನೀತಿ ಸಂಹಿತೆ ಜಾರಿಯ ಅವಧಿ ಕಡಿತಗೊಂಡು ಅಭಿವೃದ್ಧಿ ಕಾರ್ಯಗಳಿಗೆ ಪುಷ್ಟಿ ಸಿಗಲಿದೆ,**"** ಎಂದು ಅಭಿಪ್ರಾಯಪಟ್ಟಿದ್ದಾರೆ.

**ಜಾಹಿರಾತಿಗಾಗಿ 5 ವರ್ಷಗಳಲ್ಲಿ ರೂ.3700 ಕೋಟಿ ವೆಚ್ಚ:** ಸರ್ಕಾರದ ನೀತಿಗಳು ಮತ್ತು ವಿವಿಧ ಕಾರ್ಯಕ್ರಮಗಳ ಪ್ರಚಾರಕ್ಕಾಗಿ ಕಳೆದ ಐದು ವರ್ಷಗಳಲ್ಲಿ ಕೇಂದ್ರ ಸರ್ಕಾರವು ಒಟ್ಟು ರೂ.3,723.38 ಕೋಟಿ ವೆಚ್ಚ ಮಾಡಿದೆ ಎಂದು ಕೇಂದ್ರ ಮಾಹಿತಿ ಮತ್ತು ಪ್ರಸಾರ ಖಾತೆ ಸಚಿವ ಅನುರಾಗ್ ಠಾಕೂರ್ ರಾಜ್ಯಸಭೆಗೆ ತಿಳಿಸಿದ್ದಾರೆ. ಪ್ರಸಕ್ತ ವರ್ಷದಲ್ಲಿ ಡಿಸೆಂಬರ್, 9 ರವರೆಗೆ ಸರ್ಕಾರವು ಜಾಹಿರಾತಿಗಾಗಿ ರೂ.154.07 ಕೋಟಿ ವ್ಯಯಿಸಿದೆ ಎಂದು ಮಾಹಿತಿ ನೀಡಲಾಗಿದೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:16.12.2022

## 10. ದಿನ ಮೊದಲೇ ಅಧಿವೇಶನಕ್ಕೆ ತೆರೆ

ನಿಗದಿಗಿಂತ 6 ದಿನ ಮುಂಚಿತವಾಗಿಯೇ ಸಂಸತ್‌ನ ಚಳಿಗಾಲದ ಅಧಿವೇಶನಕ್ಕೆ ತೆರಬಿದ್ದಿದೆ. ಡಿಸೆಂಬರ್ 7 ರಂದು ಆರಂಭವಾಗಿದ್ದ ಅಧಿವೇಶನವು ಡಿಸೆಂಬರ್ 29 ರವರೆಗೆ ನಡೆಯಬೇಕಿತ್ತು. ಆದರೆ

ಕ್ರಿಸ್‌ಮಸ್ ಹಾಗೂ ಹೊಸ ವರ್ಷದ ಹಿನ್ನೆಲೆಯಲ್ಲಿ ಅಧಿವೇಶನವನ್ನು ಅವಧಿಗೆ ಮುನ್ನವೇ ಮುಗಿಸುವಂತೆ ಸದಸ್ಯರು ಮನವಿ ಸಲ್ಲಿಸಿದ್ದರು. ಅದನ್ನು ಪರಿಗಣಿಸಿ, ಶುಕ್ರವಾರವೇ ಲೋಕಸಭೆ ಮತ್ತು ರಾಜ್ಯಸಭೆ ಕಲಾಪಗಳನ್ನು ಅನಿರ್ದಿಷ್ಟಾವಧಿಗೆ ಮುಂದೂಡಲಾಯಿತು.

ಪ್ರಧಾನಿ ಮೋದಿ, ಕಾಂಗ್ರೆಸ್ ನಾಯಕಿ ಸೋನಿಯಾ ಗಾಂಧಿ, ಎಐಸಿಸಿ ಅಧ್ಯಕ್ಷ ಖರ್ಗೆ, ಕೇಂದ್ರ ಸಚಿವರಾದ ರಾಜನಾಥ್ ಸಿಂಗ್, ಪಿಯೂಷ್ ಗೋಯಲ್ ಸೇರಿದಂತೆ ಹಲವರು ಕೊನೆಯ ದಿನದ ಕಲಾಪದಲ್ಲಿ ಪಾಲ್ಗೊಂಡರು. ಇದೇ ವೇಳೆ, ಪ್ರಸಕ್ತ ಚಳಿಗಾಲದ ಅಧಿವೇಶನಕ್ಕೆ ಅವಧಿಪೂರ್ವ ತೆರೆ ಬೀಳುವ ಮೂಲಕ ಸತತ 8ನೇ ಬಾರಿಗೆ ಸಂಸತ್ ಅಧಿವೇಶನ ನಿಗದಿಗೆ ಮುನ್ನವೇ ಮುಗಿದಂತಾಗಿದೆ.

- ಲೋಕಸಭೆ ಉತ್ಪಾದಕತೆ–ಶೇ.97
- ಕಲಾಪ ನಡೆದ ದಿನಗಳು–13
- ಅಂಗೀಕಾರಗೊಂಡ ವಿಧೇಯಕ–7
- ರಾಜ್ಯಸಭೆ ಉತ್ಪಾದಕತೆ–ಶೇ.102
- ಕಲಾಪ ನಡೆದ ದಿನಗಳೂ–13
- ಕಲಾಪ ನಡೆದ ಅವಧಿ–64 ಗಂಟೆ 50 ನಿಮಿಷ
- ಪಾಸ್ ಆದ ವಿಧೇಯಕಗಳು–9

ಆಧಾರ: ವಿಜಯವಾಣಿ, ದಿನಾಂಕ:26.12.2022

# ಭಾಗ – 3

# ಕೇಂದ್ರ ಸರ್ಕಾರದ ಸುದ್ದಿಗಳು

## 1. 5G rolled out in 8 cities after launch by PM

Prime Minister launched Narendra Modi 5G mobile services which promise speeds much higher than the existing 4G technology with Bharati Air tel becoming the first to roll out the services in the country.

While launching the 5G services at the Indian Mobile Congress event, Modi stressed that India will play a big role in designing the future wireless technology and manufacturing related to it.

While Airtel announced the commencement of the services in eight cities including Bangalore, Delhi, Mumbai and Varanasi, Reliance Jio said it would launch its services in four metros this month by Diwali, while Vodafone said it would also roll out services soon but did not announce the timeline.

5G services will progressively cover the entire country over the next couple of years-Jio promises to do that by December 2023 and Bharti Airtel by March, 2024.

Besides offering high speeds 5G supports lag-free connectivity and can enable billions of connected devices to share data in real-time. The 5G service expects to revolutionize sectors from healthcare, education, agriculture and disaster monitoring.

Both Bharti Airtel and Reliance Jio promised that 5G services will be affordable compared to the rest of the world. An Airtel official said that at present 5G services will be available at existing 4G rates and a new tariff for 5G will be announced after some time.

Addressing the gathering, the Prime Minister urged telecom industry leaders to visit schools and colleges and unleash every aspect of this new technology.

While asking industry to create an enabling ecosystem for MSMEs to prepare spare parts for electronic manufacturing the Prime Minister said “5G technology should be used to bring about a revolution in the country”.

Modi said while the nation was dependent on foreign countries for technology for 2G, 3G and 4G services, India has created history with indigenous technology playing a major role in 5G.

The Prime Minister said his government’s vision for ‘Digital India’ led to an increase in the number of mobile manufacturing units in India to over 200 from just two in 2014, bringing down the cost of handsets.

The country he said is shipping phones overseas worth crores of rupees as against zero exports a few years back.

Taking a dig at the previous Congress-led UPA government he said. “This is the difference between the intentions during the 2G era and 5G era now,” referring to the alleged 2G spectrum allocation scam.

Courtesy: Deccan Herald, Dated: 02.10.2022

## 2. 6 ರಾಜ್ಯಗಳಲ್ಲಿ 7 ವಿಧಾನಸಭಾ ಕ್ಷೇತ್ರಗಳಲ್ಲಿ ನವೆಂಬರ್ 3ಕ್ಕೆ ಬೈ ಎಲೆಕ್ಷನ್

ಆರು ರಾಜ್ಯಗಳ ಏಳು ವಿಧಾನಸಭಾ ಕ್ಷೇತ್ರಗಳಿಗೆ ನವೆಂಬರ್ 3ರಂದು ಉಪ ಚುನಾವಣೆ ನಡೆಯಲಿದ್ದು, ನವೆಂಬರ್ 6ರಂದು ಫಲಿತಾಂಶ ಹೊರ ಬೀಳಲಿದೆ. ಮಹಾರಾಷ್ಟ್ರದ ಅಂಧೇರಿ ಪೂರ್ವ, ಬಿಹಾರದ ಮೊಕಾಮಾ, ಗೋಪಾಲ್ ಗಂಜ್, ಹರಿಯಾಣದ ಅಧಂಪುರ, ತೆಲಂಗಾಣದ ಮುನುಗೊಡೆ, ಉತ್ತರ ಪ್ರದೇಶದ ಗೋಲಾ ಗೋಕರ್ಣನಾಥ, ಒಡಿಶಾದ ಧಾಮ್‌ನಗರ ವಿಧಾನಸಭಾ ಕ್ಷೇತ್ರಗಳ ಉಪ ಚುನಾವಣೆಗೆ ಕೇಂದ್ರ ಚುನಾವಣಾ ಆಯೋಗ ವೇಳಾಪಟ್ಟಿ ಪ್ರಕಟಿಸಿದೆ. ಅಕ್ಟೋಬರ್ 7ರಂದು ಉಪಚುನಾವಣೆಯ ಅಧಿಸೂಚನೆ ಹೊರಬೀಳಲಿದ್ದು, ಅಕ್ಟೋಬರ್ 14ರಂದು ನಾಮಪತ್ರ ಸಲ್ಲಿಸಲು ಕಡೆಯ ದಿನವಾಗಿದೆ. ಅಕ್ಟೋಬರ್ 17ಕ್ಕೆ ನಾಮಪತ್ರ ಹಿಂದಕ್ಕೆ ಪಡೆಯುವ ಕೊನೆಯ ದಿನ. ನವೆಂಬರ್ 3ಕ್ಕೆ ಮತದಾನ, ನವೆಂಬರ್ 6ರಂದು ಮತ ಎಣಿಕೆ ನಡೆಯಲಿದೆ ಎಂದು ಚುನಾವಣಾ ಆಯೋಗ ತಿಳಿಸಿದೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:04.10.2022

## 3. ದೇಶದ ಎಲ್ಲಾ ಪಂಚಾಯಿತಿಗಳಲ್ಲೂ ಪಿಎಸಿಎಸ್ ಸ್ಥಾಪನೆ: ಅಮಿತ್ ಶಾ

ಕ್ಷೀರ ಉತ್ಪನ್ನಗಳಿಗೆ ಮಾರುಕಟ್ಟೆ ಒದಗಿಸಲು ಹಾಗೂ ವಿವಿಧ ಕೃಷಿ ಚಟುವಟಿಕೆಗಳಿಗೆ ಉತ್ತೇಜನ ನೀಡಲು ಮುಂದಿನ ಐದು ವರ್ಷಗಳಲ್ಲಿ ದೇಶದ ಎಲ್ಲಾ ಪಂಚಾಯಿತಿಗಳಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ (ಪಿಎಸಿಎಸ್) ಸ್ಥಾಪಿಸಲಾಗುವುದು ಎಂದು ಕೇಂದ್ರ ಗೃಹ ಸಚಿವರು ಹೇಳಿದ್ದಾರೆ.

ಇಲ್ಲಿ ಹಮ್ಮಿಕೊಂಡಿದ್ದ ಪೂರ್ವ ಮತ್ತು ಈಶಾನ್ಯ ವಲಯದ ಹಾಲು ಉತ್ಪಾದಕರ ಸಹಕಾರಿ ಸಂಘದ ಸಮಾವೇಶವನ್ನು ಉದ್ಘಾಟಿಸಿ ಮಾತನಾಡಿದ ಅವರು ‘ಸದ್ಯ ದೇಶಾದ್ಯಂತ ಕೇವಲ 65 ಸಾವಿರ ಪಿಎಸಿಎಸ್‌ಗಳು ಸಕ್ರಿಯವಾಗಿವೆ. 2027ರ ಹೊತ್ತಿಗೆ ದೇಶದ ಎಲ್ಲಾ ಪಂಚಾಯಿತಿಗಳಿಗೂ ಪಿಎಸಿಎಸ್‌ಗಳನ್ನು ಹೊಂದಲಿವೆ’ ಎಂದು ಭರವಸೆ ನೀಡಿದ್ದಾರೆ.

ಗ್ಯಾಸ್, ಪೆಟ್ರೋಲ್ ಮಾರಾಟ, ಹಾಲು ಮತ್ತು ಕೃಷಿ ಉತ್ಪನ್ನಗಳ ಸಂಗ್ರಹಣೆ ಹಾಗೂ ಮಾರಾಟಕ್ಕಾಗಿ ಪಿಎಸಿಎಸ್‌ಗಳು ಕಾರ್ಯನಿರ್ವಹಿಸಲಿವೆ. ಇದರಿಂದ ಮಹಿಳೆಯರ ಸಬಲೀಕರಣ ಸಾಧ್ಯ ಎಂದಿದ್ದಾರೆ.

ಹಿಂದಿನ ಸರ್ಕಾರಗಳು ಸಹಕಾರ ಕ್ಷೇತ್ರವನ್ನು ಕಡೆಗಣಿಸಿದ್ದವು ಎಂದು ಆರೋಪಿಸಿದ ಶಾ ಅವರು, ಬಡತನ ನಿರ್ಮೂಲನೆ ಹಾಗೂ ಮಹಿಳೆಯರ ಸಬಲೀಕರಣದ ಉದ್ದೇಶದಿಂದ ಪ್ರತ್ಯೇಕ ಸಚಿವಾಲಯವನ್ನು ಸ್ಥಾಪಿಸಲು ನಿರ್ಧರಿಸಲಾಗಿದೆ ಎಂದು ಅವರು ತಿಳಿಸಿದ್ದಾರೆ.

ಆಧಾರ:ಪ್ರಜಾವಾಣಿ, ದಿನಾಂಕ:08.10.2022

## 4. Gujarat’s Modhera is India’s first fully- solar village

PRIME MINISTER Narendra Modi declared here in Gujarat as India’s first 24x7 solar-powered village, even as he sought to further cement his connect with the poll bound state, saying people there had showered affection and given him electoral victories without looking at his caste.

"You never saw my caste, You never saw my political life. You gave your blessings for the last two decades," he said.

Regarding Modhera which also has a famous Sun Temple, Modi said whenever people discuss solar energy in the world this village will feature in it. "Government produces electricity and people purchase it. But we want people to be producers of power. Don't pay for electricity; sell it and earn from it instead," he urged.

"People of Modhera are both consumers and producers of electricity. The government is purchasing additional generated power. Such successful attempts must be replicated across the country," he added.

The solarisation of the Modera Sun Temple and town happened through partnership between the Central and state government. It involved integrating the village with a Battery Energy Storage System (BESS) at Sujjanpura in Mehsana about 6 km away from the Sun Temple.

More than 1,300 rooftop solar systems have been installed on houses for power generation. While day time power comes from the solar panels, at night it is supplied from the BESS.

Modhera is also happens to be the first modern village having a solar based modern electric vehicle charging station.

Courtesy: Indian Express, Dated: 10.10.2022

## 5. A nation achieves glory when it takes pride in its heritage, says PM in Ujjain

Prime Minister dedicated the first phase of the Rs.856 crore Mahakal Lok corridors in Madhya Pradesh's Ujjain, after offering prayers at the ancient Mahakaleshwar temple.

Hailing his government's efforts at renovating and reviving several Hindu temples across the country as well as improving access to Sikh pilgrimage sites, Mr.Modi said that in the Azadi Ka Amrit Mahotsaw ($75^{th}$ Anniversary of Independence) period, India had given a "call for freedom from the mentality of slavery and taking pride in its heritage".

"The nation finds glory only when the flag of its success is flying on the world stage. To reach the pinnacle of that success, it is necessary that the nation attains cultural excellence and takes pride in its identity," Mr.Modi said, mentioning projects such as the Kashi Vishwanath corridor, the Ram Temple construction in Ayodhya and initiatives such as opening of the Kartarpur Sahib corridor.

'**Centre of India's soul**': Addressing a gathering at the Kartik Mela Ground, he said such efforts were helping India re-establish the pride associated with these centres of its "spiritual consciousness", while calling the city of Ujjain "centre of India's soul".

Earlier he unveiled a *shivling* to dedicate the Mahakal corridor to the nation. Mr. Modi praised Madhya Pradesh Chief Minister Shivaraj Singh Chouhan for the successful launch of the project. The first phase of the corridor cost Rs.351 crore.

The corridor that is a little over 900 metres long traverses the old Rudrasagar lake, which has been revived is part of the re-development project around the Mahakaleshwar Temple, one of the 12 Jyotirlingas. The corridor is dotted with 108 ornate sandstone columns in a row with *trishul* design on top and *mudras* of Lord Shiva. It also has fountains surrounded by sculptures and murals on the deity.

Courtesy: The Hindu, Dated: 12.10.2022

## 6. Railways to launch Vande Bharat freight trains

Aimed at the faster movement of parcels, Indian Railways has decided to introduce a freight version of the semi-speed Vande Bharat Express.

The Railway Board in its letter to general managers of zonal railways on October, 11 said that this will help the national transporter to attract a high volume of freight since it will ensure faster movement.

The railway board also asked zonal offices to identify and interact with potential customers and identify the terminals for running the initial services.

Christened "Freight EMU" the first service of these trains will be operated between the Delhi-NCR and Mumbai regions. The first parcel train is expected to start its service by December this year, said an official in the Railways.

Vande Bharat freight trains have been designed for palletised container transportation at a speed of 160 km/hour. The 1,800 mm wide rakes with automatic sliding doors would have provisions to load refer containers for temperature sensitive cargo, a pneahetically retractable rolled floor system with looking facility for easy handling of pallets and a total payload of 264 tonnes said the official.

The Integral Coach Factory in Chennai, which is manufacturing the bulk of the Vande Bharat trains is expected to roll out the first freight EMU rake on the Vande Bharat platform in December said the official.

Already the Vande Bharat passenger train in service on different routes and Prime Minister flagged off the fourth train between Una in Himachal Pradesh and New Delhi.

Courtesy: Deccan Herald, Dated: 14.10.2022

## 7. ಪ್ರಾದೇಶಿಕ ಭಾಷೆಗಳಲ್ಲಿ ತೀರ್ಪಿಗೆ ಪ್ರಧಾನಿ ಮೋದಿ ಒತ್ತು

ನ್ಯಾಯದಾನದ ವಿಳಂಬವು ದೇಶದ ಜನ ಎದುರಿಸುತ್ತಿರುವ ಪ್ರಮುಖ ಸವಾಲುಗಳಲ್ಲಿ ಒಂದಾಗಿದ್ದು, ಕಾನೂನಿನ ಅಸ್ಪಷ್ಟತೆ, ಸಂಕೀರ್ಣತೆ ಕಡಿಮೆ ಮಾಡಿ ಮತ್ತು ಅದು ಸ್ಪಷ್ಟ ರೀತಿಯಲ್ಲಿ

ಅರ್ಥವಾಗುವಂತೆ ಮಾಡಲು ಪ್ರಾದೇಶಿಕ ಭಾಷೆಗಳಲ್ಲಿ ಕೂಡ ತೀರ್ಪುಗಳು ಬರುವಂತಾಗಬೇಕು ಎಂದು ಪ್ರಧಾನಿ ಹೇಳಿದ್ದಾರೆ.

ಗುಜರಾತ್‌ನ ನರ್ಮದಾ ಜಿಲ್ಲೆಯ ಕೇವಾಡಿಯಾದಲ್ಲಿರುವ ಏಕತಾ ಪ್ರತಿಮೆ ಬಳಿ ಎರಡು ದಿನಗಳ ಕಾನೂನು ಮಂತ್ರಿ ಮತ್ತು ಕಾನೂನು ಕಾರ್ಯದರ್ಶಿಗಳ ಅಖಿಲ ಭಾರತ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ ಆನ್‌ಲೈನ್ ಮೂಲಕ ಮಾತನಾಡಿದ ಅವರು, ಪ್ರಾದೇಶಿಕ ಭಾಷೆಯಿಂದ ಜನರಿಗೆ ಸುಲಭ ನ್ಯಾಯ ಸಿಗುವಂತಾಗಬೇಕು. ಕಾನೂನು ಭಾಷೆ ಅಡ್ಡಿಯಾಗದೆ, ಬಡವರು ಸಹ ಅವುಗಳನ್ನು ಸುಲಭದಲ್ಲಿ ಅರ್ಥಮಾಡಿಕೊಳ್ಳಬಹುದು ಎಂದರು. ಈ ಸಮಸ್ಯೆ ಬಗೆಹರಿಸಲು ನಮ್ಮ ನ್ಯಾಯಾಂಗ ವ್ಯವಸ್ಥೆ ಕೂಡ ಕಾರ್ಯನಿರ್ವಹಿಸುತ್ತಿದೆ. ಪರ್ಯಾಯ ವ್ಯಾಜ್ಯ ಪರಿಹಾರ ಮತ್ತು ಲೋಕ ಅದಾಲತ್‌ಗಳಂತಹ ವ್ಯವಸ್ಥೆಗಳು ನ್ಯಾಯಾಲಯಗಳ ಹೊರೆ ಕಡಿಮೆ ಮಾಡಿ, ಬಡವರಿಗೆ ಸುಲಭ ನ್ಯಾಯ ದೊರಕಲು ನೆರವಾಗಿದೆ ಎಂದು ವಿವರಿಸಿದರು. ಕಳೆದ ಎಂಟು ವರ್ಷಗಳಲ್ಲಿ ಕೇಂದ್ರ ಸರ್ಕಾರ 1,500 ಕ್ಕೂ ಹೆಚ್ಚು ಹಳೆಯ ಬಳಕೆಯಲ್ಲಿಲ್ಲದ, ಪ್ರಸ್ತುತ ಕಾನೂನುಗಳನ್ನು ರದ್ದುಗೊಳಿಸಿದೆ. ಅವುಗಳಲ್ಲಿ ಹಲವು ಬ್ರಿಟಿಷ್ ಆಳ್ವಿಕೆಯ ಕಾಲದಿಂದಲೂ ಮುಂದುವರೆದಿತ್ತು.

ಕಾನೂನನ್ನು ರೂಪಿಸುವಾಗ ಅದರ ವಯಸ್ಸು ಮುಕ್ತಾಯ ದಿನಾಂಕ ನಿರ್ಧರಿಸಲಾಗುತ್ತದೆ. ಮುಕ್ತಾಯದ ದಿನಾಂಕ ಬಂದಾಗ ಅದೇ ಕಾನೂನನ್ನು ಹೊಸ ಸಂದರ್ಭಗಳಲ್ಲಿ ಪರಿಶೀಲಿಸಲಾಗುತ್ತದೆ. ಭಾರತದಲ್ಲಿಯೂ ಸಹ ನಾವು ಅದೇ ಮನೋಭಾವದಿಂದ ಮುನ್ನಡೆಯಬೇಕು ಎಂದು ಅಭಿಪ್ರಾಯಪಟ್ಟರು.

ಯುವಜನತೆಗೆ ಕೂಡ ಮಾತೃಭಾಷೆಯಲ್ಲಿ ಕಾನೂನು ಶೈಕ್ಷಣಿಕ ವ್ಯವಸ್ಥೆ ಕಲ್ಪಿಸುವ ಅಗತ್ಯವಿದೆ. ಕಾನೂನು ಕೋರ್ಸ್‌ಗಳನ್ನು ಮಾತೃಭಾಷೆಯಲ್ಲಿ ಮಾಡಲು, ಕಾನೂನುಗಳನ್ನು ಸರಳ ಭಾಷೆಯಲ್ಲಿ ಬರೆಯಲು ಮತ್ತು ಹೈಕೋರ್ಟ್ ಮತ್ತು ಸುಪ್ರೀಂಕೋರ್ಟ್‌ನ ಪ್ರಮುಖ ಪ್ರಕರಣಗಳ ಡಿಜಿಟಲ್ ಲೈಬ್ರರಿಗಳನ್ನು ಸ್ಥಳೀಯ ಭಾಷೆಯಲ್ಲಿ ಲಭ್ಯವಾಗುವಂತೆ ಮಾಡಬೇಕು ಎಂದು ಹೇಳಿದರು.

ಆಧಾರ:ವಿಜಯವಾಣಿ, ದಿನಾಂಕ:16.10.2022

## 8. ಡಿಜಿಟಲ್ ಬ್ಯಾಂಕ್ ಯುಗ

ಸ್ವಾತಂತ್ರ್ಯದ ಅಮೃತಮಹೋತ್ಸವದ ವರ್ಷದಲ್ಲಿ ನರೇಂದ್ರ ಮೋದಿ ಇಂದು ಡಿಜಿಟಲ್ ಬ್ಯಾಂಕಿಂಗ್ ಘಟಕ (ಡಿಬಿಯು)ಗಳನ್ನು ದೇಶದ 75 ಜಿಲ್ಲೆಗಳಿಗೆ ಸಮರ್ಪಿಸಿದರು. ಡಿಬಿಯುಗಳನ್ನು ಆರಂಭಿಸುವುದಾಗಿ ಬಜೆಟ್‌ನಲ್ಲಿ ಸರ್ಕಾರ ಘೋಷಿಸಿತು.

ಸಾರ್ವಜನಿಕ ವಲಯದ 11 ಬ್ಯಾಂಕ್‌ಗಳು ಖಾಸಗಿ ವಲಯದ 12 ಬ್ಯಾಂಕ್‌ಗಳು ಮತ್ತು ಸಣ್ಣ ಹಣಕಾಸು ಬ್ಯಾಂಕ್‌ನ ಒಂದು ಬ್ಯಾಂಕ್ ಡಿಜಿಟಲ್ ಬ್ಯಾಂಕ್ ಖಾತೆಗಳನ್ನು ತೆರೆದಿವೆ. ಮಂಗಳೂರಿನ ಕೊಂಚಾಡಿಯಲ್ಲಿ ಕರ್ನಾಟಕ ಬ್ಯಾಂಕ್ ತನ್ನ ಡಿಜಿಟಲ್ ಬ್ಯಾಂಕ್ ಘಟಕವನ್ನು ಆರಂಭಿಸಿದೆ.

ವಿಡಿಯೋ ಕಾನ್ಫರೆನ್ಸ್ ಮೂಲಕ ಡಿಬಿಯುಗಳನ್ನು ದೇಶಕ್ಕೆ ಸಮರ್ಪಿಸಿ ಮಾತನಾಡಿದ ಮೋದಿ, ಡಿಜಿಟಲೀಕರಣದ ಮೂಲಕ ಭಾರತ ಸಾಮಾಜಿಕ ಭದ್ರತೆಯ ನಾಯಕನಾಗಿ ಹೊರಹೊಮ್ಮಿದೆ ಎಂದು ವಿಶ್ವಬ್ಯಾಂಕ್ ಹೇಳಿರುವುದನ್ನು ಉಲ್ಲೇಖಿಸಿದರು. ಡಿಜಿಟಲೀಕರಣದಿಂದ ಜೀವನ ಸರಳಗೊಳ್ಳುತ್ತದೆ. ಸಾಮಾಜಿಕ ಭದ್ರತೆ ಉಂಟಾಗುತ್ತದೆ, ಜಗತ್ತಿನಾದ್ಯಂತ ತಂತ್ರಜ್ಞಾನದಲ್ಲಿ ತುಂಬ ಯಶಸ್ಸು ಪಡೆದಿರುವವರೂ ಭಾರತದ ಈ ಕ್ರಮಗಳನ್ನು ಮೆಚ್ಚಿಕೊಂಡಿದ್ದಾರೆ ಎಂದರು.

**ಯಾವಾಗ ಬೇಕಾದರೂ**: ಸಾಂಪ್ರದಾಯಿಕ ಬ್ಯಾಂಕ್‌ಗಳು ಹಬ್ಬಗಳ ದಿನ, ಭಾನುವಾರ ಮುಚ್ಚಿರುತ್ತದೆ. ಇದು ದಿನದ 24 ಗಂಟೆಯೂ ವರ್ಷದ ಎಲ್ಲಾ ದಿನವೂ ತೆರೆದಿರುತ್ತದೆ. ಸಾಮಾನ್ಯವಾಗಿ ಬ್ಯಾಂಕ್‌ನಲ್ಲಿ ಖಾತೆ ತೆರೆದರೆ ಡೆಬಿಟ್‌ಕಾರ್ಡ್ ಬರಲು ಒಂದು ವಾರವಾದರೂ ತೆಗೆದುಕೊಳ್ಳುತ್ತದೆ. ಆದರೆ

ಡಿಬಿಯುಗಳಲ್ಲಿ ಆಧಾರ್ ಮತ್ತು ಪ್ಯಾನ್ ತಂದಲ್ಲಿ ಆಗಿಂದಾಗ್ಗೆ ಖಾತೆ ತೆರೆದು, ಡೆಬಿಟ್‌ಕಾರ್ಡ್ ಪಡೆದುಕೊಂಡು ಹೋಗಬಹುದು.

**ಸ್ವಸಹಾಯ ಬ್ಯಾಂಕ್:**

- ಈ ಶಾಖೆಗಳಿಗೆ ಸ್ವತಃ ಭೇಟಿ ನೀಡಬಹುದು. ಎಟಿಎಂಗಳು, ಕ್ಯಾಶ್ ಡಿಪಾಸಿಟ್ ಮೆಷಿನ್‌ಗಳು, ಸಂವಾದನೆಗೆ ಡಿಜಿಟಲ್ ವಾಲ್‌ಗಳ, ನೆಟ್ ಬ್ಯಾಂಕಿಂಗ್ ಕಿಯೋಸ್ಕ್‌ಗಳು ಇಲ್ಲಿ ಇರುತ್ತವೆ. ಬಹುತೇಕ ಸ್ವಯಂ ಸೇವೆ.
- ಉಳಿತಾಯ ಖಾತೆ ತೆರೆಯಬಹುದು. ಗ್ರಾಹಕರಿಗೆ ಡಿಜಿಟಲ್ ಕಿಟ್–ಮೊಬೈಲ್ ಬ್ಯಾಂಕಿಂಗ್, ಡೆಬಿಟ್ ಕಾರ್ಡ್, ಕ್ರೆಡಿಟ್ ಕಾರ್ಡ್ ಮತ್ತು ಎಂಟಿಎಸ್ ಕಾರ್ಡ್‌ಗಳನ್ನು ನೀಡಲಾಗುತ್ತದೆ.
- ಇಲ್ಲಿ ಬ್ಯಾಲೆನ್ಸ್ ಚೆಕ್, ಕೆವೈಸಿ ನವೀಕರಣ, ಪಾಸ್‌ಬುಕ್ ಪ್ರಿಂಟಿಂಗ್, ನೆಫ್ಟ್/ಐಎಂಪಿಎಸ್ ಅಡಿಯಲ್ಲಿ ಹಣವನ್ನು ವರ್ಗಾವಣೆ, ಎಫ್‌ಡಿಗಳಲ್ಲಿ ಹೂಡಿಕೆ ಮಾಡಬಹುದು. ಸಾಲದ ಅರ್ಜಿಗಳನ್ನು ಪಡೆಯಬಹುದು.
- ರಾಜ್ಯದ ಮಂಗಳೂರು ಮತ್ತು ಮೈಸೂರುಗಳಲ್ಲಿ ಕರ್ನಾಟಕ ಬ್ಯಾಂಕ್, ಬೆಂಗಳೂರು ಗ್ರಾಮಾಂತರ ಮತ್ತು ರಾಯಚೂರುಗಳಲ್ಲಿ ಕೆನರಾ ಬ್ಯಾಂಕ್ ಘಟಕಗಳು ಆರಂಭವಾಗಿವೆ.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:17.10.2022

## 9. ದೇಶದಲ್ಲಿ ಏಕರೂಪ ನಾಗರಿಕ ಸಂಹಿತೆ ಜಾರಿಗೊಳಿಸಲು ಕೇಂದ್ರ ಸರ್ಕಾರ ಒಲವು

'ಬೇರೆ ಬೇರೆ ಧರ್ಮದವರು ಆಸ್ತಿ, ವಿವಾಹಕ್ಕೆ ಸಂಬಂಧಿಸಿದಂತೆ ವಿವಿಧ ಕಾನೂನುಗಳನ್ನು ಪಾಲನೆ ಮಾಡುತ್ತಿರುವುದು ದೇಶದ ಏಕತೆಗೆ ಅಡ್ಡಿ ಮಾಡುತ್ತಿದೆ' ಎಂದು ಸುಪ್ರೀಂಕೋರ್ಟ್‌ನಲ್ಲಿ ಹೇಳಿರುವ ಕೇಂದ್ರ ಸರ್ಕಾರ, ದೇಶದಲ್ಲಿ ಏಕರೂಪ ನಾಗರಿಕ ಸಂಹಿತೆ (ಯುಸಿಸಿ) ಜಾರಿ ಅಗತ್ಯವನ್ನು ಪ್ರತಿಪಾದಿಸಿದೆ. ವಿವಾದಾತ್ಮಕ ವಿಷಯವಾಗಿರುವ ಸಂಹಿತೆ ಜಾರಿ ಕುರಿತು ಕೇಂದ್ರ ಸರ್ಕಾರ ಇದೇ ಮೊದಲ ಬಾರಿಗೆ ತನ್ನ ಮುಕ್ತ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ಕಾರಣ, ಇದು ಭಾರೀ ಮಹತ್ವ ಪಡೆದುಕೊಂಡಿದೆ.

ದೇಶದಲ್ಲಿ ಏಕರೂಪ ನಾಗರಿಕ ಸಂಹಿತೆ ಜಾರಿಗೆ ತರಲು ಸೂಚಿಸುವಂತೆ ಕೋರಿ ಹಿರಿಯ ವಕೀಲ ಅಶ್ವಿನಿ ಕುಮಾರ್ ಉಪಾಧ್ಯಾಯ ಸೇರಿ ಹಲವರು ಅರ್ಜಿ ಸಲ್ಲಿಸಿದ್ದರು. 'ವಿವಾಹ, ವಯಸ್ಸು, ವಿಚ್ಛೇದನಕ್ಕೆ ಕಾರಣವಾಗುವ ಅಂಶಗಳು, ಆಸ್ತಿ ಹಕ್ಕು, ದತ್ತು ಸ್ವೀಕಾರ, ಪೋಷಕತ್ವ, ನಿರ್ವಹಣೆ' ಮೊದಲಾದ ವಿಷಯದಲ್ಲಿ ಸಂಹಿತೆ ಜಾರಿ ಮಾಡಲು ಕೇಂದ್ರಕ್ಕೆ ಸೂಚಿಸುವಂತೆ ಕೋರಿದ್ದರು. ವಿಚಾರಣೆ ನಡೆಸಿದ್ದ ಸುಪ್ರೀಂಕೋರ್ಟ್, ಈ ಬಗ್ಗೆ ವಿಸ್ತೃತ ಪ್ರತಿಕ್ರಿಯೆ ನೀಡುವಂತೆ ಸರ್ಕಾರಕ್ಕೆ ಸೂಚಿಸಿತ್ತು.

**ಸಂಹಿತೆಗೆ ಕೇಂದ್ರ ಒಲವು–ಅಫಿಡವಿಟ್:** ಆ ಬಗ್ಗೆ ಇದೀಗ ಅಫಿಡವಿಟ್ ಸಲ್ಲಿಸಿರುವ ಕೇಂದ್ರ ಕಾನೂನು ಸಚಿವಾಲಯ, ದೇಶದಲ್ಲಿ ವಿವಿಧ ಧರ್ಮಕ್ಕೆ ಸೇರಿದ ಜನರು ಆಸ್ತಿ, ವಿವಾಹ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಕಾನೂನು ಪಾಲನೆ ಮಾಡುತ್ತಿರುವ ಕಾರಣ ದೇಶದ ಏಕತೆಗೆ ಅಡ್ಡಿಯಾಗಿದೆ. ಸಂವಿಧಾನದ 44ನೇ (ಏಕರೂಪ ನಾಗರಿಕ ಸಂಹಿತೆ) ವಿಧಿಯು, ಧರ್ಮಗಳನ್ನು ಸಾಮಾಜಿಕ ಸಂಬಂಧ ಮತ್ತು ವೈಯಕ್ತಿಕ ಕಾನೂನುಗಳಿಂದ ದೂರ ಇಡುತ್ತದೆ ಎನ್ನುವ ಮೂಲಕ ನೀತಿ ಸಂಹಿತೆ ಜಾರಿ ಪರವಾಗಿ ತಾನು ಇರುವ ಸುಳಿವು ನೀಡಿದೆ.

ಜೊತೆಗೆ, ರಾಜ್ಯ ನೀತಿಯ ನಿರ್ದೇಶನ ತತ್ವಗಳನ್ನು ಸಂವಿಧಾನದ 44ನೇ ವಿಧಿ ಜಾರಿಯ ಮೂಲಕ ದೇಶದ ಜನರನ್ನು ನಾಗರೀಕ ಸಂಹಿತೆ ಮೂಲಕ ಸುರಕ್ಷಿತಗೊಳಿಸುವ ಹೊಣೆಯನ್ನು

ಸರ್ಕಾರಗಳಿಗೆ ವಹಿಸಿದೆ. ಏಕರೂಪ ನಾಗರಿಕ ಸಂಹಿತೆಯ ವಿವಾಹ, ವಿಚ್ಛೇದನ, ನಿರ್ವಹಣೆ, ಮಕ್ಕಳ ಪಾಲನೆ ಮತ್ತು ಪೋಷಕರ, ಉತ್ತರದಾಯಿತ್ವ, ದತ್ತು ಸ್ವೀಕಾರದ ಅಂಶಗಳನ್ನು ಒಳಗೊಂಡಿದೆ. ಸಂವಿಧಾನದ 44ನೇ ವಿಧಿಯು ಸಂವಿಧಾನದ ಪೀಠಿಕೆಯಲ್ಲಿ ಹೇಳಲಾಗಿರುವ ಜಾತ್ಯತೀತ ಪ್ರಜಾಪ್ರಭುತ್ವ ಗಣರಾಜ್ಯದ ಗುರಿಯನ್ನು ಮತ್ತಷ್ಟು ಬಲಗೊಳಿಸುವ ಉದ್ದೇಶವನ್ನು ಹೊಂದಿದೆ. ಈ ವಿಧಿಯು, ಪ್ರಸಕ್ತ ವಿವಿಧ ವೈಯಕ್ತಿಕ ಕಾನೂನುಗಳನ್ನು ಪಾಲನೆ ಮಾಡುತ್ತಿರುವ ವಿವಿಧ ಸಮುದಾಯಗಳನ್ನು ಒಂದು ಮಾಡುವ ಅವಕಾಶವನ್ನು ಕಲ್ಪಿಸಿದೆ ಎಂದು ಕೇಂದ್ರ ಸರ್ಕಾರ ಅಫಿಡವಿಟ್‌ನಲ್ಲಿ ಹೇಳಿದೆ.

**ಆಕ್ಷೇಪ:** ಆದರೆ ಇದೇ ಅಫಿಡವಿಟ್‌ನಲ್ಲಿ ಕೇಂದ್ರ ಸರ್ಕಾರವು **'**ಈ ನೀತಿ ನಿರೂಪಣೆ ಸಂಪೂರ್ಣವಾಗಿ ಶಾಸಕಾಂಗದ ಹಕ್ಕು ಹೀಗಾಗಿ ಇಂಥ ಕಾನೂನು ಜಾರಿಮಾಡುವಂತೆ ಸಂಸತ್ತಿಗೆ ಆಜ್ಞೆ ನೀಡುವ ಹಕ್ಕು ನ್ಯಾಯಾಲಯಕ್ಕೆ ಇಲ್ಲ. ಹೀಗಾಗಿ ಕೇಂದ್ರಕ್ಕೆ ನಿರ್ದೇಶನ ನೀಡುವಂತೆ ಕೋರಿದ್ದ ಅರ್ಜಿಗಳನ್ನು ವಜಾ ಮಾಡಬೇಕು. ಏಕರೂಪ ನಾಗರಿಕ ಸಂಹಿತೆ ವಿಷಯದಲ್ಲಿ ಕಾನೂನು ಆಯೋಗ ನೀಡುವ ಶಿಫಾರಸ್ಸು ಆಧರಿಸಿ ಮುಂದುವರಿಯಲಾಗುವುದು' ಎಂದು ತಿಳಿಸಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:19.10.2022

## 10. ಮೋದಿ ಉದ್ಯೋಗಪರ್ವ ಶುರು

ದೇಶಾದ್ಯಂತ 10 ಲಕ್ಷ ಹುದ್ದೆಗಳಿಗೆ ನೇಮಕಾತಿ ನಡೆಸುವ ಮಹತ್ವಾಕಾಂಕ್ಷಿ ಯೋಜನೆಯ ಅಂಗವಾಗಿ 'ರೋಜ್ ಗಾರ್ ಮೇಳ'ಕ್ಕೆ ಚಾಲನೆ ನೀಡುವ ಮೂಲಕ ಪ್ರಧಾನಿ ನರೇಂದ್ರ ಮೋದಿ ಉದ್ಯೋಗಾಕಾಂಕ್ಷಿಗಳಿಗೆ ಭರ್ಜರಿ ದೀಪಾವಳಿ ಉಡುಗೊರೆ ನೀಡಿದ್ದಾರೆ. ಜೊತೆಗೆ 75,000 ಮಂದಿಗೆ ವಿವಿಧ ರಾಜ್ಯಗಳಲ್ಲಿ ನೇಮಕಾತಿ ಪತ್ರಗಳನ್ನೂ ವಿತರಿಸಲಾಗಿದೆ. ಕೇಂದ್ರ ಸರ್ಕಾರ ಹೊಸ ಉದ್ಯೋಗ ಸೃಷ್ಟಿಸುವಲ್ಲಿ ವಿಫಲವಾಗಿದ್ದು, ದೇಶದ ಯುವಕರಿಗೆ ಕೆಲಸ ಇಲ್ಲದಂತಾಗಿದೆ ಎಂದು ಕಾಂಗ್ರೆಸ್ ನಾಯಕರು ಭಾರತ್ ಜೋಡೋ ಯಾತ್ರೆಯಲ್ಲಿ ವಾಗ್ದಾಳಿ ನಡೆಸುತ್ತಿರುವ ಬೆನ್ನಲ್ಲೇ, ಇದಕ್ಕೆ ಪ್ರಧಾನಿ ಪ್ರಬಲ ತಿರುಗೇಟು ನೀಡಿದ್ದಾರೆ.

ಕೇಂದ್ರ ಸಶಸ್ತ್ರ ಪಡೆಗಳ ಸಿಬ್ಬಂದಿ, ಸಬ್ ಇನ್ಸ್‌ಪೆಕ್ಟರ್, ಕಾನ್ಸ್‌ಟೆಬಲ್, ಎಲ್‌ಡಿಸಿ, ಸ್ಟೆನೋಗ್ರಾಫರ್, ಸಹಾಯಕ ಸಿಬ್ಬಂದಿ, ಆದಾಯ ತೆರಿಗೆ ಇನ್ಸ್‌ಪೆಕ್ಟರ್ ಮತ್ತು ಎಂಟಿಎಸ್ ಹುದ್ದೆಗಳಿಗೆ ನೇಮಕಾತಿ ನಡೆಯಲಿದೆ. ನೇಮಕಾತಿಗಳನ್ನು ಇಲಾಖೆಗಳು ಸ್ವತಃ ಅಥವಾ ಯುಪಿಎಸ್‌ಸಿ, ಎಸ್‌ಎಸ್‌ಸಿ ಮತ್ತು ರೈಲ್ವೆ ನೇಮಕಾತಿ ಮಂಡಳಿಗಳ ಮೂಲಕ ನಡೆಸುತ್ತಿವೆ. ತ್ವರಿತ ನೇಮಕಾತಿಗಾಗಿ ಆಯ್ಕೆ ಪ್ರಕ್ರಿಯೆಗಳನ್ನು ಸರಳೀಕರಿಸಿ, ಆಧುನಿಕ ತಂತ್ರಜ್ಞಾನಗಳನ್ನು ಬಳಸಿಕೊಳ್ಳಲು ನಿರ್ಧರಿಸಲಾಗಿದೆ.

ಪ್ರಸ್ತುತ ಕೇಂದ್ರ ಸರ್ಕಾರದ 38 ಸಚಿವಾಲಯಗಳಲ್ಲಿ 75 ಸಾವಿರ ನೇಮಕಾತಿಗಳು ನಡೆದಿವೆ. ಈ ಹೊಸ ನೌಕರರು ಗ್ರೂಪ್ ಎ ಮತ್ತು ಬಿ (ಗೆಜೆಟೆಡ್), ಗ್ರೂಪ್ ಬಿ (ನಾನ್ ಗೆಜೆಟೆಡ್) ಮತ್ತು ಸಿ ಗುಂಪಿನಲ್ಲಿ ವಿವಿಧ ಹಂತಗಳಲ್ಲಿ ಕೆಲಸ ಮಾಡಲಿದ್ದಾರೆ. ಇನ್ನು ಕೆಲ ತಿಂಗಳಲ್ಲಿ ಖಾಲಿ ಇರುವ ಲಕ್ಷಗಟ್ಟಲೆ ಹುದ್ದೆಗಳಿಗೆ ಆಯ್ಕೆ ಪ್ರಕ್ರಿಯೆ ಪೂರ್ಣಗೊಳ್ಳಲಿದೆ.

**ಭ್ರಷ್ಟಾಚಾರರಹಿತ ಪ್ರಕ್ರಿಯೆ**

ಉದ್ಯೋಗ ಮೇಳಕ್ಕೆ ಚಾಲನೆ ನೀಡಿ ಮಾತನಾಡಿದ ಪ್ರಧಾನಿ ಮೋದಿ, ಇಂದು ಕೆಲಸದ ಸಂಸ್ಕೃತಿ ಬದಲಾಗುತ್ತಿದೆ. ದೇಶದ ಕರ್ಮಯೋಗಿಗಳ ಪ್ರಯತ್ನದಿಂದ ಸರ್ಕಾರಿ ಇಲಾಖೆಗಳ ದಕ್ಷತೆ ಹೆಚ್ಚಾಗಿದೆ. ಈ ಹಿಂದೆ ಸರ್ಕಾರಿ ಉದ್ಯೋಗಗಳಿಗೆ ಅರ್ಜಿ ಸಲ್ಲಿಸುವುದೇ ತೊಡಕಿನ ಪಕ್ರಿಯೆಯಾಗಿತ್ತು. ಮಿತಿಮೀರಿದ ಭ್ರಷ್ಟಾಚಾರಗಳಿದ್ದವು. ಬಿಜೆಪಿ ಸರ್ಕಾರ ಗ್ರೂಪ್ ಸಿ ಮತ್ತು ಗ್ರೂಪ್ ಡಿ ಹುದ್ದೆಗಳಿಗೆ ಸ್ವಯಂ ದೃಢೀಕರಣ ಮತ್ತು ಸಂದರ್ಶನ ಪ್ರಕ್ರಿಯೆ ರದ್ದುಗೊಳಿಸಿದೆ. ಇದರಿಂದ ಯುವಕರಿಗೆ ಸಹಾಯವಾಗಿದೆ. ಕರೋನಾ ನಂತರದ ಆರ್ಥಿಕ ಸಮಸ್ಯೆಗಳ ಹೊಡೆತದಿಂದ ಹೊರಬರುವ ನಿಟ್ಟಿನಲ್ಲಿ ಸರ್ಕಾರ ಕೆಲಸ ಮಾಡುತ್ತಿದೆ. ಯುವಜನರಿಗೆ ಗರಿಷ್ಠ ಉದ್ಯೋಗಾವಕಾಶಗಳನ್ನು ಸೃಷ್ಟಿಸಲು ಸರ್ಕಾರ ಅನೇಕ ರಂಗಗಳಲ್ಲಿ ಕೆಲಸ

ಮಾಡುತ್ತಿದೆ ಎಂದು ವಿವರಿಸಿದರು. ಇನ್ನೊಂದೆಡೆ, ಮಧ್ಯಪ್ರದೇಶದಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆಯ (ಪಿಎಂಎವೈ) 4.5 ಲಕ್ಷ ಫಲಾನುಭವಿಗಳ 'ಗೃಹಪ್ರವೇಶ' ಕಾರ್ಯಕ್ರಮದಲ್ಲಿ ಪ್ರಧಾನಿ ಮೋದಿ ವಿಡಿಯೋ ಕಾನ್ಫರೆನ್ಸ್ ಮೂಲಕ ಭಾಗವಹಿಸಿದರು.

**ರಾಜ್ಯಕ್ಕೆ ಸಾವಿರ ಹುದ್ದೆ**

ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳ ಉದ್ಯೋಗ ಭರ್ತಿ, ಸ್ವಯಂ ಉದ್ಯೋಗ ಸೃಜನೆ ಪರ್ವವು ವರ್ಷಪೂರ್ತಿ ನಡೆಯಲಿದೆ ಎಂದು ಕೇಂದ್ರ ಸಂಸದೀಯ ವ್ಯವಹಾರಗಳು, ಗಣಿ, ಕಲ್ಲಿದ್ದಲು ಸಚಿವ ಪ್ರಲ್ಹಾದ ಜೋಶಿ ಹೇಳಿದರು.

ಬೆಂಗಳೂರಿನ ಜ್ಞಾನಜ್ಯೋತಿ ಸಭಾಂಗಣದಲ್ಲಿ ಅಂಚೆ ಇಲಾಖೆ, ಕರ್ನಾಟಕ ವೃತ್ತ ಆಯೋಜಿಸಿದ್ದ ಉದ್ಯೋಗ ಮೇಳ ಕಾರ್ಯಕ್ರಮದಲ್ಲಿ ಕೇಂದ್ರದ 17 ಇಲಾಖೆಗಳಿಗೆ ಆಯ್ಕೆಯಾದ 28 ಅಭ್ಯರ್ಥಿಗಳಿಗೆ ನೇಮಕಪತ್ರ ವಿತರಿಸಿ ಮಾತನಾಡಿದರು.

ರಕ್ಷಣೆ, ಸಿಆರ್‌ಪಿಎಫ್, ರೈಲ್ವೆ, ಬ್ಯಾಂಕ್, ಅಂಚೆ, ಆದಾಯ ತೆರಿಗೆ, ಇಎಸ್‌ಐಸಿ, ಇಸ್ರೋ ಸೇರಿ ಕೇಂದ್ರ ವಿವಿಧ ಇಲಾಖೆಗಳ ನೌಕರಿ ಪಡೆದುಕೊಂಡಿದ್ದು, ಈ ಪೈಕಿ ಕರ್ನಾಟಕದ ಒಂದು ಸಾವಿರ ಉದ್ಯೋಗಿಗಳಿದ್ದಾರೆ. ಪ್ರತಿಭೆ, ಸಾಮರ್ಥ್ಯ, ಕೌಶಲವುಳ್ಳ ಯುವಜನತೆ ಉದ್ಯೋಗ ಕೇಳಬಾರದು, ಉದ್ಯೋಗದಾತರಾಗಬೇಕು ಎನ್ನುವುದು ಮೋದಿ ಅಪೇಕ್ಷೆಯಾಗಿದೆ. ಈ ನಿಟ್ಟಿನಲ್ಲಿ ಡಿಜಿಟಲ್ ಇಂಡಿಯಾ, ಮೇಕ್ ಇನ್ ಇಂಡಿಯಾ, ಆತ್ಮನಿರ್ಭರ್ ಭಾರತ ಪರಿಕಲ್ಪನೆಯಡಿ ಹತ್ತಾರು ಉಪಕ್ರಮಗಳನ್ನು ಕೈಗೊಂಡಿದ್ದಾರೆ ಎಂದು ಮಾಹಿತಿ ನೀಡಿದರು.

**ಅಭಿವೃದ್ಧಿಯತ್ತ ಈ ದಾಪುಗಾಲು**

ಕಾಂಗ್ರೆಸ್ ನೇತೃತ್ವದ ಯುಪಿಎ ಆಡಳಿತಾವಧಿಯಲ್ಲಿ ಇಡೀ ದೇಶ ವಿದ್ಯುತ್ ಕೊರತೆಗೆ ತಲ್ಲಣಿಸಿ, ಅಭಿವೃದ್ಧಿ ಮೇಲೆ ದುಷ್ಪರಿಣಾಮ ಬೀರಿತ್ತು. ಆದರೆ ಕಳೆದ ಎಂಟು ವರ್ಷದಲ್ಲಿ ದೇಶ ವಿದ್ಯುತ್ ಕೊರತೆಯಿಂದ ಮಿಗತೆಯತ್ತ ದಾಪುಗಾಲಿಟ್ಟಿದೆ. ಅಭಿವೃದ್ಧಿ ಯೋಜನೆಗಳಿಗೂ ಹೊಸ ಆಯಾಮ ನೀಡಿದೆ ಎಂದು ಸಚಿವ ಜೋಶಿ ಹೇಳಿದರು.

ಆಧಾರ: ವಿಜಯವಾಣಿ, ದಿನಾಂಕ: 23.10.2022

## 11. ಒಂದು ರಾಷ್ಟ್ರ ಒಂದು ಸಮವಸ್ತ್ರ

ದೇಶಾದ್ಯಂತ ಪೊಲೀಸರಿಗೆ ಏಕರೂಪದ ಸಮವಸ್ತ್ರಕ್ಕೆ ಪ್ರಧಾನಿ ನರೇಂದ್ರ ಮೋದಿ ಸಲಹೆ ನೀಡಿದ್ದು, 'ಒಂದು ರಾಷ್ಟ್ರ ಒಂದು ಸಮವಸ್ತ್ರ' ಎಂಬುದು ನನ್ನ ಪರಿಕಲ್ಪನೆ. ಆದರೆ, ಇದು ಹೇರಿಕೆಯಲ್ಲ. ಈ ಸಲಹೆ ಬಗ್ಗೆ ರಾಜ್ಯ ಸರ್ಕಾರಗಳು ಚಿಂತನೆ ನಡೆಸಬೇಕು ಎಂದಿದ್ದಾರೆ.

ಹರಿಯಾಣದ ಸೂರಜ್‌ಕುಂಡ್‌ನಲ್ಲಿ ನಡೆಯುತ್ತಿರುವ ರಾಜ್ಯಗಳ ಗೃಹ ಸಚಿವರ ಚಿಂತನಾ ಶಿಬಿರದಲ್ಲಿ ವಿಡಿಯೋ ಕಾನ್ಸರೆನ್ಸ್ ಮೂಲಕ ಮಾತನಾಡಿದ ಅವರು, 'ರಾಷ್ಟ್ರವ್ಯಾಪಿಯಾಗಿ ಪೊಲೀಸರ ಗುರುತು ಏಕರೀತಿಯಲ್ಲಿ ಇರಬೇಕು ಎಂಬ ಚಿಂತನೆ ನನ್ನದು. ಇದು ಐದು, 50 ಅಥವಾ 100 ವರ್ಷದಲ್ಲಿ ಸಾಕಾರ ಆಗಬಹುದು. ಆದರೆ, ಈ ಬಗ್ಗೆ ಗಂಭೀರ ಚಿಂತನೆ ಅಗತ್ಯ' ಎಂದರು. 'ಅಪರಾಧ ಮತ್ತು ಅಪರಾಧಿಗಳನ್ನು ಪತ್ತೆ ಮಾಡಲು ರಾಜ್ಯಗಳ ನಡುವೆ ನಿಕಟ ಸಹಕಾರ ಇರುವುದು ಒಳ್ಳೆಯದು. ಒಕ್ಕೂಟ ವ್ಯವಸ್ಥೆಯಲ್ಲಿ ಸಹಕಾರ ಎಂಬುದು ಸಂವಿಧಾನದ ಆಶಯ ಮಾತ್ರವಲ್ಲದೆ ಕೇಂದ್ರ ಹಾಗೂ ರಾಜ್ಯಗಳ ಜವಾಬ್ದಾರಿ ಆಗಿದೆ' ಎಂದು ಹೇಳಿದರು. 'ಸಂವಿಧಾನದ ಪ್ರಕಾರ, ಕಾನೂನು ಸುವ್ಯವಸ್ಥೆಯು ರಾಜ್ಯಗಳ ಪಟ್ಟಿಯಲ್ಲಿದೆ. ಆದರೆ, ದೇಶದ ಏಕತೆಗೆ ಮತ್ತು ಸಮಗ್ರತೆಗೆ ಇದು ಸಂಬಂಧಿಸಿದ್ದಾಗಿದೆ. ಆದ್ದರಿಂದ ಪ್ರತಿಯೊಂದು ರಾಜ್ಯವು ಪರಸ್ಪರ ಸ್ಫೂರ್ತಿಯಿಂದ ದೇಶದ ಆಂತರಿಕ ಭದ್ರತೆಗಾಗಿ, ಶ್ರೀಸಾಮಾನ್ಯನ ಕಲ್ಯಾಣಕ್ಕಾಗಿ, ಕರ್ತವ್ಯದಲ್ಲಿನ ದಕ್ಷತೆಗಾಗಿ ಉತ್ತಮ ಫಲದ ನಿರೀಕ್ಷೆಗಾಗಿ ಶ್ರಮಿಸಬೇಕು. ದೇಶದ ಭದ್ರತೆಗಾಗಿ

ಶ್ರಮಿಸುವುದು ಸಂವಿಧಾನಬದ್ಧ ಕಡ್ಡಾಯ ಕರ್ತವ್ಯ ಮತ್ತು ದೇಶಕ್ಕಾಗಿ ಪ್ರತಿಯೊಬ್ಬರ ಹೊಣೆಗಾರಿಕೆಯೂ ಆಗಿದೆ' ಎಂದರು.

**ಸುಳ್ಳುಸುದ್ದಿ ಪರಿಶೀಲನೆಗೆ ಜಾಗೃತಿ**

ಸುಳ್ಳು ಸುದ್ದಿಗಳನ್ನು ಒರೆಗೆ ಹಚ್ಚಿ ಸತ್ಯಾಂಶವನ್ನು ಪರಿಶೀಲಿಸಲೇಬೇಕು (ಫ್ಯಾಕ್ಟ್ ಚೆಕ್). ಇಲ್ಲದಿದ್ದರೆ ಸಣ್ಣ ನಕಲಿ ಸುದ್ದಿಯೂ ದೇಶದಲ್ಲಿ ದೊಡ್ಡ ಗಂಡಾಂತರಕ್ಕೆ ಕಾರಣವಾಗಬಹುದು. ನಕಲಿ ಸುದ್ದಿ ಪತ್ತೆ ಮಾಡುವಲ್ಲಿ ತಂತ್ರಜ್ಞಾನ ಮಹತ್ವದ ಪಾತ್ರವಹಿಸುತ್ತದೆ. ಸಾಮಾಜಿಕ ಜಾಲತಾಣಗಳಲ್ಲಿ ಮಾಹಿತಿಯನ್ನು ಫಾರ್ವರ್ಡ್ ಮಾಡುವ ಮುನ್ನ ಅದರ ಅಸಲಿಯತ್ತನ್ನು ಖಾತ್ರಿ ಮಾಡಿಕೊಳ್ಳುವ ತಂತ್ರಜ್ಞಾನದ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವ ಕಾರ್ಯ ಆಗಬೇಕು ಎಂದು ಮೋದಿ ಹೇಳಿದರು. ನಾಗರಿಕರ ಸುರಕ್ಷತೆ ಮತ್ತು ಅವರ ಹಕ್ಕುಗಳ ರಕ್ಷಣೆಗಾಗಿ ನಕಾರಾತ್ಮಕ ಶಕ್ತಿಗಳ ವಿರುದ್ಧ ಕಠಿಣ ಕ್ರಮ ಜರುಗಿಸುವುದು ಸರ್ಕಾರದ ಜವಾಬ್ದಾರಿ. ಆದ್ದರಿಂದ ಸಾಮಾಜಿಕ ಜಾಲತಾಣದ ಬಳಕೆದಾರರನ್ನು ಎಚ್ಚರಿಸುವ ಕಾರ್ಯ ನಡೆಯಬೇಕು ಎಂದರು. ಈಗ ಅಪರಾಧದ ಸ್ವರೂಪಗಳು ಬದಲಾಗುತ್ತಿವೆ. 5ಜಿ ಯುಗಕ್ಕೆ ಕಾಲಿಟ್ಟಿದ್ದೇವೆ. ಹೀಗಾಗಿ ಹೆಚ್ಚೆಚ್ಚು ನಿಗಾವಣೆ ಅಗತ್ಯ. 5ಜಿಯಿಂದ ಮುಖ ಚಹರೆ ಗುರುತಿಸುವಿಕೆಯಲ್ಲಿ (ಫೇಶಿಯಲ್ ರೆಕಗ್ನಿಷನ್) ಹಲವು ಸುಧಾರಣೆ ಆಗಿದೆ. ನಂಬರ್ ಪ್ಲೇಟ್ ಗುರುತಿಸುವಿಕೆಯ ತಂತ್ರಜ್ಞಾನ ಸ್ವಯಂಚಾಲಿತಗೊಂಡಿದೆ. ಡ್ರೋನ್ ಮತ್ತು ಸಿಸಿಟಿವಿ ಕ್ಯಾಮೆರಾ ತಂತ್ರಜ್ಞಾನಗಳು ಬಲಗೊಂಡಿವೆ. ಇದರೊಟ್ಟಿಗೆ ಸುಧಾರಿತ ತಂತ್ರಜ್ಞಾನದ ಅಪಬಳಕೆಯಿಂದ ಅಪರಾದಗಳೂ ಬಿನ್ನವಾಗುತಿವೆ ಎಂದು ಹೇಳಿದರು.

**ಅಮೃತ್ ಪೀಠಿ**

ನಕ್ಸಲ್‌ವಾದವನ್ನು ಗನ್ ಮತ್ತು ಪೆನ್ (ಲೇಖನಿ) ನಿಂದ ಮೂಲೋತ್ಪಾಟನೆ ಮಾಡಲು 'ಪಂಚ ಪ್ರಾಣ'ದ (ಅಭಿವೃದ್ಧಿ ಭಾರತದ ನಿರ್ಮಾಣ, ಎಲ್ಲ ವಸಾಹತುಶಾಹಿ ಮನಸ್ಥಿತಿಯಿಂದ ಸ್ವಾತಂತ್ರ್ಯ, ಪರಂಪರೆಯ ಬಗ್ಗೆ ಹೆಮ್ಮೆ ಏಕತೆ ಮತ್ತು ನಾಗರಿಕ ಕರ್ತವ್ಯ) ನಿರ್ಣಯದಂತೆ 'ಅಮೃತ್ ಪೀಠಿ' ರಚಿಸುವ ಜರೂರು ಇದೆ. ಮುಂದಿನ 25 ವರ್ಷಗಳು ಈ 'ಅಮೃತ್ ಪೀಠಿ'ಯ ರಚನೆಗಾಗಿಯೇ ಮೀಸಲಿರುತ್ತದೆ ಎಂದು ಪ್ರಧಾನಿ ಮೋದಿ ತಿಳಿಸಿದರು.

**ಸ್ಮಾರ್ಟ್ ಕಾನೂನು**

ಹಳೆಯ ಕಾನೂನುಗಳನ್ನು ಪರಾಮರ್ಶಿಸಿ ಅವುಗಳನ್ನು ಪ್ರಚಲಿತ ಸನ್ನಿವೇಶಕ್ಕೆ ತಕ್ಕಂತೆ ತಿದ್ದುಪಡಿ ಮಾಡಬೇಕು. ಕಾನೂನು ಸುವವ್ಯಸ್ಥೆ ಮತ್ತು ಭದ್ರತೆಯಲ್ಲಿ ಎದುರಾಗುವ ಸವಾಲುಗಳನ್ನು ಸ್ಮಾರ್ಟ್ ಕಾನೂನು ಮತ್ತು ಸುಧಾರಿತ ತಂತ್ರಜ್ಞಾನದ ಸಹಕಾರದಿಂದ ನಿಭಾಯಿಸಲು ಸಾಧ್ಯ ಎಂದು ಮೋದಿ ಸಲಹೆ ನೀಡಿದರು. ಪೊಲೀಸ್ ವ್ಯವಸ್ಥೆಗೆ ಅಗತ್ಯವಾದ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವಾಗ ಖರ್ಚಿನ ಬಗ್ಗೆ ಸರ್ಕಾರಗಳು ಹಿಂದುಮುಂದು ನೋಡಬಾರದು. ಏಕೆಂದರೆ ಈ ಹೊತ್ತಿನ ತಂತಜ್ಞಾನದ ಮೇಲಿನ ಹೂಡಿಕೆಯು ಭವಿಷ್ಯದಲ್ಲಾಗುವ ಉಳಿತಾಯ ಎಂದರು.

**ಅನುಪಯುಕ್ತ ಕಸರತ್ತು**

ಏಕರೀತಿಯ ಸಮವಸ್ತ್ರವು ಕಾರ್ಯಸಾಧುವಲ್ಲ. ಈಶಾನ್ಯ ರಾಜ್ಯಗಳಲ್ಲಿ ಚಳಿ ಹೆಚ್ಚು, ರಾಜಸ್ಥಾನ ಬಿಸಿಲು ನಾಡು, ದಕ್ಷಿಣದ ರಾಜ್ಯಗಳಲ್ಲಿ ಆರ್ದ್ರತೆ. ಹೀಗಿರುವಾಗ ದೇಶಾದ್ಯಂತ ಒಂದೇ ತರಹದ ಸಮವಸ್ತ್ರ ಹೇಗೆ ಸಾಧ್ಯ? ಮೇಲಾಗಿ ಸಮವಸ್ತ್ರವು ಪ್ರತಿಯೊಂದು ಪಡೆಗಳ ಹೆಗ್ಗುರುತು. ಆದ್ದರಿಂದ ಒಂದೇ ರೀತಿಯ ಸಮವಸ್ತ್ರ ಎಂಬುದು ಅನುಪಯುಕ್ತ ಕಸರತ್ತು ಎಂದು ಹಿರಿಯ ಪೊಲೀಸ್ ಮಹಾನಿರ್ದೇಶಕರೊಬ್ಬರು ಹೇಳಿದ್ದಾರೆ.

ಪೊಲೀಸ್ ಠಾಣೆಗಳ ಮಧ್ಯೆ ಸಹಕಾರ ಏರ್ಪಟ್ಟರೆ ಪೊಲೀಸರ ದಕ್ಷತೆ ಸುಧಾರಿಸುತ್ತದೆ ಮತ್ತು ಕಾನೂನು ಸುವ್ಯವಸ್ಥೆ ಬಲಗೊಳ್ಳುತ್ತದೆ. ಇದೇ ರೀತಿಯ ಸಹಕಾರ ರಾಜ್ಯಗಳ ಮಧ್ಯೆ, ಕೇಂದ್ರ ಮತ್ತು

ರಾಜ್ಯಗಳ ಮಧ್ಯೆ ಏರ್ಪಡಬೇಕು. ಪೊಲೀಸ್ ಇಲಾಖೆಯಲ್ಲಿ ತಂತ್ರಜ್ಞಾನ ಆಧರಿತ ಸುಧಾರಣೆಗಳು ಆಗಬೇಕು ಎಂದು ಪ್ರಧಾನಿ ತಿಳಿಸಿದರು.

ಆಧಾರ: ವಿಜಯವಾಣಿ, ದಿನಾಂಕ: 29.10.2022

## 12. Murmu to visit MP as chief guest on Tribal Pride Day

PRESIDENT Droupadi Murmu will be on a two-day visit to BJP-ruled Madhya Pradesh.

She will be the chief guest at the state level programme to mark Janjatiya Gaurav Diwas (Tribal Pride Day) marking the birth anniversary of tribal hero of the country's freedom movement Birsa Munda. The state's chief minister Shivraj Singh Chouhan will announce the implementation of PESA Act in the state in the interest of the tribal population of the state, whose 22% population is from the tribal segment.

This will be President Droupadi Murmu's first visit to the central Indian state, since becoming the president of the country, in July 2022.

Prior to this she had come to Bhopal in July to campaign as NDA's presidential poll candidate. After gracing the Janjatiya Gaurav Diwas's state level event in Shahdol district, the President will fly to Bhopal to lay foundation of slew of government projects (via virtual mode), including the four-laning of Ratapani-Obedullaganj-Itarsi road and new laboratory of Defence Research Development. Establishment (DRDE) Gwalior.

She will also grace the gathering of representatives of women self-help groups in Bhopal.

Courtesy: Indian Express, Dated: 15.11.2022

## 13. ಯುದ್ಧ ಕೊನೆಗಾಣಿಸಲು ಒಗ್ಗಟ್ಟಿನ ಮಂತ್ರ

ಕೋವಿಡ್ ಸಂಕಷ್ಟದಿಂದ ಜಗತ್ತು ಚೇತರಿಸಿಕೊಳ್ಳುತ್ತಿರುವ ಹೊತ್ತಿನಲ್ಲಿಯೇ ಶುರುವಾದ ರಷ್ಯಾ–ಉಕ್ರೇನ್ ಯುದ್ಧವು ಜಾಗತಿಕ ಸಮುದಾಯದ ಮೇಲೆ ಅತ್ಯಂತ ಕೆಟ್ಟ ಪರಿಣಾಮ ಬೀರಿದೆ. ಕದನ ವಿರಾಮ ಹಾಗೂ ರಾಜತಾಂತ್ರಿಕ ಮಾರ್ಗಗಳ ಮೂಲಕ ಯುದ್ಧ ಕೊನೆಗಾಣಿಸುವಂತೆ ರಷ್ಯಾ ಮತ್ತು ಉಕ್ರೇನ್ ಮನವೊಲಿಕೆಗೆ ಇಡೀ ಜಗತ್ತು ಒಗ್ಗಟ್ಟು ಪ್ರದರ್ಶಿಸುವ ಅಗತ್ಯವನ್ನು ಪ್ರಧಾನಿ ವಿಶ್ವಸಮುದಾಯದ ಮುಂದೆ ಪ್ರತಿಪಾದಿಸಿದರು.

ಇಂಡೋನೇಷ್ಯಾದ ಬಾಲಿಯಲ್ಲಿ ನಡೆಯುತ್ತಿರುವ 17ನೇ ಆವೃತ್ತಿಯ ಜಿ–20 ಶೃಂಗಸಭೆಯಲ್ಲಿ ಮೋದಿ ಅವರು ಉಕ್ರೇನ್ ಸಂಘರ್ಷದಲ್ಲಿ ಉದ್ಭವಿಸಿದ ಜಾಗತಿಕ ಸವಾಲುಗಳ ಪರಿಹಾರಕ್ಕೆ ವಿಶ್ವ ಸಮುದಾಯದ ಒಗ್ಗಟ್ಟಿನ ಹೋರಾಟದ ಅಗತ್ಯವಿದೆ ಎಂದರು.

"ವಿಶ್ವದಲ್ಲಿ ಯುದ್ಧದಿಂದ ಸಮಸ್ಯೆಗಳನ್ನು ಪರಿಹರಿಸಿಕೊಂಡ ಉದಾಹರಣೆಯಿಲ್ಲ. ಇಂದಿನ ಯುಗವು ಯುದ್ಧಕ್ಕೆ ಹೇಳಿ ಮಾಡಿಸಿದ್ದಲ್ಲ. ಮುಕ್ತ ವಾಣಿಜ್ಯ ವಹಿವಾಟು ಮೂಲಕ ಇಡೀ ಜಗತ್ತು ಬೆಸೆದುಕೊಂಡಿದೆ. ಇಂತಹ ಹೊತ್ತಲ್ಲಿ ಯುದ್ಧದ ಮೂಲಕ ಪರಿಹಾರ ಕಂಡುಕೊಳ್ಳುತ್ತೇನೆ ಎಂಬುದು ದಡ್ಡತನವೆನಿಸುತ್ತದೆ. ಎರಡನೇ ವಿಶ್ವಯುದ್ಧ ಇಡೀ ಜಗತ್ತನ್ನು ವಿನಾಶದ ಅಂಚಿನತ್ತ ತಳ್ಳಿದ್ದನ್ನು ನಾವೆಲ್ಲರೂ

ಬಲ್ಲೆವು. ಆ ನಂತರ ಅಂದಿನ ನಾಯಕರು ಶಾಂತಿ ಸಂಧಾನ ಮಾರ್ಗಗಳ ಮೊರೆ ಹೋಗಿದ್ದರು. ಅಂತಹದ್ದೇ ಶಾಂತಿ ಮಾರ್ಗವನ್ನು ಕಂಡುಕೊಳ್ಳುವುದು ಈಗ ನಮ್ಮ ಸರದಿಯಾಗಿದೆ," ಎಂದರು.

**ಸುಸ್ಥಿರ ಇಂಧನ**: ಹವಾಮಾನ ವೈಪರೀತ್ಯ, ಕೋವಿಡ್ ಸಾಂಕ್ರಾಮಿಕ, ಜಾಗತಿಕ ಪೂರೈಕೆ ವ್ಯವಸ್ಥೆ ಮೇಲೆ ಅವು ಬೀರಿದ ಪರಿಣಾಮಗಳ ಕುರಿತು ಮೋದಿ ಮಾತನಾಡಿದರು. ಇಂಧನ ಸುಸ್ಥಿರತೆ ಬಗ್ಗೆಯೂ ಬೆಳಕು ಚೆಲ್ಲಿದರು. ಶುದ್ಧ ಇಂಧನ ಮತ್ತು ಪರಿಸರ ಸಂರಕ್ಷಣೆಗೆ ಭಾರತ ಬದ್ಧವಾಗಿದೆ ಎಂದರು. "ಜಾಗತಿಕ ಬೆಳವಣಿಗೆಗೆ ಭಾರತದ ಇಂಧನ ಭದ್ರತೆಯೂ ಮುಖ್ಯವಾಗಿದೆ. ಇಂಧನ ಮಾರುಕಟ್ಟೆಯಲ್ಲಿ ಸ್ಥಿರತೆ ಕಾಯ್ದುಕೊಳ್ಳಬೇಕಿದೆ. 2030ರ ವೇಳೆಗೆ, ನಮ್ಮ ಅರ್ಧದಷ್ಟು ವಿದ್ಯುತ್ ಬೇಡಿಕೆಯನ್ನು ನವೀಕರಿಸಬಹುದಾದ ಮೂಲಗಳಿಂದ ಉತ್ಪಾದಿಸಲಾಗುತ್ತದೆ. ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಕೈಗೆಟುಕುವ ತಂತ್ರಜ್ಞಾನ ಸುಸ್ಥಿರ ಪೂರೈಕೆ ಅತ್ಯಗತ್ಯ,' ಎಂದರು.

**ಆಹಾರ ಭದ್ರತೆ ಅವಶ್ಯ**: "ಇಂದು ರಸಗೊಬ್ಬರ ಕೊರತೆ ಕಂಡುಬಂದರೆ ಮುಂದಿನ ದಿನಗಳಲ್ಲಿ ಜಾಗತಿಕ ಆಹಾರ ಬಿಕ್ಕಟ್ಟು ಎದುರಾಗಬಹುದು. ಈ ಸಮಸ್ಯೆಗೆ ಪರಿಹಾರ ಎಂಬುದಿಲ್ಲ. ಗೊಬ್ಬರ ಮತ್ತು ಆಹಾರ ಧಾನ್ಯಗಳ ಪೂರೈಕೆ ಸರಪಳಿಯನ್ನು ಸ್ಥಿರ ಹಾಗೂ ಭದ್ರತೆಯಿಂದ ನಿರ್ವಹಿಸಲು ನಾವು ಪರಸ್ಪರ ಒಪ್ಪಂದವನ್ನು ಮಾಡಿಕೊಳ್ಳಬೇಕಿದೆ," ಎಂದು ಹೇಳಿದರು.

**ಹಲವು ವಲಯಗಳಲ್ಲಿ ಭಾರತ ನಂ.1**: 2014ರ ಪೂರ್ವ ಮತ್ತು 2014ರ ನಂತರದ ಭಾರತ ಮಧ್ಯೆ ಭಾರಿ ವ್ಯತ್ಯಾಸವಿದೆ. ದೇಶವಿಂದು ಅಭೂತಪೂರ್ವ ವೇಗದೊಂದಿಗೆ ಅಭಿವೃದ್ಧಿ ಹೊಂದುತ್ತಿದೆ. ಬೃಹತ್ ಆರ್ಥಿಕತೆಯೊಂದಿಗೆ ಹಲವು ವಲಯಗಳಲ್ಲಿ ಮುಂಚೂಣಿ ಸ್ಥಾನದಲ್ಲಿದೆ ಎಂದು ಪ್ರಧಾನಿ ಹೇಳಿದರು. ಬಾಲಿಯಲ್ಲಿ ಭಾರತೀಯ ಸಮುದಾಯವನ್ನು ಉದ್ದೇಶಿಸಿ ಮಾತನಾಡಿದ ಮೋದಿ, "21ನೇ ಶತಮಾನದಲ್ಲಿ ಭಾರತವು ಜಗತ್ತಿನ ಭರವಸೆಯ ಆಶಾಕಿರಣವಾಗಿದೆ," ಎಂದು ಬಣ್ಣಿಸಿದರು. "ಭಾರತವಿಂದು ವಿಶ್ವದಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಬೃಹತ್ ಆರ್ಥಿಕತೆ ಹೊಂದಿದ ರಾಷ್ಟ್ರವಾಗಿ ಹೊರಹೊಮ್ಮಿದೆ. ಡಿಜಿಟಲ್ ವಹಿವಾಟು, ಜಾಗತಿಕ ಮಟ್ಟದ ಫಿನ್‌ಟೆಕ್ (ಹಣಕಾಸು ತಂತ್ರಜ್ಞಾನ ಸಂಸ್ಥೆಗಳು), ಐಟಿ ಹೊರಗುತ್ತಿಗೆ, ಸ್ಮಾರ್ಟ್‌ಫೋನ್ ಡೇಟಾ ಬಳಕೆ ಮತ್ತು ಲಸಿಕೆ ತಯಾರಿಕೆಯಲ್ಲಿ ಇಂಡಿಯಾ ನಂ.1 ಆಗಿದೆ," ಎಂದರು.

**ಜಾಗತಿಕ ನಾಯಕರಿಗೆ ಆಹ್ವಾನ**: ಭಾರತವು ಡಿಸೆಂಬರ್ 1 ರಂದು ಜಿ–20 ಒಕ್ಕೂಟದ ಅಧ್ಯಕ್ಷತೆ ವಹಿಸಿಕೊಳ್ಳಲಿದ್ದು, 2023ನೇ ಸಾಲಿನ ಶೃಂಗಸಭೆಯು ಭಾರತದ ಅಧ್ಯಕ್ಷತೆಯಲ್ಲಿ ನಡೆಯಲಿದೆ. 'ವಸುಧೈವ ಕುಟುಂಬಕಂ' ಪರಿಕಲ್ಪನೆಯೊಂದಿಗೆ ಮುಂದಿನ ಶೃಂಗ ನಡೆಯಲಿದೆ. ಮೋದಿ ಅವರು 'ಬಾಲಿ'ಯ ವೇದಿಕೆ ಮೂಲಕ 2023ನೇ ಶೃಂಗಸಭೆಯಲ್ಲಿ ಪಾಲ್ಗೊಳ್ಳುವಂತೆ ಸದಸ್ಯ ರಾಷ್ಟ್ರದ ಮುಖ್ಯಸ್ಥರುಗಳಿಗೆ ಆಹ್ವಾನ ನೀಡಿದರು.

**ಮೋದಿ–ಜಿನ್‌ಪಿಂಗ್ ಕುಶಲೋಪರಿ**: ವಿಶ್ವನಾಯಕರಿಗೆ ಆಯೋಜಿಸಲಾಗಿದ್ದ ಭೋಜನಕೂಟದಲ್ಲಿ ಪ್ರಧಾನಿ ಹಾಗೂ ಚೀನಾ ಅಧ್ಯಕ್ಷರು ಪರಸ್ಪರ ಹಸ್ತಲಾಘವ ಮಾಡಿ, ಕುಶಲೋಪರಿ ವಿಚಾರಿಸಿದರು. 2020ರ ಗಲ್ವಾನ್ ಕಣಿವೆ ಸಂಘರ್ಷದ ನಂತರ ಉಭಯ ನಾಯಕರು ಲವಲವಿಕೆಯಿಂದ ಕಾಣಿಸಿಕೊಂಡಿರುವುದು ಇದೇ ಮೊದಲು.

**ಸಿರಿಧಾನ್ಯಗಳ ಉತ್ತೇಜನಕ್ಕೆ ಒತ್ತು**: ಭಾರತದಲ್ಲಿ ಸುಸ್ಥಿರ ಆಹಾರ ಭದ್ರತೆಗಾಗಿ ನಾವು ನೈಸರ್ಗಿಕ ಕೃಷಿಯನ್ನು ಉತ್ತೇಜಿಸುತ್ತಿದ್ದೇವೆ. ರಾಗಿ, ನವಣೆಯಂತಹ ಪೌಷ್ಟಿಕ ಸಾಂಪ್ರದಾಯಿಕ ಆಹಾರ ಧಾನ್ಯಗಳನ್ನು ಜನಪ್ರಿಯಗೊಳಿಸುತಿದ್ದೇವೆ. ಸಿರಿಧಾನ್ಯ, 'ರಾಗಿ' ಜಾಗತಿಕ ಅಪೌಷ್ಟಿಕತೆ ಮತ್ತು ಹಸಿವನ್ನು ಪರಿಹರಿಸಬಲ್ಲದು. ನಾವೆಲ್ಲರೂ ಅಂತರರಾಷ್ಟ್ರೀಯ ಸಿರಿಧಾನ್ಯಗಳ ವರ್ಷವನ್ನು ಮುಂದಿನ ವರ್ಷ ಅತ್ಯಂತ ಉತ್ಸಾಹದಿಂದ ಆಚರಿಸಬೇಕು ಎಂದು ಮೋದಿ ಅವರು ಶೃಂಗಸಭೆಯಲ್ಲಿ ಜಾಗತಿಕ ನಾಯಕರಿಗೆ ಕರೆ ನೀಡಿದರು.

**ವಿಶ್ವನಾಯಕನಾಗಿ ಮಿಂಚಿದ ನಮೋ:** ಮೋದಿ ಪ್ರಭಾವಿ ವಿಶ್ವನಾಯಕ ಎಂಬುದಕ್ಕೆ ಜಿ–20 ಶೃಂಗಸಭೆ ಸಾಕ್ಷಿಯಾಗಿದೆ. ಶೃಂಗಸಭೆಯ ವೇದಿಕೆಯಲ್ಲಿ ತಮ್ಮ ಆಸನದಲ್ಲಿ ಕುಳಿತುಕೊಳ್ಳುವ ಮುನ್ನ ಅಮೆರಿಕ ಅಧ್ಯಕ್ಷ ಜೋ ಬೈಡೆನ್ ಅವರೇ ಖುದ್ದು ಮೋದಿ ಅವರಿದ್ದ ಜಾಗಕ್ಕೆ ಬಂದು ಮಾತನಾಡಿಸಿದ್ದು ಭಾರಿ ಗಮನ ಸೆಳೆಯಿತು. 2023ರ ಜಿ–20 ಶೃಂಗಸಭೆಯ ಅಧ್ಯಕ್ಷತೆ ವಹಿಸಲಿರುವ ಭಾರತಕ್ಕೆ ಇದು ದೊಡ್ಡ ಬಲ ನೀಡಿದಂತಾಗಿದೆ. ವಿಶ್ವ ಭೂಪಟದಲ್ಲಿ ಭಾರತ ಒಂದು ಬಲಾಢ್ಯ ರಾಷ್ಟ್ರ, ಅದನ್ನು ಕಡೆಗಣಿಸುವಂತಿಲ್ಲ ಎಂಬುದಕ್ಕೂ ಈ ಬೆಳವಣಿಗೆ ಸಂದೇಶ ರವಾನಿಸಿತು. ಶೃಂಗಸಭೆಯ ನೇಪಥ್ಯದಲ್ಲಿ ಮೋದಿ ಅವರು ಫ್ರಾನ್ಸ್ ಅಧ್ಯಕ್ಷ ಇಮ್ಯಾನುಯೆಲ್ ಮ್ಯಾಕ್ರೋನ್ ಸೇರಿದಂತೆ ಹಲವು ರಾಷ್ಟ್ರಗಳ ಮುಖ್ಯಸ್ಥರ ಜೊತೆ ದ್ವಿಪಕ್ಷೀಯ ಮಾತುಕತೆ ನಡೆಸಿದರು. ಬ್ರಿಟನ್ ಪ್ರಧಾನಿ ಭಾರತೀಯ ಸಂಜಾತ ರಿಷಿ ಸುನಾಕ್ ಜೊತೆಗೂ ಒಂದಷ್ಟು ಹೊತ್ತು ಅನೌಪಚಾರಿಕ ಮಾತುಕತೆ ನಡೆಸಿದ್ದು ವಿಶೇಷವಾಗಿತ್ತು. ಉಕ್ರೇನ್ ಯುದ್ದ ಕೊನೆಗಾಣಿಸಬೇಕೆಂಬ ಮೋದಿ ಮಾತಿಗೆ ಜಿ–20 ಒಕ್ಕೂಟದ ಸದಸ್ಯ ರಾಷ್ಟ್ರಗಳ ಬಹುತೇಕ ನಾಯಕರು ಬೆಂಬಲ ಸೂಚಿಸಿದ್ದು ಅವರ 'ಪ್ರಭಾವಳಿ' ಎಷ್ಟಿದೆ ಎಂಬುದನ್ನು ತೋರಿಸಿತು.

**ರಾಮಾಯಣದ ನಂಟು:** ಅಯೋಧ್ಯೆಯಲ್ಲಿ ಭವ್ಯ ರಾಮ ಮಂದಿರ ನಿರ್ಮಾಣವಾಗುತ್ತಿರುವ ಈ ಹೊತ್ತಲ್ಲಿ ಭಾರತವು ಇಂಡೋನೇಷ್ಯಾದಲ್ಲಿರುವ ರಾಮಾಯಣದ ಸಂಪ್ರದಾಯವನ್ನು ಗೌರವಿಸುತ್ತದೆ ಎಂದು ಮೋದಿ ಹೇಳಿದರು. ಎರಡೂ ದೇಶಗಳು ಸಂತೃಪ್ತ ಹಾಗೂ ಸವಾಲಿನ ದಿನಗಳನ್ನು ಕಂಡಿವೆ. 2018ರಲ್ಲಿ ಇಂಡೋನೇಷ್ಯಾದಲ್ಲಿ ಭೂಕಂಪನವಾದಾಗ, ಭಾರತವು 'ಸಮುದ್ರ ಮೈತ್ರಿ' ಮೂಲಕ ನೆರವು ನೀಡಿತ್ತು ಎಂದು ನೆನಪು ಮಾಡಿಕೊಂಡರು. ಪದ್ಮಶ್ರೀ ಪುರಸ್ಕೃತ ಇಂಡೋನೇಷ್ಯಾದ ಸಾಮಾಜಿಕ ಕಾರ್ಯಕರ್ತ ಆಗಸ್ ಇಂದ್ರ ಉದಯಾನ ಅವರು ಗಾಂಧೀಜಿ ತತ್ವಗಳ ಪಾಲನೆಯಲ್ಲಿ ಹೊಂದಿರುವ ಶ್ರದ್ಧೆಯನ್ನು ಕೊಂಡಾಡಿದರು. ಕಾರ್ಯಕ್ರಮದಲ್ಲಿ 'ಭಾರತ್ ಮಾತಾ ಕಿ ಜೈ' 'ಮೋದಿ ಮೋದಿ' ಮೊಳಗಿದವು.

**ರಷ್ಯಾ ಮೇಲೆ ಹೆಚ್ಚಿದ ಜಾಗತಿಕ ಒತ್ತಡ:** ಶೃಂಗಸಭೆಯಲ್ಲಿ ಪಾಲ್ಗೊಂಡಿದ್ದ ರಾಷ್ಟ್ರಗಳ ಬಹುತೇಕ ನಾಯಕರು ಉಕ್ರೇನ್ ಮೇಲಿನ ಯುದ್ಧ ನಿಲ್ಲಿಸುವಂತೆ ರಷ್ಯಾ ಮೇಲೆ ಒತ್ತಡ ಹೇರಿದರು. ಮೋದಿ ಅವರ ಮಾತನ್ನು ಹಲವು ರಾಷ್ಟ್ರಗಳ ಮುಖ್ಯಸ್ಥರು ಬೆಂಬಲಿಸಿದರು. 'ನಮ್ಮ ಮೇಲಿನ ಅತಿಕ್ರಮಣ ನಿಲ್ಲಿಸಲು ರಷ್ಯಾಗೆ ಇದು ಸಕಾಲ' ಎಂದು ಉಕ್ರೇನ್ ಅಧ್ಯಕ್ಷ ವೊಲೊಡಿಮಿರ್ ಝೆಲೆನ್ಸ್ಕಿ ವರ್ಚ್ಯುಯಲ್ ಆಗಿಯೇ ಶೃಂಗದಲ್ಲಿ ಪಾಲ್ಗೊಂಡು ಆಗ್ರಹಿಸಿದರು. ಅಮೆರಿಕ ಅಧ್ಯಕ್ಷ ಜೋ ಬೈಡೆನ್ ಸಹ ಇದೇ ನಿಲುವು ತಾಳಿದರು. ಫ್ರಾನ್ಸ್ ಅಧ್ಯಕ್ಷ ಇಮ್ಯಾನುಯಲ್ ಮ್ಯಾಕ್ರೋನ್ ಅವರು ಯುದ್ಧ ನಿಲ್ಲಿಸುವಂತೆ ರಷ್ಯಾದ ಮೇಲೆ ಚೀನಾ ಒತ್ತಡ ಹೇರಬೇಕೆಂದು ಆಗ್ರಹಿಸಿದರು. ವಿಶ್ವಸಂಸ್ಥೆಯ ನಿರ್ದೇಶನ, ಮಾರ್ಗದರ್ಶನ ಅನುಸರಿಸುವಂತೆ ವಿಶ್ವನಾಯಕರಿಗೆ ಕರೆ ನೀಡಿರುವ ಇಂಡೋನೇಷ್ಯಾ ಅಧ್ಯಕ್ಷ ಜೋಕೊ ವಿಡೋಡೊ ಅವರು ರಷ್ಯಾ–ಉಕ್ರೇನ್ ಸಮರ ಕೊನೆಗೊಳಿಸಬೇಕು ಎಂದು ಒತ್ತಾಯಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:16.11.2022

## 14. India's G-20 presidency will be inclusive, action-oriented:Modi

India's G-20 presidency will be "inclusive, ambitious decisive, and action-oriented" said Prime Minister, who accepted the ceremonial gavel from Indonesian President Joko Widodo during the conclusion of the G-20 summit in Bali.

Mr.Modi, who also held meetings separately with the leaders of Australia, France, Germany, Italy, Singapore and the U.K., thanked Mr.Widodo and said the world was looking to India's leadership of the forum of the largest economies with "hope".

"India is taking charge of the G-20 at a time when the world is simultaneously grappling with geopolitical tensions, economic slowdown, rising food and energy prices and the long-term ill-effects of the pandemic" Mr.Modi said.

He said that India would give priority to "women led development" on its G-20 agenda, which would be driven by the recently unveiled theme of "One Earth, One Family and One Future". India is expected to showcase its geographical and cultural diversity during the year, and will hold approximately 200 G-20 meetings at different locations across the country.

Sources said Mr.Modi's talks with Mr.Widodo focussed on the problems of "food and energy security" that have particularly arisen due to the war in Ukraine. Earlier this year, Indonesia removed a ban on palm oil exports due to global shortages, and the Indian ban on wheat sugar and other commodities was also discussed.

In his first meeting with British Prime Minister Rishi Sunak, Mr.Modi raised issues of "trade mobility defence and security" the Ministry if External Affairs (MEA) said in a statement. Officials added that the India-U.K. Free Trade Agreement, which missed its deadlines last month, was discussed.

Speaking to the media, Mr.Sunak said he was "committed" to the FTA with India but would not sacrifice "quality for speed" and wanted to "take the time to get trade deals right". The British PM's office said Mr.Sunak who is the first British Hindu PM of Indian-African origin also "passed on his thanks to Prime Minister for the overwhelming response of the Indian people to his appointment as Modi".

While the issue of the Russian was in Ukraine overshadowed G-20 proceedings none of the MEA readouts referred directly to it in talks between to it in talks between Mr.Modi and the European leaders.

Mr.Modi's meeting with Italian Prime Minister Giorgia Meloni focussed on the deepening. India-Italy cooperation in 'energy, defence culture, boosting [efforts to combat] climate change and the economic partnership" he said in a tweet. In a meeting with German Chancellor Olaf Scholz, the two leaders spoke about the "green partnership" on renewable energy as well as strengthening trade and investment the MEA said.

Mr.Modi's talks with French President Emmanuel Macron referred to the defence partnership between Indian and France, as well as the civil nuclear cooperation pertaining to the much-delayed Jaitapur nuclear power plant.

Mr.Modi also met his Singapore counterpart, Lee Hsein Loong and discussed the ASEAN-India partnership bilateral ties and increasing investment in "fintech, renewable energy, skill development health and pharmaceutical sectors', the MEA said.

Courtesy: The Hindu, Dated: 17.11.2022

## 15. India, UK seek to add fresh momentum to trade pact

Prime Minister and his UK counterpart Rishi Sunal sought to add fresh moment to the negotiation for the speed trade agreement between India and the United Kingdom.

Modi and Sunak expressed satisfaction at the state of the wide-ranging India-UK Comprehensive Strategic Partnership and progress on the Roadmap 2030 for Future Relations. The two leaders appreciated the importance of working together in bilateral and multilateral forums including the G-20 and the Common wealth.

The discussions touched upon important sectors of collaboration such as trade, mobility defence and security according to a press release issued by the Ministry of External Affairs in New Delhi.

Modi had a bilateral meeting with Sunak on the sideline of the G-20 summit at Bali in Indonesia. It was the first in person meeting between the two leaders.

Modi also had similar meetings with French President Emmanuel Macron, German Chancellor Olaf Scholz, Australian PM Anthony Albanese, Singaporean PM Lee Hsien Loong and Italian PM Giorgia Meloni, the PM had a bilateral meeting with US President Joe Biden.

According to a press release issued by the British PM's office Modi and Sunak "looked forward to the UK-India free trade deal" and agreed that the deal would have the potential to unlock investment and increase jobs in both countries as well as "expand our deep cultural links".

The release said Sunak had passed on his thanks to Modi for the overwhelming response of Indians to his appointment as the UK prime minister.

Modi and then British Prime Minister Boris Johnson had on April 22 this year set October 24 as the deadline to conclude the negotiations for the proposed deal. The two sides completed talks on 16 of 26 proposed chapters of the agreement.

Courtesy: Deccan Herald, Dated: 17.11.2022

## 16. Modi's anti-war message echoes in Bali Declaration

Prime Minister "today era is not of war" message to Russian President Vladimir Putin resonated in the joint communique, wish the G20 adopted at the end of its 17$^{th}$ summit at Bali in Indonesia.

"Today's era must not be of war" the G20 leaders said in the joint communique echoing the message Modi had delivered to Putin on the sidelines of the summit of the Shanghai Cooperation Organisation (SCO) at Smarkhand.

The Bali Declaration was adopted after hectic negotiations, particularly over paragraphs having reference to the Russian-Ukraine conflict. The US and the West insisted

on harsh condemnation of Russia's military aggression against Ukraine. It was however, resisted by Russia which opposed the move to shift the focus of the G20 from economic and financial cooperation to peace and security.

Modi however subtly rejected the argument by Russia. "Without peace and security, our future generations will not be able to take advantage of economic growth or technological innovation" he said taking over the presidency of the bloc from Widodo.

"India is taking charge of G20 when the world is grappling with tensions economic slowdown, rising food and energy prices, and the long term ill-effects of the pandemic" said Modi. The Bali Declaration reflected the difference within the G20 over the Russia-Ukraine conflict. The G20 leaders also stated that the use or threat of use of nuclear weapons was inadmissible.

Courtesy: Deccan Herald, Dated: 17.11.2022

## 17. PM flags off Bharat Gaurav, Vande Bharat trains

Prime Minister Narendra Modi flagged off the first Vande Bharat train (T18) of Karnataka and the Bharat Gaurav Kashi Darshan train at KSR Bengaluru Station.

The Vande Bharat train will connect Mysuru and Chennai via Bengaluru six days a week, except Wednesday. As per the timings issued by the Railways, the train will depart Chennai at 5.50 am, arrive at Bengaluru at 10.15 am and reach Mysuru at 12.20 pm. In the return direction, the train will leave Mysuru at 1.05 pm, arrive at Bengaluru at 2.50 pm and reach Chennai at 7.30 pm.

The indigenous T-18, known for its semi-high speed engine (160 kmph), upgrades the air-conditioned train with suave design, executive-class approach and safety features. All the classes have reclining seats while the executive class has 180 degree rotating seats. This apart, it has divyang-friendly washrooms, seat belts and infotainment system.

The Bharat Gaurav train will connect Bengaluru with Varanasi via Hubballi, Belagavi, Miraj, Pune along with .tourist halts at Ayodhya and Prayagraj. The theme based train seeks to bring light on the cultural and historical heritage of India to the travelling public. It will be operated by the state government's Muzrai department.

As per the timings notified by the railways, the train (06553) will reach Banaras railway station on November 13. In the return direction, the train (06554) will depart from Banaras at 05.30 am on November 15 and arrive at Bengaluru at 06.40 PM on November 18.

**"Thank you Bengaluru'**

Hundreds of supporters who stood on the road- side to greet Narendra Modi cheered Modi as his car arrived at Sangolli Rayanna Circle. The prime minister got down from his car and walked around briefly to wave at them.

Later, the PM thanked the people for their support. "Thank you Bengaluru for the memorable welcome to this dynamic city," he tweeted.

| Fare chart of Vande Bharat Express | | | |
|---|---|---|---|
| **From** | **To** | **Chair Car** | **Executive Car** |
| Chennai | Mysuru | Rs. 1,200 | Rs. 2,295 |
| Chennai | Bengaluru | Rs. 995 | Rs. 1,885 |
| Bengaluru | Mysuru | Rs. 515 | Rs. 985 |
| Mysuru | Chennai | Rs. 1,365 | Rs. 2,485 |
| Mysuru | Bengaluru | Rs. 720 | Rs. 1,215 |
| Bengaluru | Chennai | Rs. 940 | Rs. 1,835 |

Courtesy: Deccan Herlad, dt: 28.11.2022

## 18. 'Humanity's Challenges Can't Be Solved By Fighting.. But By Acting Together'

Today, India commences its G20 presidency. The previous 17 presidencies of the G20 delivered significant results. Ensuring macro-economic stability, rationalising international taxation, reliving debt-burden of countries, among many other outcomes. We will benefit from these achievements and build further upon them.

However as India assumes this important mantle. I ask myself, can the G20 go further still? Can we catalyse a fundamental mindest shift to benefit humanity as a whole?

I, believe we can. Our mindsets are shaped by our circumstances. Through all of history, humanity lived in scarcity. We fought for limited resources because our survival depended on denying them to others. Confrontation and competition between ideas, ideologies and identities became the norm.

- Unfortunately we remain trapped in the same zero-sum mindset even today.
- We see it when countries fight over territory or resources.
- We see it when supplies of essential goods are weaponised.
- We see it when vaccines are hoarded by a few even as billions remain vulnerable.

Some may argue that confrontation and agreed are just human nature. I disagree. If humans were inherently selfish, what would explain the lasting appeal of so many spiritual traditions that advocate the fundamental one-ness of us all?

One such tradition popular in India, sees all living beings, and even inanimate things as composed of the same five basic elements, the panch tatva of earth, water, fire, air and space. Harmony among these elements within us and between us, is essential for our physical, social and environmental wellbeing.

India's G20 presidency will work to promote this universal sense of oneness. Hence our theme: One Earth, One Family and One Future.

This is not just a slogan. It takes into account recent changes in human circumstances, which we have collectively failed to appreciate.

Today, we have the means to produce enough to meet the basic needs of all people in the world. Today, we do not need to fight for our survival our era need not be one of war. Indeed, it must not be one.

Because today, the greatest challenges we face climate change, terrorism and pandemics can be solved not by fighting each other, but only by acting together.

Fortunately, today's technology also gives us the means to address problems on a humanity-wide scale. The massive virtual worlds that we inhabit today demonstrate the scalability of digital technologies'.

Housing one-sixth of humanity and with its immense diversity of languages, religions, customs and belief. India is a microcosm of the world. With the oldest known traditions of collective decisions-making, India contributes to the foundational DNA of democracy.

- As the mother of democracy, India's national consensus is forged not by diktat but by blending millions of free voices into one harmonious melody.
- Today India is also the fastest growing large economic.
- Our citizen's centric governance model takes care of even our most marginalised citizens while nurturing the creative genius of our talented youth.
- We have tried to make national development not an exercise in top-down governance but rather a citizen led people's movement.
- We have leveraged technology to create digital public goods that are open inclusive and interoperatiable.
- These have delivered revolutionary progress in fields as varied as social protection, financial inclusion and electronic payments.

- For all these reasons. India's experiences can provide insights for possible global solutions.

During our G20 presidency, we shall present India's experiences, leanings and models as possible templates and others particularly the developing world.

Our G20 priorities will be shaped in consultation with not just our G20 partners, but also our fellow travellers in the global South, whose voice often goes unheard. Our priorities will focus on healing our One Earth, creating harmony within our One Family and giving hope for our One Future.

- For healing our planet we will encourage sustainable and environment friendly lifestyles, based on India's tradition of trusteeship towards nature.
- For promoting harmony within the human family, we will seek to depoliticise the global supply of food, fertilisers and medical products so that geopolitical tensions do not lead to humanitarian crisis. As in our own families, those whose needs are the greatest must always be our first concern.
- For imbuing hope in our future generations, we will encourage an honest conversation among the most powerful countries, on mitigating risks posed by weapons of mass destruction and enhancing global security.

India's G20 agenda will be inclusive ambitious action oriented and decisive. Let us join together to make India's G20 presidency a presidency of healing harmony and hope.

Let us work together to shape a new paradigm of human centric globalisation.

Courtesy: Times of India, Dated: 01.12.2022

## 19. Collective effort needed for a productive session: Modi

Prime Minister Narendra Modi appealed to leaders of all parties for cooperation to make the Winter Session of Parliament more productive.

He asked them to keep in view that for the first-time MPs, the sessions were a valuable experience of public debate and an important aspect of public life.

Mr.Modi said this while making his customary remarks at the start of the session and was flanked by Parliamentary Affairs Minister Pralhad Joshi, Ministers of State for Parliamentary Affairs Arjun Ram Meghwal and V.Muraleedharan, and Minister of State in the Prime Minister's Office Jitendra Singh.

"I am making this appeal for cooperation especially in view of the first-term MPs who have met me over the course of this Lok Sabha. They have, across party lines, expressed their pain of being denied an opportunity to learn due to disruption and adjournments," the Prime Minister said.

Mr.Modi urged all political parties to give first-time MPs a chance to participate in debates for their bright future and also for preparing the next generation in democracy.

Mr.Modi said he had a cordial discussion with leaders of different parties recently at an all party meeting on G-20.

“The spirit in which those discussion were held, I hope will be reflected in the course of this session of Parliament as well and we can accomplish much of what we have set out to do,” he said.

The Winter Session began on Wednesday and will continue till December 29 with a total of 17 sittings of both Houses.

Courtesy: The Hindu, Dated: 18.12.2022

## 20. Remote EVM ready to help migrants vote outside States: EC

The Election Commission (EC) announced the development of a prototype of a multi constituency remote electronic voting machine (RVM) to enable remote voting by migrant voters.

The machines can handle multiple constituencies from one remote booth. The EC invited all recognised political and 57 State parties to a demonstration of the prototype. The panel has already shared a concept note with them on the legal, operational, administrative and technological challenges. The commission urged the parties to submit their views.

Opposing the proposal the Congress said the move could seriously “under- mine trust in the electoral system”.

“The voter turnout in General Elections of 2019 was 67.4% and the Election Commission is concerned about the issue of over 30 crore electors not exercising their franchise and also differential voter turnout in various States/Union Territories,” the commission added in the Statement.

The EC noted there were multifarious reasons for a voter not opting to register in a new pace of residence, thus missing out on exercising the to vote. The inability to vote due to internal migration is one of the prominent reasons to be addressed to improve voter turnout and ensure participative elections. Out-migration due to the need to work, marriage and education is predominant among the rural population in overall domestic migration. Approximately 85% of the internal migration is within the States.

It is expecting comments on changes required in legislation, administrative procedures and voting method. Sources in the commission told ***The Hindu*** that the idea was to implement voter portability as a pilot project in the Assembly elections in nine States in 2023. If the pilot is successful, then voter portability can be fully implemented in the 2024 Lok Sabha election.

**Concept note**: The EC said it had circulated among the political parties a concept note highlighting the challenges of defining domestic migrants, implementation of the Model Code of Conduct ensuring secrecy of voting facility of polling agents for identification of voters process and method of remote voting and counting of votes and other issues.

Among the laws and rules that would need amendment to implement remote voting are the Representation of the People Act of 1950 and 1951, the Conduct of Election Rules, 1961 and the Registration of Electors Rules, 1960.

**Migrant voters**: The definition of migrant voter will also need to be reworked with respect to retaining registration at the original place in the context of the legal construct of “ordinary residence” and “temporary absence”. Also the territorial constituency concept of remote voting and defining remoteness itself that is an outside constituency, outside district or outside State will need to be dealt with.

The administrative challenges include enumerating remote voter’s self-declaration, ensuring secrecy of voting at remote locations, provision of polling agents at remote voting booths, and ensuring identification of voters to avoid impersonation. Other areas to work on would include the appointment of polling personnel for remote polling stations and supervisions thereof, the number of polling booths to be set up and their locations, and implementation of the Model Code of Conduct in remote locations. Some of the technological challenges will be the method of remote voting the familiarity of the voters with the multi-constituency RVM and counting of votes.

The EC said it was now ready to pilot an RVM with a public sector undertaking. This modified form of EVM can handle up to 72 multiple constituencies from a single remote polling booth. “The initiative if implemented, can lead to a social transformation for the migrants and connect with their roots as many times they are reluctant to get themselves enrolled at their place of work for various reasons such as frequently changing residences not enough social and emotional connect with the issues of an area of migration and unwillingness to get their name deleted in the electoral roll of their home/native constituencies as they have permanent residence/property,” the EC said.

Courtesy: The Hindu, Dated: 30.12.2022

# ಭಾಗ – 4

# ರಾಜ್ಯ ಸರ್ಕಾರ ಸುದ್ದಿಗಳು

## 1. ಸ್ವಚ್ಛ ಭಾರತ್: ಕರ್ನಾಟಕಕ್ಕೆ 20ನೇ ಸ್ಥಾನ

ಸ್ವಚ್ಛಭಾರತ್ ಮಿಷನ್ ಅಡಿ ಗ್ರಾಮೀಣ ಪ್ರದೇಶಗಳಲ್ಲಿ ನಡೆಸಲಾಗುವ ಕೇಂದ್ರದ ವಾರ್ಷಿಕ ಸ್ವಚ್ಛತೆಯ ಸಮೀಕ್ಷೆ–2022ರಲ್ಲಿ ತೆಲಂಗಾಣ ರಾಜ್ಯ ಅಗ್ರಸ್ಥಾನ ಮತ್ತು ಹರಿಯಾಣ ದ್ವಿತೀಯ ಸ್ಥಾನ ಪಡೆದಿದ್ದು, ಕರ್ನಾಟಕಕ್ಕೆ 20ನೇ ಸ್ಥಾನ ದೊರಕಿದೆ.

ಸಮೀಕ್ಷೆಯಲ್ಲಿ 1,000 ಅಂಕಗಳಿಗೆ ತೆಲಂಗಾಣ 971 ಮತ್ತು ಕರ್ನಾಟಕ 635 ಅಂಕಗಳನ್ನು ಪಡೆದಿವೆ. ಇನ್ನು ಹರಿಯಾಣ ರಾಜ್ಯದ ಭಿವಾನಿ ಜಿಲ್ಲೆ ದೇಶದಲ್ಲೇ ಅತ್ಯಂತ ಸ್ವಚ್ಛ ಜಿಲ್ಲೆಯೆನಿಸಿ, ಮೊದಲ ಸ್ಥಾನ ಸಂಪಾದಿಸಿದೆ. ಇನ್ನು ತೆಲಂಗಾಣದ ಜಗ್ತಿಯಲ್ ಮತ್ತು ನಿಜಾಮಾಬಾದ್ ಜಿಲ್ಲೆಗಳು ಕ್ರಮವಾಗಿ 2 ಮತ್ತು 3ನೇ ಸ್ಥಾನ ಗಿಟ್ಟಿಸಿವೆ. ರಾಷ್ಟ್ರಮಟ್ಟದಲ್ಲಿ ಸ್ವಚ್ಛ ಜಿಲ್ಲೆಗಳ ಪೈಕಿ 129ನೇ ಸ್ಥಾನದಲ್ಲಿರುವ ಉಡುಪಿ ಜಿಲ್ಲೆ ರಾಜ್ಯದಲ್ಲಿ ಅಗ್ರಸ್ಥಾನ ಪಡೆದಿದೆ.

ಜಲಶಕ್ತಿ ಸಚಿವಾಲಯದ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯು ಗ್ರಾಮೀಣ ಪ್ರದೇಶಗಳ ಸ್ವಚ್ಛತೆ ಸಮೀಕ್ಷೆ ನಡೆಸಿ, ಶ್ರೇಯಾಂಕ ನೀಡಿದೆ. ದೇಶದಾದ್ಯಂತ 17,559 ಗ್ರಾಮ, 709 ಜಿಲ್ಲೆಗಳಲ್ಲಿ ಸಮೀಕ್ಷೆ ನಡೆದಿದೆ. ಕರ್ನಾಟಕದಲ್ಲಿ 30 ಜಿಲ್ಲೆಗಳು ಮತ್ತು 753 ಗ್ರಾಮಗಳನ್ನು ಒಳಗೊಂಡು ಸಮೀಕ್ಷೆ ನಡೆದಿದೆ. ಸಮೀಕ್ಷೆಯಲ್ಲಿ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣೆ, ಮುಟ್ಟಿನ ನೈರ್ಮಲ್ಯ ನಿರ್ವಹಣೆ, ಮುಟ್ಟಿನ ತ್ಯಾಜ್ಯ ನಿರ್ವಹಣೆ, ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆ ಮತ್ತು ಬಯಲು ಮಲವಿಸರ್ಜನೆ ಮುಕ್ತ ಹಳ್ಳಿಗಳನ್ನು ಕೇಂದ್ರೀಕರಿಸಲಾಗಿತ್ತು.

| **ಉಳಿದ ಜಿಲ್ಲೆಗಳ ಶ್ರೇಯಾಂಕ ವಿವರ** | |
|---|---|
| ಕೊಡಗು | 178 |
| ಶಿವಮೊಗ್ಗ | 219 |
| ದಕ್ಷಿಣ ಕನ್ನಡ | 294 |
| ಚಿಕ್ಕಮಗಳೂರು | 299 |
| ರಾಮನಗರ | 545 |

ಆಧಾರ: ಪ್ರಜಾವಾಣಿ, ದಿನಾಂಕ: 03.10.2022

## 2. ಗಾಂಧೀಜಿ ದೇಶಕ್ಕೆ ಪ್ರೇರಣಾಶಕ್ತಿ : ಸಿಎಂ

ಸತ್ಯ ಮತ್ತು ಅಹಿಂಸೆ ಎಂಬ ಎರಡು ಅಸ್ತ್ರಗಳನ್ನು ದೇಶಕ್ಕೆ ನೀಡಿದ ಮಹಾತ್ಮ ಗಾಂಧೀಜಿಯವರು ಇಡೀ ದೇಶಕ್ಕೆ ಪ್ರೇರಣಾಶಕ್ತಿ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ತಿಳಿಸಿದರು.

ಮಹಾತ್ಮ ಗಾಂಧೀಜಿ ಜಯಂತಿ ಮತ್ತು ಮಾಜಿ ಪ್ರಧಾನಿ ಲಾಲ್‌ಬಹದ್ದೂರ್ ಶಾಸ್ತ್ರಿ ಅವರ ಜನ್ಮದಿನ ಅಂಗವಾಗಿ ವಿಧಾನಸೌಧದಲ್ಲಿ ಗಾಂಧೀಜಿ ಮತ್ತು ಶಾಸ್ತ್ರಿ ಅವರ ಭಾವಚಿತ್ರಗಳಿಗೆ ಪುಷ್ಪ ನಮನ ಸಲ್ಲಿಸಿ ಮಾತನಾಡಿದ ಅವರು, 'ಗಾಂಧೀಜಿ ಬದುಕಿನಲ್ಲಿ ಹಲವಾರು ಅವಮಾನಗಳನ್ನು ಸಹಿಸಿಕೊಂಡು ಅದರ ವಿರುದ್ಧ ಗಟ್ಟಿಯಾಗಿ ನಿಂತು ಹೋರಾಟವನ್ನು ಮಾಡಿದವರು. ದೇಶಕ್ಕಾಗಿ ತಮ್ಮ ಜೀವನವನ್ನು ಮತ್ತು ಸರ್ವಸ್ವವನ್ನು ತ್ಯಾಗ ಮಾಡಿದವರು. ನೇತೃತ್ವ ವಹಿಸಿಕೊಂಡ ಸ್ವಾತಂತ್ರ ಹೋರಾಟಕ್ಕೆ ಹೊಸ ದಿಕ್ಕು ಹಾಗೂ ಆಯಾಮವನ್ನು ನೀಡಿದರು. ಸತ್ಯ ಹಾಗೂ ಅಹಿಂಸೆ ಎಂಬ ಎರಡು ಅಸ್ತ್ರಗಳನ್ನು ದೇಶಕ್ಕೆ ನೀಡಿ ದೇಶಕ್ಕೆ ಪ್ರೇರಣಾಶಕ್ತಿಯಾಗಿದ್ದಾರೆ' ಎಂದರು.

'ಗಾಂಧೀಜಿ ಹೇಳಿದಂತೆ ಅವರ ಜೀವನವೇ ಒಂದು ತೆರೆದ ಪುಸ್ತಕ. ಅದೇ ನನ್ನ ಸಂದೇಶ ಎಂದಿದ್ದರು. ಸತ್ಯ, ಅಹಿಂಸೆಯ ಮಾರ್ಗವನ್ನು ಕೊನೆಯವರೆಗೂ ಬಿಡಲಿಲ್ಲ. ಗಾಂಧೀಜಿ ಕೇವಲ ಸ್ವಾತಂತ್ರ್ಯ ಹೋರಾಟಕ್ಕೆ ಸೀಮಿತವಾಗದೆ ಈ ದೇಶದ ಆರ್ಥಿಕ, ಸಾಮಾಜಿಕ ಜೀವನದ ಮೇಲೂ ಪ್ರಭಾವ ಬೀರಿದ್ದಾರೆ. ಗ್ರಾಮ ಸ್ವರಾಜ್ಯ ಎಂಬ ಅವರ ಘೋಷಣೆ ಮೂಲಕ ಕೆಳ ಹಂತದಲ್ಲಿ ದೇಶವನ್ನು ಕಟ್ಟಲು ಕರೆಕೊಟ್ಟಿದ್ದರು. ಅವರು ಹಾಕಿ ಕೊಟ್ಟ ದಾರಿಯಲ್ಲಿ ನಾವು ಮುಂದುವರೆದರೆ ಭಾರತ ಸಶಕ್ತ ರಾಷ್ಟ್ರವಾಗುವ ಜೊತೆಗೆ ಭಾರತೀಯರೆಲ್ಲರೂ ನೆಮ್ಮದಿಯ ಬದುಕನ್ನು ಒಗ್ಗಟ್ಟಾಗಿ ಬದುಕಬಹುದು. ಅವರ ವಿಚಾರ ಹಾಗೂ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವ ಸಂಕಲ್ಪ ಮಾಡಬೇಕು' ಎಂದು ಕರೆಕೊಟ್ಟರು.

**ಶಾಸ್ತ್ರಿ ಅವರದ್ದು ರಾಜಿ ಇಲ್ಲದ ಕಠಿಣ ಜೀವನ:** 'ಲಾಲ್ ಬಹದ್ದೂರ್ ಶಾಸ್ತ್ರಿ ಅವರು ದೇಶ ಕಾಯುವ ಹಾಗೂ ದೇಶಕ್ಕೆ ಅನ್ನ ಹಾಕುವವರಿಗಾಗಿ ಜೈ ಜವಾನ್, ಜೈ ಕಿಸಾನ್ ಎಂಬ ಘೋಷಣೆಯ ಮೂಲಕ ಇಂದಿಗೂ ನಮ್ಮ ಜನಮಾನಸದಲ್ಲಿ ತಮ್ಮದೇ ಆದ ಸ್ಥಾನವನ್ನುಗಳಿಸಿದ್ದಾರೆ. ಅತ್ಯಂತ ಬಡತನದ ಹಿನ್ನೆಲೆಯಲ್ಲಿ ಬಂದರೂ, ತಮ್ಮ ಬದುಕಿನಲ್ಲಿ ಎಲ್ಲಿಯೂ ರಾಜಿ ಮಾಡಿಕೊಳ್ಳಲಿಲ್ಲ. ಕಠಿಣವಾದ ಜೀವನವನ್ನೇ ನಡೆಸಿದರು. ಪ್ರಧಾನಿಗಳಾದರೂ ಕೂಡ, ಆದರ್ಶಗಳನ್ನು ಪಾಲಿಸಿದ ಮಹಾನ್ ವ್ಯಕ್ತಿ. ಹುದ್ದೆಯ ಅಧಿಕಾರ ಎಂದಿಗೂ ಸೋಂಕದಂತೆ ನಡೆದುಕೊಂಡರು. ದೇಶವನ್ನು ಅತ್ಯಂತ ದಕ್ಷ ಹಾಗೂ ಸಮರ್ಥವಾಗಿ ನಡೆಸಿದರು. ಇಂಡೋ – ಪಾಕ್ ಯುದ್ಧದ ವೇಳೆ ಭಾರತದ ಗಡಿಗೆ ಹೋಗಿ ಸೈನಿಕರಲ್ಲಿ ಸ್ಫೂರ್ತಿ ತುಂಬಿದ್ದರು. ದೇಶ ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬಿಯಾಗಲು ಹಸಿರು ಕ್ರಾಂತಿಗೆ ಭದ್ರ ಬುನಾದಿ ಹಾಕಿದರು. ಶಾಸ್ತ್ರಿ ಅವರ ಆಡಳಿತ ನಮಗೆ ಆದರ್ಶ' ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ: 04.10.2022

## 3. ಹುಬ್ಬಳ್ಳಿ, ಬೆಳಗಾವೀಲಿ ದೇಶದ ಮೊದಲ ಇವಿ ಕ್ಲಸ್ಟರ್

ಹುಬ್ಬಳ್ಳಿ–ಧಾರವಾಡ ಮತ್ತು ಬೆಳಗಾವಿ ಒಳಗೊಂಡ ಕ್ಲಸ್ಟರ್‌ನಲ್ಲಿ ಭಾರತದ ಪ್ರಥಮ ವಿದ್ಯುತ್ ವಾಹನಗಳ ಕ್ಲಸ್ಟರ್ ಮತ್ತು ನವೋದ್ಯಮಗಳ ಹಬ್ ಅಭಿವೃದ್ಧಿಯ ಜೊತೆಗೆ 20 ಸಾವಿರ ಜನರಿಗೆ ಉದ್ಯೋಗ ನೀಡುವ ಟೆಕ್‌ಪಾರ್ಕ್ ಸ್ಥಾಪನೆಗೆ ಕ್ರಮ ಕೈಗೊಳ್ಳಲಾಗುವುದು ಎಂದು ಐಟಿ–ಬಿಟಿ, ಸಚಿವ ಸಿ.ಎನ್.ಅಶ್ವತ್ಥ ನಾರಾಯಣ ಹೇಳಿದರು.

ಬೆಂಗಳೂರು ತಂತ್ರಜ್ಞಾನ ಶೃಂಗಸಭೆಗೆ ಪೂರ್ವಭಾವಿಯಾಗಿ ನಡೆದ 'ಬಿಯಾಂಡ್ ಬೆಂಗಳೂರು–2022' 'ಟೆಕ್ಸೆಲರೇಷನ್' ಔದ್ಯಮಿಕ ಸಮಾವೇಶದಲ್ಲಿ ಮಾತನಾಡಿದರು.

ಹುಬ್ಬಳ್ಳಿ–ಧಾರವಾಡ–ಬೆಳಗಾವಿ ಕ್ಲಸ್ಟರ್‌ನಲ್ಲಿ 500 ಎಕರೆ ಪ್ರದೇಶದಲ್ಲಿ ವಿದ್ಯುತ್ ವಾಹನಗಳ ಕ್ಲಸ್ಟರ್ ಮಾಡಲಾಗುವುದು. ನವೋದ್ಯಮಗಳ ಹಬ್ ಅಭಿವೃದ್ಧಿ ಜೊತೆಗೆ 20 ಸಾವಿರ ಜನರಿಗೆ ಉದ್ಯೋಗ ಲಭಿಸುವಂಥ ಟೆಕ್‌ಪಾರ್ಕ್ ಸ್ಥಾಪನೆಗೆ ಕ್ರಮ ಕೈಗೊಳ್ಳಲಾಗುತ್ತಿದೆ. ಇಲ್ಲಿ ಉದ್ಯಮಗಳು ನೆಲೆಯೂರುವಂತೆ ಮಾಡಲು ಹುಬ್ಬಳ್ಳಿ ಕ್ಲಸ್ಟರ್‌ಸೀಡ್ ಫಂಡ್‌ಗೆ 225 ಕೋಟಿ ಒದಗಿಸಲಾಗಿದೆ ಎಂದು ತಿಳಿಸಿದರು. ಬೆಳಗಾವಿಯಲ್ಲಿ ರೂ.150 ಕೋಟಿ ವೆಚ್ಚದಲ್ಲಿ 'ಗ್ಲೋಬಲ್ ಎಮರ್ಜಿಂಗ್ ಟೆಕ್ನಾಲಜಿ ಡಿಸೈನ್ ಸೆಂಟರ್' ಸ್ಥಾಪಿಸಲಾಗುವುದು. ಈ ನಿಟ್ಟಿನಲ್ಲಿ ಈಗಾಗಲೇ ಆಸಕ್ತರಿಂದ ಅರ್ಜಿ ಆಹ್ವಾನಿಸಲಾಗಿದೆ ಎಂದು ವಿವರಿಸಿದರು.

**400 ಸ್ಟಾರ್ಟ್‌ಅಪ್:** ಕರ್ನಾಟಕ ಸ್ಟಾರ್ಟ್‌ಅಪ್ ಹಬ್‌ನಡಿ 5 ಸಾವಿರ ನವೋದ್ಯಮಗಳಿಗೆ ವಿಶ್ವದರ್ಜೆಯ ಮೂಲಸೌಲಭ್ಯ ಒದಗಿಸಲಾಗುವುದು. ಈಗಾಗಲೇ 400 ಸ್ಟಾರ್ಟ್‌ಅಪ್‌ಗಳಿಗೆ ಬೆಂಬಲ ನೀಡಲಾಗಿದೆ. 400 ಸ್ಟಾರ್ಟ್‌ಅಪ್ ಪೈಕಿ 120 ಉತ್ತರ ಕರ್ನಾಟಕದ ಭಾಗದ್ದಾಗಿವೆ ಎಂದ ಅವರು, ಈ ಹಣಕಾಸು ವರ್ಷದ ಕೊನೆಗೆ ಇನ್ನೂ 400 ಉದ್ದಿಮೆಗಳಿಗೆ ನೆರವು ಒದಗಿಸಲಾಗುವುದು ಎಂದು ವಿವರಿಸಿದರು.

**ಎಸ್‌ಐಆರ್ ಚರ್ಚೆ:** ಉತ್ತರ ಕರ್ನಾಟಕದಲ್ಲಿ ಉದ್ದಿಮೆಗಳನ್ನು ಆಕರ್ಷಿಸುವ ನಿಟ್ಟಿನಲ್ಲಿ ವಿಶೇಷ ಹೂಡಿಕೆ ವಲಯ (ಎಸ್‌ಐಆರ್) ಆ್ಯಕ್ಟ್ ಜಾರಿಗೊಳಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದು. ಈ ನಿಟ್ಟಿನಲ್ಲಿ ಮುಖ್ಯ ಮಂತ್ರಿಗಳೊಂದಿಗೆ ಚರ್ಚೆ ನಡೆಸುವುದಾಗಿ ಸಚಿವರು ತಿಳಿಸಿದರು.

ಎಂಜಿನಿಯರಿಂಗ್ ಮತ್ತು ಮ್ಯಾನುಫ್ಯಾಕ್ಚರಿಂಗ್‌ಗೆ ಉತ್ತೇಜನ ನೀಡಲು 10 ಸಾವಿರ ಚದರ ಅಡಿ ವಿಸ್ತೀರ್ಣದ ಪ್ಲಗ್ ಇನ್ ಪ್ಲೇ ಸ್ವರೂಪದ ಉದ್ದಿಮೆಯನ್ನು ಸರ್ಕಾರಿ ಮತ್ತು ಖಾಸಗಿ ಸಹಭಾಗಿತ್ವದಲ್ಲಿ ಸ್ಥಾಪಿಸಲಾಗುವುದು. ಇದರ ಜೊತೆಗೆ 5 ಉತ್ಕೃಷ್ಟತಾ ಕೇಂದ್ರಗಳನ್ನೂ ಅಸ್ತಿತ್ವಕ್ಕೆ ತರಲಾಗುವುದು. ಇವುಗಳ

ಮೂಲಕ ತರಬೇತಿ, ಸಂಶೋಧನೆ ಮತ್ತು ಅಭಿವೃದ್ಧಿ ಹಾಗೂ ಉದ್ಯಮಶೀಲತೆಯನ್ನು ಪ್ರೋತ್ಸಾಹಿಸಲಾಗುವುದು ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ: 04.10.2022

## 4. ಸಾಂಸ್ಕೃತಿಕ ಅಸ್ಮಿತೆ ಸಾರಿದ ಜಂಬೂಸವಾರಿ

ಈ ನೆಲದ ಸಾಂಸ್ಕೃತಿಕ ಅಸ್ಮಿತೆ ಹಾಗೂ ರಾಜ ವೈಭವದ ಪ್ರತೀಕವಾದ ನಾಡಹಬ್ಬ ಮೈಸೂರು ದಸರಾ ಮಹೋತ್ಸವದ ಪ್ರಮುಖ ಆಕರ್ಷಣೆ ಜಂಬೂಸವಾರಿ ಮೆರವಣಿಗೆ ಗೋಧೂಳಿ ವೇಳೆಗೆ ಸಂಪನ್ನಗೊಂಡಿತು.

ನಿಗದಿತ ಕಾಲಮಾನಕ್ಕಿಂತ ಎರಡು ನಿಮಿಷ ಮುಂಚಿತವಾಗಿ ಅಂದರೆ ಮಧ್ಯಾಹ್ನ 2.34ಕ್ಕೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ತಮ್ಮ ಪರಿವಾರ ಸಮೇತ ಅರಮನೆಯ ಬಲರಾಮ ದ್ವಾರದ ಕೋಟೆ ಆಂಜನೇಯಸ್ವಾಮಿ ದೇವಾಲಯದ ಆವರಣದಲ್ಲಿ ನಂದಿಧ್ವಜ ಪೂಜೆ ನೆರವೇರಿಸಿದರೆ, ಅರಮನೆ ಅಂಗಳದಲ್ಲಿ ಅಭಿಮನ್ಯುವಿನ ಮೇಲೆ ವಿರಾಜಮಾನಳಾಗಿದ್ದ ಬೆಟ್ಟದ ತಾಯಿ ಚಾಮುಂಡೇಶ್ವರಿಗೆ ನಿಗದಿತ ಕಾಲಮಾನಕ್ಕಿಂತ, ಅಂದರೆ ಸಂಜೆ 5.37ಕ್ಕೆ ಸರಿಯಾಗಿ, 19 ನಿಮಿಷ ತಡವಾಗಿ ಪುಷ್ಪಾರ್ಚನೆ ನೆರವೇರಿಸಿದರು. ಈ ಮೂಲಕ 2022ರ ದಸರಾ ಜಂಬೂಸವಾರಿ ಇತಿಹಾಸದ ಪುಟಗಳಲ್ಲಿ ದಾಖಲಾಯಿತು.

ಅರಮನೆಯಿಂದ ಬನ್ನಿಮಂಟಪದವರೆಗಿನ ನಾಲ್ಕೂವರೆ ಕಿಲೋ ಮೀಟರ್ ದೂರದ ಮಾರ್ಗದುದ್ದಕ್ಕೂ ನೆರೆದಿದ್ದ ಲಕ್ಷಾಂತರ ಮಂದಿಯ ಹರ್ಷೋದ್ಗಾರದ ನಡುವೆ 750 ಕೆ.ಜಿ ತೂಕದ ಚಿನ್ನದ ಅಂಬಾರಿ ಹೊತ್ತ ಅಭಿಮನ್ಯುವಿನ ಗಾಂಭೀರ್ಯದ ನಡೆಗೆ ನೆರೆದಿದ್ದ ಲಕ್ಷಾಂತರ ಮಂದಿ ತಲೆದೂಗಿದರು. ಅಂಬಾರಿಯಲ್ಲಿ ಸರ್ವಾಲಂಕೃತಳಾಗಿ ವಿರಾಜಮಾನಳಾಗಿದ್ದ ಬೆಟ್ಟದ ತಾಯಿ ಚಾಮುಂಡೇಶ್ವರಿಯನ್ನು ಕಂಡ ಮಂದಿ ಎದ್ದುನಿಂತು ಭಕ್ತಿ ಭಾವ ಮೆರೆದರಲ್ಲದೆ, 'ಚಾಮುಂಡೇಶ್ವರಿಗೆ ಜೈ' ಎಂಬ ಘೋಷಣೆ ಮುಗಿಲೆತ್ತರಕ್ಕೆ ಮುಟ್ಟಿತ್ತು.

ದೇಶ, ವಿದೇಶಗಳಿಂದ ಆಗಮಿಸಿದ ಸಹಸ್ರಾರು ಜನರ ಸಮ್ಮುಖದಲ್ಲಿ ಅಂಬಾವಿಲಾಸ ಅರಮನೆ ಆವರಣದಲ್ಲಿ ಸಂಭ್ರಮದೊಂದಿಗೆ ಆರಂಭಗೊಂಡ ಜಂಬೂಸವಾರಿಯಲ್ಲಿ 57 ವರ್ಷದ 5000 ಕೆ.ಜಿ. ತೂಕದ ಅಭಿಮನ್ಯು 750 ಕೆ.ಜಿ.ತೂಕದ ಚಿನ್ನದ ಅಂಬಾರಿಯಲ್ಲಿ ವಿರಾಜಮಾನಳಾಗಿದ್ದ ನಾಡದೇವತೆ ತಾಯಿ ಚಾಮುಂಡೇಶ್ವರಿ ದೇವಿಯ ಉತ್ಸವ ಮೂರ್ತಿಯನ್ನು ಸತತ ಮೂರನೇ ಬಾರಿ ಯಶಸ್ವಿಯಾಗಿ

ಹೊತ್ತು ಮೆರೆದ ಅಭಿಮನ್ಯುವಿನ ಎರಡೂ ಬದಿಗಳಲ್ಲಿ ಕುಮ್ಕಿ ಆನೆಗಳಾಗಿ ಕಾವೇರಿ ಹಾಗೂ ಚೈತ್ರಾ ಸಾಥ್ ನೀಡಿದವು.

**ಸ್ತಬ್ದ ಚಿತ್ರಗಳ ಲೋಕ**

ಸ್ತಬ್ದಚಿತ್ರ ಹಾಗೂ ಕಲಾತಂಡಗಳ ಮೆರವಣಿಗೆಯಲ್ಲಿ ರಾಜ್ಯ 31 ಜಿಲ್ಲೆಗಳ ಕಲೆ, ಸಂಸ್ಕೃತಿ, ಇತಿಹಾಸ ಮತ್ತು ಅಭಿವೃದ್ಧಿ ಅಂಶಗಳು ಹೊಳೆದವು. ಮೈಸೂರು ಪೇಟ, ಮಲ್ಲಿಗೆ, ವಿಶ್ವವಿದ್ಯಾಲಯ, ಬಾಗಲಕೋಟೆಯ ಮುಧೋಳ ಶ್ವಾನ, ಇಳಕಲ್ ಸೀರೆಯಿಂದ ಶುರುವಾದ ಪ್ರದರ್ಶನ ಯಾದಗಿರಿಯ ಸುರಪುರ ಕೋಟೆಯ ಸ್ತಬ್ದಚಿತ್ರದಿಂದ ಕೊನೆಗೊಂಡಿತು. ಬಳ್ಳಾರಿ ಕೋಟೆ, ಚಾಮರಾಜನಗರದ ಪುನೀತ್ ರಾಜಕುಮಾರ್ ಪ್ರತಿಮೆ, ಚಿತ್ರದುರ್ಗದ ವಾಣಿವಿಲಾಸ ಜಲಾಶಯ, ದಕ್ಷಿಣ ಕನ್ನಡದ ಹುಲಿವೇಷ, ಬೇಲೂರು ಚೆನ್ನಕೇಶವ ಗುಡಿ, ಕೊಡಗಿನ ಬ್ರಹ್ಮಗಿರಿ ಕೋಟೆ, ಕೋಲಾರದ ಬಿಕೆಎಸ್ ಅಯ್ಯಂಗಾರ್ ಯೋಗಥಾನ್, ಶಿವಮೊಗ್ಗದ ಅಕ್ಕಮಹಾದೇವಿಯ ಜನ್ಮಸ್ಥಳ ಉಡುತಡಿ, ಕಾರವಾರ ನೌಕಾನೆಲೆ, ಸುರಪುರದ ಕೋಟೆ, ಹಂಪಿಯ ಕಲ್ಲಿನ ರಥ ಸ್ತಬ್ದಚಿತ್ರಗಳು ಗಮನ ಸೆಳೆದವು.

ಆಧಾರ: ವಿಶ್ವವಾಣಿ, ದಿನಾಂಕ: 06.10.2022

## 5. ಕೃಷಿ ಡಿಜಿಟಲೀಕರಣದಲ್ಲಿ ಕರ್ನಾಟಕ ಮುಂಚೂಣಿ

ಕೃಷಿ ಕ್ಷೇತ್ರದ ಡಿಜಿಟಲೀಕರಣದಲ್ಲಿ ಕರ್ನಾಟಕ ಮುಂಚೂಣಿಯಲ್ಲಿದ್ದು, ಈವರೆಗೆ 78 ಲಕ್ಷ ರೈತರ ಸರ್ವೇ ನಂಬರ್‌ಗಳನ್ನು ಆಧಾರ್ ಕಾರ್ಡ್‌ಗೆ ಜೋಡಿಸಲಾಗಿದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದ್ದಾರೆ.

ಕೇಂದ್ರ ಗೃಹ ಮತ್ತು ಸಹಕಾರ ಸಚಿವ ಅಮಿತ್ ಶಾ ಅಧ್ಯಕ್ಷತೆಯಲ್ಲಿ ನಡೆದ ನೈಸರ್ಗಿಕ ಕೃಷಿ ಮತ್ತು ಡಿಜಿಟಲ್ ಕೃಷಿ ಕುರಿತ ವಡಿಯೋ ಸಂವಾದದಲ್ಲಿ ಗೃಹ ಕಚೇರಿ ಕೃಷ್ಣಾದಿಂದ ಪಾಲ್ಗೊಂಡು ಅವರು ಮಾತನಾಡಿದರು. ಈ ವೇಳೆ ಕೃಷಿ ಡಿಜಿಟಲೀಕರಣ ಕ್ಷೇತ್ರದಲ್ಲಿ ಕರ್ನಾಟಕ ಮುಂದಿರುವ ಬಗ್ಗೆ ಕೇಂದ್ರ ಕೃಷಿ ಸಚಿವಾಲಯದ ಕಾರ್ಯದರ್ಶಿ ಮಾಡಿದ ಪ್ರಸ್ತಾಪವನ್ನು ಉಲ್ಲೇಖಿಸಿದ ಅವರು, ಭೂಮಿ ತಂತ್ರಜ್ಞಾನದಡಿ ಈ ಹಿಂದೆಯೇ ಡಿಜಿಟಲೀಕರಣವಾಗಿದೆ. ಭೂಮಿ ಹೊಂದಿರುವ 62 ಲಕ್ಷ ಮತ್ತು ಭೂರಹಿತ 16 ಲಕ್ಷ ರೈತರನ್ನು ತಂತ್ರಾಂಶದಲ್ಲಿ ಸೇರಿಸಲಾಗಿದೆ. ಕೇಂದ್ರ ಸರಕಾರದ ಸ್ವಾಮಿತ್ವ ಯೋಜನೆಯನ್ನು ಕರ್ನಾಟಕದಲ್ಲಿ ಅಭಿಯಾನದ ರೀತಿಯಲ್ಲಿ ಕೈಗೊಳ್ಳಲಾಗಿದೆ ಎಂದರು.

ಕೃಷಿ ಕ್ಷೇತ್ರದಲ್ಲಿ ನ್ಯಾನೋ ಯೂರಿಯಾ ಕ್ರಾಂತಿ ಉಂಟುಮಾಡಿದ್ದು, ಮೊದಲ ನ್ಯಾನೋ ಯೂರಿಯಾ ಘಟಕ ಬೆಂಗಳೂರಿನಲ್ಲಿದೆ. ಅಧ್ಯಯನ ಮಾಡಿ, ರೈತರಿಗೂ ಪರಿಚಯಿಸಲಾಗಿದೆ. ಮುಂದಿನ

ದಿನಗಳಲ್ಲಿ ರಾಷ್ಟ್ರಮಟ್ಟದಲ್ಲಿ ಉತ್ತಮ ಪ್ರತಿಕ್ರಿಯೆ ಹಾಗೂ ಬೆಂಬಲ ಸಿಗಲಿದೆ ಎಂದು ವಿಶ್ವಾಸ ವ್ಯಕ್ತಪಡಿಸಿದರು.

ಡಿಜಿಟಲ್ ತಂತ್ರಜ್ಞಾನದ ಮೂಲಕ ರೈತರೇ ತಮ್ಮ ಈ ಭೂಮಿಯ ಸಮೀಕ್ಷೆ ಮಾಡುತ್ತಿದ್ದಾರೆ. ಬೆಳೆ ಸಮೀಕ್ಷೆಯನ್ನೂ ರೈತರೇ ಮಾಡುತ್ತಿದ್ದಾರೆ. ಯಾವುದೇ ವ್ಯಾಜ್ಯಕ್ಕೆ ಎಡೆ ಮಾಡಿಕೊಡದಿರಲು ಶೇ. 100ರಷ್ಟು ರೈತರೇ ಸಮೀಕ್ಷೆ ಮಾಡಲು ಕ್ರಮ ವಹಿಸಲಾಗುತ್ತಿದೆ. ರೈತರು ಅತ್ಯಂತ ಪ್ರಾಮಾಣಿಕವಾಗಿ ಇದನ್ನು ನಡೆಸಿದ್ದಾರೆ ಎಂದು ತಿಳಿಸಿದರು. ಈ ಸಂದರ್ಭದಲ್ಲಿ ರಾಜ್ಯ ಸರಕಾರದ ಹಿರಿಯ ಅಧಿಕಾರಿಗಳು ಹಾಜರಿದ್ದರು.

**ನೈಸರ್ಗಿಕ ಕೃಷಿ ದೀರ್ಘಕಾಲಿಕ ಯೋಜನೆ**

ನೈಸರ್ಗಿಕ ಕೃಷಿ ದೀರ್ಘಕಾಲಿಕ ಯೋಜನೆಯಾಗಿದ್ದು, ಈ ಕುರಿತು ಸಂಶೋಧನೆ ಹಾಗೂ ಪ್ರಮಾಣೀಕರಣ ಅತ್ಯಂತ ಪ್ರಮುಖ ಅಂಶಗಳು ಪ್ರಧಾನಿ ನರೇಂದ್ರ ಮೋದಿಯವರ ರೈತರ ಆದಾಯ ದ್ವಿಗುಣಗೊಳಿಸುವ ಆಶಯದಂತೆ ಕರ್ನಾಟಕವು ಮಹಾರಾಷ್ಟ್ರ ಹಾಗೂ ಗುಜರಾತ್ ರಾಜ್ಯಗಳೊಂದಿಗೆ ನೈಸರ್ಗಿಕ ಕೃಷಿಯನ್ನು ಸಕ್ರಿಯವಾಗಿ ಕೈಗೊಂಡಿದೆ. ರಾಜ್ಯದಲ್ಲಿ 5 ಕೃಷಿ ಹಾಗೂ ತೋಟಗಾರಿಕಾ ವಿಶ್ವವಿದ್ಯಾಲಯಗಳಿದ್ದು ವಿಶ್ವವಿದ್ಯಾಲಯಗಳ ನಿರಂತರ ಮೇಲ್ವಿಚಾರಣೆಯಲ್ಲಿ ನೈಸರ್ಗಿಕ ಕೃಷಿಯನ್ನು ತಲಾ ಒಂದು ಸಾವಿರ ಎಕರೆ ಪ್ರದೇಶದಲ್ಲಿ ಕೈಗೊಳ್ಳಲಾಗಿದೆ. ಬೆಳೆಗಳ ಗುಣಮಟ್ಟದಿಂದ ಹಿಡಿದು, ಉತ್ಪನ್ನ, ಪರೀಕ್ಷೆಗಳನ್ನು ಕೃಷಿ ಪ್ರಯೋಗಾಲಯದಲ್ಲಿ ಕೈಗೊಳ್ಳಲಾಗಿದೆ ಎಂದು ಸಿಎಂ ಬೊಮ್ಮಾಯಿ ವಿವರಿಸಿದರು.

ರಾಜ್ಯದಲ್ಲಿ 2.4 ಲಕ್ಷ ಎಕರೆ ಭೂ ಪ್ರದೇಶದಲ್ಲಿ ಕೈಗೊಂಡಿರುವ ಸಾವಯವ ಕೃಷಿ ಭೂಮಿಯನ್ನು ನೈಸರ್ಗಿಕ ಕೃಷಿಗೆ ಕ್ರಮೇಣ ಪರಿವರ್ತಿಸಲಾಗುತ್ತಿದೆ. ಮುಂದಿನ ಮಾರ್ಚ್ ಒಳಗೆ ಹೊಸದಾಗಿ 1 ಲಕ್ಷ ಎಕರೆ ಪ್ರದೇಶವನ್ನು ನೈಸರ್ಗಿಕ ಕೃಷಿಗೆ ಪರಿವರ್ತನೆ ಮಾಡಲು ಗುರಿ ನಿಗದಿ ಪಡಿಸಲಾಗಿದೆ. ನೈಸರ್ಗಿಕ ಕೃಷಿಗೆ 41,434 ಕೃಷಿಕರನ್ನು ಆಯ್ಕೆ ಮಾಡಲಾಗಿದ್ದು,ಗುರಿ 1,100 ತರಬೇತಿ ಕಾರ್ಯಕ್ರಮಗಳು, 200 ಕ್ಷೇತ್ರ ಭೇಟಿಗಳನ್ನು ಕೈಗೊಳ್ಳಲಾಗಿದೆ. ಒಟ್ಟಾರೆ ಮಿಷನ್ ಮಾದರಿಯಲ್ಲಿ ಕಾರ್ಯಗತಗೊಳಿಸಲಾಗುತ್ತಿದೆ.

–ಬಸವರಾಜ ಬೊಮ್ಮಾಯಿ ಸಿಎಂ

ಆಧಾರ: ವಿಶ್ವವಾಣಿ, ದಿನಾಂಕ: 07.10.2022

## 6. ನವೆಂಬರ್ 1ರಿಂದ ಯಶಸ್ವಿನಿ ಮರುಜಾರಿ

ರೈತರಿಗೆ ಗುಣಮಟ್ಟದ ಆರೋಗ್ಯ ಸೌಲಭ್ಯ ಒದಗಿಸುವ ಯಶಸ್ವಿನಿ ಯೋಜನೆಗೆ ನವೆಂಬರ್ 1 ರಂದು ಚಾಲನೆ ನೀಡಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ತಿಳಿಸಿದರು.

ಬೆಂಗಳೂರಿನ ಕೆ.ಸಿ.ಜನರಲ್ ಆಸ್ಪತ್ರೆಯಲ್ಲಿ ನೂತನವಾಗಿ ನಿರ್ಮಿಸಿರುವ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ (50 ಹಾಸಿಗೆ ಸಾಮರ್ಥ್ಯದ) ಉಪಕೇಂದ್ರ ಹಾಗೂ ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ಮಕ್ಕಳ ತೀವ್ರ ನಿಗಾ ಘಟಕದ ಉಪಕೇಂದ್ರ ಉದ್ಘಾಟಿಸಿ ಮಾತನಾಡಿದರು. ಎಲ್ಲರಿಗೂ ಆರೋಗ್ಯ ಸೇವೆ ಕಲ್ಪಿಸುವ ನಿಟ್ಟಿನಲ್ಲಿ ರಾಜ್ಯ ಸರ್ಕಾರ ಆರೋಗ್ಯ ಕ್ಷೇತ್ರಕ್ಕೆ ಹೆಚ್ಚಿನ ಒತ್ತು ನೀಡಿದೆ. ಈ ನಿಟ್ಟಿನಲ್ಲಿ ರೈತರಿಗೆ ಪೂರಕವಾಗಿ ಯಶಸ್ವಿನಿ ಯೋಜನೆ ಆರಂಭಿಸಲಾಗುತ್ತಿದೆ. ಸದ್ಯ ಜಾರಿಯಲ್ಲಿರುವ ಆಯುಷ್ಮಾನ್ ಭಾರತ್ ಆರೋಗ್ಯ ಕರ್ನಾಟಕ ಯೋಜನೆಯಡಿ ಚಿಕಿತ್ಸೆ ಪಡೆಯಲು ಆಯುಷ್ಮಾನ್ ಕಾರ್ಡ್ ಬಳಕೆಗೆ ಇರುವ ನಿಯಮಗಳನ್ನು ಸರಳೀಕರಣಗೊಳಿಸಿ ಶೀಘ್ರವೇ ಹೊಸ ಆದೇಶ ಹೊರಡಿಸಲಾಗುವುದು ಎಂದು ಸ್ಪಷ್ಟಪಡಿಸಿದರು.

**ಕಮಾಂಡ್ ಸೆಂಟರ್:** ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಟೆಲಿಮೆಡಿಸಿನ್ ಕಾರ್ಯಕ್ರಮ ಪರಿಣಾಮಕಾರಿಯಾಗಿ ಜಾರಿಗೊಳಿಸಲಾಗುತ್ತಿದೆ. ಇದಕ್ಕಾಗಿ ಪ್ರಾದೇಶಿಕ ಮಟ್ಟದಲ್ಲಿ 6 ಕಮಾಂಡ್ ಸೆಂಟರ್ ಸ್ಥಾಪಿಸಲಾಗುತ್ತಿದ್ದು, ಇದಕ್ಕೆ ರಾಜ್ಯದ ಎಲ್ಲ ಸಮುದಾಯ ಆರೋಗ್ಯ ಕೇಂದ್ರಗಳನ್ನು ಜೋಡಿಸುವ ವ್ಯವಸ್ಥೆ ರೂಪಿಸಲಾಗುತ್ತಿದೆ. ಕಮಾಂಡ್ ಸೆಂಟರ್‌ನ ವೈದ್ಯರ ತಂಡ 24/7 ಆರೋಗ್ಯ ಕೇಂದ್ರಗಳಿಗೆ ಸಲಹೆ ಸೂಚನೆಗಳನ್ನು ನೀಡಲಿದೆ. 100 ಪ್ರಾಥಮಿಕ ಆರೋಗ್ಯ ಕೇಂದ್ರ (ಪಿಎಚ್‌ಸಿ)ಗಳನ್ನು ಸಮುದಾಯ ಪ್ರಾಥಮಿಕ ಆರೋಗ್ಯ ಕೇಂದ್ರಗಳಾಗಿ – ಮೇಲ್ದರ್ಜೆಗೇರಿಸಲಿದ್ದು, 430 'ನಮ್ಮ ಕ್ಲಿನಿಕ್' ಹಾಗೂ ಹೆಚ್ಚುವರಿಯಾಗಿ 81 ಪಿಎಚ್‌ಸಿ ನಿರ್ಮಿಸಲಾಗುವುದು ಎಂದು ಸಿಎಂ ವಿವರಿಸಿದರು.

ರಾಜ್ಯದಲ್ಲಿನ ಹಿರಿಯ ನಾಗರಿಕರಿಗೆ ಆರೋಗ್ಯ ಸೌಲಭ್ಯ ಒದಗಿಸಲು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ನಾಲ್ಕು ಸಾವಿರ ಅಂಗನವಾಡಿ ಕೇಂದ್ರಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗಿದೆ. ಮುಂಬರುವ ಆಗಸ್ಟ್ 15ರ ವೇಳೆಗೆ ರಾಜ್ಯದ ಎಲ್ಲ ಸರ್ಕಾರಿ ಶಾಲೆಗಳಲ್ಲಿ ಶೌಚಾಲಯಗಳನ್ನು ನಿರ್ಮಿಸಲು ಸರ್ಕಾರ ಗುರಿ ಹೊಂದಲಾಗಿದೆ ಎಂದು ಇದೇ ವೇಳೆ ಮಾಹಿತಿ ನೀಡಿದರು. ಕಾರ್ಯಕ್ರಮದಲ್ಲಿ ಆರೋಗ್ಯ ಮತ್ತು ವೈದ್ಯಕೀಯ ಶಿಕ್ಷಣ ಸಚಿವ ಡಾ ಕೆ. ಸುಧಾಕರ್, ಉನ್ನತ ಶಿಕ್ಷಣ ಸಚಿವ ಡಾ. ಸಿ.ಎನ್.ಅಶ್ವತ್ ನಾರಾಯಣ್, ಶಾಸಕ ದಿನೇಶ್ ಗುಂಡೂರಾವ್, ಜಯದೇವ ಆಸ್ಪತ್ರೆಯ ನಿರ್ದೇಶಕ ಡಾ.ಸಿ.ಎನ್.ಮಂಜುನಾಥ್, ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ನಿರ್ದೇಶಕ ಡಾ.ಕೆ.ಎಸ್.ಸಂಜಯ್ ಮತ್ತಿತರರಿದ್ದರು.

ಆಧಾರ: ವಿಜಯವಾಣಿ, ದಿನಾಂಕ: 07.10.2022

## 7. 28ಕ್ಕೆ ಕೋಟಿ ಕಂಠಗಳಿಂದ ಗಾಯನ

ಕಳೆದ ವರ್ಷ ಮಾತಾಡ್ ಮಾತಾಡ್ ಕನ್ನಡ ಅಭಿಯಾನದ ಮೂಲಕ ಏಕಕಾಲಕ್ಕೆ ಒಂದು ಲಕ್ಷ ಕಂಠಗಳಿಂದ ಗೀತ ಗಾಯನ ನಡೆಸಿದ್ದ ರಾಜ್ಯ ಸರಕಾರ ಇದೀಗ, ಒಂದು ಕೋಟಿ ಕಂಠಗಳಿಂದ ಕನ್ನಡ ಡಿಂಡಿಮ ಮೊಳಗಿಸಲು ಸಜ್ಜಾಗಿದೆ.

ಈ ಬಗ್ಗೆ ಸುದ್ದಿಗಾರರೊಂದಿಗೆ ಮಾತನಾಡಿದ ಕನ್ನಡ ಮತ್ತು ಸಂಸ್ಕೃತಿ ಸಚಿವ ವಿ.ಸುನೀಲ್ ಕುಮಾರ್, ರಾಜ್ಯದ ಸಾಂಸ್ಕೃತಿಕ ಲೋಕದಲ್ಲೇ ವಿನೂತನವಾದ ಕೋಟಿ ಕಂಠ ಗಾಯನ ಎಂಬ ಕಾರ್ಯಕ್ರಮ ಆಯೋಜಿಸಲಾಗಿದೆ. ಅಕ್ಟೋಬರ್ 28ಕ್ಕೆ ರಾಜ್ಯಾದ್ಯಂತ ಏಕಕಾಲದಲ್ಲಿ ಕನ್ನಡದ ಕವಿಗಳ ಜನಪ್ರಿಯ ಗೀತೆಗಳನ್ನು ಕೋಟಿ ಕಂಠಗಳಲ್ಲಿ ಪ್ರಸ್ತುತಪಡಿಸಲಾಗುತ್ತದೆ ಎಂದು ತಿಳಿಸಿದರು.

ಕಳೆದ ವರ್ಷ ಮಾತಾಡ್ ಮಾತಾಡ್ ಕನ್ನಡ ಎಂಬ ಘೋಷವಾಕ್ಯದೊಂದಿಗೆ ಆಯೋಜಿಸಿದ್ದ ಲಕ್ಷಕಂಠ ಗಾಯನಕ್ಕೆ ಈಗಾಗಲೇ ವ್ಯಾಪಕ ಪ್ರಶಂಸೆ ವ್ಯಕ್ತವಾಗಿದೆ. ಹೀಗಾಗಿ ರಾಜ್ಯೋತ್ಸವ ಪ್ರಯುಕ್ತ ಈ ಬಾರಿ ಕೋಟಿ ಕಂಠ ಗಾಯನ ಅಭಿಯಾನ ನಡೆಸಲು ತೀರ್ಮಾನಿಸಲಾಗಿದೆ. ಅಂದು ಏಕಕಾಲದಲ್ಲಿ ರಾಜ್ಯಾದ್ಯಂತ ಕೋಟಿ ಕಂಠಗಳಲ್ಲಿ ಕನ್ನಡ ಗೀತೆಗಳನ್ನು ಪ್ರಸ್ತುತಪಡಿಸುವ ಮಹತ್ವದ ನಿರ್ಧಾರ ತೆಗೆದುಕೊಳ್ಳಲಾಗಿದೆ. ಕನ್ನಡಿಗರು, ಅನಿವಾಸಿ ಕನ್ನಡಿಗರು, ಹೊರನಾಡ ಕನ್ನಡಿಗರು ಹಾಗೂ ಗಡಿನಾಡ ಕನ್ನಡಿಗರು ಈ ಅಭಿಯಾನದಲ್ಲಿ ಭಾಗವಹಿಸಲಿದ್ದು, ವಿಶ್ವಾದ್ಯಂತ ಕನ್ನಡದ ಕಂಪನ್ನು ಪಸರಿಸುವ ವಿನೂತನ ಕಾರ್ಯಕ್ರಮ ಇದಾಗಲಿದೆ ಎಂದು ಹೇಳಿದರು.

**ಐದು ಗೀತೆಗಳು ಆಯ್ಕೆ:** ಅಕ್ಟೋಬರ್ 28ರಂದು ಬೆಳಗ್ಗೆ ನಡೆಯುವ ಈ ಕಾರ್ಯಕ್ರಮದಲ್ಲಿ ರಾಷ್ಟ್ರಕವಿ ಕುವೆಂಪು ರಚಿತ ನಾಡಗೀತೆ 'ಜಯ ಭಾರತ ಜನನಿಯ ತನುಜಾತೆ', ಡಾ.ಚನ್ನವೀರ ಕಣವಿ ಅವರ 'ವಿಶ್ವ ವಿನೂತನ ವಿದ್ಯಾ ಚೇತನ ಸರ್ವ ಹೃದಯ ಸಂಸ್ಕಾರಿ', ಕುವೆಂಪು ಅವರ 'ಬಾರಿಸು ಕನ್ನಡ ಡಿಂಡಿಮವಾ', ಡಾ.ಡಿ.ಎಸ್.ಕರ್ಕಿಯವರ 'ಹಚ್ಚೇವು ಕನ್ನಡದ ದೀಪ' ಹಾಗೂ ಡಾ.ಹಂಸಲೇಖ ಅವರ 'ಹುಟ್ಟಿದರೆ ಕನ್ನಡ ನಾಡಲ್ಲಿ ಹುಟ್ಟಬೇಕು' ಎಂಬ ಐದು ಗೀತೆಗಳನ್ನು ಕೋಟಿ ಕಂಠಗಳಲ್ಲಿ ಹಾಡಲಾಗುತ್ತದೆ. ಇದನ್ನು ಹೊರತುಪಡಿಸಿಯೂ ಆಸಕ್ತರು ಬೇರೆ ಬೇರೆ ಕನ್ನಡ ಗೀತೆಗಳನ್ನು ಸಮಯದ ಮಿತಿ ಆಧರಿಸಿ ಪ್ರಸ್ತುಪಡಿಸಬಹುದಾಗಿದೆ ಎಂದು ತಿಳಿಸಿದರು.

ಈ ಅಭಿಯಾನ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲ ಸರಕಾರಿ ಕಚೇರಿಗಳಲ್ಲಿ, ಶಾಲಾ ಕಾಲೇಜುಗಳಲ್ಲಿ ವಿಶ್ವವಿದ್ಯಾಲಯಗಳು, ತಾಲ್ಲೂಕು ಕೇಂದ್ರಗಳು, ದೆಹಲಿ ಕನ್ನಡ ಸಂಘ, ಹೊರನಾಡು, ಗಡಿನಾಡ ಸಂಘಗಳ ಕಚೇರಿ, ವಿಧಾನಸೌಧದ ಮೆಟ್ಟಿಲು ಹಾಗೂ ವಿಧಾನಸೌಧ ವಿಕಾಸ ಸೌಧದ ಮಧ್ಯೆ ಇರುವ ಗಾಂಧಿ ಪ್ರತಿಮೆ

ಎದುರು, ಜನಪ್ರತಿನಿಧಿಗಳು, ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗ ಸಮೂಹ ಗಾಯನ ನಡೆಸಲಿದ್ದಾರೆ ಎಂದು ಹೇಳಿದರು.

**ಐತಿಹಾಸಿಕ ಸ್ಥಳಗಳಲ್ಲಿ ಮೊಳಗಲಿದೆ ಗಾಯನ**

ಕೆಂಪೇಗೌಡ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ, ಮೆಜೆಸ್ಟಿಕ್‌ನ ಸಂಗೊಳ್ಳಿ ರಾಯಣ್ಣ ರೈಲು ನಿಲ್ದಾಣ, ಮೆಟ್ರೋ ನಿಲ್ದಾಣದಲ್ಲೂ ಈ ಐದು ಕನ್ನಡ ಗೀತೆಗಳನ್ನು ಹಾಡುವುದಕ್ಕೆ ವ್ಯವಸ್ಥೆ ಕಲ್ಪಿಸಲಾಗಿದೆ. ನಾಡಿನ ಪ್ರಮುಖ ಪ್ರವಾಸಿ ಸ್ಥಳಗಳು, ಕೋಟೆಗಳು, ಕಡಲತೀರ, ಐಟಿ–ಬಿಟಿ ಕಂಪನಿಗಳು, ಆಸ್ಪತ್ರೆ ಹಾಗೂ ಜಿಲ್ಲಾ ಕೇಂದ್ರಗಳಲ್ಲೂ ಕೋಟಿ ಕಂಠ ಗಾಯನ ಅಭಿಯಾನ ನಡೆಯಲಿದ್ದು, ಸಮಸ್ತ ಕನ್ನಡಿಗರು ಅಭಿಮಾನ ಪೂರ್ವಕವಾಗಿ ಈ ಕಾರ್ಯಕ್ರಮದಲ್ಲಿ ಭಾಗವಹಿಸುವಂತೆ ಸಚಿವ ಸುನೀಲ್ ಕುಮಾರ್ ಮನವಿ ಮಾಡಿದ್ದಾರೆ.

ಕೋಟಿ ಕಂಠ ಗಾಯನ ಕಾರ್ಯಕ್ರಮದಲ್ಲಿ ಕನ್ನಡದ ಪ್ರಮುಖ ಸಾಧಕರು, ಮಠಾಧೀಶರು, ಸಾಹಿತಿಗಳು, ಕವಿಗಳು, ವಿದ್ಯಾರ್ಥಿ ಸಂಘಟನೆಗಳೂ ಭಾಗಿಯಾಗಲಿದ್ದು, ಕನ್ನಡದ ಅಸ್ಮಿತೆಯ ಅನಾವರಣ ಕಾರ್ಯದಲ್ಲಿ ರಾಜ್ಯದ ಪ್ರತಿಯೊಬ್ಬರು ಭಾಗವಹಿಸಬೇಕು ಎಂದು ಸುನೀಲ್ ಕುಮಾರ್, ಕನ್ನಡ ಮತ್ತು ಸಂಸ್ಕೃತಿ ಸಚಿವರು ತಿಳಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ: 07.10.2022

## 8. ಪರಿಶಿಷ್ಟರ ಮೀಸಲು ಹೆಚ್ಚಳ

ಜನಸಂಖ್ಯೆ ಆಧರಿಸಿ ಮೀಸಲು ಪ್ರಮಾಣ ಹೆಚ್ಚಳ ಮಾಡಬೇಕೆಂಬ ಪರಿಶಿಷ್ಟ ಪಂಗಡದ ಬಹುದಿನಗಳ ಹಕ್ಕೊತ್ತಾಯದ ವಿಚಾರದಲ್ಲಿ ಮಹರ್ಷಿ ವಾಲ್ಮೀಕಿ ಜಯಂತಿಗೆ ಮುನ್ನ ರಾಜ್ಯ ಸರಕಾರ ಶುಭ ಸುದ್ದಿ ನೀಡಲು ನಿರ್ಧರಿಸಿದೆ. ಪರಿಶಿಷ್ಟ ಜಾತಿಯ ಮೀಸಲನ್ನು ಶೇ.15 ರಿಂದ ಶೇ.17ಕ್ಕೆ ಹಾಗೂ ಪರಿಶಿಷ್ಟ ಪಂಗಡದ ಮೀಸಲು ಪ್ರಮಾಣವನ್ನು ಶೇ.3 ರಿಂದ ಶೇ.7ಕ್ಕೆ ಹೆಚ್ಚಿಸುವ ನಿಲುವಿಗೆ ಬರಲಾಗಿದೆ. ಈ ಸಂಬಂಧ ನಿರ್ಣಯ ಕೈಗೊಳ್ಳಲು ಸಂಪುಟ ಸಭೆ ಕರೆಯಲಾಗಿದೆ. ಆ ಬಳಿಕ ಮುಂದಿನ ಪ್ರಕ್ರಿಯೆ ಪ್ರಾರಂಭವಾಗಲಿದೆ.

ತಮ್ಮ ಜನಸಂಖ್ಯೆಗೆ ಅನುಗುಣವಾಗಿ ಮೀಸಲು ಹಕ್ಕು ಕಲ್ಪಿಸಬೇಕೆಂಬುದು ಪರಿಶಿಷ್ಟರ ಬಹು ವರುಷಗಳ ಬೇಡಿಕೆ. ಈ ಸಂಬಂಧ ನ್ಯಾಯಮೂರ್ತಿ ನಾಗಮೋಹನದಾಸ್ ಸಮಿತಿ ಶಿಫಾರಸ್ಸಿನ ಅನ್ವಯ, ಪರಿಶಿಷ್ಟರ ಮೀಸಲನ್ನು ಶೇ.18 ರಿಂದ ಶೇ.24ಕ್ಕೆ ಹೆಚ್ಚಿಸಲು ಸರಕಾರ ನಿರ್ಧರಿಸಿದೆ.

ಮೀಸಲು ಹೆಚ್ಚಳ ಸೇರಿದಂತೆ ಸಮಿತಿಯ ಇನ್ನಿತರ ಪ್ರಮುಖ ಶಿಫಾರಸ್ಸುಗಳ ಕುರಿತು ಸಿಎಂ ಗೃಹ ಕಚೇರಿ ಕೃಷ್ಣಾದಲ್ಲಿ ವಿಧಾನಮಂಡಲ ಉಭಯ ಸದನಗಳ ನಾಯಕರ ಸಭೆಯನ್ನು ನಡೆಸಲಾಯಿತು. ವಿಶೇಷವಾಗಿ ವಾಲ್ಮೀಕಿ ನಾಯಕ ಸಮುದಾಯದ ಸುದೀರ್ಘ ಹೋರಾಟದ ಆಶಯದಂತೆ ಮೀಸಲು ಹೆಚ್ಚಳ ಪ್ರಸ್ತಾವನೆಗೆ ಸರ್ವಪಕ್ಷ ಮುಖಂಡರು ಸಹಮತ ವ್ಯಕ್ತಪಡಿಸಿದರು.

ಸದನ ನಾಯಕರ ಸಭೆಗೂ ಮುನ್ನ ನಡೆದ ರಾಜ್ಯ ಬಿಜೆಪಿ ಕೋರ್ ಕಮಿಟಿ ಸಭೆಯಲ್ಲೂ ಈ ವಿಚಾರ ಪ್ರಸ್ತಾಪವಾಗಿತ್ತು. ಈ ತಿಂಗಳ 9ರೊಳಗೆ ಮೀಸಲು ಬೇಡಿಕೆ ಸಂಬಂಧ ಸೂಕ್ತ ನಿರ್ಣಯ ಪ್ರಕಟಿಸಬೇಕು ಎನ್ನುವುದು ಕೋರ್ ಕಮಿಟಿ ಸಭೆಯ ಸಲಹೆಯಾಗಿತ್ತು. ಸದನ ನಾಯಕರ ಸಭೆ ಕೂಡ ಮೀಸಲು ಹೆಚ್ಚಳ ವಿಚಾರದಲ್ಲಿ ಸಕಾರಾತ್ಮಕವಾಗಿ ಚರ್ಚಿಸಿತು. ಈ ಪ್ರಸ್ತಾವಕ್ಕೆ ಸಹಮತವೂ ದೊರಕಿತು. ಇದಾದ ಬಳಿಕ ಮಾತನಾಡಿದ ಸಿಎಂ ಬೊಮ್ಮಾಯಿ, ಶನಿವಾರವೇ ಸಂಪುಟ ಸಭೆ ಕರೆದು ಮೀಸಲು ಹೆಚ್ಚಳ ಸಂಬಂಧ ಅಗತ್ಯ ಆದೇಶ ಹೊರಡಿಸುವುದಾಗಿ ಭರವಸೆ ನೀಡಿದರು. ಆದರೆ ಮೀಸಲು ಪ್ರಮಾಣ ಶೇ.50 ಅನ್ನು ಮೀರಬಾರದು ಎಂಬ ಸುಪ್ರೀಂ ನಿರ್ಬಂಧದ ಹಿನ್ನೆಲೆಯಲ್ಲಿ ಈ ಪ್ರಕ್ರಿಯೆಯನ್ನು ಹೇಗೆ ಕೈಗೊಳ್ಳಲಾಗುತ್ತದೆ ಎಂಬ ಕುತೂಹಲವಿದೆ.

**ಕೇಂದ್ರ ಸರಕಾರಕ್ಕೆ ಶಿಫಾರಸ್ಸು**

ನ್ಯಾಯಮೂರ್ತಿ ನಾಗಮೋಹನದಾಸ್ ಸಮಿತಿ ವರದಿ ಶಿಫಾರಸ್ಸಿನಂತೆ ಪರಿಶಿಷ್ಟರ ಮೀಸಲು ಪ್ರಮಾಣ ಹೆಚ್ಚಿಸುವ ಹಾಗೂ ಇನ್ನಿತರ 7 ಪ್ರಮುಖ ಶಿಫಾರಸ್ಸುಗಳಿಗೆ 'ಬೊಮ್ಮಾಯಿ ಅಧ್ಯಕ್ಷತೆಯಲ್ಲಿ ನಡೆದ ಸರ್ವಪಕ್ಷ ಮುಖಂಡರ ಸಭೆ ಒಪ್ಪಿತು. ಸಿದ್ದರಾಮಯ್ಯ, ಎಚ್.ಡಿ.ಕುಮಾರಸ್ವಾಮಿ ಸೇರಿ ಸಭೆಯಲ್ಲಿ ಪಾಲ್ಗೊಂಡ ಎಲ್ಲ ನಾಯಕರು ಸಹಮತ ಸೂಚಿಸಿದರು.

ಪರಿಶಿಷ್ಟರು ಮತ್ತು ಇತರ ಹಿಂದುಳಿದ ವರ್ಗಗಳ ಶೇ.50 ಮೀಸಲಿನಲ್ಲಿ ಯಾವ ವ್ಯತ್ಯಾಸವನ್ನೂ ಮಾಡದೆ ಮೀಸಲು ಪ್ರಮಾಣ ಶೇ.50ಕ್ಕಿಂತ ಹೆಚ್ಚಳ ಮಾಡಲು 'ವಿಶೇಷ ಪ್ರಕರಣ' ಎಂದು ಪರಿಗಣಿಸಿ ಅನುಸೂಚಿ 9ರಲ್ಲಿ ಸೇರ್ಪಡೆ ಮಾಡಲು ಸಂವಿಧಾನದ ತಿದ್ದುಪಡಿ ಅವಶ್ಯಕವಾಗಿದೆ. ಅದಕ್ಕಾಗಿ ಮುಂದಿನ ವಿಧಾನಮಂಡಲ ಅಧಿವೇಶನದಲ್ಲಿ ಸಂಪುಟದ ನಿರ್ಣಯಕ್ಕೆ ಪೂರಕವಾಗಿ ವಿಧೇಯಕ ಅಥವಾ ನಿರ್ಣಯವೊಂದನ್ನು ಅಂಗೀಕರಿಸಿ ಕೇಂದ್ರಕ್ಕೆ ಶಿಫಾರಸ್ಸು ಮಾಡಲು ರಾಜ್ಯ ಸರಕಾರ ಬಯಸಿದೆ.

**ಬಿಜೆಪಿ ನಿರ್ಣಯ** – ಪರಿಶಿಷ್ಟ ಪಂಗಡ ಮೀಸಲಾತಿ ಹೆಚ್ಚಳ ಬೇಡಿಕೆಯನ್ನು ಅಕ್ಟೋಬರ್ 9ರ ವಾಲ್ಮೀಕಿ ಜಯಂತಿಯೊಳಗೆ ಪರಿಶಿಷ್ಟ ಪಂಗಡದ ಮೀಸಲಾತಿ ಹೆಚ್ಚಳ ಬೇಡಿಕೆ ಪುರಸ್ಕರಿಸಿ ಹೆಚ್ಚಿಸುವ ಬಗ್ಗೆ ಕ್ರಮ

ಕೈಗೊಳ್ಳುವಂತೆಯೂ ಬಿಜೆಪಿ ಕೋರ್ ಕಮಿಟಿಯಲ್ಲಿ ಸರ್ವಾನುಮತ ನಿರ್ಣಯ ಕೈಗೊಂಡು ಸಿಎಂ ಬೊಮ್ಮಾಯಿ ಅವರಿಗೆ ಒತ್ತಾಯಿಸಿತ್ತು ಎಂದು ತಿಳಿಸಿದರು.

**ವಾಲ್ಮೀಕಿ ಜಯಂತಿಗೆ ಕೊಡುಗೆ**

ಮೀಸಲು ಹೆಚ್ಚಳ ನಿರ್ಧಾರ ಒಂದು ರೀತಿಯಲ್ಲಿ ಪರಿಶಿಷ್ಟರಿಗೆ ವಾಲ್ಮೀಕಿ ಜಯಂತಿಯ ಕೊಡುಗೆಯೂ ಹೌದು. ಈ ಬೇಡಿಕೆ ಈಡೇರಿಕೆಗಾಗಿ ವಾಲ್ಮೀಕಿ ಗುರುಪೀಠದ ಪ್ರಸನ್ನಾನಂದಪುರಿ ಸ್ವಾಮೀಜಿ ನೇತೃತ್ವದಲ್ಲಿ ನಡೆದ ಪಾದಯಾತ್ರೆ ಮತ್ತು ಕಳೆದ 240 ದಿನದಿಂದ ಸ್ವಾಮೀಜಿ ನಡೆಸುತ್ತಿರುವ ಸತ್ಯಾಗ್ರಹಕ್ಕೆ ಸ್ಪಂದನೆ ಸಿಕ್ಕಂತಾಗಿದೆ. ಜೊತೆಗೆ ವಾಲ್ಮೀಕಿ ಜಯಂತಿ ಆಚರಣೆಯ ಅಧಿಕೃತ ಕಾರ್ಯಕ್ರಮಗಳನ್ನು ಬಹಿಷ್ಕರಿಸುವ ಸಮುದಾಯದ ಎಚ್ಚರಿಕೆಯ ಬಿಸಿಯಿಂದ ಸರಕಾರ ಪಾರಾದಂತಾಗಿದೆ.

ನ್ಯಾಯಮೂರ್ತಿ ನಾಗಮೋಹನದಾಸ್ ವರದಿ ಶಿಫಾರಸ್ಸಿನಂತೆ ಪರಿಶಿಷ್ಟರ ಮೀಸಲು ಪ್ರಮಾಣ ಹೆಚ್ಚಳಕ್ಕೆ ಸರ್ವಪಕ್ಷ ಸಭೆ ಸಹಮತದ ತೀರ್ಮಾನ ತೆಗೆದುಕೊಂಡಿದೆ. ಸಂಪುಟ ಸಭೆ ನಡೆಸಿ ಆದೇಶ ಹೊರಡಿಸಲಾಗುವುದು ಮತ್ತು ಕಾನೂನಾತ್ಮಕ ಕ್ರಮ ತೆಗೆದುಕೊಳ್ಳಲಾಗುವುದು.

– **ಬಸವರಾಜ ಬೊಮ್ಮಾಯಿ,** ಸಿಎಂ

ಪರಿಶಿಷ್ಟರ ಮೀಸಲು ಹೆಚ್ಚಳ ಮಾಡಲು ಸಂವಿಧಾನ ತಿದ್ದುಪಡಿ ಅಗತ್ಯವಿದೆ. ರಾಜ್ಯ ಸರಕಾರ ವಿಳಂಬ ಮಾಡದೆ ಈ ಸಂಬಂಧ ನಿರ್ಣಯ ಮಾಡಿ ಕೇಂದ್ರಕ್ಕೆ ಕಳಿಸಬೇಕು. ಕೇಂದ್ರ ಸರಕಾರ ಸಂವಿಧಾನ ತಿದ್ದುಪಡಿಯ ಮೂಲಕ ಮೀಸಲು ಹೆಚ್ಚಿಸಿ ಅದನ್ನು ಸಂವಿಧಾನದ 9ನೇ ಶೆಡ್ಯೂಲ್‌ನಲ್ಲಿ ಸೇರಿಸಿದರೆ ಕೋರ್ಟ್‌ನಲ್ಲಿ ಪ್ರಶ್ನಿಸಲು ಅವಕಾಶವಿಲ್ಲ. ಇದೇ ಮಾದರಿಯಲ್ಲಿ ಉತ್ತರ ಪ್ರದೇಶ ಮತ್ತು ಮಹಾರಾಷ್ಟ್ರದಲ್ಲಿ ಈಗಾಗಲೇ ಶೇ.50ಕ್ಕಿಂತ ಹೆಚ್ಚು ಮೀಸಲು ಕಲ್ಪಿಸಲಾಗಿದೆ.

**–ಸಿದ್ದರಾಮಯ್ಯ,** ಪ್ರತಿಪಕ್ಷ ನಾಯಕ

ಸರಕಾರವು ಸಮಯ ವ್ಯರ್ಥಮಾಡದೆ ಪರಿಶಿಷ್ಟರ ಮೀಸಲು ಹೆಚ್ಚಿಸಬೇಕು. ಜೊತೆಗೆ ಒಳ ಮೀಸಲು ಬಗ್ಗೆಯೂ ಚರ್ಚಿಸಿದ್ದೇವೆ. ಈ ಸಂಬಂಧ ವರದಿ ಸಲ್ಲಿಸಿ 10 ವರ್ಷಗಳಾಗಿದ್ದು ಕ್ರಮಕೈಗೊಳ್ಳಲು ಸರಕಾರಕ್ಕೆ ಸಲಹೆ ನೀಡಲಾಗಿದೆ.

**–ಎಚ್.ಡಿ.ಕುಮಾರಸ್ವಾಮಿ,** ಮಾಜಿ ಸಿಎಂ

ಆಧಾರ: ವಿಜಯ ಕರ್ನಾಟಕ, ದಿನಾಂಕ: 08.10.2022

## 9. ಸುಗ್ರೀವಾಜ್ಞೆ ಮೂಲಕ ಮೀಸಲು ಹೆಚ್ಚಳ

ರಾಜ್ಯದಲ್ಲಿ ನ್ಯಾಯಮೂರ್ತಿ ನಾಗಮೋಹನ್‌ದಾಸ್ ಸಮಿತಿ ವರದಿ ಅನ್ವಯ ಎಸ್.ಟಿ. ಮೀಸಲಾತಿಯನ್ನು ಶೇ.3 ರಿಂದ 7ಕ್ಕೆ ಹೆಚ್ಚಳ ಮಾಡಲು ಸಂವಿಧಾನ ತಿದ್ದುಪಡಿ ಅಗತ್ಯವಿದ್ದು, ಈ ಅಧಿಕಾರ ಕೇಂದ್ರ ಸರ್ಕಾರಕ್ಕೆ ಮಾತ್ರವಿದೆ. ಹೀಗಾಗಿ ಕೇಂದ್ರ ಹಾಗೂ ರಾಜ್ಯದಲ್ಲಿ ಅಧಿಕಾರದಲ್ಲಿರುವ ಬಿಜೆಪಿಯು ಅನಗತ್ಯ ವಿಳಂಬ ಮಾಡದೆ ಸುಗ್ರೀವಾಜ್ಞೆ ಮೂಲಕ ಮೀಸಲಾತಿ ಹೆಚ್ಚಿಸಿ ಸಂವಿಧಾನದ 9ನೇ ಶೆಡ್ಯೂಲ್‌ಗೆ ಸೇರಿಸಲು ಕ್ರಮ ಕೈಗೊಳ್ಳಬೇಕು ಎಂದು ವಿಧಾನಸಭೆ ವಿರೋಧಪಕ್ಷದ ನಾಯಕ ಸಿದ್ದರಾಮಯ್ಯ ಆಗ್ರಹಿಸಿದ್ದಾರೆ.

ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ನೇತೃತ್ವದಲ್ಲಿ ನಡೆದ ಸರ್ವಪಕ್ಷದ ಸಭೆ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಬಿಜೆಪಿಗೆ ನಿಜವಾಗಿಯೂ ಕಾಳಜಿಯಿದ್ದರೆ ಮುಖ್ಯಮಂತ್ರಿಗಳು ತಕ್ಷಣ ವಿಧಾನಮಂಡಲದ ವಿಶೇಷ ಅಧಿವೇಶನ ಕರೆದು ಎಸ್‌ಸಿ/ಎಸ್‌ಟಿ ಮೀಸಲಾತಿ ಹೆಚ್ಚಿಸುವ ಬಗ್ಗೆ ತೀರ್ಮಾನ ಕೈಗೊಂಡು ಕೇಂದ್ರಕ್ಕೆ ಕಳುಹಿಸಬೇಕು. ಜೊತೆಗೆ ಕೂಡಲೇ ಸುಗ್ರೀವಾಜ್ಞೆ ಮೂಲಕ ಮೀಸಲಾತಿಯನ್ನು ಹೆಚ್ಚಿಸಿ ಸಂವಿಧಾನದ 9ನೇ ಶೆಡ್ಯೂಲ್‌ನಲ್ಲಿ ಸೇರಿಸಲು ಕೇಂದ್ರದ ಮೇಲೆ ರಾಜ್ಯ ಸರ್ಕಾರ ಒತ್ತಡ ಹೇರಬೇಕು ಎಂದು ಹೇಳಿದರು.

'ನಮ್ಮ ಸರ್ಕಾರ ಇದ್ದಾಗ ರಚನೆಯಾಗಿದ್ದ ನಾಗಮೋಹನ್ ದಾಸ್ ಸಮಿತಿ ವರದಿ ನೀಡಿ ಎರಡೂವರೆ ವರ್ಷ ಕಳೆದಿದೆ. ನಾಗಮೋಹನ್ ದಾಸ್ ಅವರ ವರದಿ ಪ್ರಕಾರ ಎಸ್.ಸಿ ಮೀಸಲಾತಿಯನ್ನು 15% ರಿಂದ 17% ಗೆ ಏರಿಕೆ ಮಾಡಬೇಕು ಹಾಗೂ ಎಸ್ಟಿಗಳಿಗೆ 3% ಇಂದ 7% ಗೆ ಮೀಸಲಾತಿ ಏರಿಕೆ ಮಾಡಬೇಕು ಎಂದು ಶಿಫಾರಸ್ಸು ಮಾಡಿದೆ. ಕೇಂದ್ರ ಸಂವಿಧಾನಕ್ಕೆ ತಿದ್ದುಪಡಿ ಮೂಲಕ ಮೀಸಲಾತಿಯನ್ನು ಹೆಚ್ಚಿಸಿ ಅದನ್ನು ಸಂವಿಧಾನದ 9ನೇ ಶೆಡ್ಯೂಲ್‌ನಲ್ಲಿ ಸೇರಿಸಿದರೆ ನ್ಯಾಯಾಲಯದಲ್ಲಿಯೂ ಅದನ್ನು ಯಾರೂ ಪ್ರಶ್ನಿಸುವಂತಿಲ್ಲ, ಈ ಕೆಲಸವನ್ನು ಮೊದಲು ಕೇಂದ್ರ ಮಾಡಬೇಕು' ಎಂದರು.

### ಒಳಮೀಸಲು ಬಗ್ಗೆ ಶೀಘ್ರ ನಿರ್ಧರಿಸಿ

ಎಸ್ಸಿ ಮತ್ತು ಎಸ್‌ಟಿ ಸಮುದಾಯಕ್ಕೆ ಮೀಸಲಾತಿ ಏರಿಕೆ ಮಾಡುವ ಸಂಬಂಧ ಹಾಗೂ ಒಳಮೀಸಲು ಸಂಬಂಧ ಸರ್ಕಾರ ಆದಷ್ಟು ಬೇಗ ನಿರ್ಣಯ ಕೈಗೊಳ್ಳಬೇಕು ಎಂದು ಮಾಜಿ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಒತ್ತಾಯ ಮಾಡಿದ್ದಾರೆ. ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ದೇಶದ ಹಲವಾರು ರಾಜ್ಯದಲ್ಲಿ ಹಲವು ಸಣ್ಣ ಪುಟ್ಟ ಸಮಾಜದರು ಇದ್ದಾರೆ. ಅದರ ಜೊತೆಗೆ ಒಳ ಮೀಸಲಾತಿ ಬಗ್ಗೆಯೂ ಚರ್ಚೆ ಮಾಡಿದ್ದೇವೆ. 2005 ರಲ್ಲಿ ಒಳ ಮೀಸಲಾತಿ ವಿಚಾರವಾಗಿ ಕಮಿಟಿ

ರಚನೆ ಮಾಡಿತ್ತು. ಇನ್ನೂ ಅದು ಕಾರ್ಯಗತವಾಗಿಲ್ಲ. ಇದರ ಬಗ್ಗೆಯೂ ಕ್ರಮ ತೆಗೆದುಕೊಳ್ಳುವಂತೆ ಸಭೆಯಲ್ಲಿ ಹೇಳಿದ್ದೇವೆ ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ: 08.10.2022

## 10. Tipu Express is now Wodeyar Express

The Railways has renamed Tipu Express, which plies between Mysuru and Bengaluru, as Wodeyar Express while an express service from Mysuru to Talaguppa has 'been named after poet laureate Kuvempu.

The demand was made by Mysuru MP Pratap Simha, in a letter to Minister for Railways Ashwini Vaishnaw a few months ago. His plea was approved and a notification to this effect was issued by the Railway Board on and the order renaming the train will come into effect from.

However, Mr. Simha's critics have slammed the move on the grounds that this was in continuation of the BJP name-changing spree to efface historical legacy of Muslim rulers.

Mr. Simha, in his letter, highlighted the contribution of the Wadiyars to the development and expansion of railways in the then princely Mysore state.

Similarly, the Talguppa - Mysuru Express has been renamed as Kuvempu Express after the poet laureate, who was born in Tirthahalli in Shivamogga district.

While there is no controversy over renaming the Talguppa Express after Kuvempu, the renaming of Tipu Express has drawn a mixed response.

A section of railway activists, who constantly bat for better amenities for passengers, said there was no doubt that the Wodeyars of Mysore made immense contribution for expansion of rail connectivity in the State. The authorities could have honoured the Wodeyars with a new train and a new rake instead of renaming an old train, said the railway activists who did not wish to be named and wade into the controversy.

But Mr.Simha had, in the letter, justified his demands on the grounds that there was no railway system in India during the regime of Tipu Sultan while the Wodeyars had invested heavily in promoting railways as a means of fast transportation and ensure timely relief during famine. Tipu Express was flagged off on April 15, 1980 as a superfast train connecting Mysuru and Bengaluru, and the train covered the 139 km between the two cities in 3.15 hours chugging along the single-line metre gauge track.

Courtesy: The Hindu, dt: 08.10.2022

## 11. ಪರಿಶಿಷ್ಟರ ಮೀಸಲು ಹೆಚ್ಚಳ ಪ್ರಕ್ರಿಯೆ ಹೇಗೆ

ಯಾವುದೇ ಸಮುದಾಯದ ಮೀಸಲು ಕಡಿತ ಮಾಡದೆ, ಇದರ ಪ್ರಮಾಣ ಶೇ.50 ಮೀರಬಾರದು ಎಂಬ ಸುಪ್ರೀಂಕೋರ್ಟ್ ಆದೇಶಕ್ಕೂ ತೊಡಕಾಗದಂತೆ ಪರಿಶಿಷ್ಟರ ಮೀಸಲು ಪ್ರಮಾಣವನ್ನು ಶೇ.18ರಿಂದ

ಶೇ.24ಕ್ಕೆ ಸರಕಾರ ಹೇಗೆ ಏರಿಕೆ ಮಾಡಲಿದೆ ಎಂಬ ಕುತೂಹಲದ ಪ್ರಶ್ನೆ ಸೃಷ್ಟಿಯಾಗಿದೆ. ಇದಕ್ಕೆ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ ಅವರು ವಿವರಣೆ ನೀಡಿದ್ದಾರೆ.

ನ್ಯಾಯಮೂರ್ತಿ ನಾಗಮೋಹನದಾಸ್ ಸಮಿತಿ ವರದಿ ಆಧರಿಸಿ ಸರ್ವಪಕ್ಷ ಸಭೆ ಕೈಗೊಂಡಿರುವ ತೀರ್ಮಾನದಂತೆ ಪರಿಶಿಷ್ಟ ಜಾತಿ ಮೀಸಲಾತಿ ಶೇ.15ರಿಂದ ಶೇ.17ಕ್ಕೆ ಹಾಗೂ ಪರಿಶಿಷ್ಟ ಪಂಗಡದ ಮೀಸಲಾತಿ ಶೇ.3ರಿಂದ ಶೇ.7ಕ್ಕೆ ಹೆಚ್ಚಳ ಮಾಡಲು ಸಚಿವ ಸಂಪುಟ ಸಭೆ ಅಧಿಕೃತ ನಿರ್ಣಯ ಕೈಗೊಳ್ಳಲಿದೆ. ಈ ತೀರ್ಮಾನ ಆಧರಿಸಿ ಮುಂದಿನ ವಿಧಾನಮಂಡಲ ಅಧಿವೇಶನದಲ್ಲಿ ವಿಧೇಯಕ ಅಥವಾ ಗೊತ್ತುವಳಿ ಸ್ವೀಕರಿಸಿ, ಕೇಂದ್ರ ಸರಕಾರಕ್ಕೆ ಶಿಫಾರಸ್ಸು ಮಾಡಲಾಗುತ್ತದೆ.

ಸಂವಿಧಾನ ತಿದ್ದುಪಡಿ ಮೂಲಕ ಶೆಡ್ಯೂಲ್ 9ರಲ್ಲಿ ಸೇರ್ಪಡೆ ಮಾಡಿದರೆ, ಕೋರ್ಟ್‌ನಲ್ಲಿ ಪ್ರಶ್ನಿಸಲು ಅವಕಾಶವಿಲ್ಲ. ಈ ಹಿಂದೆ 1994ರಲ್ಲಿ ತಮಿಳುನಾಡು ಸರಕಾರ ಇದೇ ರೀತಿ ಮಾಡಿದೆ. ಆ ಬಳಿಕ ಪಶ್ಚಿಮ ಬಂಗಾಳದ ಭೂ ಸುಧಾರಣೆ ಕಾಯಿದೆಗೆ ಸಂಬಂಧಿಸಿದಂತೆ 2007ರಲ್ಲಿ ಸುಪ್ರೀಂಕೋರ್ಟ್ ತೀರ್ಪಿನಲ್ಲಿ ಮೂಲಭೂತ ಹಕ್ಕಿಗೆ ಚ್ಯುತಿಯಾದರೆ, ಸಂವಿಧಾನದ ಅನುಸೂಚಿ 9ರ ವಿಚಾರಗಳಿಗೆ ನ್ಯಾಯಾಂಗದ ವಿನಾಯಿತಿ ನೀಡಬೇಕು ಎಂದಿದೆ. ಉತ್ತರ ಪ್ರದೇಶ, ಮಹಾರಾಷ್ಟ್ರದಲ್ಲೂ ಮೀಸಲಾತಿ ಪ್ರಮಾಣವನ್ನು ಶೇ.50ಕ್ಕಿಂತ ಹೆಚ್ಚಿದೆ. ಈಗ ಕರ್ನಾಟಕ ಸರಕಾರ ಕೂಡ ಇದೇ ಮಾರ್ಗ ತುಳಿಯಲು ಬಯಸಿದೆ.

**ಒಬಿಸಿಗೆ ಬಾಧಕವಿಲ್ಲ**

"ಪರಿಶಿಷ್ಟರ ಮೀಸಲು ಹೆಚ್ಚಳದಿಂದ ಇತರೆ ಸಮುದಾಯಗಳ ಮೀಸಲು ಪ್ರಮಾಣ ತಗ್ಗುವುದಿಲ್ಲ. ನ್ಯಾಯಮೂರ್ತಿ ನಾಗಮೋಹನದಾಸ್ ಅವರು ಸಾಂವಿಧಾನಿಕ ಮತ್ತು ಕಾನೂನಾತ್ಮಕವಾಗಿ ಎಲ್ಲ ವಿಚಾರ ಪರಾಮರ್ಶಿಸಿಯೇ ವರದಿ ನೀಡಿದ್ದರು. 'ವಿಶೇಷ ಪ್ರಕರಣ' ಎಂದು ಸಂವಿಧಾನದ ಶೆಡ್ಯೂಲ್ 9ರಲ್ಲಿ ಸೇರ್ಪಡೆ ಮಾಡಲು ಅವಕಾಶವಿದೆ. ಇದರಿಂದ ಒಬಿಸಿ ಹಾಲಿ ಮೀಸಲಿಗೆ ಯಾವ ಬಾಧಕವೂ ಇಲ್ಲ" ಎಂದು ಸಚಿವರು ಸ್ಪಷ್ಟಪಡಿಸಿದರು.

**ಪರಿಶಿಷ್ಟರ ಹಕ್ಕೊತ್ತಾಯದ ಹಿನ್ನೆಲೆ**

ಪರಿಶಿಷ್ಟ ಜಾತಿ, ಪಂಗಡದವರು ಹಲವು ವರ್ಷಗಳಿಂದ ಹೋರಾಟ ನಡೆಸುತ್ತಿದ್ದರು. ವಿಶೇಷವಾಗಿ ಪರಿಶಿಷ್ಟ ಪಂಗಡದ ಮೀಸಲಾತಿ ಶೇ.7.5ಕ್ಕೆ ಏರಿಕೆ ಮಾಡಬೇಕು ಎಂದು ವಾಲ್ಮೀಕಿ/ನಾಯಕ ಸಮುದಾಯ ಸಂಘಟಿತ ಹೋರಾಟ ನಡೆಸಿಕೊಂಡು ಬಂದಿದೆ.

ಹಿಂದಿನ ಸರಕಾರದ ಅವಧಿಯಲ್ಲಿ ನ್ಯಾಯಮೂರ್ತಿ ನಾಗಮೋಹನದಾಸ ಸಮಿತಿ ರಚಿಸಿ, ಮೀಸಲು ಹೆಚ್ಚಳ ಬೇಡಿಕೆ ಕುರಿತಂತೆ ಪರಿಶೀಲಿಸಿ ವರದಿ ನೀಡಲು ಸೂಚಿಸಲಾಗಿತ್ತು. ಮಾಜಿ ಸಿಎಂ ಬಿ.ಎಸ್.ಯಡಿಯೂರಪ್ಪ ಅಧಿಕಾರಾವಧಿಯಲ್ಲಿ ಸಮಿತಿಯ ಅವಧಿಯನ್ನು 6 ತಿಂಗಳ ಕಾಲ ವಿಸ್ತರಣೆ ಮಾಡಲಾಗಿತ್ತು. 2011ರ ಜನಗಣತಿ ಆಧರಿಸಿ ಪರಿಶಿಷ್ಟರ ಮೀಸಲು ಪ್ರಮಾಣ ಏರಿಕೆ ಮಾಡುವುದು ಒಳಗೊಂಡು 7 ಪ್ರಮುಖ ಶಿಫಾರಸ್ಸು ಒಳಗೊಂಡ ತನ್ನ ವರದಿಯನ್ನು ಸಮಿತಿಯು 2020ರಲ್ಲಿ ಸರಕಾರಕ್ಕೆ ಸಲ್ಲಿಸಿತ್ತು.

ಈ ವರದಿ ಸಲ್ಲಿಕೆ ಬಳಿಕ, ಮೀಸಲು ಸಂಬಂಧ ಸುಪ್ರೀಂಕೋರ್ಟ್‌ನಲ್ಲಿ ಎರಡು ತೀರ್ಪುಗಳು ಪ್ರಕಟವಾದ ಹಿನ್ನೆಲೆಯಲ್ಲಿ ವರದಿ ಪರಾಮರ್ಶೆಗೆ ಮತ್ತೊಬ್ಬ ನ್ಯಾಯಮೂರ್ತಿಗಳ ಸಮಿತಿಗೆ ಸರಕಾರ ಸೂಚಿಸಿತ್ತು. ಈ ಮಧ್ಯೆ, ಬೇಡಿಕೆ ಈಡೇರಿಕೆಗಾಗಿ ವಾಲ್ಮೀಕಿ ನಾಯಕ ಸಮುದಾಯವು ಸಂಘಟಿತ ಹೋರಾಟ ಆರಂಭಿಸಿತ್ತು. ವಾಲ್ಮೀಕಿ ಸಮುದಾಯದ ಶ್ರೀಗಳ ನೇತೃತ್ವದಲ್ಲಿ ಪಾದಯಾತ್ರೆ ಹಾಗೂ 240 ದಿನಗಳಿಂದ ಸತ್ಯಾಗ್ರಹ ಮುಂದುವರಿದಿತ್ತು. ಈ ಹಕ್ಕೊತ್ತಾಯವನ್ನು ಸಚಿವರಾದ ಬಿ.ಶ್ರೀರಾಮುಲು, ಗೋವಿಂದ ಕಾರಜೋಳ, ಮಾಜಿ ಸಚಿವ ರಮೇಶ್ ಜಾರಕಿಹೊಳಿ ಸೇರಿದಂತೆ ಹಲವು ನಾಯಕರೂ ಬೆಂಬಲಿಸಿದ್ದರು.

**ಒಳ ಮೀಸಲಾತಿಗೂ ಶೀಘ್ರ ಸ್ಪಂದನೆ**

ಪರಿಶಿಷ್ಟರ ಮೀಸಲು ಪ್ರಮಾಣ ಹೆಚ್ಚಳ ಬೇಡಿಕೆಗೆ ಒಪ್ಪಿದ ಬೆನ್ನಲ್ಲೇ ಒಳ ಮೀಸಲು ಹಕ್ಕೊತ್ತಾಯದ ವಿಚಾರದಲ್ಲಿ ಶೀಘ್ರ ಸ್ಪಂದಿಸುವ ನಿಲುವನ್ನು ಸಿಎಂ ಬಸವರಾಜ ಬೊಮ್ಮಾಯಿ ಪ್ರಕಟಿಸಿದ್ದಾರೆ.

ಗೃಹ ಕಚೇರಿ ಕೃಷ್ಣಾದಲ್ಲಿ ನಡೆದ ಸರ್ವಪಕ್ಷ ಮುಖಂಡರ ಸಭೆ ಬಳಿಕ ಮಾತನಾಡಿದ ಸಿಎಂ "ಪರಿಶಿಷ್ಟ ಜಾತಿ ಮತ್ತು ಪಂಗಡದೊಳಗೆ ಕೆಲವರಿಗೆ ನ್ಯಾಯ ದೊರಕಿಲ್ಲ ಎಂಬ ಕೂಗಿದೆ. ಈ ಸಂಬಂಧ ಈಗಾಗಲೇ ಆಯೋಗಗಳು ನೀಡಿರುವ ವರದಿಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿ ಒಳ್ಳೆಯ ತೀರ್ಮಾನವನ್ನು ಸರಕಾರ ತೆಗೆದುಕೊಳ್ಳಲಿದೆ," ಎಂದು ಭರವಸೆ ನೀಡಿದರು.

"ಮೀಸಲು ಸೌಲಭ್ಯದ ವಿಚಾರದಲ್ಲಿ ಯಾರಿಗೂ ಅನ್ಯಾಯವಾಗದಂತೆ ಎಲ್ಲರೊಂದಿಗೆ ಚರ್ಚಿಸಲಾಗುವುದು. ಕಾನೂನು ತಜ್ಞರೊಂದಿಗೆ ಸಮಾಲೋಚಿಸಲಾಗುವುದು. ಎಲ್ಲ ಪಕ್ಷಗಳ ಅಭಿಪ್ರಾಯ. ಪಡೆದು ಸೂಕ್ತ ನಿರ್ಧಾರ ಕೈಗೊಳ್ಳಲಾಗುವುದು," ಎಂದರು.

**ಒಬಿಸಿ ಮೀಸಲು**

“ಮೀಸಲು ವಿಚಾರದಲ್ಲಿ ಎಲ್ಲ ಸಮುದಾಯಗಳಲ್ಲೂ ಆಕಾಂಕ್ಷೆಗಳು ಹೆಚ್ಚಾಗಿವೆ. ಹಿಂದುಳಿದ ವರ್ಗಗಳ ಮೀಸಲು ವಿಚಾರದಲ್ಲೂ ಹಕ್ಕೊತ್ತಾಯಗಳಿವೆ. ಈ ಕುರಿತಂತೆ ಕುಲಶಾಸ್ತ್ರೀಯ ಹಾಗೂ ಹಿಂದುಳಿದ ವರ್ಗಗಳ ಶಾಶ್ವತ ಆಯೋಗದ ಅಧ್ಯಯನ ನಡೆಯುತ್ತಿದೆ. ಈ ವರದಿಗಳು ಬಂದ ನಂತರ ಆಯಾ ಸಮಾಜಕ್ಕೆ ನ್ಯಾಯ ದೊರಕಿಸಲು ಸರಕಾರ ಮುಂದಾಗಲಿದೆ,” ಎಂದು ಸಿಎಂ ಬೊಮ್ಮಾಯಿ ಭರವಸೆ ನೀಡಿದರು.

“ಮೀಸಲು ಸೌಲಭ್ಯದಿಂದ ಹೊರಗಿದ್ದ ಆರ್ಥಿಕವಾಗಿ ಹಿಂದುಳಿದವರಿಗೆ ನೀಡಿರುವ ಶೇ.10 ಮೀಸಲು ನೀಡುವ ತೀರ್ಮಾನ ಸುಪ್ರೀಂಕೋರ್ಟ್‌ನಲ್ಲಿ ಬಾಕಿ ಇದೆ. ತೀರ್ಪು ಹೊರಬಂದ ಬಳಿಕ ಜಾರಿಗೆ ಕ್ರಮ ಕೈಗೊಳ್ಳಲಾಗುವುದು,” ಎಂದು ಸ್ಪಷ್ಟಪಡಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 08.10.2022

## 12. Cabinet panel to study internal quotas for SC/STs

A committee, under the law minister, will be constituted to submit a report on providing reservation within SCs and STs, the Cabinet decided.

"The Justice H N Nagmohan Das Commission has quoted the Justice A J Sadashiva Commission's report on giving internal reservation. We will study who should get how much internal reservation on a pro-data basis," Law Minister J C Madhuswamy said, briefing reporters.

In 2021, Sadashiva Commission recommended the reclassification of the SCs into four groups - right, left, touchables and other SCs-for equitable distribution of reservation.

Chief Minister Basavaraj Bommai said the Nagmohan Das Commission had pointed out that bottom-most communities had not received reservation benefits.

"There are many Supreme Court judgements on the internal reservation. We will take everybody into confidence before making a decision," he said.

The special Cabinet meeting also decided to set up a separate development corporation for the Alemari (nomadic) communities as recommended by the Nagmohan Das Commission.

**Pandora's Box**

There are reservation related demands made by various other communities: The Panchamasali Lingayats want to come under Category 2A (they are now under Category 3B), Kurubas want to come under ST (they are now OBC), the Veerashaiva-Lingayats and Vokkaligas want to be included in the central OBC list.

But, Madhuswamy said the government wanted to first act on the SC/ST hike as "we had promised them" and "we didn't want to open a Pandora's Box". He maintained that the

government would discuss other demands. "It's just that there's no scientific report about their demands before us," he said.

"We have admissions (education) and appointments (jobs) to be done. There were cries that SC/STs aren't getting enough opportunities," he said.

**See withdraws stir after 246 days**

Valmiki Gurupeetha seer Prasannananda Swami announced the withdrawal of his agitation demanding an increase in the ST reservation that lasted 246 days.

After special Cabinet meeting, the seer met Chief Minister Basavaraj Bommai along with other pontiffs, ST Welfare Minister B.Sriramulu, BJP ST MLAs and others.

Courtesy: Deccan Herald, dt: 09.10.2022

## 13. ಪರಿಶಿಷ್ಟರ ಬೆನ್ನಲ್ಲೇ ಪಂಚಮಸಾಲಿ ಪಟ್ಟು

ಪರಿಶಿಷ್ಟ ಜಾತಿ, ಪಂಗಡದ ಬಹುವರ್ಷದ ಬೇಡಿಕೆಯಾಗಿದ್ದ ಮೀಸಲು ಮಿತಿ ಹೆಚ್ಚಳಕ್ಕೆ ರಾಜ್ಯ ಸರಕಾರ ಸಂಪುಟ ಒಪ್ಪಿಗೆ ನೀಡಿದ ಬೆನ್ನಲ್ಲೇ, ಪಂಚಮಸಾಲಿ ಸಮುದಾಯದ ಹೋರಾಟಕ್ಕೆ ಇನ್ನಷ್ಟು ಕಿಚ್ಚು ಹೊತ್ತಿದ್ದು, ತಮ್ಮನ್ನು 2ಎಗೆ ಸೇರಿಸದಿದ್ದರೆ ಉಗ್ರ ಹೋರಾಟ ನಡೆಸುವುದಾಗಿ ಎಚ್ಚರಿಸಿದ್ದಾರೆ.

ಕಳೆದ ಕೆಲ ವರ್ಷದಿಂದ ಮೀಸಲು ಹೆಚ್ಚಳ, ಒಳ ಮೀಸಲು ಸೇರಿದಂತೆ ಹಲವು ವಿಷಯಕ್ಕೆ ಸಂಬಂಧಿಸಿದಂತೆ ನಾನಾ ಸಮುದಾಯಗಳು ಹೋರಾಟ ಮಾಡುತ್ತಿವೆ. ಆದರೆ ಈಗ ಪರಿಶಿಷ್ಟ ಜಾತಿ, ಪಂಗಡದ ಮೀಸಲನ್ನು ಮಾತ್ರ ಹೆಚ್ಚಿಸಿರುವುದು, ಪಂಚಮಸಾಲಿ ಸಮುದಾಯದ ಅಸಮಾಧಾನಕ್ಕೆ ಕಾರಣವಾಗಿದ್ದು, ಕೂಡಲೇ 2ಎ ಮೀಸಲು ನೀಡುವಂತೆ ಆಗ್ರಹಿಸುತ್ತಿದ್ದಾರೆ.

ಪಂಚಮಸಾಲಿ ಸಮುದಾಯದ ಈ ಆಗ್ರಹ ಬಿಜೆಪಿಗೆ ನುಂಗಲಾರದ ತುತ್ತಾಗುವ ಸಾಧ್ಯತೆಯಿದೆ. ಏಕೆಂದರೆ ಪಂಚಮಸಾಲಿಗೆ 2ಎ ಮೀಸಲು ಕೊಡಬೇಕು ಎನ್ನುವ ಹೋರಾಟದ ಮುಂಚೂಣಿಯಲ್ಲಿ ಬಿಜೆಪಿಯ ಹಲವು ನಾಯಕರು ಕಾಣಿಸಿಕೊಂಡಿದ್ದಾರೆ. ಪ್ರಮುಖವಾಗಿ ಬಸವಗೌಡ ಯತ್ನಾಳ್, ಅರವಿಂದ ಬೆಲ್ಲದ್ ಬಹಿರಂಗವಾಗಿಯೇ ಇದನ್ನು ಆಗ್ರಹಿಸುತ್ತಿದ್ದರೆ, ಸಚಿವ ಸಂಪುಟದಲ್ಲಿರುವ ಸಿ.ಸಿ.ಪಾಟೀಲ, ಮುರುಗೇಶ್ ನಿರಾಣಿ ಸಹ ಸರಕಾರದ ಮೇಲೆ ಸಮುದಾಯವನ್ನು 2ಎಗೆ ಸೇರಿಸಬೇಕು ಎನ್ನುವ ಒತ್ತಡ ಹಾಕುತ್ತಿದ್ದಾರೆ. ಪ್ರಮುಖ ಮತಬ್ಯಾಂಕ್ ಆಗಿರುವ ಲಿಂಗಾಯತವನ್ನು ಎದುರು ಹಾಕಿಕೊಳ್ಳಲು ಸಾಧ್ಯವಾಗದೇ, ಮೀಸಲಿನಲ್ಲಿ ಸೇರಿಸಲು ಸಾಧ್ಯವಾಗದ ಸ್ಥಿತಿಗೆ ರಾಜ್ಯ ಸರಕಾರ ಬಂದಿದೆ.

**ಕೇಂದ್ರಕ್ಕೆ ಶಿಫಾರಸ್ಸು:** ಈ ನಡುವೆ ನಡೆದ ವಿಶೇಷ ಸಚಿವ ಸಂಪುಟ ಸಭೆಯಲ್ಲಿ ಸರ್ವಪಕ್ಷ ಸಭೆಯ ನಿರ್ಧಾರದಂತೆ ಎಸ್‌ಸಿ, ಎಸ್‌ಟಿ ಮೀಸಲು ಹೆಚ್ಚಳ ಸಂಬಂಧ ನ್ಯಾಯಮೂರ್ತಿ ನಾಗಮೋಹನ್ ದಾಸ್

ಶಿಫಾರಸ್ಸನ್ನು ಸಚಿವ ಸಂಪುಟ ಸಭೆಯಲ್ಲಿ ಯಥಾವತ್ ಒಪ್ಪಿಕೊಳ್ಳಲಾಗಿದೆ. ಈ ಸಂಬಂಧ ಸರಕಾರಿ ಆದೇಶ ಹೊರಡಿಸಲು ಸಂಪುಟ ಸಭೆಯಲ್ಲಿ ನಿರ್ಧರಿಸಿದೆ.

ಈ ಬಗ್ಗೆ ಮಾತನಾಡಿದ ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ. ಮಾಧುಸ್ವಾಮಿ, ಮೀಸಲು ಹೆಚ್ಚಳ ಸಂಬಂಧ ತಕ್ಷಣ ಸರಕಾರಿ ಆದೇಶ ಜಾರಿ ಮಾಡಲು ನಿರ್ಧರಿಸಲಾಗಿದೆ. ಎರಡು ಮೂರು ದಿನಗಳಲ್ಲಿ ಸರಕಾರಿ ಆದೇಶ ಹೊರಬೀಳಲಿದೆ. ಸರಕಾರಿ ಆದೇಶದಲ್ಲಿ ಯಾವ ರೀತಿ ಮೀಸಲು ಕಲ್ಪಿಸಲಾಗುತ್ತೆ ಎಂಬ ಬಗ್ಗೆ ವಿವರವಾಗಿ ಉಲ್ಲೇಖಿಸಲಾಗುತ್ತದೆ ಎಂದರು.

**ಪರಿಚ್ಛೇದ 9ರ ವ್ಯಾಪ್ತಿಗೆ:** ಮೀಸಲು ಪ್ರಮಾಣ ಶೇ.50ರಷ್ಟನ್ನು ಮೀರಬಾರದು ಎಂದು ಸುಪ್ರೀಂ ಕೋರ್ಟ್ ಹೇಳಿದೆ. ಆ ಹಿನ್ನೆಲೆಯಲ್ಲಿ ಸಂವಿಧಾನದ ಪರಿಚ್ಛೇದ 9ರ ವ್ಯಾಪ್ತಿಗೆ ಕರ್ನಾಟಕದ ಮೀಸಲು ವಿಷಯವನ್ನು ಸೇರಿಸಿ ಹೆಚ್ಚಿಸಲಾಗುತ್ತದೆ. ಇದರಿಂದ ನ್ಯಾಯಾಲಯದ ಪರಿಶೀಲನೆ ವ್ಯಾಪ್ತಿಯಿಂದ ಹೊರಗಿಡಲು ಸಾಧ್ಯವಾಗುತ್ತದೆ. ತಮಿಳುನಾಡಿನಲ್ಲೂ ಈ ಹಿಂದೆ ಶೆಡ್ಯೂಲ್ 9ಕ್ಕೆ ಸೇರಿಸಿ ಮೀಸಲು ನೀಡಲಾಗಿದೆ. ಹೀಗಾಗಿ ಸುಪ್ರೀಂ ಕೋರ್ಟ್ ಅಲ್ಲಿನ ಮೀಸಲು ನಿರ್ಧಾರಕ್ಕೆ ತಡೆಯಾಜ್ಞೆ ನೀಡಲು ಸಾಧ್ಯವಾಗಿಲ್ಲ. ಇಲ್ಲೂ ಶೆಡ್ಯೂಲ್ 9 ವ್ಯಾಪ್ತಿಗೆ ಮೀಸಲು ಸೇರಿಸುವ ಸಂಬಂಧ ಚರ್ಚೆ ನಡೆಸಿ ಕೇಂದ್ರಕ್ಕೆ ಮುಂದೆ ಶಿಫಾರಸ್ಸು ಕಳುಹಿಸಲಾಗುತ್ತದೆ ಎಂದು ಇದೇ ವೇಳೆ ತಿಳಿ ದರು.

**ವಿಧಾನಸೌಧಕ್ಕೆ ಮುತ್ತಿಗೆ ಎಚ್ಚರಿಕೆ**

ಇನ್ನು ಪಂಚಮಸಾಲಿ ಲಿಂಗಾಯತರು, ಪರಿಶಿಷ್ಟ ಜಾತಿ, ಪಂಗಡಕ್ಕೆ ಮೀಸಲು ಹೆಚ್ಚಿಸಿದ ಬೆನ್ನಲ್ಲೇ, ತಮ್ಮ ಸಮುದಾಯವನ್ನು 2ಎ ಮೀಸಲಿನಲ್ಲಿ ಸೇರಿಸಬೇಕು. ಇಲ್ಲದಿದ್ದರೆ, ಉಗ್ರ ಹೋರಾಟ ನಡೆಸುವ ಎಚ್ಚರಿಕೆ ನೀಡಿದೆ. ಕೂಡಲ ಸಂಗಮ ಪೀಠದ ಶ್ರೀ ಬಸವಜಯ ಮೃತ್ಯುಂಜಯ ಸ್ವಾಮೀಜಿ ಮಾತನಾಡಿ, ಪಂಚಮಸಾಲಿ ಸಮಾಜಕ್ಕೆ 2ಎ ಮೀಸಲು ಕೊಡುವುದಾಗಿ ಹೇಳಿದ್ದ ಯಡಿಯೂರಪ್ಪ ನೀಡಿಲ್ಲ. ಅವರು ಈಗ ಪಂಚಮಸಾಲಿ ಸಮಾಜದವರ ಮನಸ್ಸಿನಿಂದ ಹೋರ ಹೋಗಿದ್ದಾರೆ. ಈಗ ಬೊಮ್ಮಾಯಿ ಅವರು ಮೀಸಲು ಕೊಡುವುದಾಗಿ ಹೇಳಿದ್ದಾರೆ. ಮೀಸಲು ಕೊಡಬೇಕು. ಇಲ್ಲದಿದ್ದರೆ ವಿಧಾನಸೌಧಕ್ಕೆ 25 ಲಕ್ಷ ಜನ ಮುತ್ತಿಗೆ ಹಾಕುವುದಾಗಿ ಎಚ್ಚರಿಸಿದ್ದಾರೆ.

**ಸ್ವಾಗತಿಸಿದ ದಲಿತ ನಾಯಕರು**

ಮೀಸಲು ಹೆಚ್ಚಳಕ್ಕೆ ಸಂಪುಟ ತೀರ್ಮಾನಿಸುತ್ತಿದ್ದಂತೆ ದಲಿತ ಮುಖಂಡರು ಸಂಭ್ರಮಿಸಿದರು. ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರನ್ನು ಭೇಟಿಯಾದ ದಲಿತ ಸಮುದಾಯದ ಸ್ವಾಮೀಜಿಗಳು

ಅಭಿನಂದಿಸಿದರು. ಇನ್ನು ಕಳೆದ 240 ದಿನಗಳಿಂದ ಪ್ರತಿಭಟನೆ ನಡೆಸುತ್ತಿದ್ದ ವಾಲ್ಮೀಕಿ ಶ್ರೀಗಳು ತಮ್ಮ ಸತ್ಯಾಗ್ರಹವನ್ನು ಹಿಂಪಡೆದಿದ್ದಾರೆ. ಬಿಜೆಪಿ ಕಚೇರಿಯಲ್ಲಿಯೂ ಸಂಭ್ರಮಾಚರಣೆ ಆಚರಿಸಲಾಯಿತು.

ಅವಕಾಶ ವಂಚಿತ ದಲಿತ ಒಳ ಮೀಸಲು ಕಲ್ಪಿಸಲು ನ್ಯಾಯಮೂರ್ತಿ ಸದಾಶಿವ ಆಯೋಗದ ವರದಿಯನ್ನು ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳಲಾಗುವುದು. ನಾಗಮೋಹನ್ ದಾಸ್ ಸಮಿತಿ ಶಿಫಾರಸ್ಸು ಮಾಡಿರುವುದನ್ನು ಒಪ್ಪಿಗೆ ಗೆಜೆಟ್ ಅಧಿಸೂಚನೆ ಹೊರಡಿಸಬೇಕೆಂದು ತೀರ್ಮಾನಿಸಲಾಗಿದೆ.

–ಬಸವರಾಜ ಬೊಮ್ಮಾಯಿ, ಮುಖ್ಯಮಂತ್ರಿ

ವೈಜ್ಞಾನಿಕವಾಗಿ ಚರ್ಚೆಯಾಗದೇ, ಆಯೋಗ ಶಿಫಾರಸ್ಸು ಇಲ್ಲದೇ ಬೇರೆ ಸಮುದಾಯಗಳಿಗೆ ಮೀಸಲು ಕೊಡಲು ಆಗುವುದಿಲ್ಲ. ಬೇರೆ ಸಮುದಾಯಗಳಿಗೆ ಮೀಸಲು ನೀಡುವ ವಿಚಾರ ಜೇನುಗೂಡಿಗೆ ಕಲ್ಲು ಎಸೆದ ಹಾಗಾಗುತ್ತದೆ. ಒಳಮೀಸಲಾತಿ ಕೊಡಬೇಕು ಎಂದು ಸದಾಶಿವ ಆಯೋಗ ಶಿಫಾರಸ್ಸು ಮಾಡಿದೆ. ಅದನ್ನು ನಾಗಮೋಹನ್ ದಾಸ್ ಆಯೋಗ ತನ್ನ ವರದಿಯಲ್ಲಿ ಉಲ್ಲೇಖಿಸಲಾಗಿದೆ. ಈ ಬಗ್ಗೆ ಕಾನೂನು ಸಚಿವ ನೇತೃತ್ವದ ಸಮಿತಿ ವರದಿ ನೀಡಿದ ಬಳಿಕ ನಿರ್ಧಾರ ಕೈಗೊಳ್ಳಲಾಗುತ್ತದೆ.

– ಜೆ.ಸಿ. ಮಾಧುಸ್ವಾಮಿ ಕಾನೂನು ಸಚಿವ

ಆಧಾರ: ವಿಶ್ವವಾಣಿ, ದಿನಾಂಕ: 09.10.2022

## 14. ಮನೆ ಬಾಗಿಲಿಗೇ ಜನನ, ಮರಣ ಪ್ರಮಾಣಪತ್ರ

ಸಾರ್ವಜನಿಕರು ಇನ್ನು ಮುಂದೆ ಜನನ ಹಾಗೂ ಮರಣ ಪ್ರಮಾಣ ಪತ್ರಗಳಿಗಾಗಿ ನಾಡಕಚೇರಿ ಹಾಗೂ ಆಸ್ಪತ್ರೆಗಳಿಗೆ ಅಲೆದಾಡಬೇಕಿಲ್ಲ. ಈ ಪ್ರಮಾಣಪತ್ರಗಳು ಸ್ಪೀಡ್ ಪೋಸ್ಟ್‌ನಲ್ಲೇ ಮನೆ ಬಾಗಿಲಿಗೇ ಬರಲಿವೆ. ಈ ಸಂಬಂಧ ಕಂದಾಯ ಇಲಾಖೆಯು ಅಂಚೆ ಇಲಾಖೆ ಜೊತೆ ಒಪ್ಪಂದ ಮಾಡಿಕೊಂಡಿದೆ. ಆ ಮೂಲಕ ಇಲಾಖೆ ಮತ್ತಷ್ಟು ಜನಸ್ನೇಹಿಯಾಗುತ್ತಿದೆ.

ಮಂಗಳೂರಿನಲ್ಲಿ ನಾಲ್ಕು ತಿಂಗಳ ಹಿಂದೆ ಪ್ರಥಮ ಬಾರಿಗೆ ಪ್ರಾಯೋಗಿಕವಾಗಿ 'ಮನೆ ಬಾಗಿಲಿಗೆ ಪ್ರಮಾಣ ಪತ್ರ' ಯೋಜನೆಯನ್ನು ಜಾರಿಗೆ ತರಲಾಗಿತ್ತು. ಇದು ಯಶಸ್ವಿಯಾದ ಹಿನ್ನೆಲೆಯಲ್ಲಿ ಅಂಚೆ ಇಲಾಖೆಯು ಈ ಯೋಜನೆಯನ್ನು ರಾಜ್ಯಾದ್ಯಂತ ವಿಸ್ತರಿಸಲು ಮುಂದಾಗಿದೆ. ಶೀಘ್ರದಲ್ಲೇ ಈ ಸೇವೆ ಆರಂಭವಾಗಲಿದೆ.

ಹಾಲಿ ಇರುವ ವ್ಯವಸ್ಥೆಯಲ್ಲಿ ಮಗು ಜನಿಸಿದ ಬಳಿಕ ಅಥವಾ ರೋಗಿ ಮೃತಪಟ್ಟಾಗ ಆಸ್ಪತ್ರೆಗಳೇ ಪೋಷಕರಿಂದ ಅರ್ಜಿ ಪಡೆದು, ಸಂಬಂಧಪಟ್ಟ ಇಲಾಖೆಗೆ ಕಳುಹಿಸುತ್ತವೆ. ಗ್ರಾಮೀಣ ಪ್ರದೇಶದಲ್ಲಿ

ಜನನ/ಮರಣವಾದರೆ ನಾಡ ಕಚೇರಿ, ತಾಲ್ಲೂಕು ಕಚೇರಿ, ಪುರಸಭೆ ಇತ್ಯಾದಿಗಳ ಮೂಲಕ ಪ್ರಮಾಣಪತ್ರಕ್ಕೆ ಅರ್ಜಿ ಸಲ್ಲಿಸಬಹುದು, ಬಳಿಕ ಅದನ್ನು ಪಡೆಯಲು ಜನರು ಕಚೇರಿಗಳಿಗೆ ಅಲೆದಾಡಬೇಕು.

ಇನ್ನು ಮುಂದೆ ಅಲೆದಾಡುವ ಪ್ರಮೇಯವೇ ಬರುವುದಿಲ್ಲ. ಅಂಚೆ ಇಲಾಖೆಯೇ ಸಂಬಂಧಪಟ್ಟ ಕಚೇರಿಗಳಿಂದ ಪ್ರಮಾಣ ಪತ್ರಗಳನ್ನು ಸಂಗ್ರಹಿಸಿ ಸಂಬಂಧಪಟ್ಟವರ ವಿಳಾಸಕ್ಕೆ ತಲುಪಿಸಲಿದೆ. ಗ್ರಾಹಕರು ಆನ್‌ಲೈನ್/ಆಫ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಿದ ನಂತರ ನಿಖರವಾದ ವಿಳಾಸ ಕೊಟ್ಟು ಬಂದರಾಯಿತು. ಪ್ರಮಾಣ ಪತ್ರ ಸಿದ್ಧವಾದ ಕೂಡಲೇ ಅಂಚೆ ಪೇದೆಯು ಅದನ್ನು ಮನೆ ಬಾಗಿಲಿಗೆ ತಂದು ಕೊಡುವರು ಎಂದು ಅಸಿಸ್ಟೆಂಟ್ ಪೋಸ್ಟ್ ಮಾಸ್ಟರ್ ಜನರಲ್ (ಬಿಸಿನೆಸ್ ಡೆವಲಪ್‌ಮೆಂಟ್) ವಿ. ತಾರಾ ಮಾಹಿತಿ ನೀಡಿದ್ದಾರೆ.

ಅರ್ಜಿ ಸಲ್ಲಿಸಿದ ಕೆಲವೇ ದಿನಗಳಲ್ಲಿ ಪ್ರಮಾಣ ಪತ್ರ ಸಿದ್ಧವಾಗುತ್ತದೆ. ಹೀಗೆ ತಯಾರಾದ ಪ್ರಮಾಣ ಪತ್ರಗಳನ್ನು ಆಯಾ ಸಂಬಂಧಪಟ್ಟ ನಾಡ ಕಚೇರಿ, ತಾಲ್ಲೂಕು ಕಚೇರಿ, ಪುರಸಭೆ, ನಗರಸಭೆ, ಮಹಾನಗರ ಪಾಲಿಕೆಗಳಿಗೆ ಅಂಚೆ ಸಿಬ್ಬಂದಿಯೇ ತೆರಳಿ, ಅವುಗಳನ್ನು ಸಂಗ್ರಹಿಸಿಕೊಳ್ಳುತ್ತಾರೆ. ಬಳಿಕ ಆ ಸಿಬ್ಬಂದಿಯೇ ಸ್ಪೀಡ್ ಪೋಸ್ಟ್ ಮೂಲಕ ಅವರ ಮನೆಗೆ ತಲುಪಿಸುವ ಕೆಲಸ ಮಾಡುತ್ತಾರೆ. ರಾಜ್ಯದ 9 ಸಾವಿರ ಅಂಚೆ ಕಚೇರಿಗಳೂ ಈ ಸೇವೆಯನ್ನು ಒದಗಿಸಲು ಸಜ್ಜಾಗಿವೆ.

ಅಂಚೆ ಶುಲ್ಕ ಪಡೆದು ಸ್ಪೀಡ್ ಪೋಸ್ಟ್ ಮೂಲಕ ಜನನ, ಮರಣ ಪ್ರಮಾಣ ಪತ್ರವನ್ನು ಜನಗಳ ಮನೆ ಬಾಗಿಲಿಗೆ ತಲುಪಿಸುವ ಸೇವೆಯನ್ನು ರಾಜ್ಯಾದ್ಯಂತ ಆರಂಭಿಸಲಾಗುವುದು. ಅಗತ್ಯವಿರುವವರಿಗೆ ಈ ಸೇವೆಯನ್ನು ಒದಗಿಸಲಾಗುವುದು. ಈ ಸಂಬಂಧ ಸರಕಾರದೊಂದಿಗೆ ಒಪ್ಪಂದ ಮಾಡಿಕೊಳ್ಳಲಾಗಿದೆ.

– ಎಸ್. ರಾಜೇಂದ್ರಕುಮಾರ್ ಮುಖ್ಯ ಪೋಸ್ಟ್ ಮಾಸ್ಟರ್ ಜನರಲ್ (ಸಿಪಿಜಿ),

ಕರ್ನಾಟಕ ಅಂಚೆ ವೃತ್ತ

ಆಧಾರ: ವಿಜಯ ಕರ್ನಾಟಕ, ದಿನಾಂಕ: 10.10.2022

## 15. ಗೋರಕ್ಷಣೆಗೆ ಪುಣ್ಯಕೋಟಿ ಯೋಜನೆ ಜಾರಿಗೆ

ರಾಜ್ಯದಲ್ಲಿ ಗೋರಕ್ಷಣೆಗೆ ಪುಣ್ಯಕೋಟಿ ಎಂಬ ಯೋಜನೆ ಜಾರಿಗೆ ತಂದಿದ್ದು ಇದರ ಮುಖಾಂತರ ಇದುವರೆಗೆ ಸಾವಿರಾರು ಗೋವುಗಳ ರಕ್ಷಣೆ ಕಾರ್ಯ ಮಾಡಲಾಗಿದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು.

ಕೊಲ್ಲಾಪುರ ಬಳಿಯ ಕನ್ಹೇರಿ ಸಿದ್ಧಗಿರಿ ಮಠದಲ್ಲಿ ಅದೃಶ್ಯ ಕಾಡಸಿದ್ದೇಶ್ವರ ಸ್ವಾಮೀಜಿ ನೇತೃತ್ವದಲ್ಲಿ ಆಯೋಜಿಸಲಾಗಿದ್ದ ಸಂತ ಸಮಾವೇಶ ಉದ್ಘಾಟಿಸಿ ಮಾತನಾಡಿದ ಅವರು, ರೈತರ ಮಕ್ಕಳಿಗೆ ಶಿಕ್ಷಣದಲ್ಲಿ ಪ್ರೋತ್ಸಾಹ ನೀಡಬೇಕು ಎಂಬ ಉದ್ದೇಶದಿಂದ ಸ್ಕಾಲರ್‌ಶಿಪ್ ವಿದ್ಯಾನಿಧಿ ಯೋಜನೆ ಜಾರಿಗೊಳಿಸಲಾಗಿದ್ದು ಈ ಯೋಜನೆಯನ್ನು ಮೀನುಗಾರರು, ಟ್ಯಾಕ್ಸಿ ಚಾಲಕರು, ಭೂಮಿ ಇಲ್ಲದೆ ರೈತ ಕೂಲಿ ಕಾರ್ಮಿಕರಿಗೆ ವಿಸ್ತರಣೆ ಮಾಡಲಾಗಿದೆ ಎಂದರು.

ಮುಖ್ಯ ಅತಿಥಿಗಳಾಗಿದ್ದ ಬಿಜೆಪಿ ರಾಷ್ಟ್ರೀಯ ಸಂಘಟನಾ ಕಾರ್ಯದರ್ಶಿ ಬಿ.ಎಲ್.ಸಂತೋಷ, ಕನ್ಹೇರಿ ಮಠ ಹತ್ತಾರು ವಿಶ್ವವಿದ್ಯಾಲಯ, ನೂರಾರು ಸಂಸ್ಥೆಗಳು ಮಾಡುವಂತಹ ಕೆಲಸ ಮಾಡುತ್ತಿದೆ. ಒಂದು ದೊಡ್ಡ ರಾಜ್ಯದ ಸರ್ಕಾರ ಮಾಡುವ ಕಾರ್ಯಗಳನ್ನು ಒಂದು ಸೀಮಿತವಾದ ಜಾಗದಲ್ಲಿ ಈ ಮಠ ಮಾಡುತ್ತಿರುವುದು ಶ್ಲಾಘನೀಯ ಎಂದರು.

ಮುಜರಾಯಿ ಹಜ್ ಮತ್ತು ವಕ್ಫ್ ಇಲಾಖೆಯ ಸಚಿವೆ ಶಶಿಕಲಾ ಜೊಲ್ಲೆ ಮಾತನಾಡಿ, ಶ್ರೀಗಳು ಕನ್ಹೇರಿ ಮಠದಲ್ಲಿ ಸಾವಯವ ಕೃಷಿಗೆ ಹೆಚ್ಚಿನ ಆದ್ಯತೆ ನೀಡಿದ್ದು, ಅದರ ಜೊತೆಗೆ ದೇಶಿಯ ಬೀಜಗಳ ಮತ್ತು ಅವುಗಳ ಸಂರಕ್ಷಣೆ ಮಾಡುವ ಕಾರ್ಯ ಮಾಡುತ್ತಿದ್ದಾರೆ. ಪ್ರಾಚೀನ ಶಿಕ್ಷಣ ಪದ್ಧತಿ ಸಂಸ್ಕಾರದ ಜೊತೆಗೆ ಉತ್ತಮ ಗುಣಮಟ್ಟದ ಶಿಕ್ಷಣ, ಬಡ ಕುಟುಂಬದಲ್ಲಿ ಜನಿಸಿದ ಹೆಣ್ಣುಮಕ್ಕಳ ಹೆಸರಿನಲ್ಲಿ ಅವರ ಮುಂದಿನ ಭವಿಷ್ಯಕ್ಕಾಗಿ ರೂ.5000 ಡಿಪಾಸಿಟ್ ಮಾಡುವುದು, ರೈತರಿಗೆ ಉಪಯೋಗವಾಗುವ ಹಲವು ಉಪಕರಣ ಹೀಗೆ ಹಲವು ಕಾರ್ಯಗಳನ್ನು ಸ್ವಾಮೀಜಿ ಕೈಗೊಂಡಿದ್ದಾರೆ ಎಂದು ಶ್ಲಾಘಿಸಿದರು.

ಕನ್ಹೇರಿ ಮಠದ ಅದೃಶ್ಯ ಕಾಡುಸಿದ್ದೇಶ್ವರ ಸ್ವಾಮೀಜಿ ಮಾತನಾಡಿ, ಮಠಗಳು ಮತ್ತು ಸಮಾಜದ ನಡುವಿನ ಅಂತರ ಕಡಿಮೆಯಾಗಬೇಕು. ಮಠಗಳು ನಡೆಯುವುದು ಭಕ್ತರ ದೇಣಿಗೆ ಮತ್ತು ದಾನಗಳಿಂದ, ಹೀಗಾಗಿ ಮಠಾಧೀಶರು ಮಠಗಳ ಮಾಲಿಕರಲ್ಲ ಕೇವಲ ವ್ಯವಸ್ಥಾಪಕರು. ಗುರುಗಳಾದವರು ಭಕ್ತರ ಸಮೀಪಕ್ಕೆ ಹೋಗಬೇಕು. ಭಕ್ತರ ಆರ್ಥಿಕ, ಬೌದ್ಧಿಕ ಸ್ಥಿತಿ ಚೆನ್ನಾಗಿರಬೇಕು. ಭಾವನಾತ್ಮಕ ಬೆಳವಣಿಗೆ ಆಗಬೇಕು ಅನ್ನೋ ದೃಷ್ಟಿಯಿಂದ ಮಠಗಳು ತಮ್ಮ ಚಟುವಟಿಕೆ ವಿಸ್ತರಿಸಿಕೊಳ್ಳಬೇಕು. ಭಕ್ತರಿಗೆ ಒಳ್ಳೆಯ ಮಾರ್ಗದರ್ಶನ ದೊರೆಯಬೇಕು. ಭಕ್ತರು ಮತ್ತು ಗುರುಗಳನ್ನು ಸಮೀಪ ತರಬೇಕು ಎನ್ನುವ ದೃಷ್ಟಿಯಿಂದ ಮಠಗಳು ತಮ್ಮ ಚಟುವಟಿಕೆ ವಿಸ್ತರಿಸಿಕೊಳ್ಳಬೇಕು. ಭಕ್ತರಿಗೆ ಒಳ್ಳೆಯ ಮಾರ್ಗದರ್ಶನ ದೊರೆಯಬೇಕು. ಭಕ್ತರು ಮತ್ತು ಗುರುಗಳನ್ನು ಸಮೀಪ ತರಬೇಕು ಎನ್ನುವ ಉದ್ದೇಶದಿಂದ ಮಠಾಧೀಶರು ಮತ್ತು ಭಕ್ತರ ಸಮಾವೇಶ ಹಮ್ಮಿಕೊಳ್ಳಲಾಗಿದೆ ಎಂದು ಹೇಳಿದರು.

ಸಚಿವರಾದ ಗೋವಿಂದ ಕಾರಜೋಳ, ಮುರಗೇಶ್ ನೀರಾಣಿ ಹಾಗೂ ಅನೇಕ ಗಣ್ಯರು ಇದ್ದರು. ಸುಮಾರು 500 ಮಠಾಧೀಶರು, ಸಾವಿರಾರು ಭಕ್ತರು ಉಪಸ್ಥಿತರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:11.10.2022.

## 16. ವಿಧೇಯಕ ಸಮಗ್ರವಾಗಲಿ

ವಿಧಾನಸಭೆಯಲ್ಲಿ ಮಂಡನೆಯಾಗಿರುವ 'ಕನ್ನಡ ಭಾಷಾ ಸಮಗ್ರ ಅಭಿವೃದ್ಧಿ ವಿಧೇಯಕ–2022'ದಲ್ಲಿ ಹಲವು ಲೋಪಗಳಿವೆ. ಹೀಗಾಗಿ, ಸಮಗ್ರ ಪರಿಷ್ಕರಣೆ ಅಗತ್ಯ ಎಂದು ಹಲವು ಕ್ಷೇತ್ರಗಳ ಗಣ್ಯರು ಒಕ್ಕೊರಲಿನಿಂದ ಒತ್ತಾಯಿಸಿದ್ದಾರೆ.

ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ವಿಧೇಯಕ ಜಾರಿ ಕುರಿತು ಚಿಂತನಾ ಗೋಷ್ಠಿ ನಡೆಸಿದ ಕನ್ನಡದ ಹಿರಿಯ ಮನಸ್ಸುಗಳು, ವಿಧೇಯಕವನ್ನು ಸ್ವಾಗತಿಸಿದವು. ಆದರೆ, ಹೊಸ ಶಾಸನವಾಗಿ ರೂಪುಗೊಳ್ಳುವ ಮುನ್ನ ಅನೇಕ ಬದಲಾವಣೆಗಳನ್ನು ಕಾಣಬೇಕಿದೆ ಎಂಬುದರ ಕುರಿತು ಸಲಹೆ ಸೂಚನೆ ನೀಡಿದರು.

"ಸದನದಲ್ಲಿ ಮಂಡನೆಯಾಗಿರುವ 'ಕನ್ನಡ ಭಾಷಾ ಸಮಗ್ರ ಅಭಿವೃದ್ಧಿ ವಿಧೇಯಕ–2022'ರಲ್ಲಿದ್ದ ದಂಡ ವಿಚಾರ, ಜಾರಿ ನಿರ್ದೇಶನ ವ್ಯವಸ್ಥೆ ಅಂಶಗಳಲ್ಲಿ ಲೋಪವಿದೆ. ಹೀಗಾಗಿ, ಇದನ್ನು ಮರುಪರಿಶೀಲಿಸಿ, ನಂತರ ಕಾನೂನಾಗಿ ಜಾರಿಗೊಳಿಸಬೇಕು. ಜೊತೆಗೆ ಈ ವಿಧೇಯಕದ ಅನುಮೋದನೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಲಹೆ, ನಿರ್ಣಯಗಳಿಗೆ ಆದ್ಯತೆ ನೀಡಬೇಕು," ಎಂದು ಗಣ್ಯರು ಆಗ್ರಹಿಸಿದರು.

**ಸಭೆಯಲ್ಲಿದ್ದವರು:** ಕನ್ನಡ ಸಾಹಿತ್ಯ ಸಮ್ಮೇಳನದ ನಿಯೋಜಿತ ಅಧ್ಯಕ್ಷ ಡಾ.ದೊಡ್ಡರಂಗೇಗೌಡ, ಹಿರಿಯ ಸಾಹಿತಿಗಳಾದ ಡಾ. ಎಸ್.ಎಲ್.ಭೈರಪ್ಪ, ಡಾ.ಚಂದ್ರಶೇಖರ ಕಂಬಾರ, ನಿಡುಮಾಮಿಡಿ ಮಠದ

ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿ, ಬೇಲಿಮಠದ ಶ್ರೀ ಶಿವರುದ್ರ ಸ್ವಾಮೀಜಿ, ಮಾಜಿ ಸಚಿವ ಎಚ್.ಕೆ.ಪಾಟೀಲ್, ಲೇಖಕ ಪ್ರಧಾನ್ ಗುರುದತ್, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಟಿ.ಎಸ್. ನಾಗಾಭರಣ, ವಿಶ್ರಾಂತ ನ್ಯಾಯಮೂರ್ತಿಗಳಾದ ಅರಳಿ ನಾಗರಾಜ್, ಶಿವಲಿಂಗೇಗೌಡ, ಕನ್ನಡಪರ ಹೋರಾಟಗಾರ ಸಾ.ರಾ.ಗೋವಿಂದು. ಕನ್ನಡದ ವಿವಿಧ ದಿನ ಪತ್ರಿಕೆಗಳ ಸಂಪಾದಕರು ಸಭೆಯಲ್ಲಿ ಭಾಗವಹಿಸಿದ್ದರು.

**ಬದಲಾಗಬೇಕಿರುವ ಅಂಶಗಳು:**

- ವಿಧೇಯಕದಲ್ಲಿರುವ ಕನ್ನಡದ ಜಾರಿಗೆ 'ಪ್ರಾಮುಖ್ಯತೆ' ಎಂಬ ಪದ 'ಕಡ್ಡಾಯ' ಎಂದಾಗಬೇಕು.
- 'ಕನ್ನಡಿಗ' ಎಂಬುದರ ವ್ಯಾಖ್ಯಾನ ಸರಿಯಾಗಿಲ್ಲ ಹೊರನಾಡು, ಗಡಿನಾಡು ಹಾಗೂ ಹೊರ ದೇಶದ ಕನ್ನಡಿಗರಿಗೆ ತಾವು ಕನ್ನಡಿಗರು ಅಲ್ಲ ಎಂಬ ಭಾವನೆ ಬರುತ್ತದೆ. 'ಜಗದ ಎಲ್ಲಾ ಕನ್ನಡಿಗರು' ಎಂದಾಗಬೇಕು.
- ನ್ಯಾಯಾಲಯದಲ್ಲಿ ಕನ್ನಡ ಬಳಕೆಯ ಪ್ರಸ್ತಾಪ ವಿಧೇಯಕದಲ್ಲಿದ್ದರೂ ಅದು ಕೇವಲ ಜಿಲ್ಲಾ ನ್ಯಾಯಾಲಯಗಳಿಗೆ ಸೀಮಿತವಾಗಿದೆ. ಅದನ್ನು ಉನ್ನತ ನ್ಯಾಯಾಲಯಗಳಿಗೂ ವಿಸ್ತರಿಸಬೇಕಿದೆ.
- ರಾಜಭಾಷಾ ಆಯೋಗ ಎನ್ನುವ ಸೂಚನೆ ಇದ್ದರೂ ಅದು ಕೇವಲ ಭಾಷಾಂತರಕ್ಕೆ ಸೀಮಿತವಾಗಿ ಅಸ್ಪಷ್ಟವಾಗಿದೆ.
- ಜಾರಿ ಮತ್ತು ನಿಯಂತ್ರಣ– ಈ ಎರಡರ ವ್ಯತ್ಯಾಸ ವಿಧೇಯಕದಲ್ಲಿ ಸ್ಪಷ್ಟವಾಗಿಲ್ಲ.
- ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರನ್ನು ಸಮಿತಿಯಲ್ಲಿ ಸೇರಿಸಲು ಯಾವ ಕಾನೂನು ತೊಡುಕೂ ಇಲ್ಲ ಅವರನ್ನು ಸೇರಿಸಬೇಕು.
- ಉದ್ಯೋಗ ಪೋರ್ಟಲ್ ಪ್ರಸ್ತಾಪ ವಿಧೇಯಕದಲ್ಲಿದ್ದು ಅದರ ಉದ್ದೇಶ ಅಸ್ಪಷ್ಟವಾಗಿದೆ.
- ಸಂವಿಧಾನದ 348ನೇ ವಿಧಿಗೆ ತಿದ್ದುಪಡಿಯಾದರೆ ಮಾತ್ರ ವಿಧೇಯಕ ಪರಿಣಾಮಕಾರಿಯಾಗಲು ಸಾಧ್ಯ. ಹೀಗಾಗಿ, ರಾಜ್ಯ ಮಾತ್ರವಲ್ಲದೆ ಕೇಂದ್ರ ಸರ್ಕಾರ ಕೂಡ ಈ ಕುರಿತು ಆಸಕ್ತಿ ವಹಿಸಬೇಕು.
- ವಿಧೇಯಕವನ್ನು ಪರಾಮರ್ಶಿಸಲು ಸದನ ಸಮಿತಿ ರಚಿಸಬೇಕು. ಜೊತಗೆ ಸಾರ್ವಜನಿಕವಾಗಿ ವ್ಯಾಪಕ ಚರ್ಚೆಗೊಳಪಡಿಸಬೇಕು.

ಆಧಾರ: ವಿಜಯ ಕರ್ನಾಟಕ, , ದಿನಾಂಕ:13.10.2022.

## 17. ಹೆಸರಿಲ್ಲದ ಗ್ರಾಮಗಳು ಕಂದಾಯ ಗ್ರಾಮ

ಕಳೆದ ಆರೇಳು ದಶಕಗಳಿಂದ ಜನರು ವಾಸವಿದ್ದರೂ, ಅವುಗಳಿಗೆ ಹೆಸರು ನೀಡದೆ 'ತಾಂಡಾ, ಹಟ್ಟಿ, ಹಾಡಿ' ಹೆಸರಿನಲ್ಲಿ ಮುಂದುವರಿದಿರುವ ಜನವಸತಿ ಪ್ರದೇಶಗಳಿಗೆ ಕಂದಾಯ ಗ್ರಾಮದ ಸ್ಥಾನಮಾನ ನೀಡುವ ಮಹತ್ವದ ತೀರ್ಮಾನಕ್ಕೆ ರಾಜ್ಯ ಸರ್ಕಾರ ಬಂದಿದ್ದು, ಅದರಂತೆ ನವೆಂಬರ್ ಅಂತ್ಯಕ್ಕೆ ರಾಜ್ಯದಲ್ಲಿ ಸುಮಾರು ನಾಲ್ಕು ಸಾವಿರ ಕಂದಾಯ ಗ್ರಾಮಗಳು ರೂಪುಗೊಳ್ಳಲಿವೆ.

ವಿಧಾನಸೌಧದಲ್ಲಿ ಈ ವಿಷಯ ತಿಳಿಸಿದ ಕಂದಾಯ ಸಚಿವ ಆರ್.ಅಶೋಕ್, ಲಂಬಾಣಿ ಸಮುದಾಯವಿರುವ ತಾಂಡಾ ಸೇರಿದಂತೆ ಗೊಲ್ಲರಹಟ್ಟಿ, ಅಲೆಮಾರಿ ಜನಾಂಗದವರಿರುವ ಹಾಡಿಗಳನ್ನು ಇಲ್ಲಿಯವರೆಗೆ ಕಂದಾಯ ಗ್ರಾಮವೆಂದು ಘೋಷಿಸಿಲ್ಲ. ಇದರಿಂದಾಗಿ, ಲಕ್ಷಾಂತರ ಜನರಿಗೆ ಸಾಲ, ಸರ್ಕಾರಿ ಸೌಲಭ್ಯ, ರಸ್ತೆ ಸೇರಿದಂತೆ ಯಾವುದೇ ಮೂಲ ಸೌಕರ್ಯ ನೀಡಲು ಆಗುತ್ತಿರಲಿಲ್ಲ. ಆದ್ದರಿಂದ ಇದೀಗ ಈ ರೀತಿ ವಾಸಿಸುತ್ತಿರುವ ಪ್ರದೇಶಗಳನ್ನು ಕಂದಾಯ ಗ್ರಾಮಗಳೆಂದು ಘೋಷಿಸಲು ತೀರ್ಮಾನಿಸಲಾಗಿದೆ ಎಂದು ತಿಳಿಸಿದರು.

ಸದ್ಯದ ಮಾಹಿತಿ ಪ್ರಕಾರ, ಲಂಬಾಣಿ ಸಮುದಾಯ ವಾಸವಿರುವ ಸುಮಾರು 3,300 ತಾಂಡಾಗಳು ರಾಜ್ಯದಲ್ಲಿವೆ. ಇದರೊಂದಿಗೆ ಹಟ್ಟಿ, ಹಾಡಿ ಸೇರಿದಂತೆ ಸುಮಾರು ನಾಲ್ಕು ಸಾವಿರಕ್ಕೆ ಈ ಸಂಖ್ಯೆ ಬರಲಿವೆ. ಈ ಎಲ್ಲದಕ್ಕೂ ಸ್ಥಳೀಯರು ಅಪೇಕ್ಷಿಸುವ ಹೆಸರನ್ನು ಇಟ್ಟು, ಊರುಗಳನ್ನಾಗಿ ಘೋಷಿಸಲಾಗುವುದು. ಇದರಿಂದ ಆ ಭಾಗದಲ್ಲಿ ವಾಸಿಸುತ್ತಿರುವವರಿಗೆ ಸಹಾಯವಾಗಲಿದೆ ಎಂದು ಹೇಳಿದರು.

ಇದಕ್ಕೆ ಸಂಬಂದಿಸಿದಂತೆ ಈಗಾಗಲೇ ಜಿಲ್ಲಾಧಿಕಾರಿಗಳ ಮಟ್ಟದಲ್ಲಿ ಸಭೆ ನಡೆಸಲಾಗಿದೆ. ತಾಂಡ, ಹಟ್ಟಿ, ಹಾಡಿಗಳನ್ನು ಗುರುತಿಸುವ ಕೆಲಸ ಕಳೆದ ಕೆಲ ತಿಂಗಳಿಂದ ನಡೆದಿದ್ದು, ನವೆಂಬರ್ ಅಂತ್ಯದ ವೇಳೆಗೆ ಬೃಹತ್ ಕಾರ್ಯಕ್ರಮ ನಡೆಸಿ, ಕಂದಾಯ ಗ್ರಾಮಗಳು ಸ್ಥಾನಮಾನ ನೀಡಲಾಗುವುದು. ಇದರೊಂದಿಗೆ ಆ ಪ್ರದೇಶದಲ್ಲಿ ವಾಸಿಸುತ್ತಿರುವ ಕುಟುಂಬಗಳಿಗೆ, ಆ ಜಾಗದ ಸೇಲ್ ಡೀಡ್ ನೀಡಲಾಗುವುದು ಎಂದು ಸ್ಪಷ್ಟಪಡಿಸಿದರು.

**66ಸಾವಿರ ಜನರಿಗೆ ಸೇಲ್ ಡೀಡ್:** ಈಗಿರುವ ಮಾಹಿತಿ ಪ್ರಕಾರ, ರಾಜ್ಯದಲ್ಲಿ 3300 ತಾಂಡಗಳಿದ್ದು, ಅವುಗಳಲ್ಲಿ ಸುಮಾರು 33 ಲಕ್ಷ ಜನ ವಾಸಿಸುತ್ತಿದ್ದಾರೆ. ಕೆಲವೆಡೆ ನೂರಾರು ಮನೆಗಳು ಸೇರಿ ಒಂದು ತಾಂಡಾವಾಗಿದ್ದರೆ, ಕೆಲವಡೆ ಎಂಟು-ಹತ್ತು ಮನೆಗಳಿಗೂ ತಾಂಡಾವನ್ನಾಗಿ ಮಾಡಿಕೊಳ್ಳಲಾಗಿದೆ. ಈ ಎಲ್ಲವನ್ನೂ ಸಮಗ್ರವಾಗಿ ಸರ್ವೇ ಮಾಡಿಸಲಾಗುತ್ತಿದ್ದು, ಅವರು ವಾಸಿಸುತ್ತಿರುವ ಜಾಗವನ್ನು ಅವರ ಹೆಸರಿಗೆ ಮಾಡಿಕೊಡಲಾಗುವುದು. ಮೊದಲ ಹಂತದಲ್ಲಿ 66ಸಾವಿರ ಕುಟುಂಬಗಳಿಗೆ ಸೇಲ್ ಡೀಡ್ ನೀಡಲಾಗುವುದು. ನಂತರ ಹಂತ-ಹಂತವಾಗಿ ಹಂಚಿಕೆ ಮಾಡಲಾಗುವುದು. ಒಂದು ವೇಳೆ ತಾಂಡಾ, ಹಟ್ಟಿ ಅಥವಾ ಹಾಡಿಗಳು ಖಾಸಗಿಯವರ ಜಾಗದಲ್ಲಿದ್ದರೆ ಅವರಿಂದ ಖರೀದಿಸಿ, ಕಂದಾಯ ಗ್ರಾಮವನ್ನಾಗಿ ಮಾಡಲಾಗುವುದು ಎಂದು ಸ್ಪಷ್ಟಪಡಿಸಿದರು.

ಲಂಬಾಣಿ ಸಮುದಾಯದ ಅತಿ ಹೆಚ್ಚು ಜನರಿರುವ ಕಲಬುರಗಿಯಲ್ಲಿ ಸಿಎಂ ಬಸವರಾಜ ಬೊಮ್ಮಾಯಿ ಅವರ ನೇತೃತ್ವದಲ್ಲಿ ನವೆಂಬರ್ ಕೊನೆಯ ವಾರದಲ್ಲಿ ಬೃಹತ್ ಕಾರ್ಯಕ್ರಮ ನಡೆಸಿ, ಅವರಿಂದ ಪ್ರಮಾಣ ಪತ್ರ ನೀಡಲಾಗುವುದು.

- ಈ ಕಾರ್ಯಕ್ರಮದಲ್ಲಿ ಕುಟುಂಬದಿಂದ ಇಬ್ಬರಂತೆ 66ಸಾವಿರ ಕುಟುಂಬದವರು ಭಾಗವಹಿಸಲಿದ್ದಾರೆ. ಅವರನ್ನು ಕರೆದುಕೊಂಡು ಬರುವ ಹಾಗೂ ವಾಪಸ್ಸು ತಾಂಡಾಗಳಿಗೆ ಬಿಡುವುದಕ್ಕೆ ಕಂದಾಯ ಇಲಾಖೆಯಿಂದಲೇ ವ್ಯವಸ್ಥೆ ಮಾಡಲಾಗಿದೆ.
- ಆರಂಭಿಕ ಹಂತದಲ್ಲಿ ಐದು ಜಿಲ್ಲೆಯಲ್ಲಿ ಯೋಜನೆ ಆರಂಭಿಸಲಾಗಿದೆ. ಕಲಬುರಗಿ, ಯಾದಗಿರಿ, ರಾಯಚೂರು, ಬೀದರ್ ಹಾಗೂ ವಿಜಯಪುರದಲ್ಲಿರುವ ತಾಂಡಾದ ಜಾಗವನ್ನು ನೀಡಲಾಗುವುದು.
- ನಂತರ ಹಂತ-ಹಂತವಾಗಿ ರಾಜ್ಯಾದ್ಯಂತ ವಿಸ್ತರಣೆಯಾಗಲಿದೆ. ಒಮ್ಮೆ ಹಕ್ಕುಪತ್ರ ವಿತರಿಸಿದ ಬಳಿಕ, ಸರ್ವೇ ಅಧಿಕಾರಿಗಳು ತೆರಳಿ, ಅಳತೆ ಮಾಡಿ ಜಾಗವನ್ನು ನೀಡುತ್ತಾರೆ.

**ಡಿಸೆಂಬರ್‌ನಲ್ಲಿ ಅಕ್ರಮ-ಸಕ್ರಮ:** 94ಸಿ ಹಾಗೂ 94ಸಿಸಿಯಲ್ಲಿ ಸಲ್ಲಿಕೆಯಾಗಿರುವ ಅರ್ಜಿಗಳ ವಿಲೇವಾರಿಗೆ ರಾಜ್ಯ ಸರ್ಕಾರ ಸಮಾರೋಪಾದಿಯಾಗಿ ಕಾರ್ಯನಿರ್ವಹಿಸುತ್ತಿದೆ. ಈ ಹಿಂದೆ ಬೆಂಗಳೂರಿನಲ್ಲಿ 10 ಸಾವಿರ ಅರ್ಹರಿಗೆ ಹಕ್ಕುಪತ್ರ ವಿತರಿಸಲಾಗಿತ್ತು. ಇದೀಗ ಮತ್ತೊಮ್ಮೆ ಡಿಸೆಂಬರ್‌ನಲ್ಲಿ ಇನ್ನು 10 ಸಾವಿರ ಜನರಿಗೆ ಹಕ್ಕು ಪತ್ರ ನೀಡಲಾಗುವುದು. ಬಳಿಕ ಜಿಲ್ಲೆಗಳಲ್ಲಿ ವಿತರಿಸಲಾಗುವುದು. ಸದ್ಯ ಸುಮಾರು 30 ಸಾವಿರ ಅರ್ಜಿ ಬಾಕಿಯಿದ್ದು, 10 ಸಾವಿರ ಅರ್ಹರಿಗೆ ಹಕ್ಕುಪತ್ರ ನೀಡಲಾಗುವುದು. ಬಾಕಿಯಿರುವವರಿಗೆ ಹಂತ-ಹಂತವಾಗಿ ವಿತರಿಸಲಾಗುವುದು ಎಂದು ಸಚಿವ ಅಶೋಕ ಸ್ಪಷ್ಟಪಡಿಸಿದರು.

ಆಧಾರ: ವಿಶ್ವ ವಾಣಿ, ದಿನಾಂಕ:14.10.2022.

## 18. ದಲಿತರಿಗೆ ಉಚಿತ ವಿದ್ಯುತ್: ಅಕ್ಟೋಬರ್ 15 ರಿಂದ ನೋಂದಣಿ ಶುರು

ರಾಜ್ಯಾದ್ಯಂತ ಪರಿಶಿಷ್ಟ ಜಾತಿ ಹಾಗೂ ಪಂಗಡದ ಬಿಪಿಎಲ್ ಕಾರ್ಡ್‌ದಾರರಿಗೆ ತಿಂಗಳಿಗೆ 75 ಯೂನಿಟ್‌ವರೆಗೆ ಉಚಿತ ವಿದ್ಯುತ್ ನೀಡುವ 'ಅಮೃತ ಜ್ಯೋತಿ' ಯೋಜನೆಯಡಿ ಫಲಾನುಭವಿಗಳನ್ನು ನೊಂದಾಯಿಸಲು ಅಕ್ಟೋಬರ್ 15 ರಿಂದ 30 ರವರಗೆ ಬೃಹತ್ ಅಭಿಯಾನ ನಡೆಸುವಂತೆ ಇಂಧನ ಸಚಿವ ಸುನಿಲ್ ಕುಮಾರ್ ಅವರು ಅಧಿಕಾರಿಗಳಿಗೆ ಸೂಚನೆ ನೀಡಿದ್ದಾರೆ.

ಯೋಜನೆಗೆ ಚಾಲನೆ ನೀಡಲು ಉಂಟಾಗಿರುವ ತಾಂತ್ರಿಕ ಸಮಸ್ಯೆಗಳನ್ನು ಕೂಡಲೇ ಬಗೆಹರಿಸಬೇಕು. ಈಗಾಗಲೇ 2.5 ಲಕ್ಷ ಮಂದಿ ಅರ್ಜಿ ಸಲ್ಲಿಸಿದ್ದು, 15 ದಿನಗಳ ಅಭಿಯಾನ ಮುಗಿಯುವ ವೇಳೆಗೆ ಕನಿಷ್ಠ 10 ಲಕ್ಷ ಮಂದಿಯನ್ನು ಗುರುತಿಸಿ ನೋಂದಣಿ ಮಾಡಿಸಬೇಕು ಎಂದು ಸೂಚಿಸಿದರು.

ಎಲ್ಲಾ ಎಸ್ಕಾಂಗಳ ವ್ಯಾಪ್ತಿಯಲ್ಲಿ ಫಲಾನುಭವಿಗಳ ಸಮಾವೇಶ ನಡೆಸಲು ಸಿದ್ಧತೆ ಮಾಡಿಕೊಳ್ಳಬೇಕು. ಚಿತ್ರದುರ್ಗ, ಚಾಮರಾಜನಗರ, ಬೀದರ್, ಬಾಗಲಕೋಟೆಯಲ್ಲಿ ಸಮಾವೇಶ ನಡೆಸಲಾಗುವುದು. ಇದಕ್ಕೆ ವ್ಯವಸ್ಥೆ ಮಾಡಬೇಕು ಎಂದು ಅಧಿಕಾರಿಗಳಿಗೆ ಸೂಚನೆ ನೀಡಿದರು. ಬೆಳಕು ಯೋಜನೆ ಅಡಿ ವಿದ್ಯುತ್ ಸಂಪರ್ಕ ನೀಡುವ ಪ್ರಕ್ರಿಯೆಯನ್ನು ಪರಿಶೀಲನೆ ನಡೆಸಬೇಕು. ನವೆಂಬರ್ 15ರೊಳಗೆ ಎಲ್ಲಾ ಜಿಲ್ಲೆಗಳಲ್ಲಿ ಇಲ್ಲಿಯವರೆಗೆ ಬಂದಿರುವ ಅರ್ಜಿಗಳಿಗೆ ಸಂಪರ್ಕ ನೀಡಬೇಕು ಎಂದರು.

**ಇ-ಆಡಳಿತ ಕಾರ್ಯದರ್ಶಿಗೆ ಕರೆ:** 'ಅಮೃತ ಜ್ಯೋತಿ' ಅನುಷ್ಠಾನಕ್ಕೆ ಇ-ಆಡಳಿತ ರೂಪಿಸಿರುವ ತಂತ್ರಾಂಶದಲ್ಲಿ ತಾಂತ್ರಿಕ ಅಡಚಣೆ ಉಂಟಾಗುತ್ತಿದೆ ಎಂಬ ಅಧಿಕಾರಿಗಳ ದೂರಿಗೆ ಸ್ಪಂದಿಸಿದ ಸುನಿಲ್ ಕುಮಾರ್ ಇ-ಆಡಳಿತ ಕಾರ್ಯದರ್ಶಿ ಪೊನ್ನುರಾಜ್ ಅವರನ್ನು ಸಭೆಗೆ ಕರೆಸಿದರು. ಈ ವೇಳೆ 2-3 ಹಂತದಲ್ಲಿ ಸರಳೀಕರಣ ಪ್ರಕ್ರಿಯೆ ನಡೆಯುತ್ತಿದ್ದು, ಒಟಿಪಿ ಬದಲು ಆಧಾರ್ ಕಾರ್ಡ್ ಇರುವ ಹೆಸರನ್ನು ಆಧರಿಸಿ ಫಲಾನುಭವಿಗಳ ಆಯ್ಕೆಗೆ ವ್ಯವಸ್ಥೆ ಮಾಡಲಾಗುತ್ತಿದೆ. ಕೆಲವೇ ದಿನಗಳಲ್ಲಿ ನೋಂದಣಿ ಪ್ರಾರಂಭಿಸುತ್ತೇವೆ ಎಂದು ಪೊನ್ನುರಾಜ್ ಭರವಸೆ ನೀಡಿದರು.

ಆಧಾರ: ಕನ್ನಡ ಪ್ರಭ, ದಿನಾಂಕ:14.10.2022.

## 19. ವಿದ್ಯಾರ್ಥಿ ಕಲ್ಯಾಣಕ್ಕೆ ಗ್ರಹಣ

ಬಡ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ ಆರಂಭಿಸಿರುವ ಹಲವರು ಯೋಜನೆಗಳಿಗೆ ಅನುದಾನದ ಕೊರತೆ ಎದುರಾಗಿರುವುದರಿಂದ ಯೋಜನೆಗಳು ಸ್ಥಗಿತಗೊಂಡಿವೆ.

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಕಳೆದ 5 ವರ್ಷಗಳಿಂದ ಅನುದಾನ ಕಡಿತವಾಗಿದೆ. ಹೀಗಾಗಿ ವಿದ್ಯಾರ್ಥಿ ಕಲ್ಯಾಣಗೆ ಜಾರಿ ಮಾಡಲಾಗಿದ್ದ ಶುಲ್ಕ ಮರುಪಾವತಿ, ಸಾಲ ಯೋಜನೆ, ವಿದೇಶಿ ವ್ಯಾಸಂಗ, ಪಿಎಚ್‌ಡಿ ವಿದ್ಯಾರ್ಥಿಗಳಿಗೆ ಶಿಷ್ಯವೇತನ ಸೇರಿದಂತೆ ಹಲವು ಯೋಜನೆಗಳನ್ನು ಸ್ಥಗಿತಗೊಳಿಸಲಾಗಿದೆ. ಇದರಿಂದಾಗಿ ಹಿಂದುಳಿದ ವರ್ಗಗಳ ಸುಮಾರು 4 ಲಕ್ಷ ವಿದ್ಯಾರ್ಥಿಗಳು ಸರ್ಕಾರದ ನೆರವು ಸಿಗದೆ ನಿರಾಸೆಗೊಂಡಿದ್ದಾರೆ.

2017-18ನೇ ಸಾಲಿನಲ್ಲಿ ರೂ.2791.52 ಕೋಟಿಗಳನ್ನು ಸರ್ಕಾರ ಬಜೆಟ್‌ನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ನೀಡಿತ್ತು. ಇದರ ಪ್ರಮಾಣ 2021-22ನೇ ಸಾಲಿಗೆ ರೂ.2,044 ಕೋಟಿಗೆ ಇಳಿಕೆಯಾಗಿದೆ. ಇಲಾಖೆಯಲ್ಲಿ ವಿದ್ಯಾರ್ಥಿ ನಿಲಯದ ವೆಚ್ಚವೇ ಸಿಂಹಪಾಲಾಗಿದ್ದು, ಅನುದಾನ ಉಳಿದರೆ ಅದನ್ನು ವಿದ್ಯಾರ್ಥಿಗಳ ಶುಲ್ಕ ಮರುಪಾವತಿ, ಶಿಷ್ಯ ವೇತನಗಳಿಗೆ ಬಳಕೆ ಮಾಡಬೇಕಿದೆ. ಅನುದಾನ ಕೊರತೆ ಇರುವ ಕಾರಣ ಇಲಾಖೆಯು ಕಲ್ಯಾಣ ಕಾರ್ಯಕ್ರಮಗಳನ್ನು ಸ್ಥಗಿತ ಮಾಡಿ, ವಿದ್ಯಾರ್ಥಿ ನಿಲಯಗಳನ್ನು ಮಾತ್ರ ನಡೆಸಿಕೊಂಡು ಹೋಗುತ್ತಿದೆ.

**ದೇವರಾಜ ಅರಸು ನಿಗಮದಿಂದ ಟೈಲರಿಂಗ್:** ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಆರಂಭಿಸಲಾಗಿದ್ದು, ಇದಕ್ಕೆ ಸರ್ಕಾರ ಪ್ರತ್ಯೇಕ ಅನುದಾನ ನೀಡುತ್ತಿದೆ. ಇದರ ಮೂಲಕ ಸ್ಥಗಿತವಾಗಿರುವ 'ಟೈಲರಿಂಗ್ ತರಬೇತಿ' ಕಾರ್ಯಕ್ರಮವನ್ನು ಮರು ಆರಂಭಿಸಲಿದೆ. ಇಷ್ಟು ವರ್ಷ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದಲೇ ನಡೆಸಲಾಗುತ್ತಿತ್ತು. ಕಳೆದ ಸಾಲಿನ ಬಜೆಟ್‌ನಲ್ಲಿ ಈ ನಿಗಮಕ್ಕೆ ರೂ.80 ಕೋಟಿ ಅನುದಾನ ನೀಡಲಾಗಿದೆ.

**ಸ್ಥಗಿತಗೊಂಡ ಯೋಜನೆಗಳು:**

- ಶುಲ್ಕ ಮರುಪಾವತಿ(ಉನ್ನತ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ)
- ದಿ. ದೇವರಾಜ ಅರಸು ವಿದ್ಯಾರ್ಥಿ ವಿದೇಶಿ ವ್ಯಾಸಂಗ ವೇತನ(ಸ್ನಾತಕೋತ್ತರ ಪದವಿಗೆ 10 ಲಕ್ಷ ರೂ. ಧನಸಹಾಯ)
- ಪಿಎಚ್.ಡಿ ಫೆಲೋಶಿಪ್(ಮಾಸಿಕ 10 ಸಾವಿರ ರೂ.ಗಳಂತೆ 3 ವರ್ಷಗಳವರೆಗೆ ಶಿಷ್ಯವೇತನ)
- ಹೊಲಿಗೆ ತರಬೇತಿ(ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಹಸ್ತಾಂತರ)
- ಅರಿವು ಸಾಲ ಯೋಜನೆ (ಹಿಂದುಳಿದ ವರ್ಗದ ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗಾಗಿ ರೂ.1 ಲಕ್ಷ ಗಳಂತೆ ಕೋರ್ಸ್ ಅವಧಿಗೆ ಅನುಗುಣವಾಗಿ ರೂ. 4 ರಿಂದ 5 ಲಕ್ಷಗಳವರೆಗೆ ಸಾಲ)

| **ಹಿಂದುಳಿದ ವರ್ಗ ಕಲ್ಯಾಣ ಇಲಾಖೆಗೆ ಅನುದಾನ** | |
|---|---|
| **ವರ್ಷ** | **ಅನುದಾನ (ಕೋಟಿರೂ.ಗಳಲ್ಲಿ)** |
| 2017–18 | 2791.52 |
| 2018–19 | 2709.57 |
| 2019–20 | 2713.53 |
| 2020–21 | 2003.32 |
| 2021–22 | 2318.25 |

ಆಧಾರ: ವಿಜಯ ಕರ್ನಾಟಕ, ದಿನಾಂಕ:17.10.2022.

## 19. ಮನೆಮನೆಗೆ ನಲ್ಲಿ ಸಂಪರ್ಕ ಚುರುಕಿಗೆ ಸಿಎಂ ಅಪ್ಪಣೆ

ಸರ್ಕಾರದ ಯೋಜನೆಗಳ ಅನುಷ್ಠಾನ ಬಗ್ಗೆ ತಾಲ್ಲೂಕು, ಗ್ರಾಮಮಟ್ಟದಲ್ಲಿ ಪರಿಶೀಲಿಸಬೇಕು ಮತ್ತು ಪ್ರಧಾನಿಯವರ ಮಹತ್ವಾಕಾಂಕ್ಷಿ ಜಲಜೀವನ್ ಮಿಷನ್ ಯೋಜನೆಯ ಪ್ರಗತಿಯನ್ನು ಪ್ರತಿ ತಿಂಗಳು ಪರಿಶೀಲನೆ ನಡೆಸಬೇಕು ಎಂದು ಅಧಿಕಾರಿಗಳಿಗೆ ಕಟ್ಟುನಿಟ್ಟಿನ ನಿರ್ದೇಶನ ನೀಡಲಾಗಿದೆ.

ಬಸವರಾಜ ಬೊಮ್ಮಾಯಿ ಅಧ್ಯಕ್ಷತೆಯಲ್ಲಿ ಜಿಲ್ಲಾಧಿಕಾರಿಗಳ ಮತ್ತು ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಜೊತೆ ಪ್ರತ್ಯೇಕವಾಗಿ ಇಡೀ ದಿನ ಸಭೆ ನಡೆಸಲಾಯಿತು. ಸಭೆಯಲ್ಲಿ ಬಜೆಟ್‌ನಲ್ಲಿ ಘೋಷಣೆಯಾದ ಯೋಜನೆಗಳು ಮತ್ತು ಸರ್ಕಾರದ ಇತರೆ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಒತ್ತು ನೀಡಬೇಕು ಎಂದು ಸೂಚಿಸಲಾಯಿತು.

ದಿಢೀರ್ ಭೇಟಿ ನೀಡುವ ಮೂಲಕ ಆಡಳಿತಕ್ಕೆ ಚುರುಕು ಮುಟ್ಟಿಸಬೇಕು. ಜನರ ಪರವಾಗಿ ಕೆಲಸ ಮಾಡಲು ಹಿಂದೆ ಮುಂದೆ ನೋಡಬಾರದು ಮತ್ತು ಯೋಜನೆಗಳ ಅನುಷ್ಠಾನದಲ್ಲಿ ತೊಡುಕುಗಳಿದ್ದರೆ ತಕ್ಷಣ ಸರ್ಕಾರದ ಗಮನಕ್ಕೆ ತಂದರೆ ಅದನ್ನು ಸರಿಪಡಿಸಲಾಗುವುದು. ಸಭೆಯಲ್ಲಿ ನೀಡಿರುವ ನಿರ್ದೇಶನಗಳು ಸಂಪೂರ್ಣವಾಗಿ ಕಾರ್ಯಗತವಾಗಬೇಕು. ಕ್ರಿಯಾಶೀಲರಾಗಿ, ಜನಸ್ನೇಹಿಯಾಗಿ ಕೆಲಸ ಮಾಡಬೇಕು ಎಂದು ತಿಳಿಸಲಾಯಿತು.

ನಗರ ವಸತಿ ಯೋಜನೆಗಳು ಬಡವರ ಕೆಲಸವಾಗಿದ್ದು, ಅಧಿಕಾರಿಗಳು ಹೆಚ್ಚಿನ ಪ್ರಾಮುಖ್ಯತೆ ನೀಡಬೇಕು. ಫಲಾನುಭವಿಗಳ ಆಯ್ಕೆಯನ್ನು ತ್ವರಿತವಾಗಿ ಪೂರ್ಣಗೊಳಿಸಬೇಕು. ವಸತಿ ಯೋಜನೆಯಡಿ ಐದು ಲಕ್ಷ ಮನೆಗಳ ನಿರ್ಮಾಣ ಕಾರ್ಯವನ್ನು ಡಿಸೆಂಬರ್ ಅಂತ್ಯದೊಳಗೆ ಮತ್ತು ನಗರ ವಸತಿ ಯೋಜನೆಯಡಿ ಒಂದು ಲಕ್ಷ ಮನೆಗಳನ್ನು ಮುಂದಿನ ಮಾರ್ಚ್ ಅಂತ್ಯದೊಳಗೆ ಪೂರ್ಣಗೊಳಿಸಬೇಕು. ಶಾಲಾ ಕಟ್ಟಡ, ವಿದ್ಯಾರ್ಥಿ ನಿಲಯ ನಿರ್ಮಾಣ, ಯಶಸ್ವಿನಿ ಯೋಜನೆ, ಅಮೃತ್ ಯೋಜನೆ, ಮತ್ತಿತರ ಮಹತ್ವಕಾಂಕ್ಷಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕು. ಅಧಿಕಾರಿಗಳ ಪ್ರತಿ ಚಟುವಟಿಕೆಯೂ ಫಲಿತಾಂಶದ ಕೇಂದ್ರಿತ ಮತ್ತು ಕಾಲಮಿತಿಯನ್ನು ಹೊಂದಿರಬೇಕು ಎಂದು ಸೂಚನೆ ನೀಡಲಾಯಿತು.

ಇನ್ನು, ಜಲಜೀವನ್ ಮಿಷನ್ ಪ್ರಧಾನ ಮಂತ್ರಿಯವರ ಮಹತ್ವಕಾಂಕ್ಷಿ ಯೋಜನೆಯಾಗಿದ್ದು, ನಿಗದಿತ ಕಾಲಮಿತಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸಬೇಕು. ಈ ಯೋಜನೆಯ ಪ್ರಗತಿಯನ್ನು ನಿಯಮಿತವಾಗಿ ಪ್ರತಿ ತಿಂಗಳು ಪರಿಶೀಲನೆ ನಡೆಸಬೇಕು. ಜಲಜೀವನ್ ಮಿಷನ್ ಯೋಜನೆಯಡಿ ಬ್ಯಾಚ್ 1, 2ರ ಕಾಮಗಾರಿಗಳು ಪ್ರಾರಂಭವಾಗಿದೆ. ಬ್ಯಾಚ್ 1ರಡಿ ಶೇ.88 ರಷ್ಟು ಕಾಮಗಾರಿ ಪೂರ್ಣಗೊಂಡಿವೆ. ಉಳಿದ ಕಾಮಗಾರಿಯನ್ನು ನವೆಂಬರ್ ಅಂತ್ಯಕ್ಕೆ ಪೂರ್ಣಗೊಳಿಸಬೇಕು ಎಂದು ತಿಳಿಸಲಾಯಿತು.

ಆಧಾರ: ಕನ್ನಡ ಪ್ರಭ, ದಿನಾಂಕ:18.10.2022.

## 20. ಡಿಸೆಂಬರ್‌ನಲ್ಲಿ ಅಧಿವೇಶನ

ಚುನಾವಣಾ ವರ್ಷದ ಹಿನ್ನೆಲೆಯಲ್ಲಿ ಈ ವರ್ಷದ ಕೊನೆಯ ಅಧಿವೇಶನವನ್ನು ಬೆಳಗಾವಿಯಲ್ಲಿಯೇ ನಡೆಸುವ ಮೂಲಕ, ಉತ್ತರ ಕರ್ನಾಟಕ ಭಾಗದ ಮತಗಳನ್ನು ಸೆಳೆಯುವ ಲೆಕ್ಕಾಚಾರದಲ್ಲಿ ರಾಜ್ಯ ಸರ್ಕಾರವಿದೆ. ಚಳಿಗಾಲದ ಅಧಿವೇಶನವನ್ನು ಈ ಬಾರಿ ಡಿಸೆಂಬರ್ ಎರಡನೇ ವಾರದಲ್ಲಿ ಹತ್ತು ದಿನಗಳ ಕಾಲ ಬೆಳಗಾವಿಯಲ್ಲಿ ನಡೆಸಲು ಚಿಂತನೆ ನಡೆಸಿದೆ. ಮೂಲಗಳ ಪ್ರಕಾರ ಡಿಸೆಂಬರ್ 12ರಿಂದ ಆರಂಭಿಸಿ 23ರವರೆಗೆ ನಡೆಸಲು ಸರ್ಕಾರದ ಮಟ್ಟದಲ್ಲಿ ಚರ್ಚೆ ನಡೆದಿದೆ. ಸುವರ್ಣ ವಿಧಾನಸೌಧ ನಿರ್ಮಾಣಗೊಂಡು ಹತ್ತು ವರ್ಷ ಪೂರ್ಣಗೊಂಡಿರುವುದರಿಂದ ಈ ಬಾರಿ ಅಲ್ಲಿಯೇ ಅಧಿವೇಶನ ನಡೆಸಲು ತೀರ್ಮಾನಿಸಲಾಗಿದೆ ಎಂದು ತಿಳಿದು ಬಂದಿದೆ.

ಈ ಹಿಂದೆ ಕಾಂಗ್ರೆಸ್ ಸರ್ಕಾರದ ಅವಧಿಯಲ್ಲಿ ಸುವರ್ಣ ಸೌಧದಲ್ಲಿಯೇ ಸರ್ಕಾರ ಎಸ್‌ಸಿಪಿ, ಎಸ್‌ಟಿಪಿ, ಅನುದಾನದ ಐತಿಹಾಸಿಕ ಕಾಯಿದೆ ಜಾರಿಗೊಳಿಸಿತ್ತು.

ಇದರೊಂದಿಗೆ ಆಯಾ ವರ್ಷ ಪರಿಶಿಷ್ಟ ಜಾತಿ, ಪಂಗಡದ ಅಭಿವೃದ್ಧಿಗೆ ಒದಗಿಸಿದ ಅನುದಾನ ಖರ್ಚು ಮಾಡದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಅವಕಾಶ ನೀಡುವ ವಿಧೇಯಕವನ್ನು ಅಂದಿನ ಸಮಾಜ ಕಲ್ಯಾಣ ಸಚಿವ ಆಂಜನೇಯ ಮಂಡಿಸಿದ್ದರು. ಈದೀಗ ಬಿಜೆಪಿ ಸರ್ಕಾರ ಪರಿಶಿಷ್ಟ ಜಾತಿಯ ಮೀಸಲನ್ನು ಶೇ.15 ರಿಂದ 17ಕ್ಕೆ ಹಾಗೂ ಪರಿಶಿಷ್ಟ ಪಂಗಡದ ಮೀಸಲನ್ನು ಶೇ.3ರಿಂದ 7ಕ್ಕೆ ಹೆಚ್ಚಳ ಮಾಡುವ ತೀರ್ಮಾನ ಕೈಗೊಂಡಿದ್ದು, ಬೆಳಗಾವಿ ಅಧಿವೇಶನದಲ್ಲಿ ಕಾಯ್ದೆ ರೂಪಿಸಲು ನಿರ್ಧರಿಸಿದೆ. ಅದಕ್ಕೆ ಕಾಯಿದೆಯ ರೂಪ ನೀಡಲು ಮೀಸಲು ಹೆಚ್ಚಳ ವಿಧೇಯಕವನ್ನು ಬೆಳಗಾವಿ ಅಧಿವೇಶನದಲ್ಲಿಯೇ ಮಂಡಿಸಲು ಸಮಾಜ ಕಲ್ಯಾಣ ಸಚಿವ ಕೋಟ ಶ್ರೀನಿವಾಸ ಪೂಜಾರಿ ಮತ್ತು

ಪರಿಶಿಷ್ಟ ಪಂಗಡಗಳ ಕಲ್ಯಾಣ ಖಾತೆ ಸಚಿವ ಬಿ. ಶ್ರೀರಾಮುಲು ಮುಂದಾಗಿದ್ದಾರೆ ಎಂದು ಮೂಲಗಳು ತಿಳಿಸಿವೆ.

- ಉತ್ತರ ಕರ್ನಾಟಕ ಭಾಗದ ಮತಗಳನ್ನು ಸೆಳೆಯುವ ಲೆಕ್ಕಾಚಾರ ಸರ್ಕಾರ.
- ಹತ್ತು ದಿನಗಳ ಕಾಲ ಅಧಿವೇಶನ ನಡೆಸಲು ಸರ್ಕಾರದ ಮಟ್ಟದಲ್ಲಿ ಚರ್ಚೆ.
- ಬೆಳಗಾವಿಯ ಸುವರ್ಣ ಸೌಧ ನಿರ್ಮಾಣಗೊಂಡು 10 ವರ್ಷ ಪೂರ್ಣ.
- ಎಸ್‌ಸಿ, ಎಸ್‌ಟಿ ಮೀಸಲು ಹೆಚ್ಚಳದ ಕಾಯ್ದೆ ರೂಪಿಸಲು ನಿರ್ಧಾರ.

ಆಧಾರ: ವಿಶ್ವವಾಣಿ, ದಿನಾಂಕ:19.10.2022.

## 21. ಟ್ರಿಲಿಯನ್ ಡಾಲರ್ ಜಿಡಿಪಿಗೆ 9 ಸೂತ್ರ

ರಾಜ್ಯದ ನಿವ್ವಳ ಆಂತರಿಕ ಉತ್ಪನ್ನವನ್ನು ಒಂದು ಲಕ್ಷ ಕೋಟಿ ಡಾಲರ್‌ಗೆ (ಟ್ರಿಲಿಯನ್ ಡಾಲರ್– ಅಂದಾಜು ರೂ.82 ಲಕ್ಷ ಕೋಟಿ)ಕೊಂಡೊಯ್ಯಲು ಕೃಷಿ ವಲಯಕ್ಕೆ ಉತ್ತೇಜನ ಸೇರಿ ಒಂಬತ್ತು ಸೂತ್ರಗಳನ್ನು ತಜ್ಞರ ವರದಿ ಶಿಫಾರಸ್ಸು ಮಾಡಿದೆ.

ಸಿಎಂ ಗೃಹ ಕಛೇರಿ ಕೃಷ್ಣಾದಲ್ಲಿ ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ 'ಕರ್ನಾಟಕ ಒಂದು ಟ್ರಿಲಿಯನ್ ಡಾಲರ್ ಜಿಡಿಪಿ ಮಾರ್ಗದರ್ಶಿ' ವರದಿಯನ್ನು ಬಿಡುಗಡೆ ಮಾಡಿದರು. ಇನ್ಫೋಸಿಸ್ ಸಹ ಸಂಸ್ಥಾಪಕ ಟಿ.ವಿ.ಮೋಹನದಾಸ್ ಪೈ ಹಾಗೂ ಆರ್ಥಿಕ ತಜ್ಞೆ ನಿಶಾ ಹೊಳ್ಳ ಈ ವರದಿ ಸಿದ್ದುಪಡಿಸಿದ್ದು, ಸುಸ್ಥಿರ ಅಭಿವೃದ್ಧಿ ಗುರಿ ಹಾಗೂ ಮಾನವ ಸಂಪನ್ಮೂಲ ಅಭಿವೃದ್ಧಿ ಸೂಚ್ಯಂಕದಲ್ಲಿ ಪ್ರಸ್ತಾಪಿಸಿದ ದತ್ತಾಂಶಗಳನ್ನು ಪರಿಗಣಿಸಿದ್ದಾರೆ.

ಆರ್ಥಿಕತೆ ಬೆಳವಣಿಗೆ ಜೊತೆಯಲ್ಲೇ ಸಾಮಾಜಿಕ ಭದ್ರತೆ, ಪ್ರಾದೇಶಿಕ ಅಸಮತೋಲನ ನಿವಾರಣೆ ಅಗತ್ಯವನ್ನು ಪ್ರತಿಪಾದಿಸಿ, ಸವಾಲುಗಳತ್ತ ಗಮನ ಸೆಳೆಯಲಾಗಿದೆ.

**10 ವರ್ಷ ಬೇಕು:** ಪ್ರಧಾನಿ ನರೇಂದ್ರ ಮೋದಿ 2025ರ ವೇಳೆಗೆ ದೇಶದ ಜಿಡಿಪಿ ಐದು ಟ್ರಿಲಿಯನ್ ಡಾಲರ್ ಸಾಧಿಸುವ ಗುರಿಹೊಂದಿದ್ದು, ಕರೋನಾ ಹಿನ್ನೆಲೆಯಲ್ಲಿ 2026ಕ್ಕೆ ವಿಸ್ತರಿಸಿದ್ದಾರೆ. ದೇಶದ ಗುರಿಯಲ್ಲಿ ಕರ್ನಾಟಕದ ಪಾಲು ಶೇ.20ರಷ್ಟಿರಬೇಕು ಎಂಬ ಮಹತ್ವಾಕಾಂಕ್ಷೆಯನ್ನು ಮುಖ್ಯಮಂತ್ರಿ ಬೊಮ್ಮಾಯಿ ಹೊಂದಿದ್ದಾರೆ. ಆದರೆ, ನಿರೀಕ್ಷಿತ ಗುರಿ ಸಾಧನೆಗೆ ಐದು ವರ್ಷ ಸಾಕಾಗದು. 10 ವರ್ಷ ಬೇಕಿದ್ದು, ವಿಶೇಷ ಕ್ರಮಗಳಿಂದ ಮಾತ್ರ ಸಾಧ್ಯವೆಂದು ವರದಿ ಸ್ಪಷ್ಟಪಡಿಸಿದೆ.

ದೇಶದ ಕ್ರೋಡೀಕೃತ ವಾರ್ಷಿಕ ಪ್ರಗತಿ (ಸಿಎಜಿಆರ್) ಶೇ.12ರ ದರದಲ್ಲಿ ಏರುತ್ತ ಸಾಗಿದರೆ 2032ರ ವೇಳೆಗೆ 10 ಲಕ್ಷ ಕೋಟಿ ಡಾಲರ್ ಜಿಡಿಪಿ ಆರ್ಥಿಕತೆ ಸಾಧ್ಯವಾಗದೆ. ಶೇ.10ಕ್ಕಿಂತ ಹೆಚ್ಚಿನ ವೇಗದಲ್ಲಿ ಕರ್ನಾಟಕ ಸಾಗಿದರೆ 2026ರ ವೇಳೆಗೆ 500 ಶತಕೋಟಿ ಡಾಲರ್ ಸಾಧ್ಯ. ವಿಶೇಷ ಕ್ರಮಗಳನ್ನು ಕೈಗೊಂಡರೆ 2032ರ ವೇಳೆಗೆ ಒಂದು ಲಕ್ಷ ಕೋಟಿ ಡಾಲರ್ ಗುರಿ ಮುಟ್ಟಬಹುದು ಎಂದಿದೆ.

ಸದ್ಯಕ್ಕೆ ದೇಶದ ಜಿಡಿಪಿಯಲ್ಲಿ ರಾಜ್ಯದ ಪಾಲು ಶೇ.8.7ರಷ್ಟಿದೆ. ಕೇವಲ ನಾಲ್ಕು ವರ್ಷಗಳಲ್ಲಿ ಈ ಪ್ರಮಾಣವನ್ನು ಶೇ.11ಕ್ಕೆ ಕೊಂಡೊಯ್ಯಲು ವಾರ್ಷಿಕ ಶೇ.16.3 ದರದಲ್ಲಿ ವೃದ್ಧಿ ಕಾಣಬೇಕಾಗುತ್ತದೆ. ಇದಲ್ಲದೇ ಕೃಷಿ ಮತ್ತು ಗ್ರಾಮೀಣ ಆರ್ಥಿಕತೆಯಲ್ಲಿ ಕುಸಿತ, ದಕ್ಷಿಣ ಮತ್ತು ಉತ್ತರ ಕರ್ನಾಟಕ ನಡುವಿನ ಅಭಿವೃದ್ಧಿಯಲ್ಲಿ ಅಸಮತೋಲನ, ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಹಿನ್ನೆಡೆ, ಕೆಲವು ವಲಯಗಳಲ್ಲಿ ಸರ್ಕಾರದ ವೆಚ್ಚ ಮುಂತಾದ ಸವಾಲುಗಳನ್ನು ವರದಿಯಲ್ಲಿ ಪ್ರಸ್ತಾಪಿಸಲಾಗಿದೆ.

**ಕ್ರಿಯಾಯೋಜನೆ, ಸಮಿತಿ ರಚಿಸಲು ಸೂಚನೆ:** ಒಂದು ಟ್ರಿಲಿಯನ್ ಡಾಲರ್ ಆರ್ಥಿಕತೆ ಸಾಧಿಸಲು ಬೇಕಾದ ಕ್ರಿಯಾಯೋಜನೆಯನ್ನು ಡಿಸೆಂಬರ್ ಅಂತ್ಯದೊಳಗೆ ಸಿದ್ಧಪಡಿಸಬೇಕು ಎಂದು ಮುಖ್ಯಮಂತ್ರಿ ಬೊಮ್ಮಾಯಿ ಅಧಿಕಾರಿಗಳಿಗೆ ಸೂಚಿಸಿದರು. ಫಲಿತಾಂಶ ಆಧಾರಿತ ಉದ್ದೇಶಿತ ಬಜೆಟ್‌ಗೆ ಅನುಕೂಲವಾಗುವಂತೆ ಯೋಜನೆ ಸಿದ್ಧವಾಗಬೇಕು ಎಂದರು. ಆರ್ಥಿಕ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿ ರಚಿಸಬೇಕು. ಯೋಜನಾ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ, ಟಿ.ವಿ.ಮೋಹನ್ ದಾಸ್ ಪೈ, ಎಫ್‌ಐಸಿಸಿಐ ಹಾಗೂ ಮೆಕೆನ್ಸಿ ಪ್ರತಿನಿಧಿಗಳನ್ನು ಈ ಸಮಿತಿ ಒಳಗೊಂಡಿರಬೇಕು. ಕ್ರಿಯಾಯೋಜನೆ, ಮೇಲ್ವಿಚಾರಣೆ, ಮೌಲ್ಯಮಾಪನ ಹಾಗೂ ರಾಜ್ಯದ ಪ್ರಗತಿಯ ನಿಯಮಿತ ಪರಿಶೀಲನೆ ಈ ತಂಡದ ಜವಾಬ್ದಾರಿಯಾಗಿದೆ ಎಂದರು.

**ಗುರಿ ಸಾಧನೆಗೆ ಸೂತ್ರಗಳು:**

- ತಂತ್ರಜ್ಞಾನ, ಬ್ರ್ಯಾಂಡಿಂಗ್, ಮಾರುಕಟ್ಟೆ ಮತ್ತು ರಫ್ತು ಮೂಲಕ ಕೃಷಿ ವಲಯಕ್ಕೆ ಉತ್ತೇಜನ
- ಕಾರ್ಮಿಕ ಆಧಾರಿತ ಕೈಗಾರಿಕೆಗಳ ಮೂಲಕ ಉತ್ಪಾದನೆ ಮತ್ತು ರಫ್ತು ಹೆಚ್ಚಳ(ಉದಾ: ವಿದ್ಯುತ್ ಉಪಕರಣಗಳು, ಯಂತ್ರೋಪಕರಣಗಳು, ಪೀಠೋಪಕರಣಗಳು)
- ಮೂಲ ಸವಲತ್ತುಗಳ ವೆಚ್ಚವನ್ನು ಹೆಚ್ಚಿಸಿ ನಿರ್ಮಾಣ ವಲಯದ ಮೌಲ್ಯವರ್ಧನೆಗೆ ಪ್ರೋತ್ಸಾಹ
- ಬೆಂಗಳೂರು ಹೊರತುಪಡಿಸಿ 200 ಸಣ್ಣ ಪಟ್ಟಣಗಳ ವ್ಯವಸ್ಥಿತ ನಗರೀಕರಣ
- ಬೆಂಗಳೂರು ಜಾಗತಿಕ ಹೈಟೆಕ್ ಸಿಟಿಯಾಗಲು ಹೆಚ್ಚಿನ ಹೂಡಿಕೆ ಮಾಡುವುದು.
- ಫೀಡ್ ಫಾರ್ವರ್ಡ್ ಸಾಮರ್ಥ್ಯಗಳು ಮತ್ತು ಬೆಳವಣಿಗೆ ಚಾಲಕಗಳನ್ನು ನಿರ್ಮಿಸಲು ಮಾಹಿತಿ ತಂತ್ರಜ್ಞಾನ, ಸೇವಾ ವಲಯವನ್ನು ತ್ವರಿತಗೊಳಿಸುವುದು
- ನವೋದ್ಯಮಗಳ ಪೂರಕ ವಾತಾವರಣ ಬಲಪಡಿಸಲು ಹೂಡಿಕೆ ಮಾಡುವುದು.

**ಜನಸಂಖ್ಯೆ ಸಮಸ್ಯೆ:**

2030ರ ವೇಳೆಗ ರಾಜ್ಯದ ಜನಸಂಖ್ಯೆ 7.06 ಕೋಟಿಗೆ ಏರಲಿದೆ. ಜೊತೆಗೆ ಫಲವತ್ತತೆ, ಯುವಜನರು ಸಂಖ್ಯೆ ಕುಸಿತ ಸಮಸ್ಯೆಯ ಮೇಲೂ ವರದಿ ಬೆಳಕು ಚೆಲ್ಲಿದೆ. ದೇಶದ ಸರಾಸರಿ ಫಲವತ್ತತೆ ದರ ಎರಡಕ್ಕೆ ಹೋಲಿಸಿದರೆ ರಾಜ್ಯದ ದರ 1.7 ರಷ್ಟಿದ್ದು, ಮುಂದಿನ ದಶಕದಲ್ಲಿ 1.5ಕ್ಕೆ ಕುಸಿಯಲಿದೆ. 18 ರಿಂದ 23 ವರ್ಷ ವಯಸ್ಸಿನವರ ಪ್ರಮಾಣ ಶೇ.10.2 ಹಾಗೂ 60 ವರ್ಷ ಮೆಲ್ಪಟ್ಟವರ ಪ್ರಮಾಣ ಶೇ.11.5 ರಷ್ಟಿದೆ. 2030ರ ವೇಳೆಗೆ ಯುವಜನರ ಪ್ರಮಾಣ ಶೇ.8.7ಕ್ಕೆ ಕುಸಿದು, 60 ವರ್ಷ ಮೇಲ್ಪಟ್ಟವರ ಪ್ರಮಾಣ ಶೇ.15ಕ್ಕೆ ಏರಲಿದೆ.

ಆಧಾರ: ವಿಜಯವಾಣಿ, ದಿನಾಂಕ:19.10.2022

## 22. ಕಾಂಗ್ರೆಸ್‌ಗೆ ಖರ್ಗೆ ಸಾಹೇಬ್

ಎಂ. ಮಲ್ಲಿಕಾರ್ಜುನ್ ಖರ್ಗೆ ಅಖಿಲ ಭಾರತ ಕಾಂಗ್ರೆಸ್ ಸಮಿತಿ (ಎಐಸಿಸಿ) ಅಧ್ಯಕ್ಷರಾಗಿ ಬಹುಮತದಿಂದ ಆಯ್ಕೆಯಾಗಿದ್ದಾರೆ. ಅರ್ಧ ಶತಮಾನಕ್ಕೂ ಹೆಚ್ಚು ಅವಧಿ ಶಾಸನ ಸಭೆಯ ಅನುಭವ ಹೊಂದಿರುವ ಖರ್ಗೆ ಐಸಿಸಿ ಅಧ್ಯಕ್ಷರಾದ ಕರ್ನಾಟಕದ ಎರಡನೇ ನಾಯಕ. ಕಾಂಗ್ರೆಸ್ ಪಕ್ಷದ ಸಾಂಸ್ಥಿಕ ಚುನಾವಣೆಯಲ್ಲಿ ಗೆದ್ದು ರಾಷ್ಟ್ರೀಯ ಅಧ್ಯಕ್ಷರಾದ ಖರ್ಗೆ ಐತಿಹಾಸಿಕ ಪಕ್ಷದ ಎರಡನೇ ದಲಿತ ಅಧ್ಯಕ್ಷರೂ ಹೌದು. ಪಕ್ಷದ ಪುನರುತ್ಥಾನದ ಕನವರಿಕೆಯಲ್ಲಿ ಕಾಂಗ್ರೆಸ್ಸಿಗರಿಗೆ ಖರ್ಗೆ ಆಯ್ಕೆಯಿಂದ ಹೊಸ ಭರವಸೆ ಮೂಡಿರುವುದು ಸುಳ್ಳಲ್ಲ.

- ಖರ್ಗೆ ಪಡೆದ ಮತಗಳು 7,897
- ತರೂರ್ ಪಡೆದ ಮತಗಳು 1,072
- ಚಲಾವಣೆಯಾದ ಮತಗಳು 9,385
- ಖರ್ಗೆ ಅಧಿಕಾರ ಸ್ವೀಕಾರ ದಿನ ಆಗಸ್ಟ್ 26

**ರಾಜಕೀಯ ಪಥ:**

- 1970 : ಕಲಬುರಗಿ ಸಿಟಿ ಕಾಂಗ್ರೆಸ್ ಅಧ್ಯಕ್ಷ
- 1972 : ಗುರುಮಠಕಲ್ ಮತ ಕ್ಷೇತ್ರದಲ್ಲಿ ಮೊದಲ ಬಾರಿಗೆ ಶಾಸಕರಾಗಿ ಆಯ್ಕೆ (ಗುರುಮಠಕಲ್ ಕ್ಷೇತ್ರದಿಂದ ಸತತ 8 ಬಾರಿ ದಾಖಲೆಯ ಜಯ)
- 1976 : ಪ್ರಾಥಮಿಕ – ಮಾಧ್ಯಮಿಕ ಶಿಕ್ಷಣ ರಾಜ್ಯ ಸಚಿವ
- 1979 : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ
- 1980 : ಕಂದಾಯ ಸಚಿವ
- 1983 : ವಿಧಾನಸಭೆಯ ಪ್ರತಿಪಕ್ಷದ ನಾಯಕ
- 1990 : ಗ್ರಾಮೀಣಾಭಿವೃದ್ಧಿ ಹಾಗೂ ಕಂದಾಯ ಸಚಿವ
- 1993 : ಸಹಕಾರ ಮಂತ್ರಿ
- 1994 : ವಿಧಾನಸಭೆಯ ವಿರೋಧ ಪಕ್ಷದ ನಾಯಕ
- 1999 : ಗೃಹ ಸಚಿವ
- 2004 : ಜಲಸಂಪನ್ಮೂಲ, ಸಾರಿಗೆ ಸಚಿವ
- 2005 : ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿ ಅಧ್ಯಕ್ಷ
- 2008 : ಪ್ರತಿಪಕ್ಷದ ನಾಯಕ (ಚಿತ್ತಪುರ ಕ್ಷೇತ್ರದಿಂದ ಆಯ್ಕೆ)
- 2009 : ಗುಲ್ಬರ್ಗ ಲೋಕಸಭಾ ಕ್ಷೇತ್ರದಿಂದ ಮೊದಲ ಬಾರಿಗೆ ಸಂಸದರಾಗಿ ಆಯ್ಕೆ.
- 2009 : ಮನಮೋಹನ್ ಸಿಂಗ್ ಸಂಪುಟದಲ್ಲಿ ಮೊದಲ ಬಾರಿಗೆ ಕಾರ್ಮಿಕ – ಉದ್ಯೋಗ ಖಾತೆ ಸಚಿವ
- 2013 : ರೈಲ್ವೆ ಸಚಿವ
- 2014 : ಕಲಬುರಗಿ ಕ್ಷೇತ್ರದಿಂದ ಎರಡನೇ ಬಾರಿ ಸಂಸದರಾಗಿ ಆಯ್ಕೆ.
- 2014 : ಕಾಂಗ್ರೆಸ್ ಸಂಸದೀಯ ನಾಯಕರಾಗಿ ಆಯ್ಕೆ

- 2021 : ರಾಜ್ಯ ಸಭೆ ಪ್ರತಿಪಕ್ಷದ ನಾಯಕರಾಗಿ ಆಯ್ಕೆ.
- 2022 : ಎಐಸಿಸಿ ಅಧ್ಯಕ್ಷರಾಗಿ ಆಯ್ಕೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:20.10.2022

## 23. ಮೀಸಲು ಸುಗ್ರೀವಾಜ್ಞೆ

ಪರಿಶಿಷ್ಟರ ಮೀಸಲು ಹೆಚ್ಚಿಸುವ ರಾಜ್ಯ ಸರ್ಕಾರದ ಐತಿಹಾಸಿಕ ತೀರ್ಮಾನಕ್ಕೆ 'ಸುಗ್ರೀವಾಜ್ಞೆ'ಯ ಬಲ ನೀಡುವ ಮೂಲಕ ಸದ್ಯದ ತೊಡಕಿನಿಂದ ರಾಜ್ಯ ಸರ್ಕಾರ ಪಾರಾಗಿದೆ.

ಪರಿಶಿಷ್ಟ ಜಾತಿ, ಪಂಗಡಕ್ಕೆ ಮೀಸಲು ಹೆಚ್ಚಿಸಲು ತೀರ್ಮಾನಿಸಿದ್ದ ನಿರ್ಧಾರವನ್ನು ಸುಗ್ರೀವಾಜ್ಞೆಯ ಮೂಲಕ ಜಾರಿಗೊಳಿಸಲು ನಡೆದ ಸಚಿವ ಸಂಪುಟ ಸಭೆಯಲ್ಲಿ ಅನುಮೋದಿಸಲಾಗಿದ್ದು ರಾಜ್ಯಪಾಲರ ಅಂಕಿತಕ್ಕೆ ಕಳುಹಿಸಲು ತೀರ್ಮಾನಿಸಿದೆ. ಈ ಮೂಲಕ ಪರಿಶಿಷ್ಟರ ಒತ್ತಡದಿಂದ ರಾಜ್ಯ ಸರ್ಕಾರ ತಾತ್ಕಾಲಿಕವಾಗಿ ಪಾರಾಗಿದೆ.

ಈ ಮೂಲಕ ಶಿಕ್ಷಣ ಉದ್ಯೋಗದಲ್ಲಿ ಪರಿಶಿಷ್ಟ ಜಾತಿಯ ಮೀಸಲು ಪ್ರಮಾಣವನ್ನು ಶೇ.15 ರಿಂದ 17ಕ್ಕೆ ಹಾಗೂ ಪರಿಶಿಷ್ಟ ಪಂಗಡಳ ಮೀಸಲನ್ನು ಶೇ.3 ರಿಂದ 7ಕ್ಕೆ ಹೆಚ್ಚಳವಾಗಲಿದೆ. ಇತರ ವರ್ಗಗಳವರ ಮೀಸಲನ್ನು ಹಿಂಪಡೆಯದೇ ಎಸ್‌ಸಿ. ಎಸ್‌ಟಿಗಳ ಮೀಸಲನ್ನು ಹೆಚ್ಚಿಸಿರುವುದರಿಂದ ರಾಜ್ಯದಲ್ಲಿ ಒಟ್ಟಾರೆ ಮೀಸಲು ಪ್ರಮಾಣ ಶೇ.56ಕ್ಕೆ ಏರಲಿದೆ. ಆದರೆ ಜನಸಂಖ್ಯೆಯ ಆಧಾರದಲ್ಲಿ ಮೀಸಲನ್ನು ಹೆಚ್ಚಳ ಮಾಡುತ್ತಿರುವುದರಿಂದ ಕಾನೂನಿನ ತೊಡಕಿಲ್ಲ ಎನ್ನುವ ಸಮರ್ಥನೆಯನ್ನು ರಾಜ್ಯ ಸರ್ಕಾರ ನೀಡಿದೆ.

ಈ ಬಗ್ಗೆ ಮಾತನಾಡಿರುವ ಕಾನೂನು ಸಚಿವ ಮಾಧುಸ್ವಾಮಿ, ಸಂವಿಧಾನದ ಪರಿಚ್ಛೇದ 14, 15 ಹಾಗೂ 35 ಸೇರಿ ಎಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿ ಸುಗ್ರೀವಾಜ್ಞೆ ಮೂಲಕ ಜಾರಿಗೊಳಿಸಲು ತೀರ್ಮಾನಿಸಲಾಗಿದೆ. ಯಾವುದೇ ಸಮುದಾಯದ ಮೀಸಲನ್ನು ಕಿತ್ತು ಹಾಕುವುದಾಗಲಿ ಇಲ್ಲವೇ ರದ್ದುಪಡಿಸುವುದಿಲ್ಲ. ಕಾನೂನು ಮತ್ತು ಸಂವಿಧಾನದ ಚೌಕಟ್ಟಿನೊಳಗೆ ಈ ತೀರ್ಮಾನ ತೆಗೆದುಕೊಂಡಿದ್ದೇವೆ ಎಂದು ಸ್ಪಷ್ಟಪಡಿಸಿದರು.

ಕೇಂದ್ರ ಸರ್ಕಾರ ಈ ಹಿಂದೆ ಶೇ.100 ರಷ್ಟು ಮೀಸಲು ಪ್ರಮಾಣ ಇದ್ದಾಗಲೂ ಆರ್ಥಿಕವಾಗಿ ಹಿಂದುಳಿದ ಸಮುದಾಯದವರಿಗೆ ಶೇ.10ರಷ್ಟು ಮೀಸಲು ಕೊಟ್ಟಿದೆ. ಆಗಲೂ ಯಾವುದೇ ಸಮುದಾಯದ ಮೀಸಲನ್ನು ತೆಗೆದುಹಾಕಿಲ್ಲ. ಅದೇ ಮಾದರಿಯಲ್ಲಿ ನಾವೂ ಕೂಡ ತೀರ್ಮಾನ ತೆಗೆದುಕೊಂಡಿದ್ದೇವೆ ಎಂದು ಹೇಳಿದರು.

**ಒಳಮೀಸಲಿನ ಪರಿಶೀಲನೆ:** ಈ ಹಿಂದೆ ನಿವೃತ್ತ ನ್ಯಾ. ನಾಗಮೋಹನದಾಸ್ ಅವರು ರಾಜ್ಯ ಸರ್ಕಾರಕ್ಕೆ ಹಲವಾರು ಶಿಫಾರಸ್ಸುಗಳನ್ನು ಮಾಡಿದ್ದಾರೆ. ಆದರಂತೆ, ನಾವೂ ತೀರ್ಮಾನಗಳನ್ನು ತೆಗೆದುಕೊಂಡಿದ್ದೇವೆ. ಎಸ್.ಸಿ, ಎಸ್.ಟಿ ಮೀಸಲು ಹೆಚ್ಚಳ ಮಾಡುವುದು ಹಾಗೂ ಇದೇ ಸಮುದಾಯದಲ್ಲಿ ಆರ್ಥಿಕವಾಗಿ ಪ್ರಬಲವಾಗಿರುವವರು ಮೀಸಲನ್ನು ಬಿಟ್ಟುಕೊಡಬೇಕೆಂದು ಸಲಹೆ ಮಾಡಿದ್ದಾರೆ. ಇನ್ನೊಂದೆಡೆ ನ್ಯಾ. ಸದಾಶಿವ ಆಯೋಗ ಒಳ ಮೀಸಲು ಅನುಷ್ಠಾನ ಮಾಡಲು ಸಲಹೆ ಕೊಟ್ಟಿದೆ. ಇವೆಲ್ಲವನ್ನು ಪರಿಶೀಲಿಸಿ ಸರ್ಕಾರ ನಿರ್ಧಾರಕ್ಕೆ ಬಂದಿದೆ. ಬೇರೆಯವರಿಂದ ಕಿತ್ತುಕೊಡುತ್ತೇವೆ. ರದ್ದುಪಡಿಸುತ್ತೇವೆ ಇಂತಹ ಯಾವುದೇ ಅನುಮಾನ ಬೇಡ ಎಂದು ಸಚಿವರು ಸ್ಪಷ್ಟಪಡಿಸಿದರು.

**ಸಂಪುಟದ ಪ್ರಮುಖ ನಿರ್ಧಾರ:**

- ರೂ.347 ಕೋಟಿ ವೆಚ್ಚ ವಿಜಯಪುರ ವಿಮಾನ ನಿಲ್ದಾಣ ಮೇಲ್ದರ್ಜೆಗೆ : ಜಗಜ್ಯೋತಿ ಬಸವೇಶ್ವರರ ಹೆಸರು.

- 24 ಬಹುಗ್ರಾಮ ಕುಡಿವ ನೀರಿನ ಯೋಜನೆ : 260 ಹಳ್ಳಿಗಳ ನೀರು ಪೂರೈಕೆಗೆ ರೂ.260 ಕೋಟಿ ಅನುದಾನ.
- ಕರ್ನಾಟಕ ಕೃಷಿ ಸೇವೆಗಳ ನೇಮಕಕ್ಕೆ ತಿದ್ದುಪಡಿ.
- ಸಂಚಾರಿ ಪಶು ಚಿಕಿತ್ಸಾ ಘಟಕಗಳ ನಿರ್ವಹಣೆ ಗುತ್ತಿಗೆಗೆ.
- ಕಾಗವಾಡದ 23 ಕೆರೆಗಳಿಗೆ ನೀರು ತುಂಬಿಸಲು ರೂ.229.60 ಕೋಟಿ
- ವಿಶ್ವೇಶ್ವರಯ್ಯ ಜಲ ನಿಗಮಕ್ಕೆ ರೂ.250 ಕೋಟಿ ಸಾಲ ಪಡೆಯಲು ಒಪ್ಪಿಗೆ
- ಕರ್ನಾಟಕ ನೀರಾವರಿ ನಿಗಮಕ್ಕೆ ರೂ.850 ಕೋಟಿ ಖಾತರಿ ಸಾಲಕ್ಕೆ ಅನುಮೋದನೆ.
- ವೈದ್ಯಕೀಯ ಸಂಸ್ಥೆಗಳಿಗೆ ರೂ.33.92 ಕೋಟಿ ವೆಚ್ಚದ ಅರಿವಳಿಕೆ ಉಪಕರಣಗಳ ಖರೀದಿ.
- ಪರಿಶಿಷ್ಟ ಕುಶಲಕರ್ಮಿಗಳಿಗೆ ಉಚಿತ ನಿವೇಶನ
- ಯಶವಂತಪುರ ಉಲ್ಲಾಳದಲ್ಲಿ ಸುಮಾರು ರೂ.200 ಕೋಟಿ ವೆಚ್ಚದಲ್ಲಿ ಮಲ್ಟಿಸ್ಪೆಷಾಲಿಟಿ ಆಸ್ಪತ್ರೆ.
- ಬೆಂಗಳೂರಿನ ರಾಜಕಾಲುವೆ ಅಭಿವೃದ್ಧಿಗೆ ರೂ.1500 ಕೋಟಿಗೆ ಘಟನೊತ್ತರ ಅನುಮೋದನೆ.

**ತಿದ್ದುಪಡಿಗೆ ಕಾನೂನು ಪ್ರಕ್ರಿಯೆ:** ಸುಗ್ರೀವಾಜ್ಞೆ ಮೂಲಕ ಮೀಸಲು ಹೆಚ್ಚಿಸಿರುವುದರಿಂದ ನ್ಯಾಯಾಲಯದಲ್ಲಿ ಪ್ರಶ್ನಿಸುವುದಿಲ್ಲ ಎಂದು ಯಾರೊಬ್ಬರೂ ಭಾವಿಸಬೇಕಿಲ್ಲ. ಅದರ ರಕ್ಷಣೆ ಪಡೆಯುವುದಕ್ಕಾಗಿಯೇ ಸಂವಿಧಾನದ ಶೆಡ್ಯೂಲ್ 9ಗೆ ತಿದ್ದುಪಡಿ ಮಾಡಬೇಕು. ಇದಕ್ಕೆ ಸಾಕಷ್ಟು ಕಾನೂನು ಪ್ರಕ್ರಿಯೆಗಳು ನಡೆಯುತ್ತವೆ. ಈ ಎಲ್ಲ ಪ್ರಕ್ರಿಯೆ ಬಳಿಕವೂ ನ್ಯಾಯಾಲಯ ಮಧ್ಯ ಪ್ರವೇಶ ಮಾಡಬಾರದು ಎನ್ನುವ ನಿಯಮವಿಲ್ಲ. ಕೆಲವು ವಿಷಯಗಳಲ್ಲಿ ಮಾತ್ರ ವಿನಾಯಿತಿ ನೀಡಲಾಗುತ್ತದೆ. ತಮುಳುನಾಡು ಸರ್ಕಾರ ಇದೇ ರೀತಿ ಶೇ.69 ರಷ್ಟು ಮೀಸಲು ಹೆಚ್ಚಳ ಮಾಡಿ ಆದೇಶ ಹೊರಡಿಸಿದೆ. ಇಲ್ಲಿಯೂ ಕೂಡ ನ್ಯಾಯಾಲಯ ಮಧ್ಯೆ ಪ್ರವೇಶ ಮಾಡಿದೆಯೇ ಹೊರತು ಇದಕ್ಕೆ ತಡೆಯಾಜ್ಞೆ ಕೊಟ್ಟಿಲ್ಲ. ಈಗ ನಮಗೂ ನ್ಯಾಯಾಲಯ ಮಧ್ಯಪ್ರವೇಶ ಮಾಡದು ಎಂಬ ವಿಶ್ವಾಸವಿದೆ ಎಂದು ಮಾಧುಸ್ವಾಮಿ ವಿವರಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:21.10.2022

## 24. ಏತ ನಿರ್ವಹಣೆ ಖಾಸಗಿಗೆ

ಜಲಸಂಪನ್ಮೂಲ ಇಲಾಖೆಯಡಿ ಏತ ನೀರಾವರಿ ಯೋಜನೆಗಳ ಕಾರ್ಯಾಚರಣೆ ಮತ್ತು ನಿರ್ವಹಣೆಯ ಕರಡು ನೀತಿ ಹಾಗೂ ಮಾರ್ಗಸೂಚಿಗಳಿಗೆ ಸಚಿವ ಸಂಪುಟ ಸಭೆ ಅನುಮೋದನೆ ನೀಡಿದೆ. ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ತೀರ್ಮಾನ ಕೈಗೊಳ್ಳಲಾಯಿತು. ಈ ಕರಡು ಅಧಿಸೂಚನೆಯಂತೆ ಏತ ನೀರಾವರಿ ಯೋಜನೆಗಳ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ಖಾಸಗಿಯವರಿಗೆ ಗುತ್ತಿಗೆ ಕೊಡಲು ಸರ್ಕಾರ ನಿರ್ಧರಿಸಿದೆ.

**ನಿರ್ವಹಣಾ ಸಮಸ್ಯೆಗಳು:** ಸ್ಥಳೀಯ ಕಾರ್ಯಾಚರಣೆ ಮತ್ತು ನಿರ್ವಹಣಾ ಏಜೆನ್ಸಿಗಳಲ್ಲಿ ವೃತ್ತಿಪರತೆ ಕೊರತೆ, ಅನನುಭವಿ ಸಿಬ್ಬಂದಿ ಕಾರ್ಯಾಚರಣೆ, ಪ್ರಮುಖ ಸ್ಥಾವರ ಹಾಗೂ ಯಂತ್ರೋಪಕರಣಗಳ ನೈಜ ಸಮಯದ ಕಾರ್ಯಕ್ಷಮತೆಯ ಮಾಹಿತಿ ಕೊರತೆ, ಯಂತ್ರಗಳ

ಕಾರ್ಯಕ್ಷಮತೆ ಮತ್ತು ವಸ್ತುಸ್ಥಿತಿಯ ನಿರಂತರ ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ, ನಿರ್ವಹಣಾ ವೆಚ್ಚದಲ್ಲಿ ಗಮನಾರ್ಹವಾದ ಕಡಿತ, ಸೇವಾ ವಿತರಣೆಯಲ್ಲಿ ಗಮನಾರ್ಹ ಸುಧಾರಣೆ ಮತ್ತು ಏತ ನೀರಾವರಿ ಯೋಜನೆಗಳ ಸುಸ್ಥಿರ ಕಾರ್ಯಾಚರಣೆ ದೃಷ್ಟಿಯಲ್ಲಿಟ್ಟುಕೊಂಡು ಈ ಕರಡು ನೀತಿ ಮತ್ತು ಮಾರ್ಗಸೂಚಿಗಳನ್ನು ಸರ್ಕಾರ ಸಿದ್ಧಪಡಿಸಿದ್ದು, ಅದಕ್ಕೆ ಸಂಪುಟ ಸಭೆ ಅನುಮೋದನೆ ನೀಡಿದೆ.

**ಸಮಸ್ಯೆ ನಿವಾರಣೆಗೆ ಗುತ್ತಿಗೆ ನಿರ್ಧಾರ**: ಸಚಿವ ಸಂಪುಟ ಸಭೆ ಬಳಿಕ ಈ ಕುರಿತು ಮಾಹಿತಿ ನೀಡಿದ ಕಾನೂನು ಸಚಿವ ಜೆ.ಸಿ. ಮಾಧುಸ್ವಾಮಿ, ಏತ ನೀರಾವರಿ ಯೋಜನೆಗಳ ಕಾರ್ಯಕ್ಷಮತೆ ಸಮಸ್ಯೆಗಳನ್ನು ನಿವಾರಿಸುವ ದೃಷ್ಟಿಯಿಂದ ಸಾಮಾನ್ಯ ಮಾರ್ಗಸೂಚಿಗಳನ್ನು ಅಭಿವೃದ್ಧಿಪಡಿಸಲಾಗಿದೆ ಎಂದು ತಿಳಿಸಿದರು.

**ನೀತಿಯ ಪ್ರಮುಖ ಉದ್ದೇಶ**: ಅಚ್ಚುಕಟ್ಟು ಪ್ರದೇಶದಲ್ಲಿ ನಿಗದಿತ ಸ್ಥಳಗಳಲ್ಲಿ ಅಗತ್ಯವಾದ ಪ್ರಶರ್/ಹೆಡ್‌ನೊಂದಿಗೆ ಬೆಳೆಗಳಿಗೆ ನೀರಿನ ಅವಶ್ಯಕತೆಯ ಅನುಗುಣವಾಗಿ ನೀರಾವರಿ ವೇಳಾಪಟ್ಟಿಯ ಪ್ರಕಾರ, ನೀರನ್ನೊದಗಿಸುವುದು ಮತ್ತು ಕೆರೆ ತುಂಬುವ ಅವಶ್ಯಕತೆಗಳನ್ನು ಸುಸ್ಥಿರ ಮಿತವ್ಯಯಕಾರಿ ಕಾರ್ಯಾಚರಣೆ ಮತ್ತು ನಿರ್ವಹಣೆ ಮತ್ತು ಮಾರ್ಗಸೂಚಿಗಳನ್ನು ಅಭಿವೃದ್ಧಿಪಡಿಸುವುದು ಈ ನೀತಿಯ ಉದ್ದೇಶವಾಗಿದೆ.

**ಮಾರ್ಗಸೂಚಿ – ಶಿಫಾರಸ್ಸುಗಳ ಸಾರ:**

- ಸುಧಾರಿತ ತಂತ್ರಜ್ಞಾನ ಅಳವಡಿಸಿಕೊಳ್ಳುವ ಮೂಲಕ ಕಾರ್ಯಾಚರಣೆ ದಕ್ಷತೆಯನ್ನು ಸುಧಾರಿಸುವುದು ಮತ್ತು ಕಾರ್ಯಕ್ಷಮತೆ ಕಾಯ್ದುಕೊಳ್ಳುವುದು.
- ಏತ ನೀರಾವರಿ ಯೋಜನೆಗಳ ಅಂದಾಜು ತಯಾರಿಸಲು ಮಾರ್ಗಸೂಚಿ.
- ಕಾಯಾಚರಣೆ ಹಾಗೂ ನಿರ್ವಹಣೆ ಒಪ್ಪಂದಗಳಿಗೆ ಟೆಂಡರ್ ಸಿದ್ಧಪಡಿಸಲು ಮಾರ್ಗಸೂಚಿ.

**ವಿಮಾನ ನಿಲ್ದಾಣಕ್ಕೆ ಬಸವೇಶ್ವರರ ಹೆಸರು**: ವಿಜಯಪುರ ವಿಮಾನ ನಿಲ್ದಾಣಕ್ಕೆ ಸಮಾಜ ಸುಧಾರಕ ಬಸವೇಶ್ವರ ವಿಮಾನ ನಿಲ್ದಾಣವೆಂದು ನಾಮಕರಣ ಮಾಡುವ ಪ್ರಸ್ತಾವನೆಗೆ ಸಚಿವ ಸಂಪುಟ ಅನುಮೋದನೆ ನೀಡಿದೆ. ವಿಮಾನ ನಿಲ್ದಾಣವನ್ನಾಗಿ ಮೇಲ್ದರ್ಜೆಗೇರಿಸಲು ರೂ.347.92 ಕೋಟಿಗಳ ಪರಿಷ್ಕೃತ ಅಂದಾಜು ಮೊತ್ತಕ್ಕೆ ಸಚಿವ ಸಂಪುಟ ಒಪ್ಪಿಗೆ ನೀಡಿದೆ.

ವಿಜಯಪುರ ವಿಮಾನ ನಿಲ್ದಾಣಕ್ಕೆ ಬಸವೇಶ್ವರರ ಹೆಸರಿಡುವ ಪ್ರಸ್ತಾವನೆಗೆ ಸಚಿವ ಸಂಪುಟ ಅನುಮೋದನೆ ನೀಡಿರುವುದಕ್ಕೆ ಸಂತಸವಾಗಿದೆ. ಈ ಐತಿಹಾಸಿಕ ನಿರ್ಣಯಕ್ಕಾಗಿ ಸಂಪುಟದ ಸಹೋದ್ಯೋಗಿಗಳನ್ನು ಅಭಿನಂದಿಸುತ್ತೇನೆ.

ಗೋವಿಂದ ಕಾರಜೋಳ, ಜಲಸಂಪನ್ಮೂಲ ಸಚಿವ

**ಪ್ರಮುಖ ನಿರ್ಣಯಗಳು:**

- ಜಿಲ್ಲಾ ನ್ಯಾಯಾಧೀಶರ ಕೆಳಹಂತದ ನ್ಯಾಯಾಂಗ ಸೇವೆ ಅಧಿಕಾರಿಗಳಿಗೆ ಆರನೇ ವೇತನ ಆಯೋಗದ ಶಿಫಾರಸ್ಸು ಪ್ರಕಾರ ವೇತನ ಭತ್ಯೆ ಪರಿಷ್ಕರಣೆ, ಹಿಂಬಾಕಿ ಸಹಿತ ಪಾವತಿಗೆ ಅಸ್ತು, ರೂ.300 ಕೋಟಿ ವೆಚ್ಚ.
- ವೈದ್ಯಕೀಯ ಶಿಕ್ಷಣ ಇಲಾಖೆಯಡಿ ಬರುವ 18 ವೈದ್ಯಕೀಯ ಸಂಸ್ಥೆಗಳ ಅರಿವಳಿಕೆ ಕಾರ್ಯಸ್ಥಾವರ ಮತ್ತು ರೋಗಿಯ ನಿಗಾ ವಹಿಸುವ ಉಪಕರಣಗಳ ಖರೀದಿಗೆ ರೂ.33.92 ಕೋಟಿ ವೆಚ್ಚ.

- ➢ ಪ್ರಸಕ್ತ ಹಣಕಾಸು ವರ್ಷ (2022–23) ದಲ್ಲಿ ವಿಶ್ವೇಶ್ವರಯ್ಯ ಜಲ ನಿಗಮ ರೂ.250 ಕೋಟಿ. ಕರ್ನಾಟಕ ನೀರಾವರಿ ನಿಗಮ ರೂ.850 ಕೋಟಿ ಅವಧಿ ಸಾಲ ಪಡೆಯಲು ಸರ್ಕಾರದ ಖಾತರಿ.
- ➢ ಕರ್ನಾಟಕ ಕೃಷಿ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು 2022ಕ್ಕೆ ಅನುಮೋದನೆ.
- ➢ ಬಾಬು ಜಗಜೀವನರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮದಿಂದ ಡಚ್ ನೆರವಿನ ಯೋಜನೆ ಹಾಗೂ ಇತರ ಯೋಜನೆಗಳಡಿ ನಿರ್ಮಿಸಿ ಪರಿಶಿಷ್ಟ ಜಾತಿ ಕುಶಲಕರ್ಮಿಗಳಿಗೆ ಹಂಚಿಕೆ ಮಾಡಿರುವ ವಸತಿ ಕಾರ್ಯಾಗಾರಗಳು ಫಲಾನುಭವಿಗಳ ಹೆಸರಿಗೆ ನೋಂದಣಿ
- ➢ ಕರ್ನಾಟಕ ಲೋಕಸೇವಾ ಆಯೋಗದ 2020–21ನೇ ಸಾಲಿನ ವಾರ್ಷಿಕ ವರದಿ ಅಂಗೀಕಾರ.
- ➢ ಕರ್ನಾಟಕ ಲೋಕಾಯುಕ್ತ ಸಂಸ್ಥೆಯ 2018–19, 2019–20 ಮತ್ತು 2020–21ನೇ ಸಾಲುಗಳ ವಾರ್ಷಿಕ ವರದಿ ಅಂಗೀಕಾರ.
- ➢ ವಿಧಾನ ಮಂಡಲದ ಮುಂಗಾರು ಅಧಿವೇಶನ ಸಮಾಪ್ತಿ.
- ➢ ಜಲಜೀವನ್ ಮಿಷನ್‌ನಡಿ ಗ್ರಾಮೀಣ ಪ್ರದೇಶದ ಮನೆಗಳಿಗೆ ನಲ್ಲಿ ನೀರು ಸಂಪರ್ಕ ಕಲ್ಪಿಸುವ ವಿವಿಧ ಜಿಲ್ಲೆಗಳ ಒಟ್ಟು 24 ಯೋಜನೆಗಳಿಗೆ ಸಮ್ಮತಿ.

ಆಧಾರ: ವಿಜಯವಾಣಿ, ದಿನಾಂಕ:21.10.2022

## 25. ರಾಜ್ಯದಲ್ಲಿ ರೂ.1,74,381.44 ಕೋಟಿ ಬಂಡವಾಳ ಹೂಡಿಕೆ ಪ್ರಸ್ತಾವನೆಗೆ ಸಮ್ಮತಿ

ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯ 60ನೇ ಸಭೆಯಲ್ಲಿ ಬರೋಬ್ಬರಿ ರೂ.1,74,381.44 ಕೋಟಿ ಮೌಲ್ಯದ ಒಟ್ಟು 11 ಯೋಜನೆಗಳಿಗೆ ಒಪ್ಪಿಗೆ ನೀಡಲಾಯಿತು. ರಾಜ್ಯದಲ್ಲಿ ಎಷ್ಟು ಭಾರಿ ಮೊತ್ತದ ಬಂಡವಾಳ ಹೂಡಿಕೆ ಪ್ರಸ್ತಾವನೆಗೆ ಏಕಕಾಲದಲ್ಲಿ ಅನುಮೋದನೆ ನೀಡಿರುವುದು ಇದೇ ಮೊದಲು.

ಗ್ರೀನ್ ಹೈಡ್ರೋಜನ್ ಉತ್ಪಾದಕ ಸಂಸ್ಥೆ ಆಕ್ಮೆ ಕ್ಲೀನ್ ಟೆಕ್ ಸೆಲ್ಯೂಷನ್ ಸೇರಿದಂತೆ 8 ಹೊಸ ಕೈಗಾರಿಕಾ ಪ್ರಸ್ತಾವನೆಗಳು ಹಾಗೂ 3 ಹೆಚ್ಚುವರಿ ಹೂಡಿಕೆ ಯೋಜನೆಗಳ ಪ್ರಸ್ತಾವನೆಗೆ ಅನುಮೋದನೆ ದೊರೆತಿದೆ. ಈ ಯೋಜನೆಗಳಿಂದ ರಾಜ್ಯದಲ್ಲಿ 41,448 ಉದ್ಯೋಗ ಸೃಷ್ಟಿಯಾಗುವ ನಿರೀಕ್ಷೆ ಇದೆ.

ಸಭೆಯಲ್ಲಿ ಯೋಜನೆಗಳಿಗೆ ಒಪ್ಪಿಗೆ ನೀಡಿದ ನಂತರ ಮಾತನಾಡಿದ ಮುಖ್ಯಮಂತ್ರಿಯವರು, ಹಸಿರು ಇಂಧನವೇ ಭವಿಷ್ಯ, 2026 ರಿಂದ ಗ್ರೀನ್ ಹೈಡ್ರೋಜನ್ ರಫ್ತು ಆರಂಭವಾಗಲಿದ್ದು, ದೇಶದ ಒಟ್ಟು ಗ್ರೀನ್ ಹೈಡ್ರೋಜಿನ್ ರಫ್ತಿನಲ್ಲಿ ರಾಜ್ಯದ ಪಾಲು ಅಧಿಕವಾಗಿರಲಿದೆ. ಈ ನಿಟ್ಟಿನಲ್ಲಿ ರಾಜ್ಯದಲ್ಲಿ ಗ್ರೀನ್ ಹೈಡ್ರೋಜನ್ ಉತ್ಪಾದನೆಗೆ ಮುಂದಾಗಿರುವ ಆಕ್ಮೆ ಕ್ಲೀನ್ ಟೆಕ್ ಸಲ್ಯೂಷನ್ ಪ್ರೈ.ಲಿ. ಜೆಎಸ್‌ಡಬ್ಲ್ಯೂ ಗ್ರೀನ್ ಹೈಡ್ರೋಜನ್ ಲಿ., ಅವದಾ ವೆಂಚರ್ಸ್ ಪ್ರೈ.ಲ., ಹಾಗೂ ರಿನ್ಯೂ ಇ–ಫ್ಯೂಯೆಲ್ಸ್ ಪ್ರೈವೇಟ್ ಲಿಮಿಟೆಡ್‌ನ ಪ್ರಸ್ತಾವನೆಗೆ ಸಭೆಯಲ್ಲಿ ಅನುಮೋದನೆ ನೀಡಲಾಗಿದೆ. ಜಾಗತಿಕ ಹೂಡಿಕೆದಾರರ ಸಮಾವೇಶಕ್ಕೆ ಮೊದಲೇ ಇಷ್ಟು ಭಾರಿ ಮೊತ್ತದ ಬಂಡವಾಳ ರಾಜ್ಯದಲ್ಲಿ ಹೂಡಿಕೆ ಆಗುತ್ತಿರುವುದು ವಿಶೇಷ. ಇದು ನಮ್ಮ ಉತ್ಸಾಹ ಮತ್ತು ನಿರೀಕ್ಷೆಯನ್ನು ಹೆಚ್ಚಿಸಿದೆ ಎಂದರು.

ಕೈಗಾರಿಕಾ ಸಚಿವ ಮುರುಗೇಶ್ ನಿರಾಣಿ ಮಾತನಾಡಿ, ನವೀಕರಿಸಬಹುದಾದ ಇಂಧನ ಕ್ಷೇತ್ರದಲ್ಲಿ ಕರ್ನಾಟಕ ಮುಂಚೂಣಿಯಲ್ಲಿದೆ. ಸರ್ಕಾರವು ಗ್ರೀನ್ ಹೈಡ್ರೋಜನ್ ನೀತಿ ರೂಪಿಸುತ್ತಿದೆ. ಕಬ್ಬು ಬೆಳೆಯುವ ರಾಜ್ಯಗಳ ಪೈಕಿ ದೇಶದಲ್ಲೇ 3ನೇ ಸ್ಥಾನದಲ್ಲಿರುವ ಕರ್ನಾಟಕ ದೇಶದಲ್ಲೇ ಅತಿ ಹೆಚ್ಚು ಎಥನಾಲ್ ಉತ್ಪಾದಿಸುವ ರಾಜ್ಯ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇದಕ್ಕೆ ಪೂರಕವಾಗಿ ಇಂದಿನ

ಸಭೆಯಲ್ಲಿ ಹಸಿರು ಇಂಧನ ಉತ್ಪಾದನಾ ವಲಯದ ಬಂಡವಾಳ ಹೂಡಿಕೆ ಪ್ರಸ್ತಾವನಗಳಿಗೆ ಅನುಮೋದನೆ ದೊರೆತಿರುವುದು ಅತ್ಯಂತ ಸಂತಸದ ವಿಷಯ ಎಂದು ತಿಳಿಸಿದರು.

ಸಭೆಯಲ್ಲಿ ಸಚಿವರಾದ ಗೋವಿಂದ ಕಾರಜೋಳ, ಬಿ.ಸಿ. ಪಾಟೀಲ, ಸರ್ಕಾರದ ಮುಖ್ಯ ಕಾರ್ಯದರ್ಶಿ ವಂದಿತಾ ಶರ್ಮಾ, ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಮಂಜುನಾಥ್ ಪ್ರಸಾದ್, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ ಡಾ:ಇ.ವಿ. ರಮಣರೆಡ್ಡಿ, ಕೈಗಾರಿಕಾಭಿವೃದ್ಧಿ ಆಯುಕ್ತೆ ಗುಂಜನ್ ಕೃಷ್ಣ, ಕೆಐಎಡಿಬಿ ಸಿಇಒ ಆರ್. ಗಿರೀಶ್, ಕರ್ನಾಟಕ ಉದ್ಯೋಗ ಮಿತ್ರ ವ್ಯವಸ್ಥಾಪಕ ನಿರ್ದೇಶಕ ದೊಡ್ಡಬಸವರಾಜು ಸೇರಿದಂತೆ ವಿವಿಧ ಇಲಾಖೆಗಳ ಕಾರ್ಯದರ್ಶಿಗಳು ಅಪರ ಮುಖ್ಯ ಕಾರ್ಯದರ್ಶಿಗಳು, ಆಯುಕ್ತರು ಹಾಗೂ ಹಿರಿಯ ಅಧಿಕಾರಿಗಳು ಇದ್ದರು.

- ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆ
- ರೂ.41,448 ಉದ್ಯೋಗ ಸೃಷ್ಟಿಯಾಗುವ ನಿರೀಕ್ಷೆ.
- 8 ಹೊಸ ಕೈಗಾರಿಕಾ ಪ್ರಸ್ತಾವನೆ.

| ಅನುಮೋದನೆ ಪಡೆದ ಪ್ರಮುಖ ಯೋಜನೆಗಳು | |
|---|---|
| ಕಂಪನಿ | ಹೂಡಿಕೆ ಮೊತ್ತ ಕೋಟಿಗಳಲ್ಲಿ |
| ಆಕ್ಮೆ ಕ್ಲೀನ್ ಟೆಕ್ ಸಲ್ಯೂಷನ್ ಪ್ರೈ.ಲಿ | ರೂ.51,865 |
| ಅವದಾ ವೆಂಚರ್ಸ್ ಪ್ರೈ.ಲಿ | ರೂ.45,000 |
| ಜೆಎಸ್‌ಡಬ್ಲ್ಯೂ ಗ್ರೀನ್ ಹೈಟ್ರೋಜನ್ ಲಿ. | ರೂ.40,148 |
| ಎನ್ಯೂ ಇ–ಫ್ಯೂಯೆಲ್ಸ್ ಪ್ರೈ.ಲಿ. | ರೂ.20,000 |
| ಏಟ್ರಿಯಾ ಪವರ್ ಹೋಲ್ಡಿಂಗ್ಸ್ | ರೂ.9,454 |
| ಕಿರ್ಲೋಸ್ಕರ್ ಫೆರೋಸ್ ಇಂಡಸ್ಟ್ರೀಸ್ ಲಿ. | ರೂ.3,025 |
| ಜೆಎಸ್‌ಡಬ್ಲ್ಯೂ ನಿಯೋ ಎನರ್ಜಿ ಲಿ. | ರೂ.2,579 |
| ಕಾಂಟಿನೆಂಟಲ್ ಆಟೋಮೇಟಿವ್ ಕಾಂಪೊನೆಂಟ್ಸ್ | ರೂ.920 |

| ಹೆಚ್ಚುವರಿ ಹೂಡಿಕೆ ಪ್ರಸ್ತಾವನೆಗಳು | |
|---|---|
| ಕಂಪನಿ | ಹೂಡಿಕೆ ಮೊತ್ತ ಕೋಟಿಗಳಲ್ಲಿ |
| ಟೊಯೋಟ ಕಿರ್ಲೋಸ್ಕರ್ ಮೋಟಾರ್‌ಪ್ರೈ.ಲಿ. | ರೂ.511 |
| ಜಿ.ಎಂ ಶುಗರ್ ಮತ್ತು ಎನರ್ಜಿ ಲಿ | ರೂ.49.44 |
| ರಿಸೋರ್ಸ್‌ಸ್ ಪೆಲ್ಲಟ್ಸ್ ಕಾನ್ಸ್‌ನ್ಟ್ರೇಟ್ಸ್ ಪ್ರೈ.ಲಿ | ರೂ.830 |

ಆಧಾರ: ವಿಶ್ವವಾಣಿ, ದಿನಾಂಕ:23.10.2022

## 26. ಎಸ್ಸಿ/ಎಸ್ಟಿ ಮೀಸಲಾತಿ ಹೆಚ್ಚಳಕ್ಕೆ ಅಧಿವೇಶನದಲ್ಲಿ ಒಪ್ಪಿಗೆ : ಸಿ.ಎಂ

ಎಸ್ಸಿ/ಎಸ್ಟಿ ಮೀಸಲಾತಿ ಹೆಚ್ಚಳ ಸುಗ್ರೀವಾಜ್ಞೆಗೆ ರಾಜ್ಯಪಾಲರು ಅಂಕಿತ ಹಾಕಿದ್ದು, ಇನ್ನು ಈ ಕುರಿತ ವಿಧೇಯಕಕ್ಕೆ ಮುಂದಿನ ಅಧಿವೇಶನದಲ್ಲಿ ಎರಡು ಸದನಗಳ ಅನುಮೋದನೆ ಪಡೆಯಲಾಗುವುದು ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ನಗರದಲ್ಲಿ ಸುದ್ಧಿಗಾರರೊಂದಿಗೆ ಮಾತನಾಡಿ ಎಸ್ಸಿ, ಎಸ್ಟಿ ಮೀಸಲಾತಿ ಹೆಚ್ಚಳಕ್ಕೆ ಕಾನೂನಿನ ರಕ್ಷಣೆ ನೀಡಲಾಗುತ್ತಿದೆ. ಇನ್ನು ಪಂಚಮಸಾಲಿ ಸೇರಿದಂತೆ ಇತರೆ ಹಿಂದುಳಿದ ವರ್ಗಗಳ ಮೀಸಲಾತಿ ಬೇಡಿಕೆ ಕುರಿತು ಆಯೋಗಗಳ ವರದಿ ಬಂದ ನಂತರ ಕ್ರಮ ಕೈಗೊಳ್ಳಲಾಗುವುದು ಎಂದರು.

ಯಾವುದೇ ವರ್ಗದ ಮೀಸಲಾತಿ ಕಸಿಯುವ ಅಥವಾ ಸೇರ್ಪಡೆ ಮಾಡುವ ಕುರಿತು ನಾನು ಪ್ರತಿಕ್ರಿಯೆ ನೀಡಲಾರೆ. ಏಕೆಂದರೆ ಮೀಸಲಾತಿ ವಿಚಾರದಲ್ಲಿ ಏನೇ ಮಾಡಿದರೂ ಸಂವಿಧಾನ ಹಾಗೂ ಕಾನೂನಿನ ಚೌಕಟ್ಟಿನಲ್ಲೇ ಮಾಡಬೇಕು. ಮೀಸಲಾತಿ ಅತ್ಯಂತ ಸೂಕ್ಷ್ಮ ವಿಚಾರವಾಗಿದ್ದು, ಸರ್ಕಾರದ ಮುಖ್ಯಸ್ಥನಾಗಿ ಸಂವಿಧಾನ ಮತ್ತು ಕಾನೂನಿನ ಚೌಕಟ್ಟಿನಲ್ಲಿ ಮುಂದುವರಿಯಬೇಕು ಎಂದು ಪ್ರಶ್ನೆಯೊಂದಕ್ಕೆ ಮುಖ್ಯಮಂತ್ರಿಯವರು ಪ್ರತಿಕ್ರಿಯಿಸಿದರು.

ಇದೇ ವೇಳೆ ಅಲ್ಪಸಂಖ್ಯಾತರ ಮೀಸಲಾತಿ ಕುರಿತು ಕೆಲ ಶಾಸಕರು ನೀಡಿರುವ ಹೇಳಿಕೆಗಳನ್ನು ಗಮನಕ್ಕೆ ತಂದಾಗ, ಅದು ಅವರ ವೈಯಕ್ತಿಕ ಹೇಳಿಕೆಗಳು ಅಷ್ಟೇ ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ಆಧಾರ: ಕನ್ನಡಪ್ರಭ, ದಿನಾಂಕ:25.10.2022

## 27. ರಾಜ್ಯದಲ್ಲಿ 5 ಕೈಗಾರಿಕಾ ಟೌನ್‌ಶಿಪ್ ನಿರ್ಮಾಣ : ಸಿಎಂ

ರಾಜ್ಯದಲ್ಲಿ ಚಿತ್ರದುರ್ಗ, ಹಾವೇರಿ, ದಾವಣಗೆರೆ, ಧಾರವಾಡ ಹಾಗೂ ಬೆಳಗಾವಿಗಳಲ್ಲಿ ಕೈಗಾರಿಕಾ ವಿಶೇಷ ಟೌನ್‌ಶಿಪ್ ಸ್ಥಾಪಿಸಲಾಗುವುದು ಎಂದು ಮುಖ್ಯಮಂತ್ರಿಯವರು ತಿಳಿಸಿದ್ದಾರೆ.

ಇಲ್ಲಿನ ಖಾಸಗಿ ಹೊಟೇಲ್‌ನಲ್ಲಿ ನಡೆದ ಧಾರವಾಡದ ಮುಮ್ಮಿಗಟ್ಟಿಯಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಎಫ್‌ಎಂಸಿಜಿ ಕ್ಲಸ್ಟರ್ (ಫಾಸ್ಟ್ ಮೂವಿಂಗ್ ಕನ್ಸ್ಯೂಮರ್ ಗೂಡ್ಸ್) ಬಂಡವಾಳ ಹೂಡಿಕೆದಾರರ ಒಡಂಬಡಿಕೆಯ ಸಮಾವೇಶ ಉದ್ಘಾಟಿಸಿ ಅವರು ಮಾತನಾಡಿದರು. ಎಸ್‌ಐಆರ್ ಆ್ಯಕ್ಟ್ (ವಿಶೇಷ ಹೂಡಿಕಾ ವಲಯ) ಕರಡು ಪ್ರತಿ ಸಿದ್ಧಗೊಂಡಿದೆ. ಬೆಂಗಳೂರು ನಂತರ ಕೈಗಾರಿಕಾ ಬೆಳವಣಿಗೆ ಅತ್ಯಂತ ಪ್ರಶಸ್ತವಾದ ನಗರವೆಂದರೆ ಅದು ಹುಬ್ಬಳ್ಳಿ – ಧಾರವಾಡ, ಮುಂಬೈ – ಚೆನ್ನೈ ಕೈಗಾರಿಕಾ ಕಾರಿಡಾರ್‌ನಿಂದ ರಾಜ್ಯದಲ್ಲಿ ಮಹತ್ತರ ಬದಲಾವಣೆಯಾಗಲಿದೆ. ಲಕ್ಷಾಂತರ ಉದ್ಯೋಗ ಸೃಷ್ಟಿಯಾಗುತ್ತದೆ. ಅದಕ್ಕೆ ಪೂರಕವಾದ ವಾತಾವರಣವನ್ನು ರಾಜ್ಯ ಸರ್ಕಾರ ಸೃಷ್ಟಿ ಮಾಡುತ್ತಿದೆ. ಈ ನಿಟ್ಟಿನಲ್ಲಿ ಕೆಲಸಗಳು ನಡೆಯುತ್ತಿವೆ. ಈ ಹಿನ್ನಲೆಯಲ್ಲಿ ಚಿತ್ರದುರ್ಗ, ದಾವಣಗೆರೆ, ಹಾವೇರಿ, ಧಾರವಾಡ, ಬೆಳಗಾವಿಯಲ್ಲಿ ಕೈಗಾರಿಕಾ ಟೌನ್‌ಶಿಪ್ ಸ್ಥಾಪಿಸಲು ಉದ್ದೇಶಿಸಲಾಗಿದೆ. ಪ್ರತಿ ಕಡೆಯೂ ತಲಾ 1 ಸಾವಿರ ಎಕರೆ ಪ್ರದೇಶದಲ್ಲಿ ಟೌನ್ ನಿರ್ಮಿಸಲಾಗುವುದು, ಚಿತ್ರದುರ್ಗ, ದಾವಣಗೆರೆ, ಬೆಳಗಾವಿಯಲ್ಲಿ ಈಗಾಗಲೇ ಜಾಗ ಗುರುತಿಸಲಾಗಿದೆ. ಧಾರವಾಡ ಹಾಗೂ ಹಾವೇರಿಯಲ್ಲಿ ಜಾಗ ಗುರುತಿಸುವುದು ಬಾಕಿಯಿದೆ ಎಂದು ತಿಳಿಸಿದರು.

**ಎಸ್‌ಐಆರ್‌ಆ್ಯಕ್ಟ್:** ಧಾರವಾಡ ಮತ್ತು ತುಮಕೂರಗಳಲ್ಲಿ ಎಸ್‌ಐಆರ್ (ವಿಶೇಷ ಹೂಡಿಕಾ ವಲಯ) ರಚಿಸುವುದಾಗಿ ಬಜೆಟ್‌ನಲ್ಲಿ ಘೋಷಿಸಲಾಗಿತ್ತು. ಇದೀಗ ಕರಡು ಪ್ರತಿ ಸಿದ್ಧವಾಗಿದೆ. ಶೀಘ್ರದಲ್ಲೇ ಬಿಲ್ ತಯಾರಿಸಿ ಮಂಡಿಸಿ ಜಾರಿಗೊಳಿಸಲಾಗುವುದು. ಇದರಿಂದ ಈ ಭಾಗಗಳಲ್ಲಿ ಸ್ಥಾಪನೆಯಾಗುವ ಕೈಗಾರಿಕೆಗಳಿಗೆ ಬೇಕಾಗುವ ಎಲ್ಲ ಇಲಾಖೆಗಳ ಅನುಮತಿಗಳು ಈ ಎಸ್‌ಐಆರ್‌ನಡಿ ಇಲ್ಲೇ ಪಡೆಯಬಹುದಾಗಿದೆ. ಈಗಾಗಲೇ ಗುಜರಾತ್‌ನಲ್ಲಿ ಎಸ್‌ಐಆರ್ ಇದೆ. ಅದೇ ಮಾದರಿಯಲ್ಲಿ

ಇಲ್ಲಿ ರಚಿಸಲಾಗುತ್ತಿದೆ. ಇದು ಮುಂಬೈ – ಚೆನ್ನೈ ಕೈಗಾರಿಕಾ ಕಾರಿಡಾರ್‌ನ ಅಭಿವೃದ್ಧಿಗೂ ಪೂರಕವಾಗುತ್ತದೆ. ಇದು ಕೈಗಾರಿಕಾ ಸ್ನೇಹಿಯಾಗಿರುತ್ತದೆ ಎಂದು ಹೇಳಿದರು.

**ಭೂಸ್ವಾಧೀನ ಪೂರ್ಣ:** ತುಮಕೂರು–ದಾವಣಗೆರೆ ರೈಲ್ವೆ ಮಾರ್ಗದ ನಿರ್ಮಾಣಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಂಡಿದೆ. ಶೀಘ್ರದಲ್ಲೇ ಇದಕ್ಕೆ ಚಾಲನೆ ನೀಡಲಾಗುವುದು. ಇದರಿಂದ ಬೆಂಗಳೂರು ಹುಬ್ಬಳ್ಳಿ ಮಧ್ಯೆ ಸಂಚಾರದ ಅವಧಿ ಎರಡೂವರೆ ಗಂಟೆ ಕಡಿಮೆಯಾಗುತ್ತದೆ. ಹುಬ್ಬಳ್ಳಿ–ಅಂಕೋಲಾ ರೈಲ್ವೆ ಮಾರ್ಗದ ಯೋಜನೆಯೂ ಅಂತಿಮ ಹಂತಕ್ಕೆ ಬಂದಿದ್ದು ಶೀಘ್ರದಲ್ಲೇ ಹಸಿರು ನಿಶಾನೆ ಸಿಗಲಿದೆ ಎಂದು ವಿಶ್ವಾಸ ವ್ಯಕ್ತಪಡಿಸಿದರು.

ಧಾರವಾಡ–ಬೆಳಗಾವಿ ರೈಲು ಮಾರ್ಗದ ನಿರ್ಮಾಣಕ್ಕೆ ಬೇಕಾದ ಭೂಸ್ವಾಧೀನ ಪ್ರಕ್ರಿಯೆ ನಡೆಯುತ್ತಿದೆ. ಮಧ್ಯೆ ಕೆಲವರು ಕೋರ್ಟ್‌ಗೆ ಹೋಗಿದ್ದರು. ಇದೀಗ ಅದು ಕ್ಲಿಯರ್ ಆಗಿದೆ. ಶೀಘ್ರದಲ್ಲೇ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳ್ಳಲಿದ್ದು, ಇದೇ ವರ್ಷ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗುವುದು. ಇದು ರೂ.890 ಕೋಟಿ ಯೋಜನೆಯಾಗಿದೆ. ಶೇ.50ರಷ್ಟು ಅನುದಾನವನ್ನು ರಾಜ್ಯ ಸರ್ಕಾರ ಭರಿಸಲು ಸಿದ್ಧವಿದೆ ಎಂದು ತಿಳಿಸಿದರು.

ಧಾರವಾಡ–ಬೆಂಗಳೂರಿಗೆ ವಂದೇ ಭಾರತ್ ರೈಲು ಸಂಚಾರ ಆರಂಭವಾದರೆ ಪ್ರಯಾಣದ ಅವಧಿ ಮೂರುವರೆ ಗಂಟೆ ಕಡಿಮೆಯಾಗಲಿದೆ. ಇದು ಕೂಡ ಶೀಘ್ರದಲ್ಲೇ ಕಾರ್ಯಾರಂಭವಾಗಲಿದೆ ಎಂದು ತಿಳಿಸಿದರು. ಕಾರ್ಯಕ್ರಮದಲ್ಲಿ ಕೇಂದ್ರ ಸಚಿವ ಪ್ರಹ್ಲಾದ್ ಜೋಶಿ, ಕೈಗಾರಿಕಾ ಸಚಿವ ಮುರುಗೇಶ ನಿರಾಣಿ ಹಾಗೂ ಇತರರು ಉಪಸ್ಥಿತರಿದ್ದರು.

ಆಧಾರ: ಕನ್ನಡಪ್ರಭ, ದಿನಾಂಕ:27.10.2022

## 28. ಜೆಡಿಎಸ್ ರಾಷ್ಟ್ರೀಯ ಅಧ್ಯಕ್ಷರಾಗಿ ಎಚ್. ಡಿ. ದೇವೇಗೌಡ ಪುನರಾಯ್ಕೆ

ಜಾತ್ಯಾತೀತ ಜನತಾ ದಳ (ಜೆಡಿಎಸ್) ರಾಷ್ಟ್ರೀಯ ಅಧ್ಯಕ್ಷರಾಗಿ ಎಚ್.ಡಿ.ದೇವೇಗೌಡ ಅವಿರೋಧವಾಗಿ ಪುನರಾಯ್ಕೆಯಾಗಿದ್ದು, ಅಧಿಕೃತ ಘೋಷಣೆ ಬಾಕಿ ಇದೆ. ಜೆಪಿ ಭವನದಲ್ಲಿ ನಡೆದ ರಾಷ್ಟ್ರೀಯ ಕಾರ್ಯಕಾರಿಣಿ ಸಭೆಯಲ್ಲಿ ದೇವೇಗೌಡರನ್ನು ಸರ್ವಸಮ್ಮತವಾಗಿ ಆಯ್ಕೆ ಮಾಡಲಾಗಿದೆ. ಪ್ರಧಾನಿಯಾಗಿ ದೇಶವನ್ನು ಮುನ್ನಡೆಸಿರುವುದಲ್ಲದೇ, ರಾಷ್ಟ್ರೀಯ ರಾಜಕಾರಣದ ಅಪಾರ ಅನುಭವ ಹೊಂದಿರುವ ಗೌಡರೇ ಆ ಸ್ಥಾನಕ್ಕೆ ಸೂಕ್ತ ಎನ್ನುವ ಅಭಿಪ್ರಾಯ ಸಭೆಯಲ್ಲಿ ವ್ಯಕ್ತವಾಗಿವೆ. ಮುಂಬರುವ ರಾಜ್ಯ ವಿಧಾನಸಭೆ ಚುನಾವಣೆ ಹಿನ್ನೆಲೆಯಲ್ಲಿ ಪಕ್ಷವನ್ನು ಸಂಘಟನೆ ಮಾಡಲು ಅವರ ಮಾಗದರ್ಶನ ಅಗತ್ಯವಿದೆ. ಅದ್ದರಿಂದ ಅವರನ್ನೇ ಆ ಸ್ಥಾನದಲ್ಲಿ ಮುಂದುವರಿಸಬೇಕು ಎಂಬ ಅಭಿಪ್ರಾಯಗಳ ಹಿನ್ನಲೆಯಲ್ಲಿ ಈ ಕ್ರಮ ತೆಗೆದುಕೊಳ್ಳಲಾಗಿದೆ. ಸಭೆಯಲ್ಲಿ ಭಾಗವಹಿಸಿದ್ದ 13 ರಾಜ್ಯಗಳ ಪ್ರತಿನಿಧಿಗಳು ಕೂಡ ಪ್ರಸ್ತುತ ರಾಜಕೀಯ ಸನ್ನಿವೇಶದಲ್ಲಿ ದೇವೇಗೌಡರ ಆಯ್ಕೆಯೇ ಸೂಕ್ತ ಎನ್ನುವ ಒಮ್ಮತದ ನಿರ್ಣಯಗಳನ್ನು ಮಂಡಿಸಿದರು. ಕೇರಳ ರಾಜ್ಯದಿಂದ ಆಗಮಿಸಿದ್ದ ಮಾಜಿ ಸಚಿವರು ಮತ್ತು ಹಾಲಿ ಶಾಸಕರು ಈ ನಿರ್ಣಯಕ್ಕೆ ಬೆಂಬಲ ವ್ಯಕ್ತಪಡಿಸಿದರು ಎಂದು ತಿಳಿದುಬಂದಿದೆ. ಸಭೆಯಲ್ಲಿ ಗೌಡರ ಆಯ್ಕೆಯನ್ನು ಅಧಿಕೃತವಾಗಿ ಪ್ರಕಟಿಸಲಾಗುತ್ತದೆ.

ಆಧಾರ: ವಿಶ್ವವಾಣಿ, ದಿನಾಂಕ:28.10.2022

## 29. Don’t trouble public during my visit: PM to Government

PRIME Minister Narendra Modi has directed state government officials to ensure that motorists are not put to any inconvenience during his visit to Bengaluru on November 11. The PM will be in Bengaluru to attend several programmes, including flagging off the Vande Bharat

Express, unveiling a Kempegowda statue and addressing a rally near the Kempegowda International Airport (KIA).

The Vande Bharat Express will run between Mysuru- Bengaluru-Chennai.

During a video conference, Modi directed Chief Minister Basavaraj Bommai and other senior state government officers to make arrangements for all his programmes in such a way that people do not face any difficulty, said an official.

On November 11, the PM will arrive at the HAL Airport in the city around 10 am. He will flag off the Vande Bharat Express at Krantiveera Sangolli Rayanna Railway Station. From the station, he will take a helicopter to the Kempegowda International Airport where he will inaugurate the second terminal of the airport and unveil an 108-foot tall Kempegowda statue. He will also address a public rally near the airport before leaving for Andhra Pradesh around 2 pm.

Sources said around two lakh people are expected to attend the PM's rally near the airport. The government recently launched a campaign to collect sacred soil from across the state to be used for the development of a Kempegowda themed park at the airport.

The state government's decision to invite the PM to un- veil the statue and address the rally is seen as an attempt by the ruling BJP to woo the dominant Vokkaliga community in the Old Mysuru region ahead of the 2023 assembly polls. The Old Mysuru region is crucial for the BJP, which is making all efforts to retain power in the state.

Courtesy: Indian Express, dt: 28.10.2022

## 30. ನಾಡೆಲ್ಲ ಕೋಟಿ ಕಂಠದ "ಡಿಂಡಿಮ"

ಕಡಲ ಮಡಿಲಿನಿಂದ ಹಿಡಿದು ಅಕಾಶದೆತ್ತರಕ್ಕೂ ವಿಶ್ವ ವಿನೂತನವಾಗಿ ಹರಡಿದ ಕನ್ನಡದ ಕಲರವ, ಸರ್ವರ ಹೃದಯ ಸಂಸ್ಕಾರಿಯಾಗಿ ಕನ್ನಡ ಡಿಂಡಿಮವ ಬಾರಿಸಿತು.

ಕನ್ನಡ ರಾಜ್ಯೋತ್ಸವದ ಭಾಗವಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಆಯೋಜಿಸಿದ್ದ 'ಕೋಟಿ ಕಂಠ ಗಾಯನ' ಕಾರ್ಯಕ್ರಮದಿಂದಾಗಿ ನಾಡಿನುದ್ದಕ್ಕೂ ಎಲ್ಲೆಲ್ಲೂ ಕನ್ನಡ ಗೀತೆಗಳದ್ದೆ ಝೇಂಕಾರ. ಬೆಂಗಳೂರಿನ ವಿಧಾನಸೌಧದ ಮೆಟ್ಟಿಲುಗಳ ಮೇಲೆ ಸಾವಿರ ಸಾವಿರ ಸಂಖ್ಯೆಯಲ್ಲಿ ಕನ್ನಡದ ದನಿಗಳು ಜೊತೆಯಾಗಿ ಹಾಡಿದವು. ಇದಕ್ಕೆ ಮುಖ್ಯಮಂತ್ರಿಯವರು ಕನ್ನಡ ಮತ್ತು ಸಂಸ್ಕೃತಿ ಸಚಿವ ವಿ. ಸುನೀಲ್‌ಕುಮಾರ್, ಕಂದಾಯ ಸಚಿವ ಆರ್. ಅಶೋಕ ಹಾಗೂ ಹಲವು ಶಾಸಕರು ಧ್ವನಿಗೂಡಿಸಿದರು.

ನೇತ್ರಾವತಿ ಮತ್ತು ಫಲ್ಗುಣಿ ನದಿಗಳು ಅರಬ್ಬಿ ಸಮುದ್ರ ಸೇರುವ ಸಂಗಮದಲ್ಲಿ ಅಲೆಗಳ ಅಬ್ಬರಕ್ಕೆ ಕನ್ನಡದ ಹಾಡುಗಳ ಅಬ್ಬರವೂ ಜೊತೆಯಾಯಿತು. ಬೋಳೂರಿನ ಸುಲ್ತಾನ್ ಬತ್ತೇರಿಯಿಂದ ಹೊರಟ 50 ದೋಣಿಗಳು ತೋಟ ಬೆಂಗ್ರೆ ಅಳಿವೆ ಬಾಗಿಲುವರೆಗೆ ಸಾಗಿ ಕನ್ನಡದ ಹಾಡುಗಳನ್ನು ಕಡಲಾಳಕ್ಕೂ ತಲುಪಿಸಿದವು.

ವಿಮಾನದಲ್ಲೂ ಪ್ರಯಾಣಿಕರು ಕನ್ನಡ ಗೀತೆಗಳನ್ನು ಹಾಡಿ ಆಗಸದಲ್ಲೂ ಕನ್ನಡದ ಕಲರವ ಹರಡಿದರು.

ಬೆಂಗಳೂರಿನಿಂದ ಗ್ವಾಲಿಯರ್‌ಗೆ ತೆರಳಿದ ಸ್ಪೈಸ್ ಜೆಟ್ ವಿಮಾನವೊಂದಲ್ಲಿ ರಾಜ್‌ಕುಮಾರ್ ಹಾಡಿರುವ 'ಹುಟ್ಟಿದರೆ ಕನ್ನಡ ನಾಡಿನಲ್ಲಿ ಹುಟ್ಟಬೇಕು' ಹಾಡವನ್ನು ಮೈಕ್‌ನಲ್ಲಿ ಹಾಡಲಾಯಿತು. ಇದಕ್ಕೆ ಪ್ರಯಾಣಿಕರು ಧ್ವನಿಗೂಡಿಸಿರು.

ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣಗಳು, ಹುಬ್ಬಳ್ಳಿಯ ರೈಲು ನಿಲ್ದಾಣದಲ್ಲೂ ಕನ್ನಡದ ಹಾಡುಗಳು ಮೊಳಗಿದವು.

ಬೆಳಗಾವಿಯ ಸುವರ್ಣಸೌಧದ ಮೆಟ್ಟಿಲುಗಳ ಮೇಲೂ ಸಾವಿರಾರು ವಿದ್ಯಾರ್ಥಿಗಳು ಕನ್ನಡದ ಡಿಂಡಿಮ ಬಾರಿಸಿದರು.

ವಿಜಯಪುರದ ಗೋಲಗುಮ್ಮಟ, ಹಂಪಿಯ ವಿರೂಪಾಕ್ಷ ದೇಗುಲದ ಆವರಣ, ಮೈಸೂರಿನ ಅರಮನೆ, ಮಡಿಕೇರಿಯ ರಾಜಾಸೀಟು, ಬಾದಾಮಿಯ ಮೇಣ ಬಸದಿ, ಶೃಂಗೇರಿಯ ಶಾರದಾ ದೇಗುಲ ಮಾತ್ರವಲ್ಲದೇ, ರಾಜ್ಯದ ಎಲ್ಲಾ ಕಾರಾಗೃಹಗಳ ಅವರಣದಲ್ಲೂ ಕನ್ನಡ ಕಂಠಗಳು ಒಂದಾಗಿ ಮೊಳಗಿದವು.

ಜಯ ಭಾರತ ಜನನಿಯ ತನುಜಾತೆ, ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು, ಬಾರಿಸು ಕನ್ನಡ ಡಿಂಡಿಮವ, ಹಚ್ಚೇವು ಕನ್ನಡದ ದೀಪ, ವಿಶ್ವ ವಿನೂತನ ವಿದ್ಯಾಚೇತನ , ಹುಟ್ಟಿದರೆ ಕನ್ನಡ ನಾಡಲ್ಲಿ ಹುಟ್ಟಬೇಕು ಹಾಡುಗಳನ್ನು ಹಾಡಲಾಯಿತು.

1.35 ಕೋಟಿಗೂ ಹೆಚ್ಚು ಕನ್ನಡದ ಮನಸ್ಸುಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿವೆ. 50 ದೇಶಗಳಲ್ಲಿ, 27 ರಾಜ್ಯಗಳಲ್ಲಿ, 30 ಸಾವಿರಕ್ಕೂ ಹೆಚ್ಚು ಸಂಘ ಸಂಸ್ಥೆಗಳು 10 ಸಾವಿರಕ್ಕೂ ಹೆಚ್ಚು ಸ್ಥಳಗಳಲ್ಲಿ ಏಕಕಾಲಕ್ಕೆ ಕನ್ನಡ ಗೀತೆಗಳನ್ನು ಹಾಡುವ ಮೂಲಕ ಕನ್ನಡ ಪ್ರೇಮ ಮೆರೆದಿದ್ದಾರೆ. ಎಂದು ವಿ. ಸುನೀಲ್ ಕುಮಾರ್ ತಿಳಿಸಿದ್ದಾರೆ.

**ಕರ್ನಾಟಕ ನಂ.1 ಮಾಡ್ತೇವೆ : ಬೊಮ್ಮಾಯಿ:** ‘ಕರ್ನಾಟಕದಲ್ಲಿ ನೆಲೆಸಿರುವ ಪ್ರತಿಯೊಬ್ಬ ವ್ಯಕ್ತಿಗೂ ಬದುಕು ಕಟ್ಟಿಕೊಳ್ಳಲು ಅವಕಾಶ ನೀಡುತ್ತೇವೆ. ಎಲ್ಲರಿಗೂ ಆರ್ಥಿಕ ಮತ್ತು ಸಾಮಾಜಿಕ ಭದ್ರತೆ ನೀಡುವ ಮೂಲಕ ಕರ್ನಾಟಕವನ್ನು ಭಾರತದಲ್ಲೇ ನಂ.1 ರಾಜ್ಯವನ್ನಾಗಿ ಮಾಡುವ ಛಲವನ್ನು ತೊಟ್ಟಿದ್ದೇವೆ’ ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ವಿಧಾನಸೌಧದ ಮೆಟ್ಟಿಲುಗಳ ಮೇಲೆ ನಡೆದ ಕೋಟಿ ಕಂಠ ಗಾಯನ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಕರ್ನಾಟಕ ಇನ್ನಷ್ಟು ಶಕ್ತಿಶಾಲಿಯಾಗಿ ಹೊರಹೊಮ್ಮಲು ಎಲ್ಲ ಕನ್ನಡಿಗರೂ ಕೈಜೋಡಿಸಬೇಕು ಎಂದು ಮನವಿ ಮಾಡಿದರು.

‘ಕೋಟಿ ಕಂಠ ಗಾಯನ ಎಲ್ಲ ಕನ್ನಡಿಗರನ್ನು ಒಂದುಗೂಡಿಸುವ ಶ್ರೇಷ್ಠ ಕಾರ್ಯಕ್ರಮ. ಇದರಿಂದ ಕನ್ನಡಿಗರಲ್ಲಿ ಒಗ್ಗಟ್ಟು ಮೂಡುವುದಕ್ಕೆ ಸಹಾಯಕವಾಗಲಿದೆ. ಕರ್ನಾಟಕ ಅತ್ಯುನ್ನತ ಸ್ಥಾನಕ್ಕೆ ಏರಬೇಕು ಎಂಬ ಹಿರಿಯರ ಕನಸು ನನಸಾಗುವ ಸಂಕ್ರಮಣ ಕಾಲದಲ್ಲಿದ್ದೇವೆ. ಈ ಬಾರಿ ಕೋಟಿ ಕಂಠ ಗಾಯನ ವಿಶ್ವ ದಾಖಲೆಯನ್ನು ಸೃಷ್ಟಿಸಿದೆ’ ಎಂದು ಮುಖ್ಯಮಂತ್ರಿಯವರು ಹೇಳಿದರು.

ಆಧಾರ: ಪ್ರಜಾವಾಣಿ, ದಿನಾಂಕ:29.10.2022

## 31. ಕಾಶಿ ದರ್ಶನ ಟೂರ್ ಬುಕಿಂಗ್ ಶುರು

ರಾಜ್ಯ ಮುಜರಾಯಿ ಇಲಾಖೆಯ ಮಹತ್ವಾಕಾಂಕ್ಷೆ ಯೋಜನೆ ಭಾರತ್ ಗೌರವ್ ಕಾಶಿ ದರ್ಶನ ಪ್ಯಾಕೇಜ್ ಟೂರ್‌ಗೆ ಬುಕ್ಕಿಂಗ್ ಪ್ರಾರಂಭವಾಗಿದೆ. ಈ ಯೋಜನೆಯ ಮೊದಲ ರೈಲು ನವೆಂಬರ್ 11 ರಂದು ಬೆಂಗಳೂರಿನಿಂದ ಹೊರಡಲಿದ್ದು, ಪ್ರಧಾನಿ ನರೇಂದ್ರ ಮೋದಿ ಚಾಲನೆ ನೀಡಲಿದ್ದಾರೆ ಎಂದು ಸಚಿವೆ ಶಶಿಕಲಾ ಅ. ಜೊಲ್ಲೆ ತಿಳಿಸಿದರು.

“ಪ್ರಧಾನಿಯವರ ಮುತುವರ್ಜಿಯಿಂದ ಮರು ನಿರ್ಮಾಣವಾಗಿರುವ ‘ದಿವ್ಯ ಕಾಶಿ – ಭವ್ಯಕಾಶಿ’ ಗೆ ರಾಜ್ಯದ ಭಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಭೇಟಿ ನೀಡಿ ಕಾಶಿ ವಿಶ್ವನಾಥನ ದರ್ಶನ ಪಡೆಯಲಿ ಎನ್ನುವ ಉದ್ದೇಶದಿಂದ ಈ ವಿಶೇಷ ಪ್ಯಾಕೇಜ್ ಟೂರ್ ಆಯೋಜಿಸಲಾಗಿದೆ. ಕೇಂದ್ರ ಸರ್ಕಾರದ ಭಾರತ್

ಗೌರವ್ ಯೋಜನೆ ಅಡಿಯಲ್ಲಿ ಮುಜರಾಯಿ ಇಲಾಖೆಯು ರೈಲನ್ನು ಗುತ್ತಿಗೆಗೆ ಪಡೆದು ಈ ಯೋಜನೆ ಕಾರ್ಯಗತಗೊಳಿಸುತ್ತಿದೆ. ಕೇಂದ್ರ ರೈಲ್ವೆ ಸಚಿವರ ಸಂಪೂರ್ಣ ಸಹಕಾರದೊಂದಿಗೆ ಎಲ್ಲಾ ಸಿದ್ಧತೆ ಮಾಡಿಕೊಳ್ಳಲಾಗಿದೆ" ಎಂದು ಪತ್ರಿಕಾ ಹೇಳಿಕೆಯಲ್ಲಿ ತಿಳಿಸಿದ್ದಾರೆ.

**ಉತ್ತರ ಕರ್ನಾಟಕದಲ್ಲೂ ರೈಲು ನಿಲುಗಡೆ:** ಬೆಂಗಳೂರಿನಿಂದ ಹೊರಡುವ ಈ ರೈಲು ಉತ್ತರ ಕರ್ನಾಟಕದ ಪ್ರಮುಖ ನಿಲ್ದಾಣಗಳಲ್ಲೂ ನಿಲುಗಡೆಯಾಗಲಿದೆ. ಆಗ ಅಲ್ಲಿನ ಜನರು ರೈಲು ಹತ್ತಬಹುದಾಗಿದೆ. ಬೆಂಗಳೂರು, ಬೀರೂರು, ಹಾವೇರಿ, ಹುಬ್ಬಳ್ಳಿ ಬೆಳಗಾವಿ ಹಾಗೂ ರಾಯಭಾಗ ಮಾರ್ಗವಾಗಿ ಕಾಶಿ, ಅಯೋಧ್ಯೆ ಮತ್ತು ಪ್ರಯಾಗರಾಜ್‌ಗೆ ಸಂಚರಿಸಲಿದೆ.

**ಐಆರ್‌ಸಿಟಿಸಿ ಸಹಭಾಗಿತ್ವದಲ್ಲಿ ವಿಶೇಷ ಪ್ಯಾಕೇಜ್**:ಅತ್ಯಂತ ಕಡಿಮೆ ವೆಚ್ಚದಲ್ಲಿ ಕಾಶಿ ವಿಶ್ವನಾಥ ಹಾಗೂ ಆಯೋಧ್ಯೆಯ ರಾಮಲಲ್ಲಾ ದೈವ ಭೂಮಿಯ ವೈಭವ ಸವಿಯುವ ಅವಕಾಶ ಇದಾಗಿದೆ. 8 ದಿನಗಳ ಈ ಪ್ಯಾಕೇಜ್ ಟೂರ್ ಎಲ್ಲಾ ಸವಲತ್ತುಗಳನ್ನೂ ಒಳಗೊಂಡಿದೆ. ಪ್ರಯಾಣ ದರ, ಪ್ರವಾಸಿ ಸ್ಥಳಗಳಲ್ಲಿ ಅಗತ್ಯವಿರುವ ಬಸ್ ವ್ಯವಸ್ಥೆ, ವಸತಿ ಮತ್ತು 8 ದಿನವೂ ಊಟ, ತಿಂಡಿ ವ್ಯವಸ್ಥೆ ಹಾಗೂ ವಿಮೆ ಒಳಗೊಂಡಿದೆ.

**ರೂ.5 ಸಾವಿರ ಸಹಾಯಧನ:** ಐಆರ್‌ಸಿಟಿಸಿ ಸಹಭಾಗಿತ್ವದ ಈ ಟೂರ್ ಪ್ಯಾಕೇಜ್ ಆಯ್ಕೆ ಮಾಡಿಕೊಳ್ಳುವ ಪ್ರತಿಯೊಬ್ಬರಿಗೂ ತಲಾ ರೂ.5 ಸಾವಿರ ಸಹಾಯಧನ ನೀಡಲಾಗುವುದು. ಈ ಪ್ಯಾಕೇಜ್ ದರ ರೂ.20 ಸಾವಿರಗಳಾಗಿದ್ದು, ಪ್ರಯಾಣಿಕರೂ ರೂ.15 ಸಾವಿರ ಪಾವತಿಸಬೇಕಿದೆ. ಬಾಕಿ ಐದು ಸಾವಿರ ಸಹಾಯ ಧನದ ರೂಪದಲ್ಲಿ ರಾಜ್ಯ ಸರ್ಕಾರ ನೀಡಲಿದೆ ಎಂದು ತಿಳಿಸಿದ್ದಾರೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:30.10.2022

## 32. ಪದ್ಮ ಮಾದರಿ ರಾಜ್ಯೋತ್ಸವ ಅಚ್ಚರಿ

ಸಮುದಾಯದಲ್ಲಿ ಸಹಕಾರದ ಬೆಳಕು ಚೆಲ್ಲಿದ ಸೋಲಿಗರ ಮಾದಮ್ಮ, ವನ ಸಂರಕ್ಷಣೆಗಾಗಿ ಜೀವನ ಮುಡಿಪಾಗಿಟ್ಟ ರಾಮನಗರದ ಸಾಲುಮರದ ನಿಂಗಣ್ಣ, ನಿವೃತ್ತ ಐಎಎಸ್ ಅಧಿಕಾರಿ ಮದನ್ ಗೋಪಾಲ್, ಇಸ್ರೋ ಮಾಜಿ ನಿರ್ದೇಶಕ ಕೆ ಶಿವನ್, ಚಿತ್ರನಟ ಅವಿನಾಶ್ ಹಾಗೂ ದತ್ತಣ್ಣ, ಯಕ್ಷಗಾನ ಕಲಾವಿದ ಸುಬ್ರಹ್ಮಣ್ಯ ಧಾರೇಶ್ವರ ಸೇರಿ 67 ಸಾಧಕರು ಈ ಸಾಲಿನ ರಾಜ್ಯೋತ್ಸವ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಭಾರತ ಸ್ವಾತಂತ್ರ್ಯ ಅಮೃತ ಮಹೋತ್ಸವ ಹಿನ್ನೆಲೆಯಲ್ಲಿ ಗಣನೀಯ ಸೇವೆ ಸಲ್ಲಿಸಿದ 10 ಸಂಘ ಸಂಸ್ಥೆಗಳನ್ನು ಗುರುತಿಸಿ ರಾಜ್ಯ ಸರ್ಕಾರ ಪ್ರಶಸ್ತಿ ಪ್ರಕಟಿಸಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಶಸ್ತಿ ವಿಜೇತರ ಪಟ್ಟಿಯನ್ನು ಪ್ರಕಟಿಸಿದ್ದು, ನವೆಂಬರ್ 1 ರಂದು ಮುಖ್ಯಮಂತ್ರಿಯವರು ಪ್ರಶಸ್ತಿ ವಿತರಣೆ ಮಾಡುವರು.

ಈ ಬಾರಿ ಪ್ರಶಸ್ತಿ ವಿಜೇತರಿಗೆ ತಲಾ ರೂ.ಐದು ಲಕ್ಷ ನಗದು ಹಾಗೂ 25 ಗ್ರಾಂನ ಚಿನ್ನದ ಪದಕ, ಫಲಕ ನೀಡಲಾಗುತ್ತದೆ. ಪದ್ಮ ಪ್ರಶಸ್ತಿ ಮಾದರಿಯಲ್ಲಿ ಈ ವರ್ಷ ರಾಜ್ಯೋತ್ಸವ ಪ್ರಶಸ್ತಿ ಆಯ್ಕೆಯಲ್ಲೂ ಹೊಸತನವನ್ನು ಮೆರೆಯಲಾಗಿದೆ.

ಸಾಮಾನ್ಯರಾಗಿದ್ದುಕೊಂಡು ಅಸಾಮಾನ್ಯ ಕೆಲಸ ಮಾಡಿದವರು, ಸಮಾಜದ ನಾನಾ ಕ್ಷೇತ್ರಗಳಲ್ಲಿ ಅದ್ವಿತೀಯ ಸಾಧನೆ ಮಾಡಿದವರು, ತೆರೆಮರೆಯಲ್ಲಿದ್ದ ಅರ್ಹ ಸಾಧಕರು ಹಾಗೂ ಸಮಾಜದ ಹಿತಕ್ಕಾಗಿ ಗಣನೀಯ ಸೇವೆ ಸಲ್ಲಿಸಿದ ಹತ್ತು ಸಂಘ–ಸಂಸ್ಥೆಗಳನ್ನು ಗುರುತಿಸಲಾಗಿದೆ ಎಂದು ಸರ್ಕಾರ ಹೇಳಿಕೊಂಡಿದೆ. ರಾಜ್ಯೋತ್ಸವ ಪ್ರಶಸ್ತಿಗೆ ಈ ಬಾರಿ ಅರ್ಜಿಯನ್ನು ಪರಿಗಣಿಸುವುದಿಲ್ಲ ಎಂದು ಕನ್ನಡ ಮತ್ತು ಸಂಸ್ಕೃತಿ ಸಚಿವ ಸುನಿಲ್ ಕುಮಾರ್ ಮೊದಲೇ ಪ್ರಕಟಿಸಿದ್ದರು. ಆದರೂ ದೊಡ್ಡ ಪ್ರಮಾಣದಲ್ಲಿ ಅರ್ಜಿಗಳು ಬಂದಿದ್ದವು. ಆ ಅರ್ಜಿಗಳಲ್ಲಿ ಕೆಲ ಸಾಧಕರನ್ನೂ ಆಯ್ಕೆ ಸಮಿತಿ ಪರಿಗಣಿಸಿತ್ತು. ಉಳಿದಂತೆ ಹೆಚ್ಚಿನ ಪ್ರಮಾಣದಲ್ಲಿ ಆಯ್ಕೆ ಸಮಿತಿ ಹೆಕ್ಕಿ ತೆಗೆದಿದೆ.

ಪ್ರೊ: ಕೃಷ್ಣೇಗೌಡ, ಇಂಗ್ಲಿಷ್ ಕಡಲ್ಗಾಲುವ ಈಜಿದ ಅಂಗವಿಕಲ ಕ್ರೀಡಾಪಟು ರಾಘವೇಂದ್ರ ಅಣ್ವೇಕರ್, ಪೌರಕಾರ್ಮಿಕರಾದ ಮಲ್ಲಮ್ಮ, ದೈವನರ್ತಕ ಗುಡ್ಡಪಾಣಾರ, ಕಿರುತೆರೆ ನಟ ಸಿಹಿಕಹಿ ಚಂದ್ರು, ಹಿರಿಯ ಪತ್ರಕರ್ತರಾದ ಎಚ್.ಆರ್. ಶ್ರೀಶ, ಜಿ.ಎಂ. ಶಿರಹಟ್ಟಿ, ಹಿರಿಯ ಸಂಶೋಧಕ ಡಾ:ಎಂ.ಜಿ.ನಾಗರಾಜ್, ದಲಿತ ಯುವಕರನ್ನು ಉದ್ಯಮಿಯಾಗಿ ರೂಪಿಸುವಲ್ಲಿ ಅವಿರತ ಶ್ರಮಿಸಿದ ಕೋಲಾರದ ಉದ್ಯಮಿ ಸಿ.ಜಿ. ಶ್ರೀನಿವಾಸನ್ ಸೇರಿ ಹಲವು ಹೆಸರುಗಳು ಸಾಧಕರ ಪಟ್ಟಿಯ ತೂಕ ಹೆಚ್ಚಿಸಿವೆ. ಪ್ರಶಸ್ತಿಗೆ ಆಯ್ಕೆ ಮಾಡುವ ಸಂದರ್ಭದಲ್ಲಿ ಜಾತಿ, ಪ್ರಾದೇಶಿಕ ನ್ಯಾಯ ಸೇರಿ ಎಲ್ಲ ಆಯಾಮಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ ಎಂದು ಕನ್ನಡ ಸಂಸ್ಕೃತಿ ಇಲಾಖೆ ಹೇಳಿದೆ. ಸ್ವಾತಂತ್ರ್ಯ ಅಮೃತ ಮಹೋತ್ಸವ ಹಿನ್ನೆಲೆಯಲ್ಲಿ ಈ ವರ್ಷದ ಪ್ರಶಸ್ತಿಗೆ ಮೈಸೂರಿನ ರಾಮಕೃಷ್ಣ ಆಶ್ರಮ ಬೆಂಗಳೂರಿನ ಅಮೃತ ಶಿಶು ನಿವಾಸ, ಸುಮನಾ ಫೌಂಡೇಷನ್ ಸೇರಿ ಹತ್ತು ಸಾಮಾಜಿಕ ಸಂಘಟನೆಗಳನ್ನು ಆಯ್ಕೆ ಮಾಡಲಾಗಿದೆ ಎಂದು ವಿವರಿಸಿದೆ. ಸಾಮಾನ್ಯವಾಗಿ ರಾಜ್ಯೋತ್ಸವ ಪ್ರಶಸ್ತಿ ಪ್ರಕಟಗೊಂಡಾಕ್ಷಣ ಒಂದಷ್ಟು ಆಕ್ಷೇಪ, ಅಸಮಾಧಾನ, ಆಯ್ಕೆ ಪಟ್ಟಿಯ ಲೋಪಗಳ ಬಗ್ಗೆ ವ್ಯಾಪಕ ಚರ್ಚೆಯಾಗುತ್ತಿತ್ತು. ಈ ಬಾರಿ ಸಾರ್ವಜನಿಕ ವಲಯದಲ್ಲಿ ಆಯ್ಕೆಗಳ ಬಗ್ಗೆ ಮೆಚ್ಚುಗೆ ವ್ಯಕ್ತವಾಗಿದೆ.

ಆಧಾರ: ವಿಜಯವಾಣಿ, ದಿನಾಂಕ:31.10.2022

## 33. 67ನೇ ಕನ್ನಡ ರಾಜ್ಯೋತ್ಸವ ಅರ್ಥಪೂರ್ಣ ಆಚರಣೆಗೆ ಸಂಕಲ್ಪ

ಅರವತ್ತೇಳನೇ ಕನ್ನಡ ರಾಜ್ಯೋತ್ಸವ ಅಂಗವಾಗಿ ನಾಡಿನಾದ್ಯಂತ ಗ್ರಾಮಗಳಲ್ಲಿ ನಗರಗಳಲ್ಲಿ ಶಾಲೆ ಹಾಗೂ ಇತರೆ ಸಂಘ ಸಂಸ್ಥೆಗಳಲ್ಲಿ ಸರ್ಕಾರಿ ಕಛೇರಿಗಳಲ್ಲಿ ರಾಜ್ಯೋತ್ಸವದ ಆಚರಿಸಬೇಕು ಹಾಗೂ ಕನ್ನಡದ ಧ್ವಜಗಳನ್ನು ಹಾರಿಸಬೇಕು ಎಂದು ಮುಖ್ಯಮಂತ್ರಿಯವರು ಕರೆ ನೀಡಿದ್ದಾರೆ.

ಸುದ್ದಿಗಾರರೊಂದಿಗೆ ಮಾತನಾಡಿ, ರಾಜ್ಯೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸುವ ಸಂಕಲ್ಪವನ್ನು ರಾಜ್ಯ ಸರ್ಕಾರ ಮಾಡಿದೆ. ಈ ಸಂಕಲ್ಪವನ್ನು ಎಲ್ಲ ಕನ್ನಡಿಗರು ಸಾಕಾರಗೊಳಿಸಬೇಕು ಎಂದು ಮನವಿ ಮಾಡಿದರು.

**ಬಂಡವಾಳ ಹೂಡಿಕೆದಾರರ ಸಮಾವೇಶ:** ನವೆಂಬರ್ 2, 3 ಮತ್ತು 4 ರಂದು ಬಂಡವಾಳ ಹೂಡಿಕೆದಾರರ ಸಮಾವೇಶ ಬೆಂಗಳೂರಿನಲ್ಲಿ ನಡೆಯಲಿದೆ. ಪ್ರಮುಖ ಉದ್ಯಮಿಗಳು, ಉದ್ದಿಮೆಯ ನಾಯಕರು ಭಾಗವಹಿಸಲಿದ್ದು, ಜೊತೆಗೆ ರೂ. 5 ಲಕ್ಷ ಕೋಟಿಗಳಿಗೂ ಹೆಚ್ಚಿನ ಬಂಡವಾಳ ಹೂಡಿಕೆಯಾಗುವ ನಿರೀಕ್ಷೆ ಇದೆ ಎಂದು ಮುಖ್ಯಮಂತ್ರಿಯವರು ತಿಳಿಸಿದರು. ಆಸಕ್ತರ ಹಲವು ಯೋಜನೆಗಳ ಅನುಮೋದನೆಯನ್ನು ಮಾಡಲಾಗಿದೆ. ಭರವಸೆ ಪತ್ರವನ್ನೂ ನಾಳೆ ವಿತರಿಸಲಾಗುವುದು ಎಂದರು. ಉದ್ಯಮಿಗಳು ಹಾಗೂ ಸಣ್ಣ ಕೈಗಾರಿಕೋದ್ಯಮಿಗಳಿಗೆ ಅವಕಾಶವಿದು, ಅವರು ಹೆಸರುಗಳನ್ನು ನೋಂದಾಯಿಸಿಕೊಂಡು ಸಮಾವೇಶಕ್ಕೆ ಭಾಗವಹಿಸಬೇಕು ಎಂದರು.

**11ಕ್ಕೆ ಪ್ರಧಾನಿ ಮೋದಿ ಪ್ರಗತಿ ಪ್ರತಿಮೆ ಉದ್ಘಾಟನೆ:** ನವೆಂಬರ್ 11 ರಂದು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣದ 2ನೇ ಟರ್ಮಿನಲ್, ಬೆಂಗಳೂರು ರೈಲ್ವೇ ನಿಲ್ದಾಣದಲ್ಲಿ ವಂದೇ ಭಾರತ್ – ಚೆನ್ನೈ, ಬೆಂಗಳೂರು – ಮೈಸೂರಿಗೆ ಹೈಸ್ಪೀಡ್ ರೈಲನ್ನು ಪ್ರಧಾನ ಮಂತ್ರಿ ನರೇಂದ್ರ ಮೋದಿ ಉದ್ಘಾಟನೆ ಮಾಡಲಿದ್ದಾರೆ ಎಂದು ಮುಖ್ಯಮಂತ್ರಿಯವರು ತಿಳಿಸಿದರು. ಅಂತಾರಾಷ್ಟ್ರೀಯ ವಿಮಾನ ನಿಲ್ದಾಣದ ಟರ್ಮಿನಲ್ ಮತ್ತು ಬೆಂಗಳೂರು ನಿರ್ಮಾತೃ ಕೆಂಪೇಗೌಡರ 108 ಅಡಿ ಎತ್ತರದ ಪ್ರಗತಿಯ ಪ್ರತಿಮೆಯನ್ನು ಪ್ರಧಾನಿ ಉದ್ಘಾಟನೆ ಮಾಡಲಿದ್ದಾರೆ. ಕೆಂಪೇಗೌಡರು ಪ್ರಗತಿಯ ಸಂಕೇತವಾಗಿದ್ದು, 'ಪ್ರಗತಿಯ ಪ್ರತಿಮೆ' ಎಂದು ಹೆಸರಿಡಲಾಗಿದೆ. ಅಲ್ಲಿ ಪ್ರಧಾನಿಗಳು ಸಾರ್ವಜನಿಕ ಕಾರ್ಯಕ್ರಮವನ್ನು ಉದ್ದೇಶಿಸಿ ಮಾತನಾಡಲಿದ್ದಾರೆ ಎಂದು ಮುಖ್ಯಮಂತ್ರಿಯವರು ಹೇಳಿದರು.

ಸರ್ದಾರ್ ಪಟೇಲ್ ಜನ್ಮದಿನ ಹಿನ್ನೆಲೆಯಲ್ಲಿ ರಾಷ್ಟ್ರೀಯ ಏಕತಾ ದಿವಸ ಆಚರಣೆ ಮತ್ತು ಪ್ರತಿಜ್ಞಾ ಬೋಧನೆ ಹಾಗೂ ಜಾಗೃತಿ ಅರಿವು ಸಪ್ತಾಹ ಅಂಗವಾಗಿ ಮುಖ್ಯಮಂತ್ರಿ ಪ್ರತಿಜ್ಞಾ ವಚನ ಬೋಧನೆ

ಮಾಡಿದರು. ಕನ್ನಡ ಮತ್ತು ಸಂಸ್ಕೃತಿ ಸಚಿವ ಸುನೀಲ್ ಕುಮಾರ್, ಸಂಸದ ಉಮೇಶ ಜಾದವ್ ಮತ್ತಿತರರಿದ್ದರು.

ಆಧಾರ: ವಿಜಯವಾಣಿ, ದಿನಾಂಕ:01.11.2022

## 34. ಕನ್ನಡ ಹಬ್ಬದ ಸಂಭ್ರಮ ಇಂದು

ನವೆಂಬರ್ 1 ರಂದು ಕನ್ನಡ ರಾಜ್ಯೋತ್ಸವದ ಸಂಭ್ರಮ ಶಾಲಾ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆ ಹಾಗೂ ಸಮಗ್ರ ಶಿಕ್ಷಣ ಕರ್ನಾಟಕ ವತಿಯಿಂದ 67ನೇ ಕರ್ನಾಟಕ ರಾಜ್ಯೋತ್ಸವ ಸಮಾರಂಭ ಬೆಳಿಗ್ಗೆ 9 ಗಂಟೆಗೆ ಕಂಠೀರವ ಕ್ರೀಡಾಂಗಣದಲ್ಲಿ ನಡೆಯಲಿದೆ.

ಇದಲ್ಲದೆ, ಸಂಜೆ 4 ಗಂಟೆಗೆ ವಿಧಾನಸೌಧದ ಮೆಟ್ಟಿಲುಗಳ ಮೇಲೆ ನಟ ಪುನೀತ್ ರಾಜ್‌ಕುಮಾರ್ ಅವರಿಗೆ ಮರಣೋತ್ತರ ಕರ್ನಾಟಕ ರತ್ನ ಪ್ರಶಸ್ತಿ ಸಮಾರಂಭ ಏರ್ಪಡಿಸಲಾಗಿದೆ. ಮುಖ್ಯಮಂತ್ರಿಯವರು ಅಪ್ಪುಗೆ ಮರಣೋತ್ತರ ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ. ವಿಶೇಷ ಆಹ್ವಾನಿತರಾಗಿ ಖ್ಯಾತ ನಟರಾದ ರಜನೀಕಾಂತ್, ಜೂನಿಯರ್ ಎನ್‌ಟಿಆರ್, ಇನ್ಫೋಸಿಸ್ ಪ್ರತಿಷ್ಠಾನದ ಮಾಜಿ ಅಧ್ಯಕ್ಷೆ ಡಾ: ಸುಧಾಮೂರ್ತಿ ಭಾಗವಹಿಸಲಿದ್ದಾರೆ.

ಬೆಳಿಗ್ಗೆ 9 ಗಂಟೆಗೆ ನಗರದ ಕಂಠೀರವ ಕ್ರೀಡಾಂಗಣದಲ್ಲಿ ಕನ್ನಡ ರಾಜ್ಯೋತ್ಸವದ ಪ್ರಯುಕ್ತ ಮುಖ್ಯಮಂತ್ರಿಯವರು ಕನ್ನಡ ಧ್ವಜಾರೋಹಣ ನೆರವೇರಿಸಿ, ರಾಜ್ಯೋತ್ಸವ ಸಂದೇಶ ನೀಡುವರು. ಶಾಲಾ ಶಿಕ್ಷಣ ಸಚಿವ ಬಿ.ಸಿ. ನಾಗೇಶ್ ಪ್ರಸ್ತಾವಿಕ ನುಡಿಗಳನ್ನು ಆಡುವರು. ಸ್ಥಳೀಯ ಶಾಸಕ ರಿಜ್ವಾನ್ ಅರ್ಷದ್ ಅಧ್ಯಕ್ಷತೆ ವಹಿಸಲಿದ್ದು, ಕೇಂದ್ರ ಮತ್ತು ರಾಜ್ಯದ ಸಚಿವರು, ಶಾಸಕರು ಪಾಲ್ಗೊಳ್ಳುವರು.

ಸಂಜೆ 6.30ಕ್ಕೆ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯಲಿರುವ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿಯವರು 67 ಸಾಧಕರಿಗೆ 2022ನೇ ಸಾಲಿನ 'ರಾಜ್ಯೋತ್ಸವ ಪ್ರಶಸ್ತಿ' ಮಾಡಲಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಹಾಗೂ ಇಂಧನ ಸಚಿವ ವಿ. ಸುನೀಲ್ ಕುಮಾರ್ ಕಾರ್ಯಕ್ರಮ ಉದ್ಘಾಟಿಸುವರು. ಸಂಸದ ತೇಜಸ್ವಿ ಸೂರ್ಯ ಭಾಗವಹಿಸಲಿದ್ದು, ಶಾಸಕ ಉದಯ್ ಗರುಡಾಚಾರ್ ಅಧ್ಯಕ್ಷತೆ ವಹಿಸುವರು.

ಅರವತ್ತೇಳನೇ ಕನ್ನಡ ರಾಜ್ಯೋತ್ಸವವನ್ನು ಸಂಭ್ರಮದಿಂದ, ಅರ್ಥಪೂರ್ಣವಾಗಿ ಆಚರಿಸುವ ಸಂಕಲ್ಪವನ್ನು ರಾಜ್ಯ ಸರ್ಕಾರ ಮಾಡಿದೆ. ಆ ನಿಟ್ಟಿನಲ್ಲಿ ನಾಡಿನಾದ್ಯಂತ ಗ್ರಾಮಗಳು, ನಗರಗಳು, ಶಾಲೆ ಹಾಗೂ ಇತರೆ ಸಂಘ ಸಂಸ್ಥೆಗಳಲ್ಲಿ, ಸರ್ಕಾರಿ ಕಚೇರಿಗಳಲ್ಲಿ ರಾಜ್ಯೋತ್ಸವ ಆಚರಿಸಬೇಕು ಹಾಗೂ ಕನ್ನಡದ ಧ್ವಜಗಳನ್ನು ಹಾರಿಸಬೇಕು.

**ಬಸವರಾಜ ಬೊಮ್ಮಾಯಿ, ಮುಖ್ಯಮಂತ್ರಿ**

ಆಧಾರ: ವಿಶ್ವವಾಣಿ, ದಿನಾಂಕ:01.11.2022

## 35. 3 ದಿನ ಉದ್ಯಮದ ಹಬ್ಬ

ಪ್ರತಿಷ್ಠಿತ ಜಾಗತಿಕ ಹೂಡಿಕೆದಾರರ ಸಮಾವೇಶ ನಗರದ ಅರಮನೆ ಮೈದಾನದಲ್ಲಿ ನವೆಂಬರ್ 2 ರಿಂದ 4ರವರೆಗೆ ಆರಂಭಗೊಳ್ಳಲಿದ್ದು, ಪ್ರಧಾನಿ ನರೇಂದ್ರ ಮೋದಿಯವರು ವರ್ಚುವಲ್ ಆಗಿ ಇದರ ಉದ್ಘಾಟನೆ ನೆರವೇರಿಸಲಿದ್ದಾರೆ.

ಕೋವಿಡ್ ಸಂಕಷ್ಟದಿಂದ ಹೊರ ಬಂದಿರುವುದರಿಂದ ಪೂರ್ಣ ಪ್ರಮಾಣದದಲ್ಲಿ ಈ ಸಮಾವೇಶ ನಡೆಯಲಿದ್ದು, ವಿಶ್ವದ ಹಲವು ರಾಷ್ಟ್ರಗಳ ಪ್ರತಿನಿಧಿಗಳು ಉದ್ಯಮಿಗಳು ಭಾಗವಹಿಸಲಿದ್ದಾರೆ. ಇದರಿಂದಾಗಿ ರಾಜ್ಯಕ್ಕೆ ರೂ. 5 ಲಕ್ಷ ಕೋಟಿ ಬಂಡವಾಳ ಹರಿದು ಬರುವ ವಿಶ್ವಾಸವನ್ನು ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವ ಮುರುಗೇಶ್ ನಿರಾಣಿ ವ್ಯಕ್ತಪಡಿಸಿದರು.

ದೇಶ – ವಿದೇಶಗಳ ಉದ್ಯಮ ಕ್ಷೇತ್ರಗಳ ದಿಗ್ಗಜರು ಭಾಗವಹಿಸಲಿದ್ದಾರೆ. ಈ ಬಾರಿ ಸಮಾವೇಶಕ್ಕೆ ಬಿಲ್ಡ್ ಫಾರ್ ವರ್ಲ್ಡ್ ಎಂಬ ಘೋಷ ವಾಕ್ಯವನ್ನು ಇಡಲಾಗಿದೆ. ಕಾರ್ಯಕ್ರಮದಲ್ಲಿ ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್, ಕೇಂದ್ರ ಸಚಿವರಾದ ನಿತಿನ್ ಗಡ್ಕರಿ, ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಕೈಗಾರಿಕಾ ಸಚಿವ ಮುರುಗೇಶ್ ನಿರಾಣಿ ಭಾಗವಹಿಸಲಿದ್ದಾರೆ.

ಜಾಗತಿಕ ಹೂಡಿಕೆದಾರರ ಸಮಾವೇಶದ ಸಿದ್ಧತೆ ಪರಿಶೀಲನೆ ನಡೆಸಿ ಬಳಿಕ ಸುದ್ದಿಗಾರರ ಜೊತೆ ಮಾತನಾಡಿದ ಮುಖ್ಯಮಂತ್ರಿಯವರು, ಇದು ಇಡೀ ಜಗತ್ತಿನ ಗಮನವನ್ನು ಸೆಳೆಯಲಿದೆ. ಜಗತ್ತಿನ ಹೂಡಿಕೆಯೂ ಇಲ್ಲಿಗೆ ಬರುತ್ತಿದೆ. ಕರ್ನಾಟಕದಲ್ಲಿ ಒಳ್ಳೆಯ ವಾತಾವರಣವಿದೆ. ಮುಂದಿನ ಐದು ವರ್ಷಗಳ ಬೆಳವಣಿಗೆಗೆ ಒಂದು ಭದ್ರ ಬುನಾದಿಯನ್ನು ಹಾಕಲಿದೆ ಎಂದು ವಿಶ್ವಾಸ ವ್ಯಕ್ತಪಡಿಸಿದರು.

ಬೆಂಗಳೂರು ಬಿಟ್ಟು ಇತರೆ ನಗರಗಳಲ್ಲಿ ಬಂಡವಾಳ ಹೂಡಲು ಉದ್ಯಮಿಗಳು ಆಸಕ್ತಿ ತೋರಿಸುತ್ತಿದ್ದಾರೆ. ರಾಮನಗರ, ಹುಬ್ಬಳ್ಳಿ–ಧಾರವಾಡ ಬಳ್ಳಾರಿ, ಕಲಬುರಗಿ, ಮೈಸೂರು ಹೀಗೆ ಎಲ್ಲ ಕಡೆ ಕೈಗಾರಿಕೆಗಳು ಬರುತ್ತಿವೆ. ಅಕ್ಟೋಬರ್ 28 ರಂದು ಹುಬ್ಬಳ್ಳಿಯಲ್ಲಿ ಎಫ್.ಎಂ.ಸಿ.ಜಿ. ಕ್ಲಸ್ಟರ್ ಉದ್ಘಾಟಿಸಲಾಗಿದೆ. ಈ ಪ್ರದೇಶದಲ್ಲಿ ಸುಮಾರು ರೂ.10 ಸಾವಿರ ಕೋಟಿ ಹೂಡಿಕೆಯಾಗಿದೆ ಒಂದು ಲಕ್ಷ ಜನರಿಗೆ ಉದ್ಯೋಗ ಸೃಷ್ಟಿಯಾಗಲಿದೆ ಎಂದು ಹೇಳಿದರು.

**ಪ್ರಮುಖ ಉದ್ಯಮಿಗಳ ಭಾಷಣ:** ಜೆಎಸ್‌ಡಬ್ಲ್ಯು ಅಧ್ಯಕ್ಷ ಸಜ್ಜನ್ ಜಿಂದಾಲ್, ಸ್ವರ್ಲೈಟ್ ಪವರ್ ಕಂಪನಿಯ ವ್ಯವಸ್ಥಾಪಕ ನಿರ್ದೇಶಕ ಪ್ರತೀಕ್ಷ ಅಗರ್‌ವಾಲ್, ಅದಾನಿ ಪೋರ್ಟ್ ಮತ್ತು ಎಸ್‌ಇಝಡ್‌ನ ಕರಣ್ ಗೌತಮ್ ಅದಾನಿ, ಭಾರ್ತಿ ಎಂಟರ್‌ಪ್ರೈಸಸ್‌ನ ರಾಜನ್ ಭಾರ್ತಿ ಮಿತ್ತಲ್, ವಿಪ್ರೋ ಅಧ್ಯಕ್ಷ ರಿಶದ್ ಪ್ರೇಮ್‌ಜಿ, ಕಿರ್ಲೋಸ್ಕರ್ ಸಿಸ್ಟಮ್ಸ್‌ನ ವ್ಯವಸ್ಥಾಪಕ ನಿರ್ದೇಶಕ ವಿಕ್ರಂ ಕಿರ್ಲೋಸ್ಕರ್, ಆದಿತ್ಯ ಬಿರ್ಲಾ ಗ್ರೂಪ್‌ನ ಅಧ್ಯಕ್ಷ ಕೆ.ಎಂ. ಬಿರ್ಲಾ ವಿಶೇಷ ಭಾಷಣ, ಕೇಂದ್ರ ಸಚಿವರಾದ ಪೀಯೂಷ್ ಗೋಯಲ್, ನಿರ್ಮಲಾ ಸೀತಾರಾಮನ್ ಅವರಿಂದ ಪ್ರಧಾನ ಭಾಷಣ.

ಲಿಂಗ ಸಮಾನತೆ ಕುರಿತ ಗೋಷ್ಠಿಯಲ್ಲಿ ಮಹಿಳಾ ಉದ್ಯಮಿಗಳಾದ ಸೇಲ್ಸ್ ಪೋರ್ಸ್ ಇಂಡಿಯಾದ ಅಧ್ಯಕ್ಷೆ ಅರುಂಧತಿ ಭಟ್ಟಾಚಾರ್ಯ, ಬಯೋಕಾನ್ ಅಧ್ಯಕ್ಷೆ ಕಿರಣ್ ಮಜುಂದಾರ್ ಷಾ, ಗೋದ್ರೆಜ್ ಕನ್ಸ್ಯೂಮರ್ ಪ್ರಾಡಕ್ಟ್‌ನ ನಿಸಬಾ ಗೋದ್ರೆಜ್, ಐಎನ್‌ಕೆಯು ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿ ಲಕ್ಷ್ಮಿ ಪಾತುರಿ, ಕೇಂದ್ರ ಸಚಿವ ಸ್ಮೃತಿ ಇರಾನಿ ಅವರೂ ವಿಷಯ ಮಂಡಿಸಲಿದ್ದಾರೆ.

ಆಧಾರ:ಪ್ರಜಾವಾಣಿ, ದಿನಾಂಕ:02.11.2022

## 36. ಕರ್ನಾಟಕ ರತ್ನ ಪುನೀತ ಅಪ್ಪುಗೆ

ಉಘೋ ಎಂದು ಸುರಿದ ವರ್ಷಧಾರೆ, ಅಭಿಮಾನಿಗಳ ಹರ್ಷೋದ್ಗಾರದ ಹೊಳೆಯ ನಡುವೆ ಪುನೀತ್ ರಾಜ್‌ಕುಮಾರ್‌ಗೆ ಮರಣೋತ್ತರವಾಗಿ ಕರ್ನಾಟಕ ರತ್ನ ಪ್ರಶಸ್ತಿ ಪ್ರದಾನ ಮಾಡಲಾಯಿತು. ವಿಧಾನಸೌಧ ಮಹಾದ್ವಾರದ ಮೆಟ್ಟಿಲು ಬಳಿ ಸಂಜೆ ಆಯೋಜಿಸಿದ್ದ ಅದ್ದೂರಿ ವರ್ಣರಂಜಿತ ಸಮಾರಂಭದಲ್ಲಿ ಪ್ರತಿಷ್ಠಿತ ಗೌರವದ ಅಪ್ಪುಗೆ ಸಿಗುವ ಕ್ಷಣವನ್ನು ಕಣ್ತುಂಬಿಕೊಳ್ಳಲು ಅಭಿಮಾನಿಗಳ ಸಾಗರವೇ ಕಾತರದಿಂದ ಕಾಯುತ್ತಿತ್ತು. ಗಣ್ಯರು ಅತಿಥಿಗಳು ವೇದಿಕೆ ಏರುವಾಗಲೇ ಮರುಣನ ಅಭಿಷೇಕ ಶುರುವಾಯಿತು.

ಮುಖ್ಯಮಂತ್ರಿಯವರು, ತಮಿಳು ಚಿತ್ರರಂಗದ ಸೂಪರ್‌ಸ್ಟಾರ್ ರಜನಿಕಾಂತ್, ತೆಲಗು ಚಿತ್ರರಂಗದ ಖ್ಯಾತ ನಟ ಜ್ಯೂನಿಯರ್ ಎನ್‌ಟಿಆರ್, ಇನ್ಫೋಸಿಸ್ ಪ್ರತಿಷ್ಠಾನದ ಸುಧಾಮೂರ್ತಿ ಅವರು ಅಶ್ವಿನಿ ಪುನೀತ್ ರಾಜ್‌ಕುಮಾರ್‌ಗೆ ಶಾಲು ಹೊದಿಸಿ, ಹಾರ ಹಾಕಿ, 'ಕರ್ನಾಟಕ ರತ್ನ' ಪ್ರಶಸ್ತಿ ಪ್ರದಾನ ಮಾಡುತ್ತಿದ್ದಂತೆ ಅಭಿಮಾನಿಗಳ ಸಂಭ್ರಮ ಅಬ್ಬರಿಸಿತು. ಪುನೀತ್ ಸೋದರರಾದ ನಟ ಶಿವರಾಜ್‌ಕುಮಾರ್, ರಾಘವೇಂದ್ರ ರಾಜ್‌ಕುಮಾರ್ ಸಚಿವರಾದ ಆರ್. ಅಶೋಕ್, ವಿ.

ಸುನೀಲ್‌ಕುಮಾರ್, ಮುನಿರತ್ನ, ವಿ ಸೋಮಣ್ಣ, ಬೈರತಿ ಬಸವರಾಜ್, ಶಾಸಕ ರಿಜ್ವಾನ್ ಅರ್ಷದ್ ಮತ್ತಿತರರು ಈ ಐತಿಹಾಸಿಕ ಕ್ಷಣಕ್ಕೆ ಸಾಕ್ಷಿಯಾದರು.

ಸಮಾರಂಭವನ್ನು ಉದ್ದೇಶಿಸಿ ಮಾತನಾಡಿದ ರಜನಿಕಾಂತ್ ಅಲ್ಪಾವಧಿಯಲ್ಲಿ ಅಪಾರವಾದದ್ದನ್ನು ಸಾಧಿಸಿದ ಪುನೀತ್ ಅಸಾಧಾರಣ ವ್ಯಕ್ತಿ ನಚಿಕೇತ, ಮಾರ್ಕಂಡೇಯರ ಸಾಲಿಗೆ ಸೇರಿದ ದೇವರು ಎಂದಾಗ ನೆರೆದ ಅಭಿಮಾನಿಗಳ ವೃಂದ ಸಿಳ್ಳೆ, ಕೇಕೆ, ಚಪ್ಪಾಳೆ ಮೂಲಕ ಹರ್ಷ ವ್ಯಕ್ತಪಡಿಸಿದರು.

ಎನ್‌ಟಿಆರ್, ಎಂಜಿಆರ್, ಶಿವಾಜಿ ಗಣೇಶನ್, ರಾಜ್‌ಕುಮಾರ್ ಅವರು 50 ವರ್ಷಗಳಲ್ಲಿ ಸಾಧಿಸಿದ್ದನ್ನು ಅಪ್ಪು ಕೇವಲ 20 ವರ್ಷಗಳಲ್ಲಿ ಸಾಧಿಸಿ ತೋರಿಸಿದ್ದಾರೆ. ಕೇವಲ ನಟನೆ ಮೂಲಕ ಜನಮನ ಗೆಲ್ಲಲ್ಲು ಸಾಧ್ಯವಿಲ್ಲ. ಆದರ್ಶಗಳ ಮೂಲಕ ಈ ಗೆಲುವು ಸಾಧಿಸಬಹುದಾಗಿದೆ ಎಂಬುದನ್ನು ಪುನೀತ್ ಸಾಬೀತುಪಡಿಸಿದ್ದಾರೆ ಎಂದು ರಜನಿಕಾಂತ್ ಗುಣಗಾನ ಮಾಡಿದರು.

ಪುನೀತ್ ನಿಧನರಾದಾಗ ನಾನು ಆಸ್ಪತ್ರೆಯಲ್ಲಿ ಐಸಿಯುನಲ್ಲಿ ಚಿಕಿತ್ಸೆ ಪಡೆಯುತ್ತಿದ್ದೆ. ಮೂರು ದಿನಗಳ ಬಳಿಕ ಈ ವಿಷಯ ತಿಳಿದು ಶಾಕ್ ಆಯಿತು ಎಂದ ರಜನಿಕಾಂತ್, ಅಪ್ಪು ಸಾವಿನ ಸುದ್ದಿ ತಿಳಿಯಲು ವಿಳಂಬವಾಗಿದ್ದರ ಕಾರಣವನ್ನು ನೆರೆದವರ ಮುಂದೆ ಬಿಚ್ಚಿಟ್ಟರು.

ಜ್ಯೂನಿಯರ್ ಎನ್‌ಟಿಆರ್ ಮಾತನಾಡಿ, ನಟ ಅಥವಾ ಏನನ್ನೋ ಸಾಧಿಸಿದ್ದೇನೆ ಎಂಬ ಕಾರಣಕ್ಕೆ ಈ ವೇದಿಕೆಗೆ ಬಂದಿಲ್ಲ. ನಾನು ಪುನೀತ್ ಅವರ ಹೆಮ್ಮೆಯ ಗೆಳೆಯನಾಗಿ ಬಂದಿರುವೆ. ಪುನೀತ್ ದೊಡ್ಡ ಮಾನವತಾವಾದಿ. ಯುದ್ಧ ಮಾಡದೆ ವ್ಯಕ್ತಿತ್ವದಿಂದ ರಾಜ್ಯವನ್ನು ಗೆದ್ದವರು. ನಗುವಿನ ಒಡಯನೂ ಹೌದು. ಸದಾ ನಿಷ್ಕಪಟ ಬಾಯ್ತುಂಬ ನಗುವಿನ ಶ್ರೀಮಂತಿಕೆ ಪುನೀತ್ ಅವರದಾಗಿತ್ತು ಎಂದು ಪ್ರಶಂಸಿದರು.

**ಗಮನಸೆಳೆದ ನಟದ್ವಯರು**: ರಜನಿಕಾಂತ್ ಹಾಗೂ ಜ್ಯೂನಿಯರ್ ಎನ್‌ಟಿಆರ್ ಸ್ವಚ್ಛ ಅಚ್ಚ ಕನ್ನಡದಲ್ಲಿ ಮಾತನಾಡಿ ಗಮನ ಸೆಳೆದರು. ರಾಜ್ಯ ಮೂಲದವರಾದ ತಮಿಳು ಸಿನಿ ಸೂಪರ್ ಸ್ಟಾರ್ ರಜನಿಕಾಂತ್ 67ನೇ ಕರ್ನಾಟಕ ರಾಜ್ಯೋತ್ಸವ ಶುಭಾಷಯ ಕೋರುವ ಜೊತೆಗೆ ರಾಜರಾಜೇಶ್ವರಿ, ಆಲ್ಲ, ಜೀಸಸ್ ರಾಜ್ಯದ ಜನರಿಗೆ ಒಳಿತು ಮಾಡಲಿ ಎಂದು ಹಾರೈಸಿದರು. ಜ್ಯೂನಿಯರ್ ಎನ್‌ಟಿಆರ್ ನಿರರ್ಗಳವಾಗಿ ಕನ್ನಡದಲ್ಲಿ ಮಾತನಾಡಿ ಅಪ್ಪು ಅಭಿಮಾನಿ ದೇವರುಗಳ ಮನಸೂರೆಗೊಂಡರು.

ಪುನೀತ್‌ಗೆ ಕರ್ನಾಟಕ ರತ್ನ ಪ್ರಶಸ್ತಿ ನೀಡುತ್ತಿರುವುದು ನನ್ನ ಪುಣ್ಯ ವಿಶೇಷ. ನಮ್ಮ ಸರ್ಕಾರದ ಪುಣ್ಯ ಭಾಗ್ಯ. ಇದು ನಮ್ಮ ನಿಮ್ಮೆಲ್ಲರ ಸೌಭಾಗ್ಯ. ಪುನೀತ್ ದಯವಿಟ್ಟು ಮತ್ತೊಮ್ಮೆ ಕನ್ನಡ ನಾಡಿನಲ್ಲಿ ಹುಟ್ಟಿ ಬನ್ನಿ.

**ಬಸವರಾಜ ಬೊಮ್ಮಾಯಿ, ಮುಖ್ಯಮಂತ್ರಿ**

ಈ ಹಿಂದೆ ಇದೇ ವೇದಿಕೆಯಲ್ಲಿ ಅಪ್ಪಾಜಿಗೆ ಕರ್ನಾಟಕ ರತ್ನ ಕೊಟ್ಟಿದ್ದರು. ಈಗ ಅಪ್ಪುಗೆ ಕೊಡುತ್ತಿರುವುದು ನಮ್ಮ ಕುಟುಂಬಕ್ಕೆ ಹೆಮ್ಮೆಯ ಸಂಗತಿ. ಕನ್ನಡಿಗರಿಗೆ ನಾನು ಚಿರಋಣಿ.

ಶಿವರಾಜಕುಮಾರ್, ನಟ

**ನಟರನ್ನು ಸ್ವಾಗತಿಸಿದ ಸುಧಾಕರ್**: ಕರ್ನಾಟಕ ರತ್ನ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಭಾಗವಹಿಸಲು ಆಗಮಿಸಿದ ಹಿರಿಯ ನಟ ರಜನಿಕಾಂತ್ ಹಾಗೂ ಜ್ಯೂನಿಯರ್ ಎನ್‌ಟಿಆರ್ ಅವರನ್ನು ಆರೋಗ್ಯ ಸಚಿವ ಡಾ: ಕೆ ಸುಧಾಕರ್ ಆತ್ಮೀಯವಾಗಿ ಸ್ವಾಗತಿಸಿದರು. ವಿಶೇಷ ವಿಮಾನದ ಮೂಲಕ ಎಚ್‌ಎಎಲ್ ವಿಮಾನ ನಿಲ್ದಾಣಕ್ಕೆ ಬಂದಿಳಿದ ಇಬ್ಬರು ನಟರನ್ನು ಸುಧಾಕರ್ ಬರ ಮಾಡಿಕೊಂಡು ಅವರಿಗಾಗಿ ಕಾಯ್ದಿರಿಸಿದ ಹೊಟೇಲ್‌ಗೆ ಕರೆದುಕೊಂಡು ಹೋದರು. ಸಮಾರಂಭ ಮುಗಿದ ನಂತರ ಇಬ್ಬರು ನಟರು ರೇಸ್‌ಕೋರ್ಸ್ ರಸ್ತೆಯ ಮುಖ್ಯಮಂತ್ರಿಯವರ ನಿವಾಸದಲ್ಲಿ ಸ್ವಲ್ಪ ಹೊತ್ತು ಇದ್ದರು. ಈ ಸಂದರ್ಭದಲ್ಲಿ ಅವರಿಬ್ಬರನ್ನು ಮುಖ್ಯಮಂತ್ರಿಯವರು ಸನ್ಮಾನಿಸಿ ಕೆಲವೊತ್ತು ಹರಟೆ ಹೊಡೆದರು.

ಆಧಾರ: ವಿಜಯವಾಣಿ, ದಿನಾಂಕ:02.11.2022

## 37. ಜಿಮ್ – 2022 : 5 ವರ್ಷದ ಬೆಳವಣಿಗೆಗೆ ಭದ್ರ ಬುನಾದಿ

ನಗರದಲ್ಲಿ ಆರಂಭವಾಗಲಿರುವ ಮೂರು ದಿನಗಳ ಜಾಗತಿಕ ಹೂಡಿಕೆದಾರರ ಸಮಾವೇಶ ರಾಜ್ಯದ ಮುಂದಿನ ಐದು ವರ್ಷದ ಬೆಳವಣಿಗೆಗೆ ಭದ್ರ ಬುನಾದಿ ಹಾಕಲಿದೆ ಎಂದು ಮುಖ್ಯಮಂತ್ರಿಯವರು ವಿಶ್ವಾಸ ವ್ಯಕ್ತಪಡಿಸಿದ್ದಾರೆ.

ಬೆಂಗಳೂರು ಅರಮನೆ ಮೈದಾನ ಆವರಣದಲ್ಲಿ ಹೂಡಿಕೆದಾರರ ಸಮಾವೇಶದ (ಜಿಮ್–2022) ಸಿದ್ಧತೆಗಳನ್ನು ಪರಿಶೀಲಿಸಿದ ಬಳಿಕ ಸುದ್ಧಿಗಾರರೊಂದಿಗೆ ಮಾತನಾಡಿ, ಜಾಗತಿಕ ಉದ್ದಿಮೆಗಳಿಗೆ ಬೆಂಗಳೂರೇ ಗಮ್ಯವಾಗಿದೆ. ಎಲ್ಲಾ ಜಾಗತಿಕ ಉದ್ದಿಮೆಗಳ ಹಾದಿಗಳು ಬೆಂಗಳೂರಿಗೆ ಬಂದು ಸೇರುತ್ತಿದ್ದು. ಸಮಾವೇಶ ಅತ್ಯಂತ ಯಶಸ್ವಿಯಾಗಲಿದೆ ಎಂದು ಹೇಳಿದರು.

ಇನ್ವೆಸ್ಟ್ ಕರ್ನಾಟಕ ಇಡೀ ಜಗತ್ತಿನ ಗಮನ ಸೆಳೆಯಲಿದೆ. ಹೂಡಿಕೆಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಒಳ್ಳೆಯ ವಾತಾವರಣ ಇದೆ. ಇದು ಮುಂದಿನ 5 ವರ್ಷಗಳ ಬೆಳವಣಿಗೆಗೆ ಒಂದು ಭದ್ರ ಬುನಾದಿ ಹಾಕಲಿದೆ. ಇದೊಂದು ಬಹಳ ಮಹತ್ವದ ಸಮ್ಮೇಳನವಾಗಿದ್ದು, ಭಾಗವಹಿಸುವ ಎಲ್ಲಾ ಜಾಗತಿಕ ಹಾಗೂ ದೇಶದ ಹೂಡಿಕೆದಾರರು, ಶಿಕ್ಷಣ ಸಂಸ್ಥೆಗಳು ತಂತ್ರಜ್ಞಾನ ಹಾಗೂ ಐಟಿ–ಬಿಟಿ ಪರಿಣಿತರು, ಸ್ಟಾರ್ಟಪ್‌ಗಳು ಎಂಜಿನಿಯರ್‌ಗಳು, ತಂತ್ರಜ್ಞರಿಗೆ ಸ್ವಾಗತ ಕೋರುತ್ತೇನೆ ಎಂದರು.

**ಕರ್ನಾಟಕ ಹಾಗೂ ಹೂಡಿಕೆದಾರರ ಬದ್ಧತೆ:** ಸಮಾವೇಶದಲ್ಲಿ ರೂ.5 ಲಕ್ಷ ಕೋಟಿ ಗಿಂತ ಹೆಚ್ಚಿನ ಬಂಡವಾಳ ಹೂಡಿಕೆ ನಿರೀಕ್ಷೆ ಇದೆ. ಈ ಪೈಕಿ ಈಗಾಗಲೇ ರೂ.2,8 ಲಕ್ಷ ಕೋಟಿ ಹೂಡಿಕೆಗೆ ರಾಜ್ಯ ಉನ್ನತ ಮಟ್ಟದ ಸಮಿತಿಯಲ್ಲಿ ಅನುಮೋದನೆ ನೀಡಲಾಗಿದೆ. ಇದು ನಮ್ಮ ರಾಜ್ಯದ ಹಾಗೂ ಹೂಡಿಕೆದಾರರ ಬದ್ಧತೆ. ಸಮಾವೇಶದಲ್ಲಿ ಅವರಿಗೆ ಹೂಡಿಕೆಯ ಪ್ರಮಾಣ ಪತ್ರ ನೀಡುತ್ತಿದ್ದು, ಹೊಸದಾಗಿ ಹೂಡಿಕೆ ಮಾಡುವವರೊಂದಿಗೆ ಒಪ್ಪಂದ ಮಾಡಿಕೊಳ್ಳುತ್ತೇವೆ. ಮುಂದಿನ ಕೆಲವೇ ದಿನಗಳಲ್ಲಿ ಇವುಗಳಿಗೂ ರಾಜ್ಯ ಮಟ್ಟದ ಅನುಮೋದನೆ ನೀಡಲಾಗುವುದು. ಕರ್ನಾಟಕ ಔದ್ಯೋಗಿಕ ರಂಗದಲ್ಲಿ ಪ್ರಗತಿಯ ದಾಪುಗಾಲು ಇಟ್ಟಿದ್ದು. ನಾಳಿನ ಸಮಾವೇಶ ಅದಕ್ಕೆ ಸಾಕ್ಷಿಯಾಗಲಿದೆ ಎಂದು ತಿಳಿಸಿದರು.

ಕೋವಿಡ್ ಹಿನ್ನೆಲೆಯಲ್ಲಿ ವಿಶ್ವದೆಲ್ಲಡೆ 2 ವರ್ಷ ಕಾಲ ಆರ್ಥಿಕ ಹಿಂಜರಿತ ಉಂಟಾಗಿದೆ. ಕೋವಿಡ್ ಇಳಿಮುಖವಾದರೂ ಬಹುತೇಕ ದೇಶಗಳಲ್ಲಿ ಆರ್ಥಿಕ ಬೆಳವಣಿಗೆ ಇನ್ನು ಆರಂಭವಾಗಿಲ್ಲ. ಪ್ರಭಲ ರಾಷ್ಟ್ರಗಳಾದ ಅಮೆರಿಕ, ಕೆನಡಾ, ಯೂರೋಪಿನ ಎಲ್ಲಾ ದೇಶಗಳು ಆರ್ಥಿಕ ಹಿಂಜರಿತಕ್ಕೆ ಒಳಗಾಗಿವೆ. ಇಂಥ ಸನ್ನಿವೇಶದಲ್ಲಿ ಭಾರತ ಶೇ.8 ರಷ್ಟು ಜಿಡಿಪಿ ಬೆಳವಣಿಗೆ ಸಾಧಿಸಿರುವುದು ಭರವಸೆಯ ಸಂದೇಶ ಎಂದು ಭಾವಿಸುತ್ತೇನೆ. ಅದರಲ್ಲೂ ಕರ್ನಾಟಕದ ಆರ್ಥಿಕ ಬೆಳವಣಿಗೆ ಪ್ರೋತ್ಸಾಹದಾಯಕವಾಗಿದೆ ಎಂದರು.

**ಬಿಯಾಂಡ್ ಬೆಂಗಳೂರು:** ಬೆಂಗಳೂರಿನಾಚೆಗೂ ಹೂಡಿಕೆಗೆ ಬಹಳಷ್ಟು ಹೂಡಿಕೆದಾರರು ಆಸಕ್ತಿ ತೋರಿದ್ದು, ರಾಮನಗರ, ಹುಬ್ಬಳ್ಳಿ–ಧಾರವಾಡ, ಬಳ್ಳಾರಿ, ಕಲಬುರಗಿ, ಮೈಸೂರು ಮತ್ತಿತರೆಡೆ ಕೈಗಾರಿಕೆಗಳು ಬರುತ್ತಿವೆ. ಪ್ರಾದೇಶಿಕ ಅಡೆತಡೆಗಳನ್ನು ದಾಟಿ ಕೈಗಾರಿಕೆಗಳು ಬರುತ್ತಿರುವುದರಿಂದ ಬಿಯಾಂಡ್ ಬೆಂಗಳೂರು ಕನಸು ನನಸಾಗುತ್ತಿದೆ ಎಂದು ಮುಖ್ಯಮಂತ್ರಿಯವರು ಹೇಳಿದರು.

ಆಧಾರ: ವಿಶ್ವವಾಣಿ, ದಿನಾಂಕ:02.11..2022

## 38. ನೆಲಮೂಲ ಸಂಸ್ಕೃತಿ ಅಭಿಯಾನ

ಆಧುನಿಕತೆ, ಅಭಿವೃದ್ಧಿ ತಂತ್ರಜ್ಞಾನದ ವೇಗದಲ್ಲಿ ನೆಲಮೂಲ ಸಂಸ್ಕೃತಿಗಳು ನಿಧಾನವಾಗಿ ಕಣ್ಮರೆಯಾಗುತ್ತಿವೆ. ಇಂತಹ ತಳ ಸಂಸ್ಕೃತಿಗಳ ಜೀವದ್ರವ್ಯವನ್ನು ಕಾಪಾಡುವ ನಿಟ್ಟಿನಲ್ಲಿ ಸರ್ಕಾರ ದೊಡ್ಡಮಟ್ಟದ ಅಭಿಯಾನ ಆಯೋಜಿಸಲಿದೆ.

'ಮೂಲ ಸಂಸ್ಕೃತಿ–ಕನ್ನಡ ಸಂಸ್ಕೃತಿ' ಹೆಸರಿನಲ್ಲಿ ಗ್ರಾಮೀಣ ಪ್ರದೇಶದ ಕಟ್ಟಕಡೆಯ ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ಸಂಕಲ್ಪದ ಹಿನ್ನೆಲೆಯಲ್ಲಿ ಈ ಅಭಿಯಾನ ರೂಪುಗೊಂಡಿದೆ ಎಂದು ಕನ್ನಡ ಮತ್ತು ಸಂಸ್ಕೃತಿ ಸಚಿವ ವಿ. ಸುನೀಲ್‌ಕುಮಾರ್ ತಿಳಿಸಿದ್ದಾರೆ.

ಕನ್ನಡ ರಾಜ್ಯೋತ್ಸವದ ಹಿನ್ನಲೆಯಲ್ಲಿ ವಿಜಯವಾಣಿ ಹಮ್ಮಿಕೊಂಡಿದ್ದ ಸಂವಾದದಲ್ಲಿ ಮಾತನಾಡಿದ ಅವರು, ಕನ್ನಡ ನಾಡು ನುಡಿ ವಿಷಯದಲ್ಲಿ ಸರ್ಕಾರದ ಆಲೋಚನೆಗಳು–ಯೋಜನೆಗಳನ್ನು ವಿವರಿಸಿದರು. ಸಾಂಸ್ಕೃತಿಕ ಚಟುಗವಟಿಕೆಗಳ ದಾಖಲೀಕರಣ ಹಾಗೂ ಅವುಗಳನ್ನು ಯುವ ಪೀಳಿಗೆಗೆ ತಲುಪಿಸುವ ನಿಟ್ಟಿನಲ್ಲಿ ಈ ಅಭಿಯಾನ ಮಹತ್ವಾಕಾಂಕ್ಷಿ ಕಾರ್ಯಕ್ರಮವಾಗಿದೆ. ಡಿಸೆಂಬರ್ ಅಥವಾ 2023ರ ಜನವರಿಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಾರಥ್ಯದಲ್ಲಿ ಅಭಿಯಾನ ಆರಂಭಗೊಳ್ಳಲಿದ್ದು ಎರಡು ತಿಂಗಳು ನಡೆಯಲಿದೆ ಎಂದರು.

ಗ್ರಾಮೀಣ ಭಾಗದ ಲಾವಣಿ, ಗೀಗ ಪದ ಮತ್ತಿತರ ಸೂಕ್ಷ್ಮ ಮತ್ತು ಅತಿ ಸೂಕ್ಷ್ಮ ಸಾಂಸ್ಕೃತಿಕ ಚಟುವಟಿಕೆಗಳು ಈ ಅಭಿಯಾನದ ಕೇಂದ್ರ ಬಿಂದುಗಳಾಗಲಿವೆ. ನೆಲಮೂಲ ಸಾಂಸ್ಕೃತಿಕ ಚಟುವಟಿಕೆಗಳು ಕನ್ನಡಿಗರ ಬದುಕಿನ ಜೀವಾಳವೇ ಆಗಿವೆ. ಈ ಮೂಲ ಸಂಸ್ಕೃತಿ ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಈ ಅಭಿಯಾನದ ಮೂಲಕ ಸರ್ಕಾರ ಮಹತ್ವದ ಹೆಜ್ಜೆ ಇಟ್ಟಿದೆ. ಸಣ್ಣ ಸಣ್ಣ ಹಟ್ಟಿ ಕಾಲನಿಯಲ್ಲಿರುವ ಕಲೆ, ಊರ ಹಬ್ಬ, ನಾಡ ಹಬ್ಬ, ಮತ್ತಿತರೆ ಸಾಂಸ್ಕೃತಿಕ ಚಟುವಟಿಕೆಗಳು ಬೆಳಕಿಗೆ ಬರಬೇಕು. ಅವುಗಳು ದಾಖಲೀಕರಣಗೊಳ್ಳಬೇಕು ಮತ್ತು ಮುಂದಿನ ಪೀಳಿಗೆಗೆ ಅವುಗಳನ್ನು ಪರಿಚಯಿಸಬೇಕು ಎಂಬ ಉದ್ದೇಶದೊಂದಿಗೆ ಈ ಅಭಿಯಾನ ನಡೆಸಲಾಗುತ್ತಿದೆ ಎಂದು ಸುನೀಲ್ ಕುಮಾರ್ ವಿವರಿಸಿದರು.

ಕಲಬುರಗಿ ಭಾಗದ ಸಾಂಸ್ಕೃತಿಕ ಚಟುವಟಿಕೆಗಳು ಕರಾವಳಿಗರಿಗೆ ಅರ್ಥವಾಗುವುದು ಕಷ್ಟ. ಅದೇ ರೀತಿ ಕರಾವಳಿಯ ಭಾಷೆ ಸಾಂಸ್ಕೃತಿಕ ಚಟುವಟಿಕೆಗಳು ಬೇರೆ ಭಾಗದ ಜನರಿಗೆ ಮನದಟ್ಟಾಗುವುದು ಸುಲಭವಲ್ಲ. ಈ ಹಿನ್ನಲೆಯಲ್ಲಿ ಆಯಾ ಭಾಗದ ಸಾಂಸ್ಕೃತಿಕ ಚಟುವಟಿಕೆಗಳನ್ನು ಅಲ್ಲಲ್ಲೇ ದಾಖಲೀಕರಿಸಿ, ಆಯಾ ಭಾಗದ ಜನರಲ್ಲಿ ಜೀವಂತವಾಗಿಡುವ ಕೆಲಸವನ್ನು ಸರ್ಕಾರ ಕೈಗೆತ್ತಿಕೊಳ್ಳಲಿದೆ ಎಂದರು.

**ಬಜೆಟ್‌ನಲ್ಲೇ ಅನುಮೋದನೆ:** ಮೂಲ ಸಂಸ್ಕೃತಿ – ಕನ್ನಡ ಸಂಸ್ಕೃತಿ ಅಭಿಯಾನಕ್ಕೆ ಬಜೆಟ್‌ನಲ್ಲೇ ಅನುಮೋದನೆ ಪಡೆಯಲಾಗಿದೆ ಎಂದು ಸುನೀಲ್‌ಕುಮಾರ್ ತಿಳಿಸಿದರು.

**ಯಕ್ಷಗಾನ ಸಮ್ಮೇಳನಕ್ಕೆ ನಿರ್ಧಾರ:** ಸಾಹಿತ್ಯ ಸಮ್ಮೇಳನದಂತೆಯೇ ಯಕ್ಷಗಾನ ಸಮ್ಮೇಳನ ಆಯೋಜಿಸಲು ಸರ್ಕಾರ ನಿರ್ಧರಿಸಿದೆ. ಜನವರಿಯಲ್ಲಿ ಉಡುಪಿಯಲ್ಲಿ ಈ ಸಮ್ಮೇಳನ ನಡೆಯಲಿದೆ. ಯಕ್ಷಗಾನ ಸಮ್ಮೇಳನವನ್ನು ಸರ್ಕಾರ ಬಜೆಟ್‌ನಲ್ಲೇ ಘೋಷಿಸಿದೆ. ಯಕ್ಷಗಾನ ಅಕಾಡೆಮಿ ಈ ಕಾರ್ಯಕ್ರಮ ಆಯೋಜಿಸಲಿದೆ ಎಂದು ಸಚಿವ ವಿ. ಸುನೀಲ್‌ಕುಮಾರ್ ಹೇಳಿದರು.

**ಕನ್ನಡ ಭಾಷಾ ಕಳಕಳಿ:**

- ಶಿಕ್ಷಕರ ನೇಮಕಾತಿ ವೇಳೆ ಗಡಿಶಾಲೆಗಳಿಗೆ ಆದ್ಯತೆ
- ಗಡಿ ಪ್ರಾಧಿಕಾರದ ಅನುದಾನ ಗಡಿ ಶಾಲೆಗಳಿಗೆ ಬಳಕೆಗೆ ಅವಕಾಶ
- ಕೇಂದ್ರ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಲ್ಲಿ ಕನ್ನಡ ಬಳಕೆ ವಿಚಾರಕ್ಕೆ ರಾಜೀ ಇಲ್ಲ.

**ವಿಧೇಯಕ ಜಾರಿಗೆ ಪ್ರತ್ಯೇಕ ಸಮಿತಿ:** ಕನ್ನಡ ಭಾಷಾ ಸಮಗ್ರ ಅಭಿವೃದ್ಧಿ ವಿಧೇಯಕದ ಬಗ್ಗೆ ವ್ಯಾಪಕವಾದ ಚರ್ಚೆ ಆಗಬೇಕು. ವಿಧೇಯಕದ ಪ್ರಮುಖ ಉದ್ದೇಶ ಕನ್ನಡ ಉಳಿವು. ಹಾಗಾಗಿ ಇದರಲ್ಲಿ ಯಾರನ್ನೋ ಕೈ ಬಿಡಬೇಕು, ಇನ್ಯಾರನ್ನೋ ಸೇರಿಸಬೇಕು ಎಂಬ ಪ್ರಶ್ನೆಯೇ ಇಲ್ಲ. 2023ಕ್ಕೆ ವಿಧೇಯಕ ಜಾರಿಯಾಗಲಿದೆ ಇದರ ಅನುಷ್ಠಾನಕ್ಕೆ ಪ್ರತ್ಯೇಕ ಸಮಿತಿ ರಚಿಸಲಾಗುವುದು ಎಂದರು.

**ಕರ್ನಾಟಕ ಪಬ್ಲಿಕ್ ಶಾಲೆ**: ಕನ್ನಡ ಶಾಲೆ ಉಳಿವಿಗೆ ಸರ್ಕಾರ ಕ್ರಮ ವಹಿಸಿದೆ. ಪಂಚಾಯಿತಿಗೆ ಒಂದರಂತೆ ಕರ್ನಾಟಕ ಪಬ್ಲಿಕ್ ಸ್ಕೂಲ್ ತೆರೆಯಲು ಉದ್ದೇಶಿಸಲಾಗಿದೆ. ಈಗಾಗಲೇ ನಮ್ಮ ತಾಲ್ಲೂಕಿನಲ್ಲಿ ಮೂರು ಶಾಲೆಗಳು ಆರಂಭವಾಗಿವೆ. ಇಲ್ಲಿ ಸಂಗೀತ, ಚಿತ್ರಕಲೆ ಸೇರಿ ಇತರೆ ಶಿಕ್ಷಕರ ನೇಮಕಕ್ಕೂ ಕ್ರಮ ವಹಿಸಲಾಗಿದೆ. ಸರ್ಕಾರದ ಜೊತೆಗೆ ಜನರು  ಕೈ ಜೊಡಿಸಬೇಕು.

ಕನ್ನಡ ಉಳಿವು ಒಬ್ಬರಿಂದ ಸಾಧ್ಯವಿಲ್ಲ ಸರ್ಕಾರ, ಕನ್ನಡ–ಸಂಸ್ಕೃತಿ ಇಲಾಖೆ ಜೊತೆಗೆ ಎಲ್ಲ ಕನ್ನಡಿಗರು ಒಟ್ಟಿಗೆ ಹೆಜ್ಜೆ ಹಾಕಬೇಕು. ಕನ್ನಡೇತರರಿಗೆ ನಮ್ಮ ಭಾಷೆ ಕಲಿಸುವ ಜೊತೆಗೆ ಕನ್ನಡಿಗರು ತಮ್ಮ ಮನೆಗಳಲ್ಲಿ ಕನ್ನಡದ ಕಂಪನ್ನು ಹೆಚ್ಚಿಸುವ ವಾತಾವರಣ ಮೂಡಿಸಬೇಕು ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ (ಎನ್‌ಇಪಿ) ಮಾತೃಭಾಷೆಗೆ ಆದ್ಯತೆ ನೀಡಿರುವುದರಿಂದ ಕನ್ನಡದ ಬೆಳವಣಿಗೆಗೆ ಹೆಚ್ಚು ಸಹಕಾರಿಯಾಗಲಿದೆ

ವಿ.ಸುನೀಲ್ ಕುಮಾರ್ ಕನ್ನಡ ಮತ್ತು ಸಂಸ್ಕೃತಿ ಸಚಿವ.

ಆಧಾರ: ವಿಜಯವಾಣಿ, ದಿನಾಂಕ:02.11..2022

## 39. ಭಾರತದಲ್ಲಿ ಹೂಡಿಕೆ ಅತ್ಯಂತ ಸುರಕ್ಷಿತ : ಮೋದಿ

‘ಇಂದಿನ ಆರ್ಥಿಕ ಅನಿಶ್ಚಿತತೆಯ ಯುಗದ ನಡುವೆಯೂ ಭಾರತದ ಆರ್ಥಿಕತೆ ಬಲಿಷ್ಠವಾಗಿದ್ದು, ಇಲ್ಲಿ ಬಂಡವಾಳ ಹೂಡುವುದು ಎಂದರೆ ಇಡೀ ಜಗತ್ತಿನಲ್ಲಿ ಬಂಡವಾಳ ಹೂಡಿದಂತೆ, ಪ್ರಜಾಪ್ರಭುತ್ವದಲ್ಲಿ ಹೂಡಿಕೆ ಮಾಡಿದಂತೆ, ಅಷ್ಟೇ ಅಲ್ಲ ಈ ಹೂಡಿಕೆ ಅತ್ಯಂತ ಪಾರದರ್ಶಕ ಹಾಗೂ ಸುರಕ್ಷಿತ’ ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ.

ರಾಜ್ಯ ಸರ್ಕಾರದಿಂದ ನಗರದ ಅರಮನೆ ಮೈದನದಲ್ಲಿ ಆಯೋಜಿಸಿರುವ ಮೂರು ದಿನಗಳ ಮಹತ್ವಾಂಕ್ಷಿ ಜಾಗತಿಕ ಬಂಡವಾಳ ಹೂಡಿಕೆದಾರರ ಸಮಾವೇಶ–2022ಕ್ಕೆ ವರ್ಚುವಲ್ ವಿಧಾನದಲ್ಲಿ ಚಾಲನೆ ನೀಡಿ ಮಾತನಾಡಿದ ಅವರು ಕೋವಿಡ್ ಸಾಂಕ್ರಾಮಿಕ ಹಾಗೂ ರಷ್ಯಾ ಮತ್ತು ಉಕ್ರೇನ್ ನಡುವಿನ ಯುದ್ಧದ ಪರಿಣಾಮಗಳ ನಡುವೆಯೂ ಜಗತ್ತು ಭಾರತದತ್ತ ನೋಡುತ್ತಿದ್ದು, ದಾಖಲೆಯ ಹೂಡಿಕೆಯನ್ನು ನಮ್ಮ ದೇಶ ಆಕರ್ಷಿಸುತ್ತಿದೆ. ಇಂದಿನ ಆರ್ಥಿಕ ಅನಿಶ್ಚಿತತೆಯ ಯುಗದ ನಡುವೆಯೂ ಭಾರತದ ಆರ್ಥಿಕತೆ ಬಲಿಷ್ಠವಾಗಿದೆ. ಇದು ನಮ್ಮ ಪೂರ್ವ ತಯಾರಿಯ ಪರಿಣಾಮವನ್ನು ತೋರಿಸುತ್ತದೆ. ಭಾರತದಲ್ಲಿ ಹೂಡಿಕೆ ಮಾಡುವುದು ಎಂದರೆ ಅದು ಜಗತ್ತಿನಲ್ಲಿ ಪ್ರಜಾಪ್ರಭುತ್ವದಲ್ಲಿ ಮಾಡುವ ಹೂಡಿಕೆ. ಇದರರ್ಥ ಈ ಹೂಡಿಕೆ ಅತ್ಯಂತ ಸುರಕ್ಷಿತ ಹಾಗೂ ಪಾರದರ್ಶಕ ಎಂದು ಹೇಳಿದರು.

ನವಭಾರತ ನಿರ್ಮಾಣದ ಉದ್ದೇಶದಿಂದ ಬ್ಯಾಂಕಿಂಗ್ ಎಫ್‌ಡಿಎ ಸೇರಿದಂತೆ ಹಲವು ವಲಯಗಳಲ್ಲಿ ಸುಧಾರಣೆ ತರಲಾಗುತ್ತಿದೆ. ಹೂಡಿಕೆ ಸ್ನೇಹಿ ವಾತಾವರಣ ಸೃಷ್ಟಿಸಿ ಆರ್ಥಿಕ ಬೆಳವಣಿಗೆ ಉತ್ತೇಜಿಸಲು ನಮ್ಮ ಸರ್ಕಾರ ಅಧಿಕಾರಕ್ಕೆ ಬಂದ ಬಳಿಕ 1500 ಹಳೆಯ ಮತ್ತು ಅನಗತ್ಯ ಕಾನೂನುಗಳನ್ನು ರದ್ದುಪಡಿಸಿದೆ. ಈಗ ದೇಶ ಡಿಜಿಟಲ್ ಕ್ರಾಂತಿಯ ಹಾದಿಯಲ್ಲಿದೆ. ಅದಕ್ಕೆ ಪೂರಕವಾಗಿ ನಾವೆಲ್ಲರೂ ಕೆಲಸ ಮಾಡಬೇಕು. ಕರ್ನಾಟಕದಲ್ಲಿ ನಡೆಯುತ್ತಿರುವ ಹೂಡಿಕೆದಾರರ ಸಮಾವೇಶ ಸ್ಪರ್ಧಾತ್ಮಕ ಮತ್ತು ಸಹಕಾರ ಒಕ್ಕೂಟ ವ್ಯವಸ್ಥೆಯ ಒಂದು ಭಾಗ ಎಂದು ನುಡಿದರು.

**ಕರ್ನಾಟಕದ ಪ್ರಗತಿಯ ಬಗ್ಗೆ ಪ್ರಧಾನಿ ಮೋದಿ ಮೆಚ್ಚುಗೆ**: ಕೇಂದ್ರ ಮತ್ತು ರಾಜ್ಯ ಎರಡು ಕಡೆ ಬಿಜೆಪಿ ಸರ್ಕಾರಗಳ ಡಬಲ್ ಎಂಜಿನ್ ಶಕ್ತಿಯಿಂದ ಕರ್ನಾಟಕ ಪ್ರತಿ ಕ್ಷೇತ್ರದಲ್ಲೂ ಪ್ರಗತಿ ಸಾಧಿಸುವ ಮೂಲಕ ಹೊಸ ಅಧ್ಯಾಯವನ್ನೇ ಬರೆಯುತ್ತಿದೆ. ಬ್ರಾಂಡ್ ಬೆಂಗಳೂರು ಈಗ ಜಗತ್ತಿನಾದ್ಯಂತ ಹೆಸರು ಮಾಡಿದೆ. ಅಭಿವೃದ್ಧಿಯ ವಿಚಾರದಲ್ಲಿ ಕರ್ನಾಟಕ ದೇಶದ ಇತರೆ ರಾಜ್ಯಗಳಿಗೆ ಮಾತ್ರವಲ್ಲ ಕೆಲ ಬೇರೆ ದೇಶಗಳಿಗೂ ಸವಾಲು ಒಡ್ಡುತ್ತಿದೆ ಎಂದು ಪ್ರಧಾನಿ ಮೋದಿ ಕೊಂಡಾಡಿದ್ದಾರೆ.

ಜಾಗತಿಕ ಬಂಡವಾಳ ಹೂಡಿಕೆದಾರರ ಸಮಾವೇಶದಲ್ಲಿ ತಮ್ಮ ಮಾತು ಆರಂಭಿಸಿದ ಅವರು ನಿನ್ನೆಯಷ್ಟೇ ನವೆಂಬರ್–1ರಂದು ಕರ್ನಾಟಕ ರಾಜ್ಯೋತ್ಸವವನ್ನು ರಾಜ್ಯಾದ್ಯಂತ ಕರ್ನಾಟಕ ರಾಜ್ಯೋತ್ಸವದ ಶುಭಾಷಯ ತಿಳಿಸ ಬಯಸುತ್ತೇನೆ. ಕರ್ನಾಟಕ ಒಂದೂ ಸ್ಟಾರ್ಟಪ್ ಹಬ್, ಪ್ರವಾಸೋದ್ಯಮಕ್ಕೂ ಅದ್ಭುತ ತಾಣ. ಇಲ್ಲಿನ ಭಾಷೆ, ಕಲೆ, ಸಂಸ್ಕೃತಿ ಆಚರಣೆಗಳು ಅದ್ಭುತವಾಗಿವೆ. ಇದು ಪ್ರಕೃತಿ ಮತ್ತು ಸಂಸ್ಕೃತಿಯ ವಿಶಿಷ್ಟ ಸಂಗಮ ಸ್ಥಳ. ನಾವು ಪ್ರತಿಭೆ ಮತ್ತು ತಂತ್ರಜ್ಞಾನದ ಬಗ್ಗೆ ಮಾತನಾಡುವಾಗ ನಮ್ಮ ಮನಸ್ಸಿಗೆ ಮೊದಲು ಬರುವುದೇ ಬ್ರಾಂಡ್ ಬೆಂಗಳೂರು, ಗ್ರಾಂಡ್ ಬೆಂಗಳೂರು ಎಂಬುದು ಪ್ರಪಂಚದಲ್ಲೇ ಹೆಸರು ಮಾಡಿದೆ ಎಂದು ಕೊಂಡಾಡಿದರು.

ಆಧಾರ: ಕನ್ನಡಪ್ರಭ, ದಿನಾಂಕ:03.11..2022

## 40. ರೂ.7.6 ಲಕ್ಷ ಕೋಟಿ ಹೂಡಿಕೆ

ಕೋವಿಡ್ ತಂದಿತ್ತ ಆರ್ಥಿಕ ಸಂಕಷ್ಟ–ಹಿಂಜರಿತದ ಬಳಿಕ ರಾಜ್ಯದಲ್ಲಿ ಮೊದಲ ಬಾರಿಗೆ ಆಯೋಜನೆ ಆಗಿರುವ 'ಜಾಗತಿಕ ಬಂಡವಾಳ ಹೂಡಿಕೆದಾರರ ಸಮಾವೇಶವು' ರಾಜ್ಯ ಸರ್ಕಾರದ ನಿರೀಕ್ಷೆಗೂ ಮೀರಿ ಬಂಡವಾಳ ಆಕರ್ಷಿಸಿದೆ.

ಸಮಾವೇಶದ ಮೂಲಕ ಒಟ್ಟು ರೂ.5 ಲಕ್ಷ ಕೋಟಿ ಮೊತ್ತದ ಹೂಡಿಕೆ ರಾಜ್ಯಕ್ಕೆ ಹರಿದುಬರಲಿದೆ ಎಂದು ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವ ಮುರುಗೇಶ್ ನಿರಾಣಿ ವಿಶ್ವಾಸ ವ್ಯಕ್ತಪಡಿಸಿದ್ದರು. ಆದರೆ, ಮೊದಲ ದಿನದ ಹೂಡಿಕೆ ಒಪ್ಪಂದಗಳ ಯಾದಿ ಅಂತಿಮಗೊಂಡಾಗ ಒಟ್ಟು ಮೊತ್ತ ರೂ.7.6 ಲಕ್ಷ ಕೋಟಿಗೆ ಮುಟ್ಟಿತ್ತು.

ಭಾರತದ ಉದ್ಯಮ ಜಗತ್ತಿನ ಪ್ರಮುಖರಾದ ವಿಪ್ರೊ ಅಧ್ಯಕ್ಷ ರಿಷದ್ ಪ್ರೇಮ್‌ಜಿ, ಭಾರ್ತಿ ಎಂಟರ್‌ಪ್ರೈಸಸ್ ಉಪಾಧ್ಯಕ್ಷ ರಾಜನ್ ಭಾರ್ತಿ ಮಿತ್ತಲ್, ಜೆಎಸ್‌ಡಬ್ಲ್ಯು ಸಮೂಹದ ಅಧ್ಯಕ್ಷ ಸಜ್ಜನ್ ಜಿಂದಾಲ್, ಅದಾನಿ ಪೋರ್ಟ್ಸ್ ಆ್ಯಂಡ್ ಎಸ್‌ಇಜೆಡ್ ಸಿಇಒ ಕರಣ್ ಅಹಾನಿ ಅವರ ಸಮ್ಮುಖದಲ್ಲಿ ಪ್ರಧಾನಿ ನರೇಂದ್ರ ಮೋದಿ ಅವರು ವರ್ಚುವಲ್ ರೂಪದಲ್ಲಿ ಸಮಾವೇಶಕ್ಕೆ ಚಾಲನೆ ನೀಡಿದರು. ಕರ್ನಾಟಕಕ್ಕೆ ಇರುವ ಅಪೂರ್ವ ಅವಕಾಶ ಸ್ಪರ್ಧಾತ್ಮಕತೆಯ ಸಾಮರ್ಥ್ಯವನ್ನು ಪ್ರಧಾನಿ ಬಣ್ಣಿಸಿದರು. ಬಂಡವಾಳ ಹರಿವಿನ ಸಮಾವೇಶದ ಚಾಲನೆಗೆ ರಾಜ್ಯಪಾಲ ಥಾವರಚಂದ್ ಗೆಹಲೋತ್, ಮುಖ್ಯಮಂತ್ರಿಯವರು, ಸಚಿವ ನಿರಾಣಿ ಜೊತೆಗೂಡಿದರು

ರೂ.5.58 ಲಕ್ಷ ಕೋಟಿ ಹೂಡಿಕೆಗೆ ಸಂಬಂಧಿಸಿದ ವಲಯ ಹಾಗೂ ಕಂಪನಿಗಳ ವಿವರಗಳನ್ನು ಪ್ರಧಾನಿ ಭಾಷಣದ ನಂತರದಲ್ಲಿ ಉದ್ಘಾಟನಾ ಸಮಾರಂಭದಲ್ಲಿಯೇ ಪ್ರಕಟಿಸಲಾಯಿತು. ಸಂಜೆ ಹೊತ್ತಿಗೆ ಸುದ್ದಿಗೋಷ್ಠಿ ನಡೆಸಿದ ಸಚಿವ ಮುರುಗೇಶ್ ನಿರಾಣಿ ಒಪ್ಪಂದದ ಒಟ್ಟು ಮೊತ್ತ ರೂ.7.6 ಲಕ್ಷ ಕೋಟಿಗೆ ಮುಟ್ಟಿದೆ ಎಂದು ವಿವರಿಸಿದರು. ಅವರು ಹೆಚ್ಚುವರಿ ಹೂಡಿಕೆಯ ವಲಯವಾರು ವಿವರ ನೀಡಲಿಲ್ಲ.

ಅಂತಿಮಗೊಂಡ ಒಪ್ಪಂದಗಳ ಪ್ರಕಾರ ಹೆಚ್ಚಿನ ಪ್ರಮಾಣದ ಹೂಡಿಕೆಯ ಗ್ರೀನ್ ಹೈಡ್ರೋಜನ್ (ಇದನ್ನು ಇಂಧನವಾಗಿ ಬಳಸಲಾಗುತ್ತದೆ) ವಲಯದಲ್ಲಿ ಆಗಲಿದ. ಅಲ್ಲದೆ, ನವೀಕರಿಸಬಹುದಾದ ಇಂಧನ ವಲಯದಲ್ಲಿ ಕೂಡ ವಿವಿಧ ಕಂಪನಿಗಳು ದೊಡ್ಡ ಪ್ರಮಾಣದಲ್ಲಿ ಹಣ ತೊಡಗಿಸಲಿವೆ.

ಮುಂದಿನ ಏಳು ವರ್ಷಗಳಲ್ಲಿ ಒಟ್ಟು ರೂ.1 ಲಕ್ಷ ಕೋಟಿ ಹಣವನ್ನು ಅದಾನಿ ಸಮೂಹವು ರಾಜ್ಯದಲ್ಲಿ ಹೂಡಿಕೆ ಮಾಡಲಿದೆ ಎಂದು ಕರಣ್ ಅದಾನಿ ತಿಳಿಸಿದರು.

ರಾಜ್ಯದಲ್ಲಿ ನವೀಕರಿಸಬಹುದಾದ ಇಂಧನ ವಲಯದಲ್ಲಿ ಸಮೂಹವು ಹೆಚ್ಚಿನ ಹೂಡಿಕೆ ಮಾಡಲಿದೆ. ರಾಜ್ಯದ ಸಿಮೆಂಟ್ ತಯಾರಿಕಾ ವಲಯದಲ್ಲಿ ಸಮೂಹವು ವ್ಯಾಪ್ತಿ ವಿಸ್ತರಿಸಿಕೊಳ್ಳಲಿದೆ. ಮಂಗಳೂರು ವಿಮಾನ ನಿಲ್ದಾಣದಲ್ಲಿ ಚಟುವಟಿಕೆ ಹೆಚ್ಚಿಸಲಾಗುವುದು. ಕರಾವಳಿ ಭಾಗದಲ್ಲಿ ಅದಾನಿ ವಿಲ್ಮರ್ ಕಂಪನಿಯು ತನ್ನ ವಹಿವಾಟು ವಿಸ್ತರಿಸಲಿದೆ ಎಂದು  ಅವರು ವಿವರ ನೀಡಿದರು.

ನಾವು ನವೀಕರಿಸಬಹುದಾದ ಇಂಧನ ಉತ್ಪಾದನೆಯಲ್ಲಿ ಒಟ್ಟು ರೂ.50 ಸಾವಿರ ಕೋಟಿ ಹೂಡಿಕೆ ಮಾಡಲಿದ್ದೇವೆ. ಈ ಮೊತ್ತದಲ್ಲಿ ಹೆಚ್ಚಿನ ಪಾಲು ಕರ್ನಾಟಕದಲ್ಲಿ ಹೂಡಿಕೆ ಆಗಲಿದೆ ಎಂದು ಸ್ಪರ್ಲೈಟ್ ಪವರ್ ಕಂಪನಿಯ ವ್ಯವಸ್ಥಾಪಕ ನಿರ್ದೇಶಕ ಪ್ರತೀಕ್ ಅಗರ್ವಾಲ್ ಹೇಳಿದರು.

ರಾಜ್ಯದಲ್ಲಿ ಮುಂದಿನ ಐದು ವರ್ಷಗಳಲ್ಲಿ ಒಟ್ಟು ರೂ.1 ಲಕ್ಷ ಕೋಟಿಯಷ್ಟು ಹೂಡಿಕೆ ಮಾಡುವ ಆಲೋಚನೆ ಇರುವುದಾಗಿ ಸಜ್ಜನ್ ಜಿಂದಾಲ್ ಹೇಳಿದರು. ಖನಿಜಗಳ ಹರಾಜಿನ ಬಗ್ಗೆ ಸರ್ಕಾರ ಪರಿಶೀಲಿಸಬೇಕು ಎಂದು ಅವರು ಮನವಿ ಮಾಡಿದರು. ಕಂಪನಿಯ ಉಕ್ಕು ಉತ್ಪಾದನಾ ಘಟಕ, ನವೀಕರಿಸಬಹುದಾದ ಇಂಧನ ಹಾಗೂ ಬಂದರು ಮೂಲಸೌಕರ್ಯ ಕ್ಷೇತ್ರಗಳಲ್ಲಿ ಹೂಡಿಕೆ ಮಾಡುವ ಆಲೋಚನೆ ಹೊಂದಿದೆ.

| **ಹೂಡಿಕೆಗಳು : ಯಾವ ವಲಯ ಎಷ್ಟು ಮೊತ್ತ:** | **(ಕೋಟಿಗಳಲ್ಲಿ)** |
|---|---|
| ಗ್ರೀನ್ ಹೈಡ್ರೋಜನ್ | ರೂ.2,90,797 |
| ನವೀಕರಿಸಬಹುದಾದ ಇಂಧನ | ರೂ.1,29,175 |
| ಇ–ಮೊಬಿಲಿಟಿ, ವೈಮಾಂತರಿಕ್ಷೆ ಮತ್ತು ರಕ್ಷಣೆ ದತ್ತಾಂಶ ಕೇಂದ್ರ | ರೂ.22,906 |
| ಎಲೆಕ್ಟ್ರಾನಿಕ್ಸ್ ಸಿಸ್ಟಂ ವಿನ್ಯಾಸ, ತಯಾರಿಕೆ | ರೂ.47,475 |
| ತಯಾರಿಕೆ (ಕೋರ್ ಸೆಕ್ಟರ್) | ರೂ.25,024 |
| ಮೂಲಸೌಕರ್ಯ ಮತ್ತು ಕೈಗಾರಿಕಾ ಲಾಜಿಸ್ಟಿಕ್ಸ್ ಪಾರ್ಕ್ | ರೂ.43,500 |
| ಒಟ್ಟು | ರೂ.5,58,877 |

**ಉದ್ಯೋಗ ಸೃಜಿಸಿದವರಿಗೆ ಹೆಚ್ಚು ಉತ್ತೇಜನ**: ಹೂಡಿಕೆ ಸ್ನೇಹಿ ವಾತಾವರಣದ ಜೊತೆಗೆ ರಾಜ್ಯದ ಜನರ ಹಿತ ಕಾಯುವುದು ಮುಖ್ಯ. ಹೆಚ್ಚು ಉದ್ಯೋಗ ಸೃಜಿಸುವ ಹೂಡಿಕೆದಾರರಿಗೆ ರಾಜ್ಯ ಸರ್ಕಾರ ಹೆಚ್ಚು ಉತ್ತೇಜನಗಳನ್ನು ನಿೀಲಾಗುತ್ತಿದೆ. ಆ ಮೂಲಕ ರಾಜಕೀಯ ಪಕ್ಷಗಳು ಮುಂದಿನ ಬಿಬಿಎಂಪಿ ಮತ್ತು ವಿಧಾನಸಭೆ ಚುನಾವಣೆಗೆ ಸಿದ್ಧತೆ ಮಾಡಿಕೊಳ್ಳಲು ಸಹಕಾರಿಯಾಗುವಂತೆ ಮಾಡಲಾಗುತ್ತಿದೆ.

| **ಮತದಾರರ ಪಟ್ಟಿಯಿಂದ ಹೆಸರು ತೆಗೆದ ವಿವರ** | |
|---|---|
| **ವಿಧಾನಸಭಾ ಕ್ಷೇತ್ರ** | **ತೆಗೆದು ಹಾಕಲಾದ ಮತದಾರರ ಸಂಖ್ಯೆ** |
| ಯಲಹಂಕ | 21968 |
| ಕೆ.ಆರ್. ಪುರ | 39763 |
| ಬ್ಯಾಟರಯನಪುರ | 30757 |
| ಯಶವಂತಪುರ | 35829 |
| ರಾಜರಾಜೇಶ್ವರಿನಗರ | 33009 |
| ದಾಸರಹಳ್ಳಿ | 35086 |
| ಮಹಾಲಕ್ಷ್ಮಿ ಲೇಔಟ್ | 20404 |
| ಮಲ್ಲೇಶ್ವರಂ | 11788 |

| | |
|---|---|
| ಹೆಬ್ಬಾಳ | 20039 |
| ಪುಲಕೇಶಿನಗರ | 22196 |
| ಸರ್ವಜ್ಞನಗರ | 28691 |
| ಸಿ.ವಿ. ರಾಮನ್‌ನಗರ | 21457 |
| ಶಿವಾಜಿನಗರ | 14679 |
| ಶಾಂತಿನಗರ | 20386 |
| ಗಾಂಧಿನಗರ | 16465 |
| ರಾಜಾಜಿನಗರ | 12757 |
| ಗೋವಿಂದರಾಜನಗರ | 20067 |
| ವಿಜಯನಗರ | 28562 |
| ಚಾಮರಾಜಪೇಟೆ | 19304 |
| ಚಿಕ್ಕಪೇಟೆ | 16231 |
| ಬಸವನಗುಡಿ | 18838 |
| ಪದ್ಮನಾಭನಗರ | 17435 |
| ಬಿಟಿಎಂ ಲೇಔಟ್ | 16141 |
| ಜಯನಗರ | 13061 |
| ಮಹದೇವಪುರ | 33376 |
| ಬೊಮ್ಮನಹಳ್ಳಿ | 31157 |
| ಬೆಂಗಳೂರು ದಕ್ಷಿಣ | 45927 |
| ಆನೇಕಲ್ | 24279 |
| **ಒಟ್ಟು** | **6,69,652** |

ಆಧಾರ: ಉದಯವಾಣಿ, ದಿನಾಂಕ:19.11.2022

## 41. ದಾಹ ಮುಕ್ತ ರಾಜ್ಯ

ರಾಜಧಾನಿ ಬೆಂಗಳೂರು ಹೊರತುಪಡಿಸಿ ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಿಗೆ ಸದ್ಯದಲ್ಲೆ ದಿನದ 24 ಗಂಟೆಗಳ ಕಾಲವು ಕುಡಿಯುವ ನೀರು ಲಭ್ಯವಾಗಲಿದೆ.

ನಗರ ಸ್ಥಳೀಯ ಸಂಸ್ಥೆಗಳಲ್ಲಿ 'ದಾಹಮುಕ್ತ ಕರ್ನಾಟಕ' ಯೋಜನೆಯಡಿ ಶುದ್ಧ ಕುಡಿಯುವ ನೀರು ಪೂರೈಕೆ ಮಾಡುವ ಮಹತ್ವಾಕಾಂಕ್ಷಿ ಯೋಜನೆಗೆ ಪ್ರಧಾನಿ ನರೇಂದ್ರ ಮೋದಿ ಚಾಲನೆ ನೀಡುವ ಸಾಧ್ಯತೆಯಿದೆ.

ರೂ.7.620 ಕೋಟಿ ಮೊತ್ತದ ಈ ಯೋಜನೆಯಡಿ ಬೆಂಗಳೂರು ಹೊರತುಪಡಿಸಿ ರಾಜ್ಯದ ಎಲ್ಲ ಮಹಾನಗರ ಪಾಲಿಕೆ, ನಗರಸಭೆ ಪುರಸಭೆಗಳ ವ್ಯಾಪ್ತಿಯಲ್ಲಿ ದಿನದ 24 ಗಂಟೆ ಕುಡಿಯುವ ನೀರು

ಪೂರೈಕೆಯಾಗಲಿದೆ. ಈ ಯೋಜನೆಗೆ ಕೇಂದ್ರ ಸರ್ಕಾರವು ಅಮೃತ್–2ರಡಿ ಶೇ.50ರಷ್ಟು ಅನುದಾನ ಒದಗಿಸಲಿದ್ದು, ರಾಜ್ಯ ಸರ್ಕಾರವು ಉಳಿದ ಶೇ.50ರಷ್ಟು ವೆಚ್ಚ ಭರಿಸಲಿದೆ. ದಾಹಮುಕ್ತ ಕರ್ನಾಟಕ ಯೋಜನೆಗೆ ಚಾಲನೆ ದೊರೆತ ತಕ್ಷಣ ಟೆಂಡರ್ ಪ್ರಕ್ರಿಯೆ ನಡೆಸಿ, 2024 ಮಾರ್ಚ್ ಒಳಗೆ ಪೂರ್ಣಗೊಳಿಸುವ ಗುರಿ ಹೊಂದಲಾಗಿದೆ. **ಯೋಜನೆಯ ವ್ಯಾಪ್ತಿ:** ಮಂಗಳೂರು ಹುಬ್ಬಳಿ ಸೇರ್ಪಡೆ ಮಾಡಲಾಗಿದೆ.

ರಾಜ್ಯದಲ್ಲಿ ಈಗಾಗಲೇ ಜಲಜೀವನ್ ಮಿಷನ್ ಮನೆಮನೆಗೆ ಗಂಗೆ ಯೋಜನೆಯಡಿ ಗ್ರಾಮೀಣ ಭಾಗಗಳ ಮನೆಗಳಿಗೆ ನಲ್ಲಿ ಮೂಲಕ ನೀರು ಪೂರೈಕೆ ಪ್ರಗತಿಯಲ್ಲಿದ್ದು, ಇದೀಗ ನಗರ ಪ್ರದೇಶಗಳಿಗೆ ನೀರು ಪೂರೈಕೆ ಮಾಡುವ ಈ ಯೋಜನೆಗೆ ಚಾಲನೆ ದೊರೆಯುತ್ತಿದೆ. ಇದರಿಂದಾಗಿ ಗ್ರಾಮೀಣ ಹಾಗೂ ನಗರ ಪ್ರದೇಶಗಳಿಗೆ ಶುದ್ಧ ಕುಡಿಯುವ ನೀರು ಪೂರೈಕೆಯಾದಂತಾಗಲಿದೆ.

**ಅಕ್ರಮ–ಸಕ್ರಮ:** ಇದೇ ವೇಳೆ ನಗರ ಪ್ರದೇಶಗಳಲ್ಲಿ ಕಂದಾಯ ಭೂಮಿಯಲ್ಲಿ ಬಡವರು ವಾಸಕ್ಕೆ ನಿರ್ಮಿಸಿಕೊಂಡಿರುವ ಮನೆ ಸಕ್ರಮ ಮಾಡುವ ವಿಚಾರವನ್ನು ಸಂಪುಟ ಉಪ ಸಮಿತಿಯಲ್ಲಿ ಚರ್ಚಿಸಿದ್ದು, ಸದ್ಯದಲ್ಲೇ ಸಂಪುಟದ ಮುಂದೆ ಬರಲಿದೆ. ನಗರ ಮತ್ತು ಪಟ್ಟಣ ಪ್ರದೇಶಗಳ ವ್ಯಾಪ್ತಿಯಲ್ಲಿ ಸ್ಥಳೀಯ ಸಂಸ್ಥೆಗಳಿಂದ ಅನುಮತಿ ಪಡೆಯದೆ ನಕ್ಷೆ ಮಂಜೂರಾತಿ ಉಲ್ಲಂಘನೆ, ಬಡಾವಣೆ ನಿರ್ಮಾಣ ಅನುಮೋದನೆ ಪಡೆಯದೆ ನಿರ್ಮಿಸಿಕೊಂಡಿರುವ ಮನೆಗಳ ಸಕ್ರಮ ವಿಷಯವೂ ಚರ್ಚಿಸಲಾಗಿದೆ ಎಂದು ಸಚಿವ ಬೈರತಿ ಬಸವರಾಜ್ ತಿಳಿಸಿದರು.

**11 ರಂದು ಚಾಲನೆ ಸಾಧ್ಯತೆ:** ನವೆಂಬರ್ 11 ರಂದು ಪ್ರಧಾನಿ ನರೇಂದ್ರ ಮೋದಿ ಅವರು ರಾಜ್ಯಕ್ಕೆ ಆಗಮಿಸಲಿದ್ದು ನಾಡಪ್ರಭು ಕೆಂಪೇಗೌಡ ಪ್ರತಿಮೆ ಅನಾವರಣ ಸೇರಿದಂತೆ ಹಲವು ಕಾರ್ಯಕ್ರಮಗಳಲ್ಲಿ ಭಾಗಿಯಾಗಲಿದ್ದಾರೆ. ಅದೇ ದಿನವೇ ಈ ಕಾರ್ಯಕ್ರಮಕ್ಕೂ ಚಾಲನೆ ನೀಡುವ ನಿರೀಕ್ಷೆ ಇದೆ ಎಂದು ಮೂಲಗಳು ತಿಳಿಸಿವೆ. ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಕುಡಿಯುವ ನೀರು ಪೂರೈಕೆ ಸಂಬಂಧ ಹಲವು ವರ್ಷಗಳಿಂದ ಬೇಡಿಕೆ ಇತ್ತು. ಇದಕ್ಕಾಗಿ ಬೃಹತ್ ಮೊತ್ತದ ಯೋಜನೆ ರೂಪಿಸಿ ಕೈಗೆತ್ತಿಕೊಳ್ಳಲು ನಿರ್ಧರಿಸಲಾಗಿದೆ. ನದಿ ಮೂಲ ಹಾಗೂ ಇತರೆ ಜಲಮೂಲಗಳಿಂದ ನೀರು ಪಡೆದು ಪ್ರತಿ ಮನೆಗೂ ಕುಡಿಯುವ ನೀರು ಪೂರೈಕೆ ಮಾಡಲಾಗುವುದು ಎಂದು ತಿಳಿಸಿದ್ದಾರೆ.

ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕುಡಿಯುವ ನೀರು ಪೂರೈಕೆ ಬಹಳ ವರ್ಷಗಳ ಬೇಡಿಕೆ. ಕೇಂದ್ರ ಸರ್ಕಾರದ ಅಮೃತ್–2 ಅಡಿ ನೆರವು ಪಡೆದು ರಾಜ್ಯ ಸರ್ಕಾರ ಉಳಿದ ವೆಚ್ಚ ಭರಿಸಿ ಅನುಷ್ಠಾನ ಮಾಡಲಿದೆ. ಇದರಿಂದಾಗಿ ರಾಜ್ಯದ ಎಲ್ಲ ನಗರ ಪ್ರದೇಶಗಳಲ್ಲಿ ಶುದ್ಧ ಕುಡಿಯುವ ನೀರು ಪೂರೈಕೆಯಾಗಲಿದೆ. ಒಂದು ವರ್ಷದ ಕಾಲಮಿತಿಯಲ್ಲಿ ಯೋಜನೆ ಪೂರ್ಣ ಪ್ರಮಾಣದಲ್ಲಿ ಜಾರಿಗೊಳಿಸಲಾಗುವುದು

ಬೈರತಿ ಬಸವರಾಜ್, ನಗರಾಭಿವೃದ್ದಿ ಸಚಿವರು

ಆಧಾರ: ಉದಯವಾಣಿ, ದಿನಾಂಕ:04.11..2022

## 42. ಲಕ್ಷ ವಾಹನಗಳಿಗೆ ಸುರಕ್ಷತಾ ಉಪಕರಣ

ಪ್ರಯಾಣಿಕರು ಅದರಲ್ಲೂ ಮುಖ್ಯವಾಗಿ ಮಕ್ಕಳು ಹಾಗೂ ಮಹಿಳೆಯರ ಸುರಕ್ಷತೆ ದೃಷ್ಟಿಯಿಂದ ಸಾರ್ವಜನಿಕ ಮತ್ತು ಖಾಸಗಿ ವಲಯದ ಪ್ರಯಾಣಿಕರ ಮತ್ತು ಸರಕು ಸಾಗಣಿಯ ಒಟ್ಟು 6.08 ಲಕ್ಷ ವಾಹನಗಳಿಗೆ 'ಸ್ಥಳಪತ್ತೆ ಹಚ್ಚುವ ಸಾಧನ ಮತ್ತು ತುರ್ತು ದಿಗಿಲು ಗುಂಡಿ' (ಲೋಕೆಷನ್ ಟ್ರ್ಯಾಕಿಂಗ್ ಡಿವೈಸ್) ಹಾಗೂ (ಎಮರ್ಜನ್ಸಿ ಪ್ಯಾನಿಕ್ ಬಟನ್) ಅಳವಡಿಸುವ ಯೋಜನೆಯನ್ನು ಜಾರಿಗೆ ತರಲು ರಾಜ್ಯ ಸರ್ಕಾರ ನಿರ್ಧರಿಸಿದೆ.

ಮುಖ್ಯಮಂತ್ರಿಯವರ ನೇತೃತ್ವದಲ್ಲಿ ನಡೆದ ಸಚಿವ ಸಂಪುಟ ಸಭೆಯಲ್ಲಿ ಈ ತೀಮಾನ ಕೈಗೊಳ್ಳಲಾಗಿದೆ. ಸಚಿವ ಸಂಪುಟ ಸಭೆ ಬಳಿಕ ಸುದ್ದಿಗಾರರಿಗೆ ಈ ವಿಷಯ ತಿಳಿಸಿದ ಕಾನೂನು ಮತ್ತು ಸಂಸದೀಯ ವ್ಯವಹಾರ ಸಚಿವ ಜೆ.ಸಿ. ಮಾಧುಸ್ವಾಮಿ, ಸಾರ್ವಜನಿಕ ಸೇವಾ ವಾಹನಗಳಿಗೆ ಸ್ಥಳಪತ್ತೆ ಹಚ್ಚುವ ಸಾಧನ ಮತ್ತು ತುರ್ತು ದಿಗಿಲು ಗುಂಡಿ ಅಳವಡಿಸುವ ಯೋಜನೆಯನ್ನು ರೂ.20.36 ಕೋಟಿ ಅಂದಾಜು ವೆಚ್ಚದಲ್ಲಿ ಜಾರಿಗೊಳಿಸಲು ಸಚಿವ ಸಂಪುಟದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಎಂದರು.

ಯೋಜನೆಯ ಕುರಿತು ವಿವರಿಸಿದ ಸಚಿವ ಮಾಧುಸ್ವಾಮಿ, ಇದೊಂದು ದೊಡ್ಡ ಯೋಜನೆ. ಇದರಲ್ಲಿ ಕೇಂದ್ರ ಸರ್ಕಾರದ ಸಹಕಾರ ಸಹ ಸಿಗಲಿದೆ. 60:40 ಸಹಭಾಗಿತ್ವದಲ್ಲಿ ಯೋಜನೆ ಅನುಷ್ಠಾನ ಬರಲಿದೆ. ಕೇಂದ್ರ ಸರ್ಕಾರದ ಮೋಟಾರು ಅಧಿನಿಯಮ ಮತ್ತು ಕೇಂದ್ರ ಸರ್ಕಾರದ ಅಧಿಸೂಚನೆಗಳನ್ವಯ ಸಾರ್ವಜನಿಕ ಸೇವ ವಾಹನಗಳಲ್ಲಿ ಪ್ರಯಾಣಿಕರ ಸುರಕ್ಷತೆ ಮುಖ್ಯವಾಗಿ ಮಹಿಳೆಯರು ಮತ್ತು ಮಕ್ಕಳ ಸುರಕ್ಷತೆಯ ದೃಷ್ಟಿಯಿಂದ ಸಾರ್ವಜನಿಕ ಮಜಲು ವಾಹನಗಳು, ಟ್ಯಾಕ್ಸಿಗಳಲ್ಲಿ ಕಡ್ಡಾಯವಾಗಿ ಸ್ಥಳಪತ್ತೆ ಹಚ್ಚುವ ಸಾಧನ ಮತ್ತು ತುರ್ತು ದಿಗಿಲು ಗುಂಡಿ ಅಳವಡಿಸಬೇಕಾಗಿದೆ. ಅದರಂತೆ ರಾಜ್ಯ ಸರ್ಕಾರ ತೀರ್ಮಾನ ಕೈಗೊಂಡಿದೆ ಎಂದರು.

**ಯೋಜನೆಯ ಪ್ರಯೋಜನಗಳು** : ಸಾರ್ವಜನಿಕ ಮತ್ತು ಖಾಸಗಿ ಪ್ರಯಾಣಿಕ ಮತ್ತು ಸರಕು ಸಾಗಣೆ ವಾಹನಗಳು, ಸಾರ್ವಜನಿಕ ಮಜಲು ವಾಹನಗಳು ಖಾಸಗಿ ಮಜಲು ವಾಹನಗಳು, ಪ್ರವಾಸಿ ವಾಹನಗಳು, ಟ್ಯಾಕ್ಸಿ ಮ್ಯಾಕ್ಸಿಕ್ಯಾಬ್‌ಗಳು ಸೇರಿ ಸಾರ್ವಜನಿಕ ಸೇವಾ ವಾಹನಗಳ ವೇಗ ನಿಗದಿತ ನಿಲುಗಡೆ ಸ್ಥಳದಲ್ಲಿ ವಾಹನಗಳನ್ನು ನಿಲ್ಲಿಸಲಾಗುತ್ತಿದೆಯೇ, ನಿಗದಿತ ವೇಳೆಗೆ ಸ್ಥಳವನ್ನು ತಲುಪುತ್ತಿವೆಯೇ ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಯಲ್ಲಿ ಸಂಚರಿಸುವ ಭಾರಿ ಪ್ರಮಾಣದ ವಾಹನಗಳು ಅತಿ ವೇಗದಲ್ಲಿ ಚಲಾಯಿಸಿ ಅಪಘಾತಕ್ಕೆ ಒಳಗಾಗುವುದನ್ನು ತಡೆಯಬಹುದು. ನಿಯಮ ಉಲ್ಲಂಘಿಸಿ ಚಾಲಕರು ಬೇರೆ ಮಾರ್ಗದಲ್ಲಿ ವಾಹನಗಳನ್ನು ಚಲಾಯಿಸುವುದಕ್ಕೆ ಕಡಿವಾಣ ಹಾಕಬಹುದು. ಚಾಲಕರ ವರ್ತನೆಯಿಂದ ಪ್ರಯಾಣಿಕರಿಗೆ ಆಗುವ ಅನಾನುಕೂಲತೆಗಳ ಮೇಲೆ ನಿಗಾ ಇಡಬಹುದು. ಸಮಾಜಘಾತಕ ಶಕ್ತಿಗಳಿಂದ ವಾಹನ ಮತ್ತು ಪ್ರಯಾಣಿಕರನ್ನು ರಕ್ಷಿಸಬಹುದು ಎಂದು ಸಚಿವ ಮಾಧುಸ್ವಾಮಿ ವಿವರಿಸಿದರು.

**ಪ್ರಮುಖ ನಿರ್ಣಯಗಳು:**

- ಜಲಜೀವನ್ ಮಿಷನ್ ಯೋಜನೆಯಡಿ ರಾಜ್ಯದ ವಿವಿಧ ಜಿಲ್ಲೆಗಳ 4.270 ಕ್ಕೂ ಹೆಚ್ಚು ಗ್ರಾಮೀಣ ಜನವಸತಿಗಳಿಗೆ ಬಹುಗ್ರಾಮ ಕುಡಿಯುವ ನೀರು ಸರಬರಾಜು ಯೋಜನೆಯ ರೂ.2,718 ಕೋಟಿಗೂ ಅಧಿಕ ಮೊತ್ತದ ಪರಿಷ್ಕೃತ ಅಂದಾಜಿಗೆ ಅನುಮೋದನೆ.

- ಕೆ.ಎ.ಎಸ್ ಅಧಿಕಾರಿಗಳಾದ ಎನ್.ಆರ್. ನಾಗರಾಜು, ಎಚ್.ಎಸ್. ಅರುಣಪ್ರಭ, ಅಪರ್ಣ ಪಾವಟೆ ವಿರುದ್ಧದ ಲೋಕಾಯುಕ್ತ ಪ್ರಕರಣಗಳನ್ನು ಕೈಬಿಡಲು ಸಚಿವ ಸಂಪುಟ ನಿರ್ಣಯ ಕೈಗೊಂಡಿದೆ.

- ಕರ್ನಾಟಕ ರಾಜ್ಯ ವಿಸ್ತೃತ ಜಾಲ ಯೋಜನೆ (ಕೆಸ್ವಾನ್) ಯನ್ನು ರೂ.931 ಕೋಟಿ ವೆಚ್ಚದಲ್ಲಿ ಕೆ–ಸ್ವಾನ್ 3.0 ಅಡಿಯಲ್ಲಿ ವಿಸ್ತರಿಸಲು ಮತ್ತು ಉನ್ನತೀಕರಿಸಲು ಆಡಳಿತಾತ್ಮಕ ಅನುಮೋದನೆ.

- ಬೆಂಗಳೂರು ಉತ್ತರ ತಾಲ್ಲೂಕು ಬ್ಯಾಟರಾಯನಪುರ ಗ್ರಾಮದಲ್ಲಿ ಪಿ.ಪಿ.ಪಿ. ಯೋಜನೆಯಡಿ ಹಣ್ಣು ಮತ್ತು ತರಕಾರಿಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ನಿರ್ಮಿಸಲು ಮೆಸರ್ಸ್ ಶೋಭಾ ಅಸೆಟ್ಸ್ ಪ್ರೈವೆಟ್ ಲಿ. ಕಂಪನಿಯೊಂದಿಗೆ 2012ರಲ್ಲಿ ಮಾಡಿಕೊಂಡಿದ್ದ ಒಪ್ಪಂದ ರದ್ದುಪಡಿಸಿ ಹೊಸದಾಗಿ ಟೆಂಡರ್ ಕರೆಯಲು ತೀರ್ಮಾನ.

- ಬಳ್ಳಾರಿ ವಿಮಾನ ನಿಲ್ದಾಣ ಅಭಿವೃದ್ಧಿ, ನಿರ್ಮಾಣ, ಕಾರ್ಯಾಚರಣೆ ಮತ್ತು ನಿರ್ವಹಣೆಗೆ ಚೆನ್ನೈನ ಮಾರ್ಗ್ ಶ್ರೀ ಕೃಷ್ಣದೇವರಾಯ ಏರ್‌ಪೋರ್ಟ್ ಪ್ರೈ.ಲಿ. ಸಂಸ್ಥೆಯೊಂದಿಗೆ ಮಾಡಿಕೊಂಡಿದ್ದ ಒಪ್ಪಂದ ರದ್ದುಪಡಿಸಿ ರಾಜ್ಯ ಸರ್ಕಾರವೇ ಯೋಜನೆ ಕೈಗೆತ್ತಿಕೊಳ್ಳಲಿದೆ.

**ಅಸ್ತಿತ್ವಕ್ಕೆ ಬರಲಿದೆ ಕರ್ನಾಟಕ ಹೂಡಿಕೆ ಪ್ರಾಧಿಕಾರ**: ರಾಜ್ಯದಲ್ಲಿ ಕೈಗಾರಿಕೋದ್ಯಮಗಳು ಮತ್ತು ಹೂಡಿಕೆದಾರರಿಗೆ ಹಾದಿ ಸುಗಮ ಮಾಡಿಕೊಡಲು ಪ್ರತ್ಯೇಕವಾಗಿ ಕರ್ನಾಟಕ ರಾಜ್ಯ ಹೂಡಿಕೆದಾರರ ಪ್ರಾಧಿಕಾರ ಅಸ್ತಿತ್ವಕ್ಕೆ ಬರಲಿದ್ದು, ಈ ಸಂಬಂಧ ವಿಶೇಷ ಹೂಡಿಕೆ ಪ್ರದೇಶ ಅಧಿನಿಯಮ ಜಾರಿಗೆ ತರಲು ರಾಜ್ಯ ಸರ್ಕಾರ ತೀರ್ಮಾನಿಸಿದೆ.

ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಚಿವ ಸಂಪುಟ ಸಭೆಯಲ್ಲಿ ಕರ್ನಾಟಕ ವಿಶೇಷ ಹೂಡಿಕೆ ಪ್ರದೇಶ ಅಧಿನಿಯಮ ಜಾರಿಗೆ ತರಲು ನಿರ್ಣಯ ಕೈಗೊಳ್ಳಲಾಗಿದೆ. ಮೊದಲ ಹಂತದಲ್ಲಿ ತುಮಕೂರು ಮತ್ತು ಧಾರವಾಡ ಜಿಲ್ಲೆಯಲ್ಲಿ ವಿಶೇಷ ಹೂಡಿಕೆ ಪ್ರದೇಶಗಳನ್ನು ಸ್ಥಾಪಿಸಲಾಗುವುದು.

ಸಚಿವ ಸಂಪುಟ ಸಭೆ ಬಳಿಕ ಸುದ್ದಿಗಾರರಿಗೆ ಈ ವಿಷಯ ತಿಳಿಸಿದ ಕಾನೂನು ಸಚಿವ ಜೆ.ಸಿ. ಮಾಧುಸ್ವಾಮಿ, ಕರ್ನಾಟಕ ವಿಶೇಷ ಹೂಡಿಕೆ ಪ್ರದೇಶ ಅಧಿನಿಯಮಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಹೊಸ ಕಾಯ್ದೆ ಜಾರಿಗೆ ಸರ್ಕಾರ ತೀರ್ಮಾನಿಸಿದ್ದು, ಮುಂದಿನ ಸಚಿವ ಸಂಪುಟ ಸಭೆ ಹಾಗೂ ಅಧಿವೇಶನದಲ್ಲಿ ಇದು ಮಂಡನೆಯಾದಾಗ ಹೆಚ್ಚಿನ ವಿವರಗಳು ಸಿಗಲಿವೆ ಎಂದರು.

ರಾಜ್ಯದಲ್ಲಿ ದೊಡ್ಡ ಗಾತ್ರದ ಹೂಡಿಕೆ ಪ್ರದೇಶ, ಕೈಗಾರಿಕಾ ವಸಾಹತುಗಳ ಸ್ಥಾಪನೆ, ಕಾರ್ಯಾಚರಣೆ, ನಿಯಂತ್ರಣ ಮತ್ತು ನಿರ್ವಹಣೆಗೆ ಕರ್ನಾಟಕ ವಿಶೇಷ ಹೂಡಿಕೆ ಪ್ರದೇಶ ಅಧಿನಿಯಮ ತರಲಾಗುವುದು. ಆರಂಭದಲ್ಲಿ ತುಮಕೂರು ಹಾಗೂ ಧಾರವಾಡ ಜಿಲ್ಲೆಯ ಹುಬ್ಬಳ್ಳಿಯಲ್ಲಿ ವಿಶೇಷ ಹೂಡಿಕೆ ಪ್ರದೇಶಗಳನ್ನು ಅಧಿಸೂಚಿಸಲಾಗುವುದು. ಇದಕ್ಕಾಗಿ ಕರ್ನಾಟಕ ರಾಜ್ಯ ಹೂಡಿಕೆ ಪ್ರಾಧಿಕಾರದ ಹೆಸರಲ್ಲಿ ಒಂದು ಪ್ರತ್ಯೇಕ ಪ್ರಾಧಿಕಾರ ರಚಿಸಲಾಗುತ್ತದೆ. ಆರಂಭದಲ್ಲಿ ಈ ಪಾಧಿಕಾರದ ಮೇಲ್ವಿಚಾರಣೆಯನ್ನು ಕೆಐಎಡಿಬಿ ನೆಸಲಿದೆ ಎಂದು ಸಚಿವರು ಮಾಹಿತಿ ನೀಡಿದರು.

**ಕೇಂದ್ರೀಕೃತ ವ್ಯವಸ್ಥೆ ಮೂಲಕ ನಿರ್ವಹಣೆ**: ಕ್ಯಾಬ್, ಟ್ಯಾಕ್ಸಿ, ಮ್ಯಾಕ್ಸಿಕ್ಯಾಬ್ 4.51 ಲಕ್ಷ ಶಾಲಾ ವಾಹನ ಮತ್ತು ಪ್ರಯಾಣಿಕರ ಬಸ್‌ಗಳು 16,432, ಖಾಸಗಿ ಮಜಲು ವಾಹನಗಳು, 73,077 ಕೆಎಸ್‌ಆರ್‌ಟಿಸಿ ಮಜಲು ವಾಹನಗಳು 24,701 ಒಪ್ಪಂದ ವಾಹನಗಳು 5,138, ಅಖಿಲ ಭಾರತ ಪ್ರವಾಸಿ ವಾಹನಗಳು 1,940, ಬಸ್‌ಗಳು, 71,248, ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಯ ಸರಕು ವಾಹನಗಳು 85,944 ಸೇರಿದಂತೆ ಒಟ್ಟು 6,08,717 ವಾಹನಗಳಿಗೆ ಸ್ಥಳಪತ್ತೆ ಹಚ್ಚುವ ಸಾಧನ ಮತ್ತು ತುರ್ತು ದಿಗಿಲು ಗುಂಡಿ ಉಪಕರಣ ಆಳವಡಿಸಲಾಗುವುದು. ಎಲ್ಲಾ ವಾಹನಗಳಿಗೆ ಉಪಕರಣಗಳನ್ನು ಸಾರಿಗೆ ಇಲಾಖೆಯೆ ಅಳವಡಿಸಲಿದೆ. ಅಪಾಯದ ಸಂದರ್ಭದಲ್ಲಿ ಬಟನ್ ಒತ್ತುವ ವ್ಯವಸ್ಥೆ ಮಾಡಲಾಗುತ್ತಿದೆ. ಕೇಂದ್ರೀಕೃತ ವ್ಯವಸ್ಥೆಯ ಮೂಲಕ ಒಂದೇ ಕಡೆ ಎಲ್ಲವನ್ನು ನಿರ್ವಹಿಸಲಾಗುವುದು ಮತ್ತು ವಾಹನಗಳ ಮೇಲೆ ನಿಗಾ ಇಡಲಾಗುವುದು ಎಂದು ಸಚಿವರು ತಿಳಿಸಿದರು.

ಆಧಾರ: ಉದಯವಾಣಿ, ದಿನಾಂಕ:04.11..2022

## 43. ಗಡಿ ಸಮಸ್ಯೆ ಪರಿಹಾರ್ಕೆ ಸಮನ್ವಯತೆ ಸೂತ್ರ

ಕರ್ನಾಟಕ – ಮಹಾರಾಷ್ಟ್ರ ರಾಜ್ಯದ ಗಡಿ ಜಿಲ್ಲೆಗಳ ನಡುವಿನ ಸಮಸ್ಯೆ ಪರಿಹಾರಕ್ಕೆ ಸಮನ್ವಯತೆ ಹಾಗೂ ಗಡಿ ಭಾಗದ ಪ್ರದೇಶಗಳಿಗೆ ಪ್ರವಾಸ ಉದ್ಯೋಗ ಮತ್ತಿತರ ಕಾರಣಗಳಿಗಾಗಿ ಭೇಟಿ ನೀಡುವವರಿಗೆ ಅನುಕೂಲವಾಗುವಂತೆ ಮರಾಠಿ ಮತ್ತು ಕನ್ನಡ ಭಾಷೆಯಲ್ಲಿ ಸೂಚನೆ ಫಲಕ ಅಳವಡಿಸುವುದಕ್ಕೆ ರಾಜ್ಯಪಾಲರ ಸಭೆ ಒಪ್ಪಿಗೆ ಸೂಚಿಸಿದೆ.

ಗಡಿ ಜಿಲ್ಲೆಗಳಲ್ಲಿನ ಸಮಸ್ಯೆ ಬಗೆಹರಿಸುವ ನಿಟ್ಟಿನಲ್ಲಿ ಹೆಜ್ಜೆ ಇಡುವ ಸಂಬಂಧ ಮಹಾರಾಷ್ಟ್ರ ರಾಜ್ಯಪಾಲ ಭಗತ್ ಸಿಂಗ್ ಕೊಶ್ಯಾರಿ ಮತ್ತು ಕರ್ನಾಟಕ ರಾಜ್ಯಪಾಲ ತಾವರ್‌ಚಂದ್ ಗೆಹ್ಲೋಟ್ ಪರಸ್ಪರ ಸಲಹೆಗಳನ್ನು ಹಂಚಿಕೊಂಡಿದ್ದಾರೆ.

ಮಹಾರಾಷ್ಟ್ರದ ಕೊಲ್ಲಾಪುರದಲ್ಲಿ ಉಭಯ ರಾಜ್ಯಗಳ ಗಡಿಭಾಗದ ಪ್ರದೇಶಗಳ ಸಮಸ್ಯೆಗಳ ಕುರಿತು ಚರ್ಚಿಸಲು ಆಯೋಜಿಸಿದ್ದ ರಾಜ್ಯಪಾಲರ ಸಮನ್ವಯ ಸಭೆ ನಡೆಯಿತು. ಎರಡೂ ರಾಜ್ಯಗಳ ಗಡಿ ಜಿಲ್ಲೆಗಳ  ಅಧಿಕಾರಿಗಳಿಂದ ಮಾಹಿತಿ ಪಡೆದರು.

ಸಾಮಾನ್ಯ ವಿಷಯಗಳಿಗೆ ಸಭೆಯಲ್ಲಿ ಸಮ್ಮತಿ ನೀಡಿದರೆ , ಕೆಲ ವಿಚಾರಗಳ ಬಗ್ಗೆ ಶೀಘ್ರ ತೀರ್ಮಾನ ಕೈಗೊಳ್ಳಲಾಗುವುದು. ಇನ್ನೂ ಕೆಲವು ಸೂಕ್ಷ್ಮ ವಿಷಯಗಳ ಕುರಿತು ಕ್ರಮ ಕೈಗೊಳ್ಳುವಂತೆ ರಾಜ್ಯ ಸರ್ಕಾರಕ್ಕೆ ಸಲಹೆ ನೀಡಲಾಗುವುದು ಎಂದು ಉಭಯ ರಾಜ್ಯಪಾಲರು ತಿಳಿಸಿದರು.

**ನೆರೆ ಸಮಸ್ಯೆ ಚರ್ಚೆ:** ನದಿ ಪ್ರವಾಹದಿಂದ ಆಗುತ್ತಿರುವ ಹಾನಿಗೆ ಪರಿಹಾರ ಕಂಡುಕೊಳ್ಳುವ ಕುರಿತು ಎರಡೂ ರಾಜ್ಯಗಳ ಜಿಲ್ಲಾಧಿಕಾರಿಗಳು ಪ್ರಸ್ತಾಪಿಸಿದರು.

ಬೆಳಗಾವಿ ಜಿಲ್ಲಾಧಿಕಾರಿ ನಿತೇಶ್ ಪಾಟೀಲ್ ಮಹಾರಾಷ್ಟ್ರದ ಅಧಿಕಾರಿಗಳು ಸಮಯೋಚಿತ ಸಹಕಾರ ನೀಡಿದರೆ ಕೃಷ್ಣಾ ನದಿಯಿಂದ ಎದುರಾಗುತ್ತಿರುವ ಪ್ರವಾಹ ಪರಿಸ್ಥಿತಿ ಸಮರ್ಥವಾಗಿ ನಿಭಾಯಿಸಲು ಸಾಧ್ಯವಿದೆ. ಅಂಬೋಲಿ ರಸ್ತೆಯನ್ನು ಮೇಲ್ದರ್ಜೆಗೇರಿಸುವುದರಿಂದ ಎರಡೂ ರಾಜ್ಯಗಳ ನಡುವೆ ವ್ಯಾಪರ ವಹಿವಾಟು ಇನ್ನಷ್ಟು ಹೆಚ್ಚಿಸಬಹುದು ಎಂದು ಸಲಹೆ ನೀಡಿದರು.

ಕೊಲ್ಲಾಪುರ  ಜಿಲ್ಲಾಧಿಕಾರಿ ರಾಹುಲ್ ರೇಖಾವರ ಅಲಮಟ್ಟಿ ಜಲಾಶಯದ ಎತ್ತರ ಹೆಚ್ಚಿಸಿದರೆ ಸಾಂಗ್ಲಿ ಕೊಲ್ಲಾಪುರ ಜಿಲ್ಲೆಗಳ ವ್ಯಾಪ್ತಿಯ ಗ್ರಾಮಗಳು ಜಲಾವೃತಗೊಳ್ಳುತ್ತವೆ. ಹೀಗಾಗಿ ಆಲಮಟ್ಟಿ ಜಲಾಶಯದಲ್ಲಿ ನೀರಿನ ಸಂಗ್ರಹಣೆ ವಿಷಯದ ಬಗ್ಗೆ ಪರಸ್ಪರ ಸಮಾಲೋಚನೆಯ ಅಗತ್ಯತೆ ಇದೆ ಎಂದರು.

ಮೇವು ವ್ಯಾಪರ, ಕರ್ನಾಟಕ ಭಾಗ ಅರಣ್ಯದಿಂದ ಆನೆಗಳ ವಲಸೆ ಮಾನವ–ಪ್ರಾಣಿ ಸಂಘರ್ಷ ವಿಷಯದ ಕುರಿತು ಚರ್ಚಿಸಲಾಯಿತು.

ಸಾಂಗ್ಲಿ ಜಿಲ್ಲಾಧಿಕಾರಿ ಡಾ: ರಾಜಾ ದಯಾನಿಧಿ ಮಹಾರಾಷ್ಟ್ರದ ಬಸ್‌ಗಳಿಗೆ ಕರ್ನಾಟಕದ ನಿಲ್ದಾಣಗಳಲ್ಲಿ ಜಾಗದ ವ್ಯವಸ್ಥೆ ಕಲ್ಪಿಸಬೇಕು ಎಂದರು. ಸೊಲ್ಲಾಪುರ ಹೆಚ್ಚುವರಿ ಜಿಲ್ಲಾಧಿಕಾರಿ ಭರತ್ ವಾಘ್ಮೋರೆ ಎರಡೂ ರಾಜ್ಯಗಳ ಅಬಕಾರಿ ಅಧಿಕಾರಿಗಳ ನಡುವೆ ಸೂಕ್ತ ಸಮನ್ವಯತೆ ಕಾಯ್ದುಕೊಳ್ಳುವುದು ಅಗತ್ಯ ಎಂದರು.

ವಿಜಯಪುರ ಜಿಲ್ಲಾಧಿಕಾರಿ ಡಾ:ವಿಜಯ ಮಹಾಂತೇಶ್ ದಾನಮ್ಮನವರ್ ಎರಡು ರಜ್ಯಗಳ ಧಾರ್ಮಿಕ ಸ್ಥಳಗಳಿಗೆ ಭೇಟಿ ನೀಡುವ ಪ್ರಾಸಿಗರು ಮತ್ತು ಯಾತ್ರಾರ್ಥಿಗಳಿಗೆ ಇನ್ನಷ್ಟು ಸೇವೆ ನೀಡಲು ಮೂಲ  ಹೆಚ್ಚಿಸಬೇಕು. ದ್ರಾಕ್ಷಿ ಮಾರುಕಟ್ಟೆ ವಿಸ್ತರಣೆಗೊಳ್ಳಬೇಕು ಎಂದರು.

ಬೀದರ್ ಜಿಲ್ಲಾಧಿಕಾರಿ ಗೋವಿಂದ ರೆಡ್ಡಿ ಕರ್ನಾಟಕ ರಾಜ್ಯದ ವಲಸೆ ಕಾರ್ಮಿಕರಿಗೆ ಮಹಾರಾಷ್ಟ್ರ ಪ್ರವೇಶಕ್ಕೆ ನೆರವು ನೀಡಬೇಕು ಎಂದರು.

ಕಲಬುರಗಿ ಜಿಲ್ಲಾಧಿಕಾರಿ ಯಶವಂತ ಗುರುಕರ ಗಡಿಯಲ್ಲಿ ಅಬಕಾರಿ ಸರಕುಗಳ ಅಕ್ರಮ ಸಾಗಣೆಗೆ ಕಡಿವಾಣ ಹಾಕುವ ಅಗತ್ಯತೆ ಹೆಚ್ಚಿದೆ. ಗಡಿ ಭಾಗದ ಆಸ್ಪತ್ರೆಗಳಲ್ಲಿ ಹೆಚ್ಚು ಭ್ರೂಣ ಹತ್ಯೆ ತಡೆಯಲು ಕಾರ್ಯಾಚರಣೆ ನಡೆಯಬೇಕಿದೆ ಎಂದರು.

ಆಧಾರ: ಉದಯವಾಣಿ, ದಿನಾಂಕ:04.11.2022

# 44. ಕೃಷಿಕರ ಜಮೀನಿನಲ್ಲಿ ಹೊಸ ಪ್ರಯೋಗ

ಕೃಷಿ ವಿಶ್ವವಿದ್ಯಾಲಯಗಳ ತಜ್ಞರು, ಪ್ರಾಧ್ಯಾಪಕರು ಹಾಗೂ ವಿಸ್ತರಣಾ ನಿರ್ದೇಶಕರು ಕ್ಯಾಂಪಸ್ ಬಿಟ್ಟು ಕೃಷಿಕರ ಜಮೀನುಗಳಲ್ಲಿಯೇ ಪ್ರಯೋಗ ನಡಸಬೇಕು ಎಂದು ಮುಖ್ಯಮಂತ್ರಿಯವರು ಹೇಳಿದರು.

ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಜಿಕೆವಿಕೆ ಆವರಣದಲ್ಲಿ ನೆಡೆಯುತ್ತಿರುವ ಕೃಷಿ ಮೇಳದಲ್ಲಿ ಪ್ರಗತಿಪರ ಕೃಷಿಕರಿಗೆ ಪ್ರಶಸ್ತಿ ಪ್ರದಾನ ಮಾಡಿ ಅವರು ಮಾತನಾಡಿದರು.

ಕ್ಯಾಂಪಸ್‌ನಲ್ಲಿ ಎಲ್ಲ ವ್ಯವಸ್ಥೆ ಇರುತ್ತದೆ. ಅಲ್ಲಿ ಹೊಸ ತಳಿ ಪ್ರಯೋಗ ನಡೆಸುವುದು ಹೆಚ್ಚುಗಾರಿಕೆ ಅಲ್ಲ. ಅಯಾ ಭಾಗದ ಭೂಮಿಯ ಫಲವತ್ತತೆ ಅರಿತು ಅಲ್ಲಿಯೇ ಪ್ರಯೋಗಗಳು ನಡೆಯಬೇಕು. 10 ಕೃಷಿ ವಲಯದ ವ್ಯಾಪ್ತಿಯಲ್ಲಿ ಇದು ಅನುಷ್ಠಾನಕ್ಕೆ ತರಬೇಕು ಎಂದು ಸೂಚನೆ ನೀಡಿದರು.

ಕೃಷಿ ಕ್ಷೇತ್ರದಲ್ಲಿ ಬದಲಾವಣೆಗಳು ನಡೆದರೆ ಆದಾಯ ವೃದ್ದಿ ಆಗಲಿದೆ. 130 ಕೋಟಿ ಜನರಗೆ ಆಹಾರ ಉತ್ಪಾದನೆ ಮಾಡಬೇಕಿದೆ. ಭಾರತ ಆಹಾರದಲ್ಲಿ ಸ್ವಾವಲಂಬನೆ ಸಾಧಿಸಿದ್ದು ಅದಕ್ಕೆ ರೈತರ ಪರಿಶ್ರಮವೇ ಕಾರಣ. ಪ್ರಸ್ತುತ ಕೃಷಿ ಕ್ಷೇತ್ರವು ಬೆಳೆದಿದೆ. ಆದರೆ ರೈತರು ಬೆಳೆದಿಲ್ಲ ಎಂದು ಆತಂಕ ವ್ಯಕ್ತಪಡಿಸಿದರು.

ಹವಾಮಾನ ವೈಪರೀತ್ಯವು ಕೃಷಿ ಕ್ಷೇತ್ರದ ಮೇಲೆ ಗಂಭೀರ ಪರಿಣಮ ಬೀರಿದೆ. ಉತ್ತಮ ಮಳೆಯಾದರೆ ಮಾತ್ರ ಆಹಾರದ ಉತ್ಪಾದನೆ ಹೆಚ್ಚಲಿದೆ. ಕೃಷಿ ಹಾಗೂ ರೈತರ ವಿಚಾರದಲ್ಲಿ ಯಾರೂ ರಾಜಕೀಯ ಬೆರೆಸಬಾರದು ಎಂದು ನುಡಿದರು.

ಅಭಿವೃದ್ಧಿ ಸೇರಿದಂತೆ ನಾನಾ ಕಾರಣಕ್ಕೆ ಕೃಷಿ ಜಮೀನು ಕಡಿಮೆ ಆಗುತ್ತಿದೆ ಎಂದು ಆತಂಕ ವ್ಯಕ್ತಪಡಿಸಿದರು.

ಕಂದಾಯ ಸಚಿವ ಆರ್. ಅಶೋಕ ಮಾತನಾಡಿ, ರಾಜ್ಯದಲ್ಲಿ 11 ಲಕ್ಷ ಹೆಕ್ಟೇರ್ ಜಮೀನು ಪಾಳು ಬಿದ್ದಿದೆ. ಅದು ಕೃಷಿಗೆ ಬಳಕೆ ಆಗಬೇಕು ಚಿಕ್ಕಮಗಳೂರು, ಕೊಡಗು ಹಾಗೂ ಹಾಸನದಲ್ಲಿ ಸರ್ಕಾರಿ ಜಮೀನಿನಲ್ಲಿ ಕೃಷಿ ಮಾಡಿದವರಿಗೆ ಅದೇ ಜಮೀನು ಗುತ್ತಿಗೆ ನೀಡುವ ಪ್ರಕ್ರಿಯೆ ಆರಂಭಿಸಲಾಗಿದೆ ಎಂದರು.

ಕೃಷಿ ಸಚಿವ ಬಿ.ಸಿ. ಪಾಟೀಲ ಮಾತನಾಡಿ ರಾಜ್ಯದಲ್ಲಿ ಶೇ.10 ಹಾಗೂ ದೇಶದಲ್ಲಿ ಶೇ.3ರಷ್ಟು ಆಹಾರೋತ್ಪಾದನೆ ಹೆಚ್ಚಳವಾಗಿದೆ. ರೈತಶಕ್ತಿ ಯೋಜನೆ ಅಡಿ 10 ಲೀಟರ್ ತನಕ ಡೀಸೆಲ್ ಮೇಲೆ ಸಬ್ಸಿಡಿ ನೀಡಲಾಗುತ್ತದೆ. ಸಮಗ್ರ ಕೃಷಿಯಿಂದ ಅಧಿಕ ಲಾಭ ಗಳಿಸಬಹುದು ಎಂದು ಹೇಳಿದರು.

ಸಂಸದ ಡಿ.ವಿ. ಸದಾನಂದಗೌಡ ಅವರು ಕೃಷಿ ಮೇಳವೂ ಮೈಸೂರು ದಸರಾದಂತೆ ಭಾಸವಾಗುತ್ತಿದೆ. ಕೋವಿಡ್ ಸಂಕಷ್ಟದಲ್ಲಿ ಎಲ್ಲ ಕ್ಷೇತ್ರದ ಜಿಡಿಪಿ ಕುಸಿದಿದ್ದರೂ ಕೃಷಿ ಕ್ಷೇತ್ರ ಜಿಡಿಪಿ ಶೇ.3.5 ರಷ್ಟು ಹೆಚ್ಚಳವಾಗಿತ್ತು. ಅದಕ್ಕೆ ರೈತರ ಪರಿಶ್ರಮವೇ ಕಾರಣ ಎಂದರು. ಕೃಷಿ ವಿವಿಯ ಕುಲಪತಿ ಡಾ.ಎಸ್ ವಿ. ಸುರೇಶ್ ಹಾಜರಿದ್ದರು.

**ಅಗತ್ಯಕ್ಕೆ ತಕ್ಕಂತೆ ಸಂಶೋಧನೆ:** ರೈತರ ಅನುಕೂಲಕ್ಕೆ ತಕ್ಕಂತೆ ಸಂಶೋಧನೆಗಳು ನಡೆಯಬೇಕು ಎಂದು ಶಾಸಕ ಕೃಷ್ಣಭೈರೇಗೌಡ ಅವರು ಸಲಹೆ ನೀಡಿದರು. ಕೃಷಿಕರ ಆದಾಯ ಕುಸಿಯುತ್ತಿದೆ ಎಂದು ಸಮೀಕ್ಷೆಗಳು ಹೇಳುತ್ತಿವೆ. ಇದರಿಂದ ರೈತರು ಖರ್ಚು ಕಡಿಮೆ ಮಾಡುವ ಸ್ಥಿತಿಯಿದೆ. ಹೀಗಾಗಿ ರೈತರ ಅನುಕೂಲಕ್ಕೆ ಬರುವ ಪ್ರಯೋಗಗಳು ನಡೆಯಬೇಕು. ಅವುಗಳು ಕೃಷಿಕರ ಜಮೀನಿಗೂ ತಲುಪಬೇಕು ಎಂದು ಸಲಹೆ ನೀಡಿದರು.

ಆಧಾರ: ಪ್ರಜಾವಾಣಿ, ದಿನಾಂಕ:06.11.2022

## 45. ಶೇ.10 ಮೀಸಲಿಗೆ ತಯಾರಿ

ಮೇಲ್ವರ್ಗದ ಆರ್ಥಿಕ ದುರ್ಬಲರಿಗೆ (ಇಡಬ್ಲ್ಯೂಎಸ್) ಶಿಕ್ಷಣ ಮತ್ತು ಉದ್ಯೋಗದಲ್ಲಿ ಶೇಕಡ 10 ರಷ್ಟು ಮೀಸಲು ಕಲ್ಪಿಸಲು ಸುಪ್ರೀಂಕೋರ್ಟ್‌ನಿಂದ ಅನುಮೋದನೆ ದೊರೆತ ಬೆನ್ನಲ್ಲೇ ರಾಜ್ಯ ಸರ್ಕಾರದ ಮುಂದಿನ ನಡೆಯುತ್ತ ಮೇಲ್ವರ್ಗದ ಬಡವರ ಚಿತ್ತ ನೆಟ್ಟಿದೆ. ಕೇಂದ್ರ ಸರ್ಕಾರದ ಇಡಬ್ಲ್ಯೂಎಸ್ ಮೀಸಲಾತಿ ರಾಜ್ಯದಲ್ಲೂ ಜಾರಿಗೆ ತರಲು ಬಿ.ಎಸ್. ಯಡಿಯೂರಪ್ಪ ಮುಖ್ಯಮಂತ್ರಿ ಆಗಿದ್ದಾಗ ಸಚಿವ ಸಂಪುಟ ಸಭೆ ಅನುಮೋದನೆ ನೀಡಿತ್ತು. ಆದರೆ, ಶೇ.10 ಮೀಸಲು ವಿರೋಧಿಸಿ ಸುಪ್ರೀಂಕೋರ್ಟ್ ಮೆಟ್ಟಿಲೇರಿದ ಹಿನ್ನೆಲೆಯಲ್ಲಿ ಅನುಷ್ಠಾನ ತಡೆಹಿಡಿಯಲಾಗಿತ್ತು.

ಪರಿಶಿಷ್ಟ ಜಾತಿ, ಪಂಗಡಗಳ ಮೀಸಲು ಪ್ರಮಾಣ ಒಟ್ಟು ಶೇ.6ರಷ್ಟು ಹೆಚ್ಚಿಸಿರುವ ಬಳಿಕ ಇಡಬ್ಲ್ಯುಎಸ್ ಮೀಸಲು ಕುರಿತು ಒಂದು ಸುತ್ತಿನ ಆಂತರಿಕ ಸಭೆ ನಡೆದಿದೆ. ಸುಪ್ರೀಂ ಕೋರ್ಟ್ ತೀರ್ಪು ಹೊರಬಿದ್ದ ತಕ್ಷಣ ಕಾರ್ಯಪ್ರವೃತ್ತವಾಗಬೇಕು ಎಂಬ ಅಭಿಪ್ರಾಯ ವ್ಯಕ್ತವಾಗಿದ್ದು, ಮುಖ್ಯಮಂತ್ರಿಯವರು ಸಕಾತಾತ್ಮಕವಾಗಿ ಸ್ಪಂದಿಸಿದ್ದಾರೆ ಎಂದು ಮೂಲಗಳು ತಿಳಿಸಿವೆ. ಎಸ್ಸಿ, ಎಸ್‌ಟಿ ಮೀಸಲು ಹೆಚ್ಚಳದ ನಿರ್ಧಾರಕ್ಕೆ ಮುನ್ನ ಆ ಸಮುದಾಯಗಳ ಪ್ರಮುಖರು, ತಜ್ಞರು ಹಾಗೂ ಉನ್ನತಾಧಿಕಾರಿಗಳ ಜೊತೆಗೆ ಚರ್ಚಿಸಲಾಗಿದೆ. ಇದೇ ಮಾದರಿಯನ್ನು ಇಡಬ್ಲ್ಯುಎಸ್ ಮೀಸಲು ವಿಚಾರಕ್ಕೂ ಅನ್ವಯಿಸುವ ಚಿಂತನೆಯಿದ್ದು, ನವೆಂಬರ್ 11ರ ಪ್ರಧಾನಿ ಮೋದಿ ಕಾರ್ಯಕ್ರಮದ ನಂತರ ಸೂಕ್ತ ದಿನಾಂಕ ನಿಗದಿ ಪಡಿಸುವೆ ಎಂದು ಮುಖ್ಯಮಂತ್ರಿ ಭರವಸೆ ನೀಡಿದ್ದಾರೆ ಎಂದು ತಿಳಿದು ಬಂದಿದೆ.

**ಪಡೆದುಕೊಳ್ಳುವುದು ಹೇಗೆ:** ಪ್ರಸ್ತುತ ಈ ಮೀಸಲು ಸೌಲಭ್ಯ ಕೇಂದ್ರ ಸರ್ಕಾರದ ಶಿಕ್ಷಣ ಸಂಸ್ಥೆ ಹಾಗೂ ಉದ್ಯೋಗಾವಕಾಶಗಳಲ್ಲಿ ಜಾರಿಯಲ್ಲಿದೆ. ಇದನ್ನೂ ಪಡೆದುಕೊಳ್ಳಲು ತಹಸೀಲ್ದಾರ್ ಹಾಗೂ ಇತರ ಸಂಬಂಧಿತ ಪ್ರಾಧಿಕಾರಗಳಿಂದ ಅದಾಯ, ಆಸ್ತಿ ಪ್ರಮಾಣಪತ್ರವನ್ನು ಪಡೆದುಕೊಂಡೂ ಸಲ್ಲಿಸಬೇಕಾಗುತ್ತದೆ. ಬೇರೆ ಮೀಸಲಿಗೆ ಇರುವಂತೆ ವಯೋಮಿತಿ ಹಾಗೂ ಇತರ ಅರ್ಹತೆಗಳ ವಿನಾಯ್ತಿಗೆ ಈ ಮೀಸಲಿನಲ್ಲಿ ಸದ್ಯಕ್ಕೆ ಅವಕಾಶವಿಲ್ಲ.

ಆಧಾರ: ಪ್ರಜಾವಾಣಿ, ದಿನಾಂಕ:09.11.2022

## 46. ಅತಂತ್ರರಿಗೆ ಅಮೃತಕಾಲ

ನಿಲ್ಲಲೊಂದು ಶಾಶ್ವತ ನೆಲೆ, ತಲೆ ಮೇಲೊಂದು ಸೂರಿಲ್ಲ ಅತಂತ್ರ ಬದುಕಿಗೆ ಮುಕ್ತಿ ಸಿಗುವ ಅಮೃತ ಕಾಲ ಸಮೀಪಿಸಿದೆ. ತಾಂಡಾ, ದೊಡ್ಡಿ, ಗೊಲ್ಲರಹಟ್ಟಿಗಳನ್ನು ಕಂದಾಯ ಗ್ರಾಮಗಳೆಂದು ಘೋಷಿಸಿ, ಖಾಸಗಿ ಜಮೀನಿನಲ್ಲಿ ತಾತ್ಕಾಲಿಕ ಬದುಕು ಕಟ್ಟಿಕೊಂಡ ಅಲೆಮಾರಿ ಕುಟುಂಬಗಳಿಗೆ ಹಕ್ಕುಪತ್ರ ವಿತರಿಸುವ ಮೂಲಕ ನೆಲೆ ಕಲ್ಪಿಸಲು ರಾಜ್ಯ ಸರ್ಕಾರ ದೃಢ ಹೆಜ್ಜೆ ಇರಿಸಿದೆ.

ನಿಯಮಾನುಸಾರ ಕ್ರಮವಹಿಸಿದ ನಂತರ ತಾಂತ್ರಿಕ ಕಾರಣಗಳಿಗೆ ವಿಳಂಬ ಮಾಡದೆ, ಹಕ್ಕುಪತ್ರ ವಿತರಣೆ ಹಾಗೂ ಕಂದಾಯ ಗ್ರಾಮ ಘೋಷಣೆ ಪ್ರಕ್ರಿಯೆಗಳನ್ನು ಏಕಕಾಲಕ್ಕೆ ನಿಭಾಯಿಸುವಂತೆ ಜಿಲ್ಲಾಡಳಿತಗಳಿಗೆ ಸರ್ಕಾರ ಸೂಚಿಸಿದೆ. ಜೀವನೋಪಾಯಕ್ಕೆ ಅವಲಂಬಿತ ಕಸುಬು ನೆಚ್ಚಿಕೊಂಡು ಊರೂರು ಅಲೆದು, ಸರ್ಕಾರಿ ಅಥವಾ ಖಾಸಗಿ ಜಮೀನಿನಲ್ಲಿ ತಾತ್ಪೂರ್ತಿಕ ವಸತಿ ಕಂಡುಕೊಂಡಿರುವ ನಿವಾಸಿಗಳಿಗೆ ಸುಭದ್ರ, ಸ್ವಾಭಿಮಾನದ ಬದುಕು ಕಲ್ಪಿಸುವ ಉದ್ದೇಶಿತ ಕಂದಾಯ ಗ್ರಾಮ ಘೋಷಣೆ ಪೂರ್ವ ಕಸರತ್ತು ಚುರುಕುಗೊಂಡಿದೆ. ಸ್ವಾತಂತ್ರ್ಯದ ಅಮೃತ ಮಹೋತ್ಸವ ಆಚರಿಸಿಯಾಗಿದ್ದು, ಸದ್ಯಕ್ಕೆ ಅಮೃತ ಕಾಲ ಚಾಲ್ತಿಯಲ್ಲಿದೆ.

ಬಹುವರ್ಷಗಳ ಕಂದಾಯ ಗ್ರಾಮದ ಕನಸು ನನಸಾಗಿಸಲು ಸರ್ಕಾರ ನಿರ್ಧರಿಸಿದೆ. ಈ ಸಂದರ್ಭದಲ್ಲಿ ಸಾವಿರಾರು ಅಲೆಮಾರಿ ಕುಟುಂಬ ವಾಸವಿರುವ ಜಾಗದ ಹಕ್ಕುಪತ್ರ ನೀಡಿ ವಿಶೇಷ ನೋದಂಣಿ ಅಭಿಯಾನ ನಡೆಸಲು ಚಿಂತನೆ ನಡೆಸಿದೆ. ಈಗಾಗಲೇ ಸಾವಿರಾರು ತಾಂಡಾ, ಗೊಲ್ಲರಹಟ್ಟಿ,

ದೊಡ್ಡಿ ಮುಂತಾದವುಗಳನ್ನು ಗುರುತಿಸಿದೆ. 2016ರಿಂದ ನಡೆದಿರುವ ಸಮೀಕ್ಷೆ ದಾಖಲೆಗಳ ವಿಭಜನೆ ಪ್ರಕ್ರಿಯೆ ಅಂತಿಮಘಟ್ಟಕ್ಕೆ ತಲುಪಿದೆ.

**ಮಾನದಂಡಗಳು:** ತಾಂಡಾ, ಹಟ್ಟಿಗಳನ್ನು ಕಂದಾಯ ಗ್ರಾಮಗಳೆಂದು ಘೋಷಿಸಲು 1,000 ಎಕರೆ ಜಮೀನು, 50 ಕುಟುಂಬ ಅಥವಾ 250 ಜನಸಂಖ್ಯೆ ಹೊಂದಿರಬೇಕು.

**ಏನೆಲ್ಲ ಪ್ರಯೋಜನಗಳು:** ಅಧಿಕೃತ ದಾಖಲೆಯಲ್ಲಿ ಸೇರ್ಪಡೆ, ಗ್ರಾಮಠಾಣ ವಿಸ್ತೀರ್ಣ ಗುರುತು. ಘೋಷಿತ ಕಂದಾಯ ಗ್ರಾಮದ ನಿವಾಸಿಗಳಿಗೆ 4,000 ಚದರ ಮೀಟರ್ ಮೀರದಂತೆ ಅಥವಾ ನೈಜ ಸ್ವಾಧೀನದ ನಿವೇಶನದ ಹಕ್ಕುಪತ್ರ ನೋಂದಣಿಗೆ ಅವಕಾಶ. ಒಡೆತನದ ನಿವೇಶನದಲ್ಲಿ ಮನೆ ಕಟ್ಟಿಕೊಳ್ಳಲು, ಬ್ಯಾಂಕ್‌ಗಳಲ್ಲಿ ಮನೆ ಸಾಲ, ರಾಜ್ಯ ಸರ್ಕಾರದ ವಿವಿಧ ಸವಲತ್ತುಗಳು ಲಭಿಸಲಿವೆ.

**ಯಾರಿಗೆ ಅನುಕೂಲ:** ತಾಂಡ, ಗೊಲ್ಲರಹಟ್ಟಿ, ನಾಯಕರಹಟ್ಟಿ , ಕುರುಬರಹಟ್ಟಿ, ಹಾಡಿ, ಮಜರೆ, ದೊಡ್ಡಿ, ಪಾಳ್ಯ ಕ್ಯಾಂಪ್, ಕಾಲೋನಿ ಇತ್ಯಾದಿ ಹೆಸರುಗಳಿಂದ ಗುರುತಿಸಲ್ಪಟ್ಟ ದಾಖಲೆ ರಹಿತ ಜನವಸತಿಗಳು.

**ಮಾರ್ಗಸೂಚಿ ಪ್ರಮುಖಾಂಶಗಳು:**

- ಕಂದಾಯ ಗ್ರಾಮಗಳಾಗಿ ಪರಿವರ್ತನೆ ಮಾನದಂಡಗಳನ್ವಯ ಜನವಸತಿಗಳ ಸರ್ವೆ ನಂಬರ್ ವಿಸ್ತೀರ್ಣಗಳನ್ನು ಗುರುತಿಸುವುದು
- ಭೂ ಸುಧಾರಣೆ ಕಾಯ್ದೆ 1961ರ ಕಲಂ 38–ಎ ಪ್ರಕಾರ ಆಯಾ ಜಿಲ್ಲಾಧಿಕಾರಿ ನಮೂನೆ–2ರಲ್ಲಿ ಅಧಿಸೂಚನೆ ಹೊರಡಿಸುವುದು.
- ಜಿಲ್ಲಾಧಿಕಾರಿ ಹಂತದಲ್ಲೇ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಸಾರ್ವಜನಿಕರ ಸಲಹೆ/ಆಕ್ಷೇಪಣೆ ಆಹ್ವಾನ
- ದಾಖಲೆ ರಹಿತ ಜನವಸತಿ ನೆಲೆಸಿರುವ ಖಾಸಗಿ ಜಮೀನಿನ ವಿಸ್ತೀರ್ಣಕ್ಕೆ ಮಾತ್ರ 2–ಇ ಅಧಿಸೂಚನೆ ಹೊರಡಿಸುವುದು. ಇಂತಹ ಜಾಗದಲ್ಲಿ ಸ್ವತ: ಭೂ ಮಾಲೀಕರೆ ಮನೆ ಕಟ್ಟಿಕೊಂಡಿದ್ದರೆ ಗ್ರಾಮಠಾಣ ವಿಸ್ತೀರ್ಣಕ್ಕೆ ಸೇರ್ಪಡೆ.
- ಜಿಲ್ಲಾಧಿಕಾರಿ ನಮೂನೆ–2 ಈ ಅಧಿಸೂಚನೆ ಹೊರಡಿಸಿದ ಒಂದು ವರ್ಷದೊಳಗೆ ಕೃಷಿ ಕಾರ್ಮಿಕ ಮಾಲೀಕತ್ವ ನೋಂದಣಿಗೆ ಸಹಾಯಕ ಆಯುಕ್ತ/ತಹಸೀಲ್ದಾರ್‌ಗೆ ಅರ್ಜಿ ಸಲ್ಲಿಸಬೇಕು.
- ಸ್ವೀಕೃತ ಸಲಹೆ ಆಕ್ಷೇಪಣೆಗಳನ್ನು ಜಿಲ್ಲಾಧಿಕಾರಿ ಪರಿಶೀಲಿಸಿ ಸೂಕ್ತ ಲಿಖಿತ ಆದೇಶದೊಂದಿಗೆ ಸಮ್ಮತಿ ಅಥವಾ ತಿರಸ್ಕಾರ.
- ದಾಖಲೆ ರಹಿತ ಜನವಸತಿ ಗ್ರಾಮಗಳಿಗೆ ತಹಸೀಲ್ದಾರ್ ತಂಡದ ಜೊತೆ ಖುದ್ದು ಭೇಟಿ ನೀಡಿದರೆ ಗ್ರಾಮವಾರು ತ್ವರಿತ ವಿಲೇವಾರಿಗೆ ಅನುಕೂಲ.
- ನೋಂದಣಿ ಅರ್ಜಿ ಸಲ್ಲಿಕೆ ಸಂಬಂಧ ವಿಚಾರಣೆಗೆ ವೈಯಕ್ತಿಕ, ಸಾರ್ವಜನಿಕ ನೋಟಿಸ್ ಏಕಕಾಲಕ್ಕೆ ನೀಡಬೇಕು.
- ವೈಯಕ್ತಿಕ ನೋಟಿಸ್ ಅರ್ಜಿದಾರ ಮತ್ತು ಭೂ ಮಾಲೀಕರಿಗೆ (ಎದುರುದಾರರು) ಜಾರಿ ಮಾಡುವುದು ಕಡ್ಡಾಯ.

- ಸಹಾಯಕ ಆಯುಕ್ತರಿಂದಲೇ ವಿಚಾರಣೆ, ಆದೇಶ, ಭೂ ಮಾಲೀಕರಿಗೆ ಪರಿಹಾರ ಪಾವತಿಸಲು ಕಾಯ್ದೆ ಅನ್ವಯ ತಹಸೀಲ್ದಾರ್ ಕ್ರಮವಹಿಸಬೇಕು.

**ಇನ್ನಷ್ಟು ಸ್ಪಷ್ಟತೆ ವೇಗ:** ತಾಂಡಾ, ಹಟ್ಟಿ ದೊಡ್ಡಿ, ಇತ್ಯಾದಿಗಳನ್ನು ಕಂದಾಯ ಗ್ರಾಮಗಳೆಂದು ಘೋಷಿಸಲು ಕಾಯ್ದೆ ಪ್ರಕಾರ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಕಂದಾಯ ಇಲಾಖೆ ಹಲವು ಸುತ್ತೋಲೆ ನೀಡಿದೆ. ಪೂರ್ವಭಾವಿ ಆಡಳಿತಾತ್ಮಕ ಪ್ರಕ್ರಿಯೆ ತ್ವರಿತಕ್ಕೆ ಮಾರ್ಗಸೂಚಿಯಲ್ಲಿ ಪ್ರಸ್ತಾಪಿತ ಅಂಶಗಳಿಗೆ ಸ್ಪಷ್ಟತೆ ನೀಡಿದ್ದು, ಜಿಲ್ಲಾಧಿಕಾರಿ, ಸಹಾಯಕ ಆಯುಕ್ತರು ಮತ್ತು ತಹಸೀಲ್ದಾರರ ಜವಾಬ್ದಾರಿ ತಿಳಿಸಲಾಗಿದೆ. ಕಂದಾಯ ಗ್ರಾಮಗಳ ರಚನಾ ಕೋಶ ನಿರ್ದೇಶಕ ಡಾ: ಎಂ.ಎನ್. ರಾಜೇಂದ್ರಪ್ರಸಾದ್ ಸುತ್ತೋಲೆಯಲ್ಲಿ 27 ಅಂಶಗಳನ್ನು ವಿವರಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:09.11.2022

## 47. 7ನೇ ವೇತನ ಆಯೋಗ ರಚನೆ

ವಿಧಾನಸಭೆ ಚುನಾವಣೆ ಸಮೀಪ ಇರುವ ಸಂದರ್ಭದಲ್ಲೇ ರಾಜ್ಯ ಸರ್ಕಾರ 7ನೇ ವೇತನ ಆಯೋಗ ರಚನೆ ಮಾಡುವ ಮೂಲಕ ಸರ್ಕಾರಿ ನೌಕರರಿಗೆ ಬಂಪರ್ ಕೊಡುಗೆ ನೀಡಿದೆ.

ಬಹುದಿನಗಳ ಬೇಡಿಕೆಯಂತೆ ನಿವೃತ್ತ ಮುಖ್ಯ ಕಾರ್ಯದರ್ಶಿ ಸುಧಾಕರ್‌ರಾವ್ ಅಧ್ಯಕ್ಷತೆಯಲ್ಲಿ 7ನೇ ವೇತನ ಆಯೋಗ ರಚನೆ ಮಾಡಲಾಗಿದೆ.

ರಾಜ್ಯ ಸರ್ಕಾರಿ ನೌಕರರಿಗೆ ವೇತನ ಮತ್ತಿತರ ಭತ್ಯೆಗಳನ್ನು ಪರಿಷ್ಕರಿಸಲು ಏಳನೇ ವೇತನ ಆಯೋಗ ರಚಿಸಬೇಕೆಂದು ಸರ್ಕಾರಿ ನೌಕರರ ಸಂಘ ಒತ್ತಾಯಿಸುತ್ತಲೇ ಬಂದಿತ್ತು. ಕಳೆದ ಸೆಪ್ಟೆಂಬರ್‌ನಲ್ಲಿ ನಡೆದ ರಾಜ್ಯ ಸರ್ಕಾರಿ ನೌಕರರ ದಿನಾಚರಣೆ ಹಾಗೂ ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲೂ ಮುಖ್ಯಮಂತ್ರಿಗಳು ಅಕ್ಟೋಬರ್ ತಿಂಗಳಲ್ಲಿ ಏಳನೇ ವೇತನ ಆಯೋಗ ರಚಿಸಲಾಗುವುದೆಂದು ಪ್ರಕಟಿಸಿದ್ದರು.

ವೇತನ ಆಯೋಗಕ್ಕೆ ವೇತನ ಪರಿಷ್ಕರಿಸಿ ಶಿಫಾರಸ್ಸ್ ಮಾಡಲು ನಾಲ್ಕು ತಿಂಗಳು ಕಾಲಾವಕಾಶ ಬೇಕಾಗುತ್ತದೆ. ನವೆಂಬರ್‌ನಲ್ಲಿ ಆಯೋಗ ರಚನೆಯಾದರೆ 2023ರ ಮಾರ್ಚ್ ಒಳಗೆ ಆಯೋಗ ವರದಿ ನೀಡಬಹುದು ಎಂದು ನಿರೀಕ್ಷಿಸಲಾಗುತ್ತಿದೆ. ರಾಜ್ಯದಲ್ಲಿ 7ನೇ ವೇತನ ಆಯೋಗ 2022ರ ಜುಲೈನಿಂದ ಜಾರಿಗೆ ಬರಬೇಕಾಗಿದೆ. ಸಮಾನ ಕೆಲಸಕ್ಕೆ ಸಮಾನ ವೇತನ ಎಂಬ ಬೇಡಿಕೆಯಾದ ಕೇಂದ್ರದ ಮಾದರಿ ವೇತನಕ್ಕಾಗಿ ನೌಕರರು ಒತ್ತಡ ತರುತ್ತಿದ್ದಾರೆ.

**ಉಳಿತಾಯ:** ರಾಜ್ಯದಲ್ಲಿ ಸರ್ಕಾರಿ ನೌಕರರ ಹುದ್ದೆ ಖಾಲಿಯಾದಂತೆ ಬೊಕ್ಕಸಕ್ಕೆ ಉಳಿತಾಯ ಸಹ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದೆ. ರಾಜ್ಯದಲ್ಲಿ 7,79,439 ಮಂಜೂರಾದ ಹುದ್ದೆಗಳಿವೆ. ಅದರಲ್ಲಿ 2,69,572 ಹುದ್ದೆ ಖಾಲಿ ಇವೆ. ಇದರಿಂದಾಗಿ ವರ್ಷಕ್ಕೆ ರೂ.8257 ಕೋಟಿಗಳಷ್ಟು ದೊಡ್ಡ ಮೊತ್ತ ಬದ್ಧ ವೆಚ್ಚಗಳಲ್ಲಿ ಉಳಿತಾಯವಾಗುತ್ತಿದೆ ಈ ಹಣವನ್ನು ಕೇಂದ್ರ ಸರ್ಕಾರದ ಮಾದರಿ ವೇತನಕ್ಕೆ ನೀಡಿ ಎಂಬ ಒತ್ತಾಯ ಕೇಳಿಬರುತ್ತಿದೆ.

ಕೇಂದ್ರ ಮಾದರಿ ವೇತನ ಜಾರಿ ಮಾಡಿದರೆ ವಾರ್ಷಿಕ ಸುಮಾರು ರೂ.7,500 ಕೋಟಿ ಹೆಚ್ಚಿನ ಮೊತ ವೆಚ್ಚವಾಗಲಿದೆ. ಗ್ರೇಡ್ ರೀತಿ ವೇತನ ಹಾಗೂ ಇತರೆ ಭತ್ಯೆ ನೀಡಿದರೆ ಆ ಮೊತ್ತ ರೂ.15 ಸಾವಿರ ಕೋಟಿ ಮೀರಲಿದೆ ಎಂಬುದು ಹಣಕಾಸು ಇಲಾಖೆ ಮೂಲಗಳ ಮಾಹಿತಿಯಾಗಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:10.11.2022

## 48. ರಾಜ್ಯದಲ್ಲಿದ್ದಾರೆ 5.09 ಕೋಟಿ ಮತದಾರರು

ಮುಂಬರುವ 2023ರ ಕರಡು ಮತದಾರರ ಪಟ್ಟಿಯನ್ನು ಚುನಾವಣಾ ಆಯೋಗವು ಬಿಡುಗಡೆ ಮಾಡಿದ್ದು, ಅದರನ್ವಯ ರಾಜ್ಯದಲ್ಲಿ ಒಟ್ಟು 5.09 ಕೋಟಿ ಮತದಾರರಿದ್ದಾರೆ. ಡಿಸೆಂಬರ್ 8ವರೆಗೆ ಆಕ್ಷೇಪಣೆ ಸಲ್ಲಿಸಲು ಅವಕಾಶ ನೀಡಲಾಗಿದೆ. 2023 ಜನವರಿ 5 ರಂದು ಅಂತಿಮ ಮತದಾರರ ಪಟ್ಟಿ ಪ್ರಕಟಿಸಲಾಗುತ್ತದೆ. ಸುದ್ದಿಗೋಷ್ಟಿಯಲ್ಲಿ ಮುಖ್ಯ ಚುನಾವಣಾಧಿಕಾರಿ ಮನೋಜ್ ಕುಮಾರ್ ಮೀನಾ ಈ ವಿಷಯ ತಿಳಿಸಿದ್ದಾರೆ.

ಕರಡು ಮತದಾರರ ಪಟ್ಟಿಯ ಪ್ರಕಾರ ಒಟ್ಟು 5,09,01,662 ಮತದಾರರಿದ್ದಾರೆ. ಇದರಲ್ಲಿ 5,08,53845 ಸಾಮಾನ್ಯ ಮತದಾರರಿದ್ದು, 46,817 ಸೇವಾ ಮತದಾರರಿದ್ದಾರೆ. ಸಾಮಾನ್ಯ ಮತದಾರರಲ್ಲಿ 2,56,39,736 ಪುರುಷರು ಮತ್ತು 2,52,09,619 ಮಹಿಳೆಯರು ಮತ್ತು 4,490 ಇತರೆ ಮತದಾರರಿದ್ದಾರೆ. ನವೆಂಬರ್–9 ಆಕ್ಷೇಪಣೆ ಸಲ್ಲಿಸಲು ಅವಕಾಶ ನೀಡಲಾಗಿದೆ. ಡಿಸೆಂಬರ್ 12ರವರೆಗೆ ಆಕ್ಷೇಪಣೆಗಳನ್ನು ಸಲ್ಲಿಕೆ ಮಾಡಬಹುದಾಗಿದೆ. ಡಿಸೆಂಬರ್ 26 ರಂದು ಆಕ್ಷೇಪಣೆಗಳ ವಿಲೇವಾರಿ ಮಾಡಲಾಗುತ್ತದೆ. 2023ರ ಜನವರಿ 5 ರಂದು ಮತದಾರರ ಪಟ್ಟಿಯ ಅಂತಿಮ ಪ್ರಕಟಣೆ ಮಾಡಲಾಗುತ್ತದೆ. ನವೆಂಬರ್ 12, 20 ಮತ್ತು ಡಿಸೆಂಬರ್ 3 ಮತ್ತು 4 ರಂದು ವಿಶೇಷ ಪ್ರಚಾರ ಕೈಗೊಳ್ಳಲಾಗುವುದು ಎಂದು ಮಾಹಿತಿ ನೀಡಿದರು.

ರಾಜ್ಯದ 224 ವಿಧಾನಸಭಾ ಕ್ಷೇತ್ರಗಳ ಪೈಕಿ ಬೆಂಗಳೂರು ದಕ್ಷಿಣ ವಿಧಾನಸಭಾ ಕ್ಷೇತ್ರದಲ್ಲಿ ಅತಿ ಹೆಚ್ಚು ಮತದಾರರು ಇದ್ದು 6,41,466 ಮತದಾರರಿದ್ದಾರೆ. ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ವಿಧಾನಸಭೆ ಕ್ಷೇತ್ರವು ಅತಿ ಕಡಿಮೆ 1,65,485 ಮತದಾರರನ್ನು ಹೊಂದಿದೆ. ಒಟ್ಟು 58,282 ಮತಗಟ್ಟೆಗಳ ಸಂಖ್ಯೆ ಇದೆ. ರಾಜ್ಯದಲ್ಲಿ ಒಟ್ಟು ಯುವ ಮತದಾರರ ಸಂಖ್ಯೆಯು 6,97,784 ರಷ್ಟಿದೆ. ಯುವ ಮತದಾರರ ಸಂಖ್ಯೆಯಲ್ಲಿ 2,95,860 ರಷ್ಟು ಹೆಚ್ಚಳವಾಗಿದೆ. 18–19ರ ವಯಸ್ಸಿನ ಯುವಕ ಯುವತಿಯರ ಹೆಸರುಗಳನ್ನು ಶೇ.100 ರಷ್ಟು ಮತದಾರರ ಪಟ್ಟಿಯಲ್ಲಿ ನೋಂದಾಯಿಸಲು ಹೆಚ್ಚಿನ ಪ್ರಚಾರ ಕೈಗೊಳ್ಳಲಾಗುತ್ತಿದೆ. ಮತದಾರರ ಪಟ್ಟಿಯಲ್ಲಿ ನೋಂದಣಿಯಾಗಿರುವ ಮತದಾರರು ಮೃತರಾಗಿದ್ದರೆ, ವಲಸೆ ಹೋಗಿದ್ದರೆ ಎರಡು ಕಡೆ ಹೆಸರುಗಳು ಇದ್ದರೆ ಅಂತಹ ಹೆಸರುಗಳನ್ನು ಮತದಾರರ ಪಟ್ಟಿಯಿಂದ ತೆಗೆದುಹಾಕಲು ಕ್ರಮ ಜರುಗಿಸಲಾಗುತ್ತಿದೆ ಎಂದರು.

ಮತದಾರರ ಹೆಸರು ಸೇರ್ಪಡೆಗೆ ಅರ್ಜಿ ನಮೂನೆ 6, ಸಾಗರೋತ್ತರ ಭಾರತೀಯ ಮತದಾರರಿಂದ ಮತದಾರರ ಪಟ್ಟಿಯಲ್ಲಿ ನಮೂನೆ–6ಎ ಅರ್ಜಿಯನ್ನು ಬಳಸಬೇಕು. ಮತದಾರರ ಪಟ್ಟಿಯಲ್ಲಿರುವ ಮತದಾರರು ಸ್ವಯಂಪ್ರೇರಿತರಾಗಿ ಆಧಾರ್ ಅಥವಾ ಯಾವುದಾದರೂ ಒಂದು ದಾಖಲೆಗಳನ್ನು ಜೋಡಣೆ ಮಾಡಿ ದೃಢೀಕರಿಸಲು ನಮೂನೆ–6 ಬಿ ಹೆಸರು ಸೇರ್ಪಡೆಯ ವಿರುದ್ಧ ಆಕ್ಷೇಪಣೆ, ಹೆಸರು ತೆಗೆದು ಹಾಕಲು ನಮೂನೆ–7, ವಿಧಾನಸಭಾ ಕ್ಷೇತ್ರದ ಒಳಗೆ/ಹೊರಗೆ ನಿವಾಸ ಬದಲಾವಣೆ, ತಿದ್ದುಪಡಿ ಮೊಬೈಲ್ ಸಂಖ್ಯೆ ಅಸ್ಪಷ್ಟ ಭಾವಚಿತ್ರ ಬದಲಿಸುವುದು. ಪಟ್ಟಿಯಲ್ಲಿ ಅಂಗವಿಕಲ ವ್ಯಕ್ತಿಯ ಗುರುತನ್ನು ನಮೂದು ಮಾಡಲು ನಮೂನೆ–8 ಅನ್ನು ಬಳಕೆ ಮಾಡಬೇಕು ಎಂದು ಹೇಳಿದರು.

**ವೋಟರ್ ಐಡಿಗೆ ಆಧಾರ್ ಜೋಡಣೆ ಕಡ್ಡಾಯವಲ್ಲ:** ಗುರುತಿನ ಚೀಟಿಯೊಂದಿಗೆ ಆಧಾರ್ ಜೋಡಣೆ ಮಾಡಬೇಕು ಎಂಬುದು ಕಡ್ಡಾಯವಲ್ಲ. ಆದರೆ, ಆಧಾರ್ ಜೋಡಣೆಯ ಕುರಿತು ಅರಿವು ಮೂಡಿಸುವ ಕೆಲಸ ಮಾಡಲಾಗುತ್ತಿದೆ ಎಂದು ಮುಖ್ಯ ಚುನಾವಣಾಧಿಕಾರಿ ಮನೋಜ್ ಕುಮಾರ್ ಮೀನಾ ಸ್ಪಷ್ಟಪಡಿಸಿದ್ದಾರೆ. ಈವರೆಗೆ ಶೇ.68ರಷ್ಟು ಗುರುತಿನ ಚೀಟಿಯೊಂದಿಗೆ ಆಧಾರ್ ಮಾಡಲಾಗಿದೆ. ಶೇ.100 ರಷ್ಟು ಮಾಡಬೇಕು ಎಂಬ ಉದ್ದೇಶವು ಆಯೋಗಕ್ಕೆ ಇದೆ. ಬೆಂಗಳೂರಲ್ಲಿ ಕಡಿಮೆ ಪ್ರಮಾಣದಲ್ಲಿ ಆಗಿದ್ದು, ಶೇ.28ರಷ್ಟು ಆಗಿದೆ. ಆದರೆ, ಆಧಾರ್ ಜೋಡಣೆ ಕಡ್ಡಾಯವಲ್ಲ. ಒಂದು ವೇಳೆ ಯಾರಾದರೂ ಜೋಡಣೆ ಮಾಡಲೇಬೇಕು ಎಂದು ಒತ್ತಾಯಿಸಿದರೆ 1950ಗೆ ಕರೆ ಮಾಡಿ ದೂರು ನೀಡಬಹುದಾಗಿದೆ.

ಮಾರ್ಚ್ 31ರೊಳಗೆ ಜನತೆಯಲ್ಲಿ ಅರಿವೂ ಮೂಡಿಸಿ ಆಧಾರ್ ಜೋಡಣೆಯ ಗುರಿಯನ್ನು ಇಟ್ಟುಕೊಳ್ಳಲಾಗಿದೆ ಎಂದು ಹೇಳಿದರು.

ಆಧಾರ: ಕನ್ನಡ ಪ್ರಭ, ದಿನಾಂಕ:10.11.2022

## 49. ರೈತರಿಗೆ ರೂ.24000 ಕೋಟಿ ಸಾಲಕ್ಕೆ ತೀರ್ಮಾನ

ರಾಜ್ಯದ 32 ಲಕ್ಷ ರೈತರಿಗೆ ರೂ.24 ಸಾವಿರ ಕೋಟಿ ರೂಪಾಯಿ ಸಾಲ ನೀಡುವ ತೀರ್ಮಾನವನ್ನು ನಮ್ಮ ಸರ್ಕಾರ ತೆಗೆದುಕೊಂಡಿದೆ. ಇದು ನಮ್ಮ ಸರ್ಕಾರ ಸಹಕಾರ ಕ್ಷೇತ್ರಕ್ಕೆ ಮತ್ತು ರೈತರಿಗೆ ಕೊಟ್ಟ ಕೊಡುಗೆಯಾಗಿದೆ ಎಂದು ಮುಖ್ಯಮಂತ್ರಿಯವರು ಹೇಳಿದರು.

ಸೇಡಂ ಪಟ್ಟಣದ ತಾಲ್ಲೂಕು ಕ್ರೀಡಾಂಗಣದಲ್ಲಿ ಆಯೋಜಿಸಿದ್ದ 69ನೇ ಅಖಿಲ ಭಾರತ ಸಹಕಾರ ಸಪ್ತಾಹ 2022 ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ರೈತನ ಬದುಕು ಹಸನಾಗಬೇಕಾದರೆ ರೈತನಿಗೆ ಸ್ಕೇಲ್ ಆಫ್ ಫೈನಾನ್ಸ್ ಆಧಾರದಲ್ಲಿ ಬೆಳೆದ ಬೆಳೆಗೆ ದರ ನಿರ್ಧಾರವಾಗಬೇಕು. ಆ ಮೂಲಕ ರೈತ ಸ್ವಾವಲಂಭಿಯಾಗಬೇಕು ಸ್ವಾಭಿಮಾನ ಇಲ್ಲದಲ್ಲಿ ಆತ್ಮಾಭಿಮಾನವಿಲ್ಲ. ಆತ್ಮಾಭಿಮಾನವಿಲ್ಲದಲ್ಲಿ ಸಾಧನೆಯಿಲ್ಲ. ಈ ನಿಟ್ಟಿನಲ್ಲಿ ಸರ್ಕಾರ ಜಾರಿಗೆ ತಂದಿರುವ ಕಾಯಕ ಯೋಜನೆಗಳ ಅನುಷ್ಠಾನವಾಗಬೇಕು. ರೈತರಿಗೆ ಅಲ್ಪಾವಧಿ ಸಾಲ ವಿತರಣೆಯಾಗಬೇಕು ಎಂದರು. ಮನುಷ್ಯ ಸಂಘ ಜೀವಿ ಮನುಷ್ಯನ ಜೀವನದ ಪ್ರತಿ ಹಂತವೂ ಸಮಾಜದೊಂದಿಗಿನ ಪರಸ್ಪರ ಸಹಕಾರದ ಮೇಲೆ ಅವಲಂಭನೆಯಾಗಿದೆ. ಸಹಕಾರವು ಮನುಕುಲದ ಸಹಜ ಹಾಗೂ ನೈಜ ಧರ್ಮ. ನಾವು ಭಾರತೀಯರು ಎನ್ನುವುದೇ ನಮ್ಮ ಅಸ್ತಿತ್ವ. ಇಡೀ ನಮ್ಮ ಬದುಕೆ ಸಹಕಾರದ ಮೇಲೆ ಆಧಾರವಾಗಿದೆ ಸಹಕಾರದಿಂದ ಏನನಾದರೂ ಸಾಧಿಸಬಹುದು ಎಂದರು.

ಮುಚ್ಚುವ ಹಂತದಲ್ಲಿದ್ದ ಕಲಬುರಗಿ ಯಾದಗಿರಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಪುನಶ್ಚೇತನಗೊಳಿಸಿ ಇಲ್ಲಿಯವರೆಗೆ 2 ಲಕ್ಷ ರೈತರಿಗೆ ಸಾಲ ಕೊಟ್ಟ ಬ್ಯಾಂಕಿನ ಅಧ್ಯಕ್ಷ ಸೇಡಂ ಶಾಸಕ ರಾಜಕುಮಾರ ಪಾಟೀಲ ತೇಲ್ಕೂರ್ ಅವರು ರೈತರ ಬದುಕು ಉದ್ಧಾರದ ಕೆಲಸ ಮಾಡಿದ್ದಾರೆ. ಇದು ಬಹು ದೊಡ್ಡ ಕೊಡುಗೆ ಎಂದು ಶಾಸಕ ತೇಲ್ಕೂರ್ ಕೆಲಸಗಳನ್ನು ಶ್ಲಾಘಿಸಿದರು. ಕಾರ್ಯಕ್ರಮದಲ್ಲಿ ರಾಜ್ಯ ಸಹಕಾರ ಮಹಾಮಂಡಲದ ಅಧ್ಯಕ್ಷ ಜಿ.ಟಿ. ದೇವೇಗೌಡ, ಕಲಬುರಗಿ ಜಿಲ್ಲಾ ಉಸ್ತುವಾರಿ ಸಚಿವ ಮುರುಗೇಶ್ ನಿರಾಣಿ, ಕೇಂದ್ರ ಸಚಿವ ಭಗವಂತ ಖೂಬಾ, ಸಂಸದ ಉಮೇಶ್ ಜಾಧವ, ಸೇಡಂ ಶಾಸಕ ಹಾಗೂ ಡಿಸಿಸಿ ಬ್ಯಾಂಕ್ ಅಧ್ಯಕ್ಷ ರಾಜಕುಮಾರ ಪಾಟೀಲ ತೇಲ್ಕೂರ್ ಮಾತನಾಡಿದರು.

ಇದೇ ವೇಳೆ ಸೇಡಂ ಶಾಸಕ ರಾಜಕುಮಾರ್ ಪಾಟೀಲ್ ತೇಲ್ಕೂರ್ ಸೇರಿದಂತೆ ಹದಿನಾಲ್ಕು ಮಂದಿಗೆ ಸಹಕಾರ ರತ್ನ ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು

ಕಲ್ಯಾಣ ಕರ್ನಾಟಕ ಮಾನವ ಸಂಪನ್ಮೂಲ ಕೃಷಿ ಹಾಗೂ ಸಾಂಸ್ಕೃತಿಕ ಸಂಘದ ಅಧ್ಯಕ್ಷ ಬಸವರಾಜ ಪಾಟೀಲ ಸೇಡಂ ಶಾಸಕರಾದ ರಾಜುಗೌಡ, ಬಾಬುರಾವ್ ಚಿಂಚನಸೂರ, ಬಸವರಾಜ ಮತ್ತಮೂಡ, ಡಾ:ಅವಿನಾಶ ಜಾಧವ ಸೇರಿದಂತೆ ಅನೇಕರು ಉಪಸ್ಥಿತರಿದ್ದರು.

ಆಧಾರ: ಕನ್ನಡ ಪ್ರಭ, ದಿನಾಂಕ:15.11.2022

## 50. ಇಂದಿನಿಂದ ಬೆಂಗಳೂರು ಟೆಕ್ ಶೃಂಗಸಭೆ

ರಜತ ಸಂಭ್ರಮದಲ್ಲಿರುವ ಏಷ್ಯಾದ ಅತೀದೊಡ್ಡ ಟೆಕ್ ಶೃಂಗಸಭೆ ಆರಂಭವಾಗುತ್ತಿದ್ದು ಪ್ರಧಾನಿ ನರೇಂದ್ರ ಮೋದಿಯವರ ದಿಕ್ಸೂಚಿ ಭಾಷಣ ಇರಲಿದೆ.

ಇಡೀ ಜಗತ್ತಿನ ತಂತ್ರಜ್ಞಾನದ ಬೆಳವಣಿಗೆಯನ್ನು ವರ್ಷ ವರ್ಷವೂ ಅನಾವರಣಗೊಳಿಸುತ್ತಾ ಬಂದಿರುವ ಬೆಂಗಳೂರು ತಂತ್ರಜ್ಞಾನ ಶೃಂಗದ ರಜತೋತ್ಸವ ಸಮಾವೇಶವು ಅರಮನೆ ಮೈದಾನದಲ್ಲಿ

ನಡೆಯಲಿದೆ. ಸಮಾವೇಶದ ಸಿದ್ಧತೆಗಳನ್ನು ಐಟಿ.ಬಿಟಿ ಸಚಿವ ಡಾ.ಸಿ.ಎನ್. ಅಶ್ವತ್ಥನಾರಾಯಣ ಪರಿಶೀಲಿಸಿ ಬಳಿಕ ಸುದ್ಧಿಗಾರರೊಂದಿಗೆ ವಿವಿಧ ಮಾಹಿತಿ ಹಂಚ್ಚಿಕೊಂಡರು.

ಮೂರು ದಿನ ಭೌತಿಕ ಸ್ವರೂಪದಲ್ಲಿ ನಡೆಯುವ ಸಮಾವೇಶವು ಕನಿಷ್ಠ 9 ಒಡಂಬಡಿಕೆಗಳಿಗೆ (ಎಂಒಯು) ಹಾಗೂ 20ಕ್ಕೂ ಹೆಚ್ಚು ಉತ್ಪನ್ನಗಳ ಬಿಡುಗಡೆಗೆ ಸಾಕ್ಷಿಯಾಗಲಿದೆ. ಬೆಳ್ಳಿ ಹಬ್ಬದ ಅಂಗವಾಗಿ ಮುಖ್ಯಮಂತ್ರಿಯವರು ಸ್ಮರಣಿಕೆ ಬಿಡುಗಡೆ ಮಾಡಲಿದ್ದಾರೆ ಎಂದು ವಿವರಿಸಿದರು.

75 ಗೋಷ್ಠಿಗಳು ನಡೆಯಲಿವೆ. ಐಒಟಿ, ಡೀಪ್ ಟೆಕ್ ಬಯೋಟೆಕ್, ಸ್ಟಾರ್ಟಪ್ ಜಿಐಎ 1 ಹಾಗೂ 2 ವಿಭಾಗಗಳಡಿ ಗೋಷ್ಠಿಗಳು ವಿಂಗಡಗೊಂಡಿವೆ. ಕೃತಕ ಬುದ್ಧಿಮತ್ತೆ ಬಿಗ್ ಡೇಟಾ ಸಮಿಕಂಡಕ್ಟರ್, ಮೆಷೀನ್ ಲರ್ನಿಂಗ್ 5ಜಿ, ರೋಬೋಟೆಕ್ಸ್ ಫಿನ್‌ಟೆಕ್, ಜೀನ್ ಎಡಿಟಿಂಗ್, ಮೆಡಿಟೆಕ್ ಸ್ಪೇಸ್ ಟೆಕ್, ಜೈವಿಕ ಇಂಧನ ಸುಸ್ಥಿತರೆ, ಇ– ಸಂಚಾರ ಹೀಗೆ ವಿವಿಧ ಪ್ರವರ್ಧಮಾನಕ್ಕೆ ಬರುತ್ತಿರುವ ತಾಂತ್ರಿಕ ಬೆಳವಣಿಕೆಗಳ ಬಗ್ಗೆ ಸಂವಾದಗಳು ನಡೆಯಲಿವೆ. ಜೆಐಎ ವಿಭಾಗದಲ್ಲಿ ಜಪಾನ್, ಫಿನ್ಲೆಂಡ್, ನೆದರ್ಲ್ಯಾಂಡ್, ಡೆನ್ಮಾರ್ಕ್, ಸ್ವೀಡನ್, ಸ್ವಿಜರ್ಲ್ಯಾಂಡ್, ಜರ್ಮನಿ, ಆಸ್ಟ್ರೇಲಿಯಾ, ಅಮೇರಿಕ ಲಿತುವೇನಿಯ, ಕೆನಡಾ ಸೇರಿ 15ಕ್ಕೂ ಹೆಚ್ಚು ರಾಷ್ಟ್ರಗಳು ತಮ್ಮ ತಾಂತ್ರಿಕ ಪ್ರಗತಿಯ ಬಗ್ಗೆ ಗಮನ ಸೆಳೆಯಲಿವೆ. ಅಲ್ಲದೆ, ಭಾರತ ಉದ್ಯಮಗಳೊಂದಿಗೆ ತಾವು ಹೊಂದಬಯಸುವ ಸಹಭಾಗಿತ್ವದ ಬಗ್ಗೆ ಮನವರಿಕೆ ಮಾಡಿಕೊಡಲಿವೆ ಎಂದು ಅಶ್ವತ್ಥನಾರಯಣ ವಿವರಿಸಿದರು.

ಉದ್ಘಾಟನಾ ಕಾರ್ಯಕ್ರಮದಲ್ಲಿ ಸಂಯುಕ್ತ ಅರಬ್ ಸಂಸ್ಥಾನದ ಅರ್ಟಿಫಿಶಿಯಲ್ ಇಂಟೆಲಿಜೆನ್ಸ್ ಸಹಾಯಕ ಸಚಿವ ಒಮರ್ ಬಿನ್ ಸುಲ್ತಾನ್ ಅಲ್ ಒಲಾಮಾ ಆಸ್ಟ್ರೇಲಿಯಾದ ವಿದೇಶಾಂಗ ಸಹಾಯಕ ಸಚಿವ ಟಿಮ್ ವ್ಯಾಟ್ಸ್ ಫಿನ್ಲೆಂಡ್‌ನ ವಿಜ್ಞಾನ ಸಚಿವ ಪೆಟ್ರಿ ಹಾನ್ನೂನೆನ್, ಭಾರತದ ಪ್ರಪ್ರಥಮ ಯೂನಿಕಾರ್ನ್ ಕಂಪನಿ ಇಮ್ಮೊಬಿಯ ಸಂಸ್ಥಾಪಕ ನವೀನ್ ತೆವಾರಿ ಫ್ರಾನ್ಸ್ ಅಧ್ಯಕ್ಷ ಇಮ್ಯಾನ್ಯುಯೆಲ್ ಮ್ಯಾಕ್ರೋನ್ (ವರ್ಚುವಲ್) ಮತ್ತು ಅಮೇರಿಕದ ಕಿಂಡ್ರಿಲ್ ಕಂಪನಿಯ ಸಿಇಒ ಮಾರ್ಟಿನ್ ಶ್ರೋಟರ್ ಭಾಗವಹಿಸುವರು ಎಂದು ಮಾಹಿತಿ ನೀಡಿದರು.

ಇಲಾಖೆಯ ನಿರ್ದೇಶಕಿ ಮೀನಾ ನಾಗರಾಜ್, ಸಮಾವೇಶವನ್ನು ನಿರ್ವಹಿಸುವ ಎಂಎಂ ಆಕ್ಟಿವ್‌ನ ಜಗದೀಶ್ ಪಟಂಕರ್ ಇತರರಿದ್ದರು.

**575ಕ್ಕೂ ಹೆಚ್ಚು ಪ್ರದರ್ಶಕರು ಭಾಗಿ:** 575ಕ್ಕೂ ಹೆಚ್ಚು ಪ್ರದರ್ಶಕರು ಬೆಂಗಳೂರು ಟೆಕ್ ಸಮಿಟ್‌ನಲ್ಲಿ ಭಾಗವಹಿಸುತ್ತಿದ್ದಾರೆ. ದೇಶದ 16 ವಿವಿಧ ರಾಜ್ಯಗಳ ಸ್ಟಾರ್ಟಪ್‌ಗಳು ಪಾಲ್ಗೊಳ್ಳುತ್ತಿರುವುದು ಈ ಬಾರಿಯ ವಿಶೇಷ, 350ಕ್ಕೂ ಹೆಚ್ಚು ಅಂತರರಾಷ್ಟ್ರೀಯ ಪರಿಣತರು ತಂತ್ರಜ್ಞಾನದ ಮಜಲುಗಳ ಬಗ್ಗೆ ಬೆಳಕು ಚೆಲ್ಲಲಿದ್ದಾರೆ. 5000 ಕ್ಕಿಂತ ಹೆಚ್ಚು ಉದ್ಯಮಿಗಳು ಪಾಲ್ಗೊಳ್ಳುತ್ತಿದ್ದಾರೆ. ಮೂರು ದಿನವೂ ಮಧ್ಯಾಹ್ನ 2 ಗಂಟೆಯಿಂದ ಸಂಜೆ 6 ಗಂಟೆಯವರೆಗೆ ಸಾರ್ವಜನಿಕರಿಗೆ ಮುಕ್ತ ಪ್ರವೇಶ ಇರುತ್ತದೆ. ತಂತ್ರಜ್ಞಾನ ಕ್ಷೇತ್ರದ ಬೆಳವಣಿಗೆಗಳನ್ನು ಖುದ್ದು ನೋಡಲು ಅನುಕೂಲ ಕಲ್ಪಿಸುವುದು ಇದರ ಉದ್ದೇಶ ಎಂದು ಅಶ್ವತ್ಥನಾರಾಯಣ ತಿಳಿಸಿದರು.

ಭಾರತ ಸರ್ಕಾರದ ಪ್ರಧಾನ ವೈಜ್ಞಾನಿಕ ಸಲಹೆಗಾರ ಪ್ರೊ ಅಜಯ್ ಕೆ ಸೂದ್ ಮೊದಲ ದಿನ ಸಂವಾದಗೋಷ್ಠಿ ನಡೆಸಿಕೊಡುವರು. ಐಟಿ–ಬಿಟಿ ಇಲಾಖೆಯು ಸಾಫ್ಟ್‌ವೇರ್ ಟೆಕ್ನಾಲಜಿ ಪಾರ್ಕ್ಸ್ ಆಫ್ ಇಂಡಿಯಾ (ಎಸ್‌ಟಿಪಿಐ) ಸಹಯೋಗದಲ್ಲಿ ಸಮಾವೇಶವನ್ನು ಆಯೋಜಿಸಲಾಗಿದೆ. ಸಮಾವೇಶವು ಭೌತಿಕ ಸ್ವರೂಪದಲ್ಲಿ ನಡೆಯುತ್ತಿದ್ದರೂ ಎಲ್ಲ ಗೋಷ್ಠಿಗಳನ್ನು ಜಾಲತಾಣಗಳ ಮೂಲಕ ನೇರವಾಗಿ ಬಿತ್ತರಿಸುವ ವ್ಯವಸ್ಥೆ ಮಾಡಲಾಗಿದೆ.

ಇ.ವಿ. ರಮಣರೆಡ್ಡಿ ಐಟಿ–ಬಿಟಿ ಇಲಾಖೆ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ

ಆಧಾರ: ವಿಜಯವಾಣಿ, ದಿನಾಂಕ:16.11.2022

## 51. ರಾಜ್ಯದಲ್ಲಿ 6 ನವ ನಗರಗಳು

ರಾಜ್ಯದಲ್ಲಿ ಉದ್ಯಮಗಳಿಗೆ ಅನುಕೂಲಕರ ವಾತಾವರಣ ಸೃಷ್ಟಿಸಿಕೊಡುವ ಉದ್ದೇಶದಿಂದ ರಾಜ್ಯದ ಆರು ಕಡೆ ಹೊಸ ನಗರ ಸ್ಥಾಪನೆ ಮಾಡಲಾಗುವುದು ಎಂದು ಮುಖ್ಯಮಂತ್ರಿಯವರು ಹೇಳಿದರು.

ಮೂರು ದಿನಗಳ ಬೆಂಗಳೂರು ಟೆಕ್ ಶೃಂಗಸಭೆಗೆ ಚಾಲನೆ ನೀಡಿ ಮಾತನಾಡಿದ ಅವರು ಬೆಂಗಳೂರು ಹೊರಭಾಗದ ಜಿಲ್ಲೆಗಳನ್ನು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಸರ್ಕಾರ ಎಲ್ಲ ರೀತಿಯ ಸಹಕಾರ ನೀಡುತ್ತಿದೆ. ಮೈಸೂರು, ಮಂಗಳೂರು, ಹುಬ್ಬಳ್ಳಿ, ಧಾರವಾಡ, ಬೆಂಗಳೂರು ಮತ್ತೊಂದು ಜಿಲ್ಲೆ ಸೇರಿ ಒಟ್ಟಾರೆ ಆರು ಕಡೆ ಹೊಸ ನಗರಗಳನ್ನು ಸ್ಥಾಪಿಸಲಾಗುತ್ತದೆ. ಮುಂದಿನ 10 ವರ್ಷದಲ್ಲಿ ನಗರೀಕರಣ ಹೆಚ್ಚಳವಾಗಲಿದೆ. ಭಾರತದಲ್ಲಿ ಶೇ.40 ರಷ್ಟು ನಗರೀಕರಣವಾಗಲಿದೆ. ಹೀಗಾಗಿ ಐಟಿ–ಬಿಟಿ ಕಂಪನಿಗಳು ಸರಳ ನಗರೀಕರಣ ಜೀವನ ನಿರ್ವಹಣೆಗೆ ತಂತ್ರಜ್ಞಾನ ಅಭಿವೃದ್ಧಿಪಡಿಸಬೇಕು ಎಂದು ಕರೆ ನೀಡಿದರು.

ಬೆಂಗಳೂರಿನ ಪಕ್ಕ ಹೊಸ ನಗರ ನಿರ್ಮಾಣ ಮಾಡಲಾಗುತ್ತದೆ. ಜ್ಞಾನ ವಿಜ್ಞಾನ ಹಾಗೂ ಟೆಕ್ ಸಿಟಿ ನಿರ್ಮಾಣ ಮಾಡಲಾಗುತ್ತಿದ್ದು, ಇದು ವಿಮಾನ ನಿಲ್ದಾಣಕ್ಕೆ ಹತ್ತಿರವಿರಲಿದೆ. ಆರು ತಿಂಗಳೊಳಗೆ ಈ ನಗರ ನಿರ್ಮಾಣದ ಬಗ್ಗೆ ಘೋಷಣೆ ಮಾಡಲಿದ್ದು, ಯೋಜನೆ ರೂಪಿಸಲಾಗುವುದು. ಸ್ಟಾರ್ಟಪ್‌ಗಳನ್ನು ಪ್ರೋತ್ಸಾಹಿಸಲು ಅನೇಕ ಕಾರ್ಯಕ್ರಮಗಳಿದ್ದು ಸರ್ಕಾರದ ವತಿಯಿಂದ ಇನ್ನಷ್ಟು ಕಾರ್ಯಕ್ರಮ ರೂಪಿಸಬೇಕಿದೆ. ಸ್ಟಾರ್ಟಪ್ ಪಾರ್ಕ್ ನಿರ್ಮಾಣಕ್ಕೆ ತೀರ್ಮಾನಿಸಿದ್ದು, ಇದನ್ನು ಕೂಡ ಆರು ತಿಂಗಳಲ್ಲಿ ಸ್ಥಾಪಿಸಲಾಗುವುದು ಎಂದರು.

ಮೈಸೂರು ಮಹಾರಾಜರು ವಿಜ್ಞಾನ ತಂತ್ರಜ್ಞಾನ ಶಿಕ್ಷಣಕ್ಕೆ ಸಾಕಷ್ಟು ಕೊಡುಗೆ ನೀಡಿದ್ದಾರೆ. ನಂತರ ಉದ್ಯಮಕ್ಕೆ ಆದ್ಯತೆ ನೀಡಿದ್ದಾರೆ. ಈಗ ಐಟಿ–ಬಿಟಿ ಬಂದಿದೆ. ಬೆಂಗಳೂರಿಗೆ ಬಂದವರು ಐಟಿ–ಬಿಟಿ ಕಂಪನಿಗಳಿಗೆ ಭೇಟಿ ನೀಡುತ್ತಾರೆ. ಮೊದಲು ಸಂಪತ್ತು ಉಳ್ಳವರ ಕಾಲವಿತ್ತು. ಈಗ ಜ್ಞಾನ ಇರುವವರ ಕಾಲ, ಬೆಂಗಳೂರಿಗೆ ಪ್ರತಿದಿನ 5000ಕ್ಕೂ ಹೆಚ್ಚು ಎಂಜಿನಿಯರ್‌ಗಳು ಬಂದು ಹೋಗುತ್ತಾರೆ. ಬೆಂಗಳೂರಿನಲ್ಲಿ ಸುಮಾರು 400 ಆರ್ ಆ್ಯಂಡ್ ಡಿ ಸೆಂಟರ್‌ಗಳಿವೆ. ಬಿಯಾಂಡ್ ಬೆಂಗಳೂರು ಸಾಕಾರಗೊಳಿಸಲು ಸರ್ಕಾರ ಎಲ್ಲ ರೀತಿಯ ಸಹಕಾರ ನೀಡಲಿದೆ ಎಂದರು.

**ಬೆಂಗಳೂರು ನಾವೀನ್ಯತೆಯ ತವರು–ಪ್ರಧಾನಿ ನರೇಂದ್ರ ಮೋದಿ ಬಣ್ಣನೆ:** ಬೆಂಗಳೂರು ತಂತ್ರಜ್ಞಾನ, ನಾವೀನ್ಯತೆ ಮತ್ತು ಸಮರ್ಥ ನಾಯಕತ್ವದ ತವರಾಗಿದೆ ಎಂದು ಪ್ರಧಾನಿ ನರೇಂದ್ರ ಮೋದಿ ಬಣ್ಣಿಸಿದರು. ಬೆಂಗಳೂರು ಟೆಕ್ ಶೃಂಗಸಭೆಯನ್ನು ವರ್ಚುವಲ್ ಮೂಲಕ ಉದ್ಘಾಟಿಸಿ ಮಾತನಾಡಿದ ಪ್ರಧಾನಿ ತಂತ್ರಜ್ಞಾನಕ್ಕೆ ಮಾನವೀಯ ಮತ್ತು ಪ್ರಜಾ ಸತ್ತಾತ್ಮಕ ಸ್ಪರ್ಶ ನೀಡುತ್ತಲೇ ಇರುವುದು ಭಾರತದ ಅನನ್ಯ ಸಾಧನೆಯಾಗಿದೆ. ಅದರಲ್ಲೂ ತಂತ್ರಜ್ಞಾನವು ನಮಗೆ ಬಡತನದ ವಿರುದ್ಧದ ಹೋರಾಟಕ್ಕೆ ಶಕ್ತಿಶಾಲಿ ಅಸ್ತ್ರವಾಗಿದೆ ಎಂದು ಹೇಳಿದರು.

**ಹೊಸೂರಿನಲ್ಲಿ ಆ್ಯಪಲ್ ಘಟಕ 60,000 ಜನರಿಗೆ ಉದ್ಯೋಗ:** ಬೆಂಗಳೂರು ಭಾರತದಲ್ಲಿ ಆ್ಯಪಲ್ ಐಫೋನ್ ಸ್ಮಾರ್ಟ್‌ಫೋನ್‌ಗಳನ್ನು ತಯಾರಿಸುವ ಅತಿದೊಡ್ಡ ಘಟಕವು ಬೆಂಗಳೂರು ಸಮೀಪದ ಹೊಸೂರಿನಲ್ಲಿ ಆರಂಭವಾಗಲಿದೆ ಎಂದು ಕೇಂದ್ರ ಟೆಲಿಕಾಂ ಮತ್ತು ಐಟಿ ಸಚಿವ ಅಶ್ವಿನಿ ವೈಷ್ಣವ್ ಹೇಳಿದ್ದಾರೆ. ಜನಾತಿಥ್ಯ ಗೌರವ್ ದಿವಸ್ ಕಾರ್ಯಕ್ರಮದಲ್ಲಿ ಈ ಬಗ್ಗೆ ಮಾಹಿತಿ ನೀಡಿದ ಸಚಿವರು ತಮಿಳುನಾಡಿಗೆ ಸೇರಿದ ಹೊಸೂರಿನಲ್ಲಿ ಭಾರತದ ಅತಿದೊಡ್ಡ ಉತ್ಪಾದನಾ ಘಟಕವನ್ನು ಆ್ಯಪಲ್ ಪ್ರಾರಂಭಿಸಲಿದೆ. ಈ ಒಂದೇ ಕಾರ್ಖಾನೆಯಲ್ಲಿ 60,000 ಜನರಿಗೆ ಉದ್ಯೋಗ ದೊರೆಯುತ್ತದೆ ಎಂದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:17.11.2022

## 52. ಕಳುವಾಯ್ತೇ ಗೌಪ್ಯತೆ

ಮತದಾರರ ಪಟ್ಟಿ ಪರಿಷ್ಕರಣೆ ಮಾಡಲು ಖಾಸಗಿ ಸಂಸ್ಥೆಗಳಿಗೆ ಅನುಮತಿ ನೀಡುವ ಮೂಲಕ ಬೆಂಗಳೂರಿನ 28 ವಿಧಾನಸಭಾ ಕ್ಷೇತ್ರಗಳ ಮತದಾರರ ಮಾಹಿತಿ ಕಳವು ಮಾಡಲಾಗಿದೆ ಎಂದು ಕಾಂಗ್ರೆಸ್ ಗಂಭೀರ ಆರೋಪ ಮಾಡಿದೆ.

ತುರ್ತು ಪತ್ರಿಕಾಗೋಷ್ಠಿ ನಡೆಸಿದ ರಾಜ್ಯ ಕಾಂಗ್ರೆಸ್ ಉಸ್ತುವಾರಿ ರಣದೀಪ್ ಸಿಂಗ್ ಸುರ್ಜೇವಾಲಾ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ, ಕೆಪಿಸಿಸಿ ಅಧ್ಯಕ್ಷ ಡಿ.ಕೆ. ಶಿವಕುಮಾರ ಈ ಘಟನೆಗೆ ಬೆಂಗಳೂರು ನಗರದ ಉಸ್ತುವಾರಿ ಹೊತ್ತಿರುವ ಮುಖ್ಯಮಂತ್ರಿಯವರು ಕೂಡಲೇ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಬೇಕು ಅವರ ವಿರುದ್ಧ ಎಫ್ಐಆರ್ ದಾಖಲಾಗಿ ಅವರ ಬಂಧನವಾಗಬೇಕು. ಈ ಮತದಾರರ ಮಾಹಿತಿ ಕಳವು ಪ್ರಕರಣದ ಬಗ್ಗೆ ಕರ್ನಾಟಕ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿಗಳ ನೇತೃತ್ವದಲ್ಲಿ ಉನ್ನತ ಮಟ್ಟದ ತನಿಖೆ ನಡೆಸಬೇಕು ಎಂದು ಆಗ್ರಹಿಸಿದ್ದಾರೆ.

ಇದೊಂದು ಹಗರಣವಾಗಿದ್ದು, ಮತದಾರರ ಮಾಹಿತಿ ಕಳವು ಮಾಡಿ ಮಾರಾಟ ಮಾಡಲಾಗಿದೆ. ಮತದಾರರ ಪಟ್ಟಿ ಪರಿಷ್ಕರಣೆಯ ಗುತ್ತಿಗೆ ಪಡೆದಿದ್ದ ಸಂಸ್ಥೆಗೆ ಸಚಿವರೊಬ್ಬರಿಗೆ ಹಾಗೂ ಇತರೆ ಪ್ರಭಾವಿಗಳ ನಂಟು ಇದೆ ಎಂದು ಕಾಂಗ್ರೆಸ್ ನಾಯಕರು ಸರ್ಕಾರದ ವಿರುದ್ಧ ಮುಗಿಬಿದ್ದಿದ್ದಾರೆ. ಅಷ್ಟೇ ಅಲ್ಲ, ಸಿದ್ದರಾಮಯ್ಯ ಅವರ ನೇತೃತ್ವದಲ್ಲಿ ಕಾಂಗ್ರೆಸ್ ನಿಯೋಗ ಚುನಾವಣಾಧಿಕಾರಿಗಳನ್ನು ಭೇಟಿ ಮಾಡಿ ಈ ಕುರಿತು ದೂರು ದಾಖಲಿಸಿ ಸಮಗ್ರ ತನಿಖೆಗೂ ಆಗ್ರಹಿಸಿದೆ. ಹಾಗೇಯೇ ಸರಣಿ ಟ್ವೀಟ್ ಮೂಲಕ ಮುಖ್ಯಮಂತ್ರಿ ಹಾಗೂ ಬಿಜೆಪಿ ಸರ್ಕಾರದ ವಿರುದ್ಧ ಕಾಂಗ್ರೆಸ್ ಆಕ್ರೋಶ ವ್ಯಕ್ತಪಡಿಸಿದ್ದು, ಸೂಕ್ತ ಉತ್ತರ ನೀಡಲು ಆಗ್ರಹಿಸಿದೆ.

**ಅನುಮತಿ ರದ್ದು:** ಕಾಂಗ್ರೆಸ್ ಆರೋಪದ ಬೆನ್ನಲ್ಲೇ ಚಿಲುಮೆ ಶೈಕ್ಷಣಿಕ ಸಾಂಸ್ಕೃತಿಕ ಹಾಗೂ ಗ್ರಾಮೀಣಾಭಿವೃದ್ಧಿ ಸಂಸ್ಥೆಗೆ ಮತದಾರರ ಪಟ್ಟಿ ವಿಶೇಷ ಪರಿಷ್ಕರಣೆ ಕಾರ್ಯಚಟುವಟಿಕೆಗೆ ನೀಡಿದ್ದ ಅನುಮತಿಯನ್ನು ಬಿಬಿಎಂಪಿ ರದ್ದುಪಡಿಸಿದೆ. ಸಂಸ್ಥೆ ಷರತ್ತು ಉಲ್ಲಂಘಿಸಿರುವುದರಿಂದ ರದ್ದುಪಡಿಸಲಾಗಿದೆ ಎಂದು ಹೇಳಲಾಗಿದೆ. ಆದರೆ, ಯಾವ ಷರತ್ತು ಉಲ್ಲಂಘನೆಯಾಗಿದೆ ಎಂಬುದರ ಮಾಹಿತಿ ಕೊಟ್ಟಿಲ್ಲ. ಜೊತೆಗೆ, ಬಿಬಿಎಂಪಿ ಅಧಿಕಾರಿಗಳು ಯಾವುದೇ ಪ್ರತಿಕ್ರಿಯೆಗೂ ಲಭ್ಯವಾಗುತ್ತಿಲ್ಲ.

ಈ ನಡುವೆ ಕಾಂಗ್ರೆಸ್ ಆರೋಪ ತಳ್ಳಿಹಾಕಿರುವ ಮುಖ್ಯಮಂತ್ರಿಯವರು, ಕಾಂಗ್ರೆಸ್‌ನವರು ಹತಾಶರಾಗಿದ್ದಾರೆ ಎಂದು ದೂರಿದ್ದಾರೆ. ಮುಖ್ಯಮಂತ್ರಿ ರಾಜೀನಾಮೆ ಕೇಳುವ ಕಾಂಗ್ರೆಸ್ ಮುಖಂಡರದ್ದು ಬಾಲಿಶ ವರ್ತನೆ ಎಂದು ಬಿಜೆಪಿ ಟೀಕಿಸಿದೆ. ಮತದಾರರ ಪಟ್ಟಿ ಪರಿಷ್ಕರಣೆಗೆ ಬಿಬಿಎಂಪಿ ವಹಿಸಿದ್ದ ಚಿಲುಮೆ, ಹೊಂಬಾಳೆ ಸಂಸ್ಥೆಗೂ ನಮಗೂ ಯಾವುದೇ ಸಂಬಂಧವಿಲ್ಲ. ಕಾಂಗ್ರೆಸ್ ನಾಯಕರ ವಿರುದ್ಧ ಮಾನನಷ್ಟ ಮೊಕದ್ದಮೆ ದಾಖಲಿಸುತ್ತೇನೆ ಎಂದು ಸಚಿವ ಅಶ್ವತ್ಥನಾರಾಯಣ ತಿಳಿಸಿದ್ದಾರೆ.

**ಹತಾಶರಾಗಿರುವ ಕಾಂಗ್ರೆಸ್:** ಬೊಮ್ಮಯಿ: ಕಾಂಗ್ರೆಸ್‌ನವರು ಹತಾಶರಾಗಿದ್ದು, ಇಂಥ ಹೇಳಿಕೆಗಳನ್ನು ನೀಡುತ್ತಿದ್ದಾರೆ ಎಂದು ಮುಖ್ಯಮಂತ್ರಿಯವರು ತಿರುಗೇಟು ನೀಡಿದ್ದಾರೆ. ಸಿದ್ದರಾಮಯ್ಯನವರ ಅವಧಿಯಲ್ಲಿ ರೂ.130 ಕೋಟಿ ಖರ್ಚು ಮಾಡಿ, ಇಡೀ ಕರ್ನಾಟಕದ ಸಾಮಾಜಿಕ, ಆರ್ಥಿಕ ಸಮೀಕ್ಷೆ ಎಂಬ ಹೆಸರಿನಲ್ಲಿ ಜಾತಿ, ಉಪಜಾತಿಗಳನ್ನು ಸೃಷ್ಟಿಸಿ, ದಾಖಲೆಗಳನ್ನು ಮಾಡಿ ಆ ಮಾಹಿತಿಗಳನ್ನು ಸಾರ್ವಜನಿಕವಾಗಿ ಬಹಿರಂಗಗೊಳಸದೇ ಚುನಾವಣೆಯ ಉದ್ದೇಶಕ್ಕೆ ಕಾಂಗ್ರೆಸ್ ಬಳಸಿಕೊಂಡಿತು ಎಂದು ದೂರಿದ್ದಾರೆ. ಈ ವಿಷಯದಲ್ಲಿ ಶಿಕ್ಷೆ ಮೊದಲು ಸಿದ್ದರಾಮಯ್ಯನವರ ಸರ್ಕಾರಕ್ಕೆ ಮೊದಲು ಆಗಬೇಕು. ಪ್ರಸ್ತುತ ಈ ವಿಚಾರದಲ್ಲಿ ಸರ್ಕಾರಕ್ಕೆ ಸಂಬಂಧಿಸಿರುವುದಿಲ್ಲ. ತಳಹಂತದಲ್ಲಿ ಈ ಕೆಲಸವಾಗಿದ್ದರೆ, ಸೂಕ್ತ ವಿಚಾರಣೆಯಾಗಿ, ತಪ್ಪಿತಸ್ಥರಿಗೆ ಶಿಕ್ಷೆಯಾಗಲಿದೆ ಎಂದು ತಿಳಿಸಿದ್ದಾರೆ.

ನಾವು ರಾಜ್ಯದಲ್ಲಿ ಬಿಜೆಪಿ ಸರ್ಕಾರದ 40 ಪರ್ಸೆಂಟ್ ಭ್ರಷ್ಟಾಚಾರ, ಗುತ್ತಿಗೆ, ನೇಮಕಾತಿ, ವರ್ಗಾವಣೆಯಲ್ಲಿ ಅಕ್ರಮ ನೋಡಿದ್ದೆವು. ಈಗ ಅವರ ಅಕ್ರಮ ಚುನಾವಣೆ ಪ್ರಕ್ರಿಯೆಗೂ ವಿಸ್ತರಿಸಿದೆ.

ಡಿ.ಕೆ. ಶಿವಕುಮಾರ್, ಕೆಪಿಸಿಸಿ ಅಧ್ಯಕ್ಷ.

ಮುಖ್ಯ ನ್ಯಾಯಾಮೂರ್ತಿಗಳಿಂದ ತನಿಖೆ ಮಾಡಿಸಬೇಕು. ಬಿಎಲ್‌ಒ ಎಂಬ ನಕಲಿ ಗುರುತಿನ ಚೀಟಿ ಇಟ್ಟುಕೊಂಡಿರುವವರ ವಿರುದ್ಧ ಎಫ್‌ಐಆರ್ ದಾಖಲಿಸಿ, ಬಂಧಿಸಬೇಕು.

ಸಿದ್ದರಾಮಯ್ಯ, ಪ್ರತಿಪಕ್ಷ ನಾಯಕ

2018ರಲ್ಲಿ ಇದ್ದ ಸರ್ಕಾರದ ಕಾಲದಲ್ಲಿಯೂ ಈ ರೀತಿ ಸಮೀಕ್ಷೆಗೆ ಒಪ್ಪಿಗೆ ನೀಡಿದ್ದಾರೆ. ಇಡೀ ಪ್ರಕರಣದ ಸಮಗ್ರ ತನಿಖೆಗೆ ಸೂಚನೆ ನೀಡುತ್ತೇನೆ. ನಿಜ ಹೊರಗೆ ಬರಲಿ

ಬಸವರಾಜ ಬೊಮ್ಮಾಯಿ, ಮುಖ್ಯಮಂತ್ರಿ

**ಕೈ ನಾಯಕರ ಪ್ರಶ್ನೆಗಳು:**

- ಚಿಲುಮೆ ಎಂಬ ಖಾಸಗಿ ಸಂಸ್ಥೆಗೆ ಸರ್ಕಾರ ಹಾಗೂ ಬಿಬಿಎಂಪಿ ಬದಲಿಗೆ ಕೆಲಸ ಮಾಡಲು ಅನುಮತಿ ನೀಡಿದ್ದು ಯಾರು.
- ಯಾವ ಆಧಾರದ ಮೇಲೆ ಈ ಸಂಸ್ಥೆಗಳಿಗೆ ಒಂದೇ ದಿನದಲ್ಲಿ ಅನುಮತಿ ನೀಡಲಾಯಿತು.
- ಬಿಬಿಎಂಪಿ ಆಗಲಿ, ಚುನಾವಣಾ ಉಸ್ತುವಾರಿ ಅಧಿಕಾರಿಗಳಾಗಲಿ ಚುನಾವಣೆ ಕೆಲಸವನ್ನು ಖಾಸಗಿ ಸಂಸ್ಥೆಗೆ ನೀಡುವ ಮುನ್ನ ಯಾಕೆ ಜಾಹೀರತು ಪ್ರಕಟಿಸಲಿಲ್ಲ.
- ರಾಜ್ಯದಲ್ಲಿ ಸಾವಿರಾರು ಎನ್‌ಜಿಒಗಳಿದ್ದು, ಅವುಗಳ ಪೈಕಿ ಈ ಸಂಸ್ಥೆಗೆ ಅನುಮತಿ ನೀಡಲು ಶಿಫಾರಸ್ಸು ಮಾಡಿದ್ದು ಯಾರು.
- ಬೆಂಗಳೂರಿನ 28 ಕ್ಷೇತ್ರಗಳಲ್ಲಿ ಎಲ್ಲ ಮನೆಗಳ ಸಮೀಕ್ಷೆಯನ್ನು ಉಚಿತವಾಗಿ ಮಾಡುತ್ತೇವೆ ಎಂದಾಗಲೇ ಸರ್ಕಾರಕ್ಕೆ ಅನುಮಾನ ಯಾಕೆ ಬರಲಿಲ್ಲ.
- ಖಾಸಗಿ ಸಂಸ್ಥೆಯೊಂದು ಬೆಂಗಳೂರಿನ ಪ್ರತಿಯೊಬ್ಬ ಮತದಾರರ ಪಟ್ಟಿಯನ್ನು ಕಲೆ ಹಾಕಲು ಹೇಗೆ ಸಾಧ್ಯ ಇದು ಕಳ್ಳತನಕ್ಕೆ ಸಾಕ್ಷಿಯಲ್ಲವೇ ಇದು ಖಾಸಗಿ ಹಕ್ಕಿನ ಚ್ಯುತಿಯಲ್ಲವೇ
- ಈ ಮೂರು ಸಂಸ್ಥೆಗಳಿಗೂ ಮುಖ್ಯಮಂತ್ರಿಯವರು ಹಾಗೂ ಸಚಿವ ಅಶ್ವತ್ಥನಾರಾಯಣ ಅವರಿಗೂ ಇರುವ ಸಂಬಂಧವೇನು.

ಆಧಾರ: ಉದಯವಾಣಿ, ದಿನಾಂಕ:18.11.2022

## 53. ಮುಕ್ತ ಮಾರುಕಟ್ಟೆಗೆ ಇನ್ನು ಗಂಧದ ಗಾಳಿ

ರಾಜ್ಯದಲ್ಲಿ ಇನ್ನು ಮುಂದೆ ಖಾಸಗಿಯಾಗಿ ಶ್ರೀಗಂಧ ಬೆಳೆಯಲು ಮತ್ತು ಅದನ್ನು ಮುಕ್ತ ಮಾರುಕಟ್ಟಯಲ್ಲಿ ಮಾರಾಟ ಮಾಡಲು ಅವಕಾಶ ಕಲ್ಪಿಸಲು ಸರ್ಕಾರ ನಿರ್ಧರಿಸಿದೆ. ಅದಕ್ಕೆ ಪೂರಕವಾಗಿ ಹಲವು ದಿನಗಳ ಬೇಡಿಕೆಯಾಗಿದ್ದ ಶ್ರೀಗಂಧ ನೀತಿಯನ್ನು ಸಚಿವ ಸಂಪುಟ ಸಭೆ ಅನುಮೋದನೆ ನೀಡಿದೆ.

ಮುಖ್ಯಮಂತ್ರಿಯ ಅಧ್ಯಕ್ಷತೆಯಲ್ಲಿ ನಡೆದ ಸಚಿವ ಸಂಪುಟ ಸಭೆಯಲ್ಲಿ ಶ್ರೀ ಗಂಧದ ನೀತಿ 2022ಕ್ಕೆ ಅನುಮೋದನೆ ನೀಡಲಾಗಿದೆ. ಅ ಮೂಲಕ ಮುಂದಿನ ದಿನದಲ್ಲಿ ಖಾಸಗಿ ಜಮೀನಿನಲ್ಲಿ ಶ್ರೀಗಂಧ ಬೆಳೆಯಲು ಹಾಗೂ ಮುಕ್ತ ಮಾರುಕಟ್ಟೆಯಲ್ಲಿ ಶ್ರೀಗಂಧವನ್ನು ಮಾರಾಟ ಮಾಡಲು ಅವಕಾಶ ಸಿಕ್ಕಂತಾಗಿದೆ.

ಸಂಪುಟ ಸಭೆಯ ಬಳಿಕ ಮಾಹಿತಿ ನೀಡಿದ ಆರೋಗ್ಯ ಸಚಿವ ಡಾ:ಕೆ. ಸುಧಾಕರ್, ರಾಜ್ಯ ಸರ್ಕಾರ ಬಜೆಟ್‌ನಲ್ಲಿ ಘೋಷಿಸಿದಂತೆ ಕರ್ನಾಟಕ ರಾಜ್ಯ ಶ್ರೀಗಂಧ ನೀತಿ–2022ಕ್ಕೆ ಸಂಪುಟ ಸಭೆಯಲ್ಲಿ ಅನುಮೋದನೆ ನೀಡಿದೆ. ಈ ನೀತಿಯ ಅನುಮೋದನೆಯಿಂದ ರೈತರಿಗೆ ಖಾಸಗಿ ಜಮೀನಿನಲ್ಲಿ ಶ್ರೀಗಂಧ ಬೆಳೆಯಲು ಅವಕಾಶ ನೀಡಲಾಗುತ್ತದೆ. ಶ್ರೀ ಗಂಧವನ್ನು ಮುಕ್ತ ಮಾರುಕಟ್ಟೆಯಲ್ಲಿ ಮಾರಲು ಅವಕಾಶ ಸಿಗಲಿದೆ. ರೈತರ ಅದಾಯ ಹೆಚ್ಚಿಸಲು ಈ ನೀತಿ ಪೂರಕವಾಗಿದೆ. ಚಿಪ್, ತಂತ್ರಜ್ಞಾನ ಬಳಸಿ ಶ್ರೀಗಂಧ ಕಳವು ಪ್ರಕರಣ ನಿಯಂತ್ರಿಸುವ ಕ್ರಮಗಳು ಈ ನೀತಿಯಲ್ಲಿ ಒಳಗೊಂಡಿರಲಿದೆ. ಶ್ರೀಗಂಧ ಬೆಳೆಸಲು ಸರ್ಕಾರ ಪ್ರೋತ್ಸಾಹ ನೀಡಲಿದೆ ಎಂದು ವಿವರಿಸಿದರು.

**ವರ್ಗಾವಣೆ ತಿದ್ದುಪಡಿ**: ಬಹುದಿನಗಳಿಂದ ನನೆಗುದಿಗೆ ಬಿದ್ದದ್ದ ವರ್ಗಾವಣೆ ನಿಯಮಕ್ಕೆ ತಿದ್ದುಪಡಿ ತರಲು ಒಪ್ಪಿಗೆ ನೀಡಲಾಗಿದೆ. ಎಲ್ಲ ಇಲಾಖೆಯ ಸಿ ಮತ್ತು ಡಿ ಗ್ರೂಪ್ ನೌಕರರಿಗೆ ಪತಿ–ಪತ್ನಿಯವರಿಗೆ ವರ್ಗಾವಣೆಗೆ ಅವಕಾಶ ನೀಡುವ ತಿದ್ದುಪಡಿ ನಿಯಮಕ್ಕೆ ಸಂಪುಟ ಸಭೆ ಅನುಮೋದನೆ ನೀಡಿದೆ. ಈ ಹಿಂದೆ ಪತಿ–ಪತ್ನಿ ಪ್ರಕರಣದಲ್ಲಿ 7–10 ವರ್ಷ ಆಗುವವರೆಗೆ ವಗಾಯಿಸಲು ಅವಕಾಶವಿರಲಿಲ್ಲ. ಇದೀಗ ಏಳು ವರ್ಷದ ಬಳಿಕ ಪತಿ–ಪತ್ನಿ ಪ್ರಕರಣದಲ್ಲಿ ಮಾತ್ರ ಅಂತರ ಜಿಲ್ಲೆ ವರ್ಗಾವಣೆಗೆ ಅವಕಾಶ ನೀಡಲಾಗುವುದು ಎಂದರು.

**ಸಂರಕ್ಷಣಾ ಮೀಸಲು:** ರಾಜ್ಯದಲ್ಲಿ ಹೊಸದಾಗಿ ಉತ್ತಾರೆಗುಡ್ಡ ವನ್ಯ ಜೀವಿಧಾಮ, ಬಂಕಾಪುರ ವನ್ಯ ಜೀವಿಧಾಮ ಮತ್ತು ಅರಸೀಕರೆ, ಕರಡಿ ಲಗತ್ತಿ ಧಾಮಗಳನ್ನು ಹಾಗೂ ಹಿರೆಸೂಲೇಕೆರೆ ಕರಡಿ ಸಂರಕ್ಷಣಾ ಮೀಸಲು ಪ್ರದೇಶ, ಚಿಕ್ಕಸಂಗಮ ಪಕ್ಷಿ ಸಂರಕ್ಷಣಾ ಮೀಸಲು ಪ್ರದೇಶ, ಮುಂಡಿಗೆ ಕೆರೆ ಮತ್ತು ಪಕ್ಷಿ ಸಂರಕ್ಷಣಾ ಮೀಸಲು ಪ್ರದೇಶ ಮತ್ತು ಬೋನಾಳ ಪಕ್ಷಿ ಸಂರಕ್ಷಣಾ ಮೀಸಲು ಪ್ರದೇಶಗಳನ್ನು ಘೋಷಿಸುವ ಪ್ರಸ್ತಾವನೆಗಳಿಗೆ ಸಂಪುಟ ಸಭೆ ಅನುಮೋದನೆ ನೀಡಿದೆ.

**ಸಂಪುಟದ ಇತರ ನಿರ್ಧಾರ:–**

- ರಾಮನಗರದಲ್ಲಿ ಅರೋಗ್ಯ ವಿಜ್ಞಾನ ವಿವಿ ಕಟ್ಟಡ ನಿರ್ಮಾಣಕ್ಕೆ ಅಸ್ತು,
- ಅರ್ಚಕರ ಹಳ್ಳಿಯಲ್ಲಿ ರೂ.600ಕೋಟಿ ವೆಚ್ಚದಲ್ಲಿ ವಿವಿ ಕಟ್ಟಡ ನಿರ್ಮಾಣ,
- ನೂತನ ಏಳು ತಾಯಿ ಮತ್ತು ಮಗುವಿನ ಆಸ್ಪತ್ರೆಗೆ ರೂ.158 ಕೋಟಿ,
- ಅತಿಸಣ್ಣ ಕುಶಲಕರ್ಮಿಗಳಿಗಾಗಿ ಸಾಲ ಸಹಾಯಧನ ಯೋಜನೆ,
- ತುಮಕೂರು ಜಿಲ್ಲಾ ಆಸ್ಪತ್ರೆಯಲ್ಲಿ 100 ಹಾಸಿಗೆಗಳ ಕ್ರಿಟಕಲ್ ಕೇರ್ ಬ್ಲಾಕ್,
- ಕೆ.ಸಿ.ಜನರಲ್ ಆಸ್ಪತ್ರೆಯ ಟ್ರಾಮಾ ಕೇರ್ ಕೇಂದ್ರ ನಿರ್ಮಾಣಕ್ಕೆ ರೂ.35 ಕೋಟಿ,
- ತುಮಕೂರು ಜಿಲ್ಲಾಸ್ಪತ್ರೆಯಲ್ಲಿ ನರ್ಸಿಂಗ್ ಕಾಲೇಜು ಹಾಸ್ಟೆಲ್‌ಗೆ ರೂ.20 ಕೋಟಿ,
- ಇಎಸ್ಐ ಆಸ್ಪತ್ರೆಗೆ ವೈದ್ಯಕೀಯ ಉಪಕರಣ ಖರೀದಿಗೆ ರೂ.44 ಕೋಟಿ.
- ನಂಜನಗೂಡು ದೇಗುಲದಲ್ಲಿ ಅತಿಥಿಗೃಹ ಕಟ್ಟಡಕ್ಕೆ ರೂ.16.52 ಕೋಟಿ

**ಬೆಳಗಾವಿಯಲ್ಲಿ ಡಿಸೆಂಬರ್ 19 ರಿಂದ ಚಳಿಗಾಲದ ಅಧಿವೇಶನ**: ನಿರೀಕ್ಷೆಯಂತೆ ಈ ಬಾರಿಯ ಚಳಿಗಾಲದ ವಿಧಾನ ಮಂಡಲ ಅದಿವೇಶನವನ್ನು ಡಿಸೆಂಬರ್ 19 ರಿಂದ 30ರವರೆಗೆ ಬೆಳಗಾವಿಯ ಸುವರ್ಣಸೌಧದಲ್ಲಿ ನಡೆಸಲು ರಾಜ್ಯ ಸರ್ಕಾರ ತೀರ್ಮಾನಿಸಿದೆ. ಸಚಿವ ಸಂಪುಟ ಸಭೆಯಲ್ಲಿ ಈ ಬಗ್ಗೆ ತೀರ್ಮಾನ ಕೈಗೊಳ್ಳಲಾಗಿದೆ. ಸುದ್ದಿಗಾರರೊಂದಿಗೆ ಮಾತನಾಡಿದ ಆರೋಗ್ಯ ಸಚಿವ ಡಾ: ಸುಧಾರಕರ್, ಡಿಸೆಂಬರ್ 19 ರಿಂದ 30ರವರೆಗೆ ಚಳಿಗಾಲದ ಅಧಿವೇಶನ ನಡೆಸಲು ಸಚಿವ

ಸಂಪುಟ ಸಭೆಯಲ್ಲಿ ತೀರ್ಮಾನಿಸಲಾಗಿದೆ. ಒಟ್ಟು 10 ದಿನಗಳ ಕಾಲ ಕಲಾಪ ನಡೆಯಲಿದೆ ಎಂದು ತಿಳಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:18.11.2022

## 54. ಕಸಾಪದಲ್ಲಿ ಭುವನೇಶ್ವರಿ ಪ್ರತಿಮೆ ಅನಾವರಣ

ಕನ್ನಡ ಸಾಹಿತ್ಯ ಪರಿಷತ್ತು (ಕಸಾಪ) ಆವರಣದಲ್ಲಿ ಸ್ಥಾಪಿಸಿರುವ ಕನ್ನಡ ತಾಯಿ ಭುವನೇಶ್ವರಿ ಪ್ರತಿಮೆ ಅನಾವರಣಗೊಂಡಿತು.

ಪರಿಷತ್ತು ಹಮ್ಮಿಕೊಂಡಿರುವ ಕಾರ್ಯಕ್ರಮದಲ್ಲಿ ಪ್ರತಿಮೆ ಲೋಕಾರ್ಪಣೆಗೊಳಿಸಿ ಮಾತನಾಡಿದ ಮುಖ್ಯಮಂತ್ರಿಯವರು ಕನ್ನಡ ಭಾಷೆಯನ್ನು ಶಾಶ್ವತವಾಗಿಸುವ ಸಲುವಾಗಿ ಮುಂಬರುವ ಬೆಳಗಾವಿ ಚಳಿಗಾಲದ ಅಧಿವೇಶನದಲ್ಲಿ ಕನ್ನಡ ಭಾಷಾ ಸಮಗ್ರ ಅಭಿವೃದ್ಧಿ ವಿಧೇಯಕ ಅಂಗೀಕಾರ ಮಾಡುವುದಾಗಿ ಹೇಳಿದ್ದಾರೆ.

ಹಲವು ವರ್ಷಗಳಿಂದ ಬೇಡಿಕೆಯಲ್ಲಿ ಇದ್ದ ಈ ವಿಚಾರ ಕುರಿತು ಸಮಗ್ರ ಚರ್ಚೆಯಾಗಲಿ ಎಂಬ ಕಾರಣಕ್ಕೆ ಕಳೆದ ಅಧಿವೇಶನದಲ್ಲಿ ವಿಧೇಯಕ ಮಂಡಿಸಲಾಯಿತು. ಈ ಕುರಿತು ಕನ್ನಡ ಸಾಹಿತ್ಯ ಪರಿಷತ್ತು ಸಂಘ-ಸಂಸ್ಥೆಗಳು ಹೋರಾಟಗಾರರು ಸಾಹಿತಿಗಳು ಸೇರಿ ಎಲ್ಲ ವಲಯಗಳಿಂದ ಅಭಿಪ್ರಯಗಳನ್ನು ಸಂಗ್ರಹಿಸಿ ತಜ್ಞರೊಂದಿಗೆ ಚರ್ಚಿಸಿ ಸಲಹೆ  ಪಡೆದು ವಿಧೇಯಕ ಮಂಡಿಸಲಾಗುವುದು. ಇದೇ ವೇಳೆ ಹಾವೇರಿಯಲ್ಲಿ ನಡೆಯಲಿರುವ 86ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಕಸಾಪ ಸಹಕಾರದಲ್ಲಿ ಅಚ್ಚುಕಟ್ಟಾಗಿ ಹಾಗೂ ಮಾದರಿಯಾಗಿ ನಡೆಸಲಾಗುವುದು ಎಂದರು.

ಕನ್ನಡಕ್ಕೆ ಎಂದೂ ಆಪತ್ತು ಬಂದಿಲ್ಲ, ಮುಂದೆಯೂ ಬರುವುದಿಲ್ಲ. ಈ ಭೂಮಿಯಲ್ಲಿ ಸೂರ್ಯ-ಚಂದ್ರ ಇರುವವರೆಗೆ ಕನ್ನಡ ಉಳಿದಿರುತ್ತದೆ. ನಮ್ಮ ಬದುಕಿಗೆ ಹತ್ತಿರವಾದ, ಭಾವನೆಗಳಿಂದ ತುಂಬಿರುವ ದೇವರ ಭಾಷೆ ಕನ್ನಡ. ಜಗತ್ತಿನಲ್ಲಿ ಅತ್ಯಂತ ಗೌರವದಿಂದ ಕಾಣುವ ಭಾಷೆಯಾಗಿದೆ. ಸಕಾರಾತ್ಮಕ ಚಿಂತನೆಯೊಂದಿಗೆ ಆಧುನಿಕ ತಂತ್ರಜ್ಞಾನ ಬಳಸಿಕೊಂಡು ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ವಿಶ್ವದಾದ್ಯಂತ ನೆಲೆಸಿರುವ ಕನ್ನಡಿಗರಿಗೆ ತಲುಪಿಸಬೇಕು ಎಂದು ಮುಖ್ಯಮಂತ್ರಿಯವರು ಹೇಳಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ನಾಡೋಜ ಡಾ: ಮಹೇಶ್ ಜೋಶಿ ಮಾತನಾಡಿ ಕಸಾಪ ಅಧ್ಯಕ್ಷನಾಗಿ ಕೈಗೊಂಡ ನಿರ್ಧಾರಗಳಲ್ಲಿ ಕನ್ನಡದ ದೇವಿ ಭುವನೇಶ್ವರಿ ಪ್ರತಿಮೆ ಸ್ಥಾಪನೆ ಮಹತ್ವದ್ದು, ಅದು ಇಂದು ಸಾಕಾರಗೊಂಡಿತು. ಇದೇ ರೀತಿ  ಹಾವೇರಿಯಲ್ಲಿ ಜನವರಿ 6, 7 ಮತ್ತು 8 ರಂದು ನಡೆಯಲಿರುವ ಸಾಹಿತ್ಯ ಸಮ್ಮೇಳನ ಹೊಸತನ ಹಾಗೂ ಭಿನ್ನತೆಯಿಂದ ಕೂಡಿರಲಿದೆ. ನವೆಂಬರ್ 28 ರಂದು ಭುವನಗಿರಿ ಭುವನೇಶ್ವರಿ ದೇವಾಲಯದಿಂದ ಕನ್ನಡ ಜ್ಯೋತಿ ರಥಯಾತ್ರೆ ಆರಂಭವಾಗಲಿದ್ದು, ರಾಜ್ಯಾದ್ಯಂತ ಸಂಚರಿಸಿ ಜನವರಿ 6 ರಂದು ಹಾವೇರಿ ತಲುಪಲಿದೆ. ಈ ಜ್ಯೋತಿಯಿಂದ ಸಮ್ಮೇಳನವನ್ನು ಉದ್ಘಾಟಿಸುವುದಾಗಿ ತಿಳಿಸಿದರು.

ಕನ್ನಡ ತಾಯಿ ಭುವನೇಶ್ವರಿ ಕುರಿತ ಸಾಕ್ಷ್ಯಚಿತ್ರ ಪ್ರದರ್ಶಿಸಲಾಯಿತು. ನಿವೃತ್ತ ನ್ಯಾಯಮೂರ್ತಿ ಶಿವರಾಜ್ ವಿ. ಪಾಟೀಲ್, ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕ ಎಂ.ಜಿ. ಹಿರೇಮಠ, ಪತ್ರಕರ್ತೆ ಸಂಧ್ಯಾ ಎಸ್. ಪೈ ಗೌರವ ಕಾರ್ಯದರ್ಶಿಗಳಾದ ನೇ.ಭ ರಾಮಲಿಂಗ ಶೆಟ್ಟಿ, ಗೌರವ ಕೋಶಾಧ್ಯಕ್ಷ ಬಿ.ಎಂ. ಪಟೇಲ್ ಪಾಂಡು ಇತರರು ಉಪಸ್ಥಿತರಿದ್ದರು.

**ಕನ್ನಡ ಓದಿ-ಬರಹ ಕಲಿತರೆ ಅದೇ ನೈಜ ಸೇವೆ**: ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರಿಂದ 1915ರಲ್ಲಿ ಸ್ಥಾಪನೆಯಾದ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರ ಸಾರ್ವಭೌಮ ಸಂಸ್ಥೆ, ಕಸಾಪದಿಂದ ತಾಳೆಗರಿಯಲ್ಲಿ ಉಳಿದಿರುವ ಅಪ್ರಕಟಿತ ಗ್ರಂಥಗಳ ಪ್ರಕಟಣೆ ಸೇರಿ ಇನ್ನಷ್ಟು ಕನ್ನಡದ ಕಾರ್ಯಗಳು

ನಡೆಯಬೇಕಿದೆ. ಕನ್ನಡ ನಾಡಿನಲ್ಲಿರುವ ಪ್ರತಿಯೊಬ್ಬರು ಕನ್ನಡದಲ್ಲಿ ಮಾತನಾಡುವ ಓದುವ ಬರೆಯುವುದನ್ನು ರೂಢಿಸಿಕೊಂಡರೆ ಅದುವೇ ತಾಯಿ ಭುವನೇಶ್ವರಿ ದೇವಿಗೆ ಕೊಡುಗೆ ನೀಡಿದಂತೆ ಎಂದು ಸುತ್ತೂರು ಮಠದ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಹೇಳಿದರು.

ತಾಯಿ ಭುವನೇಶ್ವರಿಯ ಪುತ್ಥಳಿ ಕಂಡು ಭಾವಾವೇಶಗೊಂಡಿದ್ದೇನೆ. ಕನ್ನಡ ಭಾಷೆ ಗಟ್ಟಿಯಾಗಿರಲು ಕನ್ನಡ ತಾಯಿಯ ಕೃಪೆ ಕಾರಣ. ತಮ್ಮ ಕುಟುಂಬದ ಹಿರಿಯರಿಗೆ ಈ ತಾಯಿ ಭುವನೇಶ್ವರಿಯ ಆರ್ಶಿರ್ವಾದವಿತ್ತು ಹಾಗೂ ಅವರು ಈ ನೆಲದಲ್ಲಿ ಅತ್ಯಂತ ದೀರ್ಘಕಾಲ ನೆಲೆಸಿದ್ದರು.

ಆಲ್ಮತ್ ಕಿಟ್ಟಲ್ ನಿಘಂಟುತಜ್ಞರೆವರೆಂಡ್ ಕಿಟಲ್ ಅವರ ಮರಿಮೊಮ್ಮಗಳು

ಆಧಾರ: ವಿಜಯವಾಣಿ, ದಿನಾಂಕ:18.11.2022

## 55. 7ನೇ ವೇತನ ಆಯೋಗಕ್ಕೆ ಸದಸ್ಯರ ನೇಮಕ : ಶಿಫಾರಸ್ಸಿಗೆ 6 ತಿಂಗಳ ಗಡುವು

ರಾಜ್ಯ ಸರ್ಕಾರಿ ನೌಕರರ ವೇತನ ಪರಿಷ್ಕರಣೆಗೆ ರಚಿಸಲಾಗಿರುವ ಏಳನೇ ವೇತನ ಆಯೋಗದ ಅಧ್ಯಕ್ಷರಾಗಿ ನಿವೃತ್ತ ಮುಖ್ಯ ಕಾರ್ಯದರ್ಶಿ ಕೆ.ಸುಧಾಕರ್ ರಾವ್ ಹಾಗೂ ಮೂವರು ಸದಸ್ಯರನ್ನು ನೇಮಕ ಮಾಡಲಾಗಿದೆ.

ಸುಧಾಕರರಾವ್ ಅಧ್ಯಕ್ಷತೆಯಲ್ಲಿ ಆಯೋಗ ರಚಿಸುವುದಾಗಿ ಮುಖ್ಯಮಂತ್ರಿಯವರು ಘೋಷಣೆ ಮಾಡಿದ್ದರು. ಆಯೋಗದ ರಚನೆಗೆ ಅನುಮೋದನೆ ನೀಡಲಾಗಿದೆ.

ನಿವೃತ್ತ ಐಎಎಸ್ ಅಧಿಕಾರಿ ಪಿ.ಬಿ. ರಾಮಮೂರ್ತಿ, ರಾಜ್ಯ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ನಿವೃತ್ತ ಪ್ರಧಾನ ನಿರ್ದೇಶಕ ಶ್ರೀಕಾಂತ ಬಿ. ವನಹಳ್ಳಿ ಸದಸ್ಯರಾಗಿದ್ದು, ಮೂಲಸೌಕರ್ಯ ಇಲಾಖೆಯ ಜಂಟಿ ಕಾರ್ಯದರ್ಶಿ ಹೆಪ್ಸಬಾ ರಾಣಿ ಕೊರ್ಲಪಾಟಿ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಲಿದ್ದಾರೆ.

ಸರ್ಕಾರದ ಸಂಪನ್ಮೂಲಗಳು, ಅಭಿವೃದ್ಧಿ ಯೋಜನೆಗಳಿಗೆ ಅಗತ್ಯವಿರುದ ಸಂಪನ್ಮೂಲ ಮತ್ತು ವಿತ್ತೀಯ ಹೊಣೆಗಾರಿಕೆ ಅಧಿನಿಯಮ–2002ರ ಮಾರ್ಗಸೂಚಿಗಳನ್ನು ಗಮನದಲ್ಲಿಟ್ಟುಕೊಂಡು ಆರು ತಿಂಗಳ ಒಳಗಾಗಿ ತನ್ನ ಶಿಪಾರಸ್ಸು ಮಾಡುವಂತೆ ಆಯೋಗಕ್ಕೆ ಸೂಚಿಸಲಾಗಿದೆ.

ಸರ್ಕಾರಿ ನೌಕರರು ಅನುದಾನಿತ ಶಿಕ್ಷಣ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯಗಳ ಬೋಧಕೇತರ ಸಿಬ್ಬಂದಿಯ (ಯುಜಿಸಿ/ಎಐಸಿಟಿಇ)ಐಸಿಎಆರ್ ವೇತನ ಶ್ರೇಣಿಯ ವೇತನ ಪಡೆಯುತ್ತಿರುವವರನ್ನು ಹೊರತುಪಡಿಸಿ) ವೇತನ ಹಾಗೂ ವಿವಿಧ ಭತ್ಯೆಗಳು ಹಾಗೂ ನಿವೃತ್ತಿ ಸೌಲಭ್ಯಗಳನ್ನು ಪರಿಶೀಲಿಸಿ, ಕಾರ್ಯಸಾಧುವಾದ ನೂತನ ವೇತನ ಶ್ರೇಣಿಯನ್ನು ಶಿಫಾರಸ್ಸು ಮಾಡುವುದು. ಕೇಂದ್ರದ ವೇತನ ಶ್ರೇಣಿಯನ್ನು ರಾಜ್ಯದಲ್ಲಿ ಅಳವಡಿಸುವ ಕುರಿತು ಪರಿಸೀಲಿಸುವುದು, ರಾಜ್ಯ ಸರ್ಕಾರವು ತುಟ್ಟಿಭತ್ಯೆ ನೀಡಲು ಅನುಸರಿಸಬೇಕಾದ ಸೂತ್ರವನ್ನು ರೂಪಿಸುವುದು, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆ ಪ್ರವಾಸ ರಜೆ ಸೌಲಭ್ಯ, ವೈದ್ಯಕೀಯ ಸೌಲಭ್ಯಗಳನ್ನು ನಿಗದಿ ಪಡಿಸಲು ಹಾಗೂ ಸುಧಾರಣೆ ತರಲು ಸಲಹೆ ನೀಡುವುದು, ನಿವೃತ್ತಿ ವೇತನ ಮತ್ತು ಸಂಬಂಧಿತ ಸೌಲಭ್ಯಗಳ ಪರಿಷ್ಕರಣೆ ಮೊದಲಾದ ಅಂಶಗಳ ಕುರಿತು ವೇತನ ಆಯೋಗವು ಪರಿಶೀಲಿಸಿ ಶಿಫಾರಸ್ಸು ನೀಡಲಿದೆ.

ಆಧಾರ: ಪ್ರಜಾವಾಣಿ, ದಿನಾಂಕ:19.11.2022

## 56. 5 ಹೆಗ್ಗುರಿಗಳೊಂದಿಗೆ ತಂತ್ರಜ್ಞಾನ ಸಮಾವೇಶಕ್ಕೆ ತೆರೆ

ಕೆಂಪೇಗೌಡ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣದ ಬಳಿ ಸ್ಟಾರ್ಟಪ್ ಪಾರ್ಕ್, 50 ಕಾಲೇಜುಗಳಲ್ಲಿ ಆಧುನಿಕ ತಾಂತ್ರಿಕ ಪ್ರಯೋಗಾಲಯಗಳು ವಿಶ್ವವಿದ್ಯಾಲಯಗಳಲ್ಲಿ ವಿಜ್ಞಾನ ಮತ್ತು

ತಂತ್ರಜ್ಞಾನ ಕಂಪನಿಗಳ ನಡುವೆ ಗಾಢ ಸಂಬಂಧ ಮತ್ತು ಶೈಕ್ಷಣಿಕ ಸಂಸ್ಥೆಗಳು ಹಾಗೂ ಸಂಶೋಧನಾ ಸಂಸ್ಥೆಗಳ ನಡುವೆ ನಿಕಟ ಬಾಂಧವ್ಯ ಎಂಬ ಐದು ಹೆಗ್ಗುರಿಗಳ ಘೋಷಣೆಗಳೊಂದಿಗೆ 25ನೇ ವರ್ಷದ ಪ್ರತಿಷ್ಠಿತ ಬೆಂಗಳೂರು ತಂತ್ರಜ್ಞಾನ ಸಮಾವೇಶಕ್ಕೆ ತೆರೆ ಬಿದ್ದಿದೆ.

ಮುಖ್ಯಮಂತ್ರಿಯವರು ಹಾಗೂ ಕೇಂದ್ರ ವಾಣಿಜ್ಯ ಮತ್ತು ಕೈಗಾರಿಕಾ ಸಚಿವ ಪಿಯೂಷ್ ಗೋಯಲ್ ಸಮ್ಮುಖದಲ್ಲಿ ಐಟಿ–ಬಿಟಿ ಸಚಿವ ಡಾ:ಸಿ.ಎನ್ ಅಶ್ವತ್ಥನಾರಯಣ ಅವರು ಸರ್ಕಾರದ ಪರವಾಗಿ ಸಮಾರೋಪ ಸಮಾರಂಭವನ್ನು ಘೋಷಿಸಿದರು. ಈ ಸಂದರ್ಭದಲ್ಲಿ ಮಾತನಾಡಿದ ಸಚಿವರು, ಒಟ್ಟು 32 ದೇಶಗಳು ಪಾಲ್ಗೊಂಡಿದ್ದ ಸಮಾವೇಶದಲ್ಲಿ 4.52 ಲಕ್ಷ ಜನ ಸಕ್ರಿಯವಾಗಿ ಪಾಲ್ಗೊಂಡಿದ್ದು, ವಿವಿಧ ಸಾಮಾಜಿಕ ಮಾಧ್ಯಮಗಳ ಮೂಲಕ 4.99 ಕೋಟಿ ಜನರನ್ನು ತಲುಪಿದೆ. ಪ್ರದರ್ಶನ ಮಳಿಗೆಗಳಿಗೆ 50 ಸಾವಿರ ಜನರು ಭೇಟಿ ನೀಡಿದ್ದು, 26 ಸಾವಿರ ನೊಂದಾಯಿತ ಪ್ರತಿನಿಧಿಗಳು ಪಾಲ್ಗೊಂಡಿದ್ದರು. ಜೊತೆಗೆ ವಿವಿಧ ನವೋದ್ಯಮಗಳ 28 ನೂತನ ಉತ್ಪನ್ನಗಳನ್ನು ಬಿಡುಗಡೆ ಮಾಡಲಾಗಿದೆ ಎಂದು ವಿವರಿಸಿದರು. ಸ್ಟಾರ್ಟ್ ಆಪ್ ವಿಷನ್ ಗುಂಪಿನ ಅಧ್ಯಕ್ಷ ಪ್ರಶಾಂತ್ ಪ್ರಕಾಶ್ ಐಟಿಬಿಟಿ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ ಡಾ: ಇ.ವಿ. ರಮಣರೆಡ್ಡಿ, ಐಟಿಬಿಟಿ ಇಲಾಖೆ ನಿರ್ದೇಶಕಿ ಮೀನಾ ನಾಗರಾಜ್ ಉಪಸ್ಥಿತರಿದ್ದರು.

**ದೇಶದ ಅರ್ಥಿಕತೆಯ ರಾಜಧಾನಿ ಸಿಲಿಕಾನ್ ಸಿಟಿ ಬೆಂಗಳೂರು**: ರಾಜಧಾನಿ ಬೆಂಗಳೂರು ಕೇವಲ ತಂತ್ರಜ್ಞಾನದ ನಗರವಾಗಿರದೇ ಮುಂದಿನ 5 ವರ್ಷಗಳಲ್ಲಿ ದೇಶದ ಆರ್ಥಿಕತೆಯ ರಾಜಧಾನಿಯಾಗಲಿದೆ ಎಂದು ಮುಖ್ಯಮಂತ್ರಿಯವರು ವಿಶ್ವಾಸ ವ್ಯಕ್ತಪಡಿಸಿದ್ದಾರೆ. ಬೆಂಗಳೂರು ತಂತ್ರಜ್ಞಾನ ಸಮಾವೇಶದ ಸಮಾರೋಪದಲ್ಲಿ ಯೂನಿಕಾರ್ನ್‌ಗಳ ಅಭಿನಂದನೆ ಹಾಗೂ ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿ, ಕರ್ನಾಟಕ ವಿದೇಶಿ ಬಂಡವಾಳ ಹೂಡಿಕೆ ಹಾಗೂ ಸ್ಟಾರ್ಟ್ ಆಪ್‌ಗಳಲ್ಲಿ ಉತ್ತಮ ಸ್ಥಾನದಲ್ಲಿದೆ. ಬಿಯಾಂಡ್ ಬೆಂಗಳೂರು ಅಭಿವೃದ್ಧಿಯಾಗಬೇಕು. ಕೃಷಿ ತಂತ್ರಜ್ಞಾನ, ಆರ್ಥಿಕತೆ ಹೀಗೆ ಎಲ್ಲ ರಂಗಗಳಲ್ಲಿಯೂ ಕರ್ನಾಟಕ ಹಾಗೂ ಬೆಂಗಳೂರು ಅತ್ಯುತ್ತಮ ಶ್ರೇಯಾಂಕ ಹೊಂದಿದೆ. ಇದರಿಂದಾಗಿ ನಮ್ಮ ಜವಾಬ್ದಾರಿಯೂ ಹೆಚ್ಚಿದೆ ಎಂದರು. ಎಲ್ಲಾ ಕ್ಷೇತ್ರಗಳಲ್ಲಿ ಮುಂಚೂಣಿಯಲ್ಲಿರುವುದರ ಜೊತೆಗೆ ಪ್ರಥಮ ಸ್ಥಾನವನ್ನು ಕಾಯ್ದಿರಿಸಿಕೊಂಡಿರುವುದು ಸವಾಲಿನ ಕೆಲಸವಾಗಿದ್ದು, ಇದಕ್ಕಾಗಿ ದೊಡ್ಡ ಪ್ರಮಾಣದ ಪರಿಶ್ರಮ ಬೇಕಾಗಿದೆ. ಈ ನಿಟ್ಟಿನಲ್ಲಿ ನಾಡಿನ ಎಂಜಿನಿಯರ್ಸ್ ಹಾಗೂ ವಿಜ್ಞಾನಿಗಳು ಹಾಗೂ ಅವರ ಪರಿಶ್ರಮದ ಮೇಲೆ ನನಗೆ ಸಂಪೂರ್ಣ ನಂಬಿಕೆಯಿದೆ. ಆಧುನಿಕ ತಂತ್ರಜ್ಞಾನ ಮಾನವನ ಒಳಿತಿಗೆ ಹಾಗೂ ಉತ್ತಮ ಸಮಾಜ ನಿರ್ಮಾಣಕ್ಕೆ ಬಳಕೆಯಾಗಬೇಕು ಎಂದು ಹೇಳಿದರು.

**2047ಕ್ಕೆ 30 ಟ್ರಿಲಿಯನ್ ಡಾಲರ್ ಆರ್ಥಿಕತೆ**: ದೇಶದ ತಂತ್ರಜ್ಞಾನದ ರಾಜಧಾನಿಯಾಗಿರುವ ಬೆಂಗಳೂರು ಸಹಭಾಗಿತ್ವ ಸಹಕಾರ ಮತ್ತು ಸ್ಪರ್ಧೆಗಳಿಂದ ಜಾಗತಿಕ ಮಟ್ಟದಲ್ಲಿ ವಿರಾಜಮಾನವಾಗಿದೆ. ಭಾರತವು ಮುಂದಿನ 25 ವರ್ಷಗಳಲ್ಲಿ ಅಭಿವೃದ್ದೀ ಹೊಂದಿದ ರಾಷ್ಟ್ರವಾಗಲಿದ್ದು, 30 ಟ್ರಿಲಿಯನ್ ಡಾಲರ್ ಆರ್ಥಿಕತೆಯಾಗಿ ಹೊರಹೊಮ್ಮಲಿದೆ ಎಂದು ಕೇಂದ್ರ ವಾಣಿಜ್ಯ ಮತ್ತು ಕೈಗಾರಿಕಾ ಸಚಿವ ಪಿಯೂಷ್ ಗೋಯಲ್ ಹೇಳಿದ್ದಾರೆ. ಕೇಂದ್ರ ಸರ್ಕಾರವು ದೊಡ್ಡ ಉದ್ಯಮಿಗಳಂತೆಯೇ ಸಣ್ಣಪುಟ್ಟ ವ್ಯಾಪಾರಿಗಳಿಗೂ ಸಮಾನ ಅವಕಶ ಕಲ್ಪಿಸುವ ಉದ್ದೇಶದಿಂದ ಓಪನ್ ಡೇಟಾ ಇ–ಕಾಮರ್ಸ್ ವ್ಯವಸ್ಥೆಗೆ ಚಾಲನೆ ನೀಡಿದ್ದು, ಇದೂ ಸಹ ಬೆಂಗಳೂರಿನಿಂದಲೇ ಆರಂಭವಾಗಬೇಕು ಎಂದು ಆಶಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:19.11.2022

## 57. ಮತದಾರರ ಮಾಹಿತಿ ಪಕ್ಷಗಳಿಗೆ ಮಾರಾಟ

ಮತಗಟ್ಟೆ ಮಟ್ಟದ ಅಧಿಕಾರಿಗಳ ಜೊತೆ ಸೇರಿ ಮತದಾರರ ಜಾಗೃತಿ ಮೂಡಿಸಬೇಕಿದ್ದ ಚಿಲುಮೆ ಶೈಕ್ಷಣಿಕ, ಸಾಂಸ್ಕೃತಿಕ, ಸಾಮಾಜಿಕ ಮತ್ತು ಗ್ರಾಮೀಣಾಭಿವೃದ್ಧಿ ಸಂಸ್ಥೆಯು, ರಾಜಕಾರಣಿಗಳು ಮತ್ತು

ರಾಜಕೀಯ ಪಕ್ಷದವರಿಗೆ ನೇರವಾಗುವ ಸಲುವಾಗಿ ಮತದಾರರ ಮಾಹಿತಿ ಸಂಗ್ರಹಿಸುತ್ತಿತ್ತು ಎಂಬ ಮಾಹಿತಿ ಹೊರಬಿದ್ದಿದೆ.

ಮತದಾರರ ಪಟ್ಟಿ ಪರಿಷ್ಕರಣೆ ಹಿನ್ನೆಲೆಯಲ್ಲಿ ಬೆಂಗಳೂರು ನಗರ ಜಿಲ್ಲಾ ಚುನಾವಣಾಧಿಕಾರಿಯೂ ಆಗಿರುವ ಬಿಬಿಎಂಪಿ ಮುಖ್ಯ ಆಯುಕ್ತ ತುಷಾರ್ ಗಿರಿನಾಥ್ ಚಿಲುಮೆ ಸಂಸ್ಥೆಗೆ ಅನುಮತಿ ನೀಡಿತ್ತು. ಹೀಗೆ ಅನುಮತಿ ನೀಡುವ ವೇಳೆ ಬಿಬಿಎಂಪಿ ನೇಮಿಸಿರುವ ಮತಗಟ್ಟೆ ಮಟ್ಟದ ಅಧಿಕಾರಿಗಳ ನಿಗಾದಲ್ಲಿ ಜಾಗೃತಿ ಮೂಡಿಸುವ ಕಾರ್ಯ ಮಾಡಬೇಕು. ಮತದಾರರ ಯಾವುದೇ ರೀತಿಯ ಮಾಹಿತಿ ಸಂಗ್ರಹಿಸಬಾರದು ಎಂಬ ಷರತ್ತು ವಿಧಿಸಲಾಗಿತ್ತು.

ಆದರೆ, ಅದಕ್ಕೆ ವಿರುದ್ಧವಾಗಿ ಮತದಾರರ ಖಾಸಗಿ ಮಾಹಿತಿಯನ್ನು ಸಂಗ್ರಹಿಸುವ ಮೂಲಕ ಚಿಲುಮೆ ಸಂಸ್ಥೆ ಅಕ್ರಮ  ಎಸಗಿದೆ. ಹೀಗೆ ಸಂಗ್ರಹಿಸಲಾಗುತ್ತಿದ್ದ ಮತದಾರರ ಮಾಹಿತಿಯನ್ನು ರಾಜಕೀಯ ಪಕ್ಷಗಳು ಅಥವಾ ನಾಯಕರಿಗೆ ಹಣಕ್ಕಾಗಿ ನೀಡುವ ಹುನ್ನಾರವನ್ನೂ ಮಾಡಲಾಗಿತ್ತು ಎಂಬ ಮಾಹಿತಿ ತಿಳಿದುಬಂದಿದೆ.

**ಜಾತಿ, ಭಾಷೆಯ ವಿವರ ಸಂಗ್ರಹ:** ಬಿಬಿಎಂಪಿ ಅಧಿಕಾರಿಗಳ ಮಾಹಿತಿ ಪ್ರಕಾರ ಚಿಲುಮೆ ಸಂಸ್ಥೆ ನೇಮಿಸಿದ್ದ ಪ್ರತಿನಿಧಿಗಳಿಗೆ ಮಹದೇವಪುರ ವಲಯ ವ್ಯಾಪ್ತಿಯ ಕಂದಾಯ ಅಧಿಕಾರಿ ಬಿಬಿಎಂಪಿಯ ಗುರುತಿನ ಚೀಟಿ ನೀಡಿದ್ದರು. ಅದನ್ನು ಬಳಸಿಕೊಂಡು ಚಿಲುಮೆ ಸಂಸ್ಥೆ  ಪ್ರತಿನಿದಿಗಳು ಮನೆಮನೆಗೆ ತೆರಳಿ ಮತದಾರರ ಜಾತಿ, ಭಾಷೆ, ವಯಸ್ಸು ಉದ್ಯೋಗ, ಶೈಕ್ಷಣಿಕ ಅರ್ಹತೆ ವಿವಾಹವಾಗಿದ್ದಾರೆಯೇ ಅಥವಾ ಇಲ್ಲವೇ ಎಂಬ ಬಗೆಗಿನ ಮಾಹಿತಿಗಳನ್ನು ಸಂಗ್ರಹಿಸುತ್ತಿದ್ದರು. ಅದರ ಜೊತೆಗೆ ಮತದಾರರ ಆಧಾರ್ ಸಂಖ್ಯೆ ಫೋನ್ ಸಂಖ್ಯೆ ಇ–ಮೇಲ್ ಐಡಿ, ವಿಳಾಸ ಮತದಾರರ ಗುರುತಿನ ಚೀಟಿ ಸಂಖ್ಯೆಯನ್ನು ಸಂಗ್ರಹಿಸಿದ್ದಾರೆ ಎಂದು ಹೇಳಲಾಗಿದೆ. ಈ ಮಾಹಿತಿಯನ್ನು ಡಿಜಿಟಲ್ ಸಮೀಕ್ಷಾ ಎಂಬ ಪ್ರತ್ಯೇಕ ಮೊಬೈಲ್ ಆ್ಯಪ್‌ನಲ್ಲಿ ಅಪ್‌ಲೋಡ್ ಮಾಡಲಾಗುತ್ತಿತ್ತು.

ಈಗಾಗಲೇ 8 ವಲಯಗಳ ಪೈಕಿ 6 ವಲಯಗಳಲ್ಲಿ ಮತದಾರರ ಮಾಹಿತಿ ಸಂಗ್ರಹಿಸುವ ಕಾರ್ಯ ಪೂರ್ಣಗೊಂಡಿದೆ ಎಂದು ಹೇಳಲಾಗುತ್ತಿದೆ. ಹೀಗೆ ಸಂಗ್ರಹಿಸಲಾದ ಮಾಹಿತಿ ಹಾಗೂ ಮೊಬೈಲ್ ಆ್ಯಪ್‌ನಲ್ಲಿ ಅಪ್‌ಲೋಡ್ ಮಾಡಿದ ನಂತರ ಅದನ್ನು ರಾಜಕೀಯ ನಾಯಕರ ಜೊತೆ ಮಾತುಕತೆ ನಡೆಸಿ ಮತದಾರರ ಮಾಹಿತಿಯನ್ನು ನೀಡುವ ಕುರಿತು ವ್ಯವಹಾರ ಮಾಡಲಾಗುತ್ತಿದೆ. ಆ ಮೂಲಕ ರಾಜಕೀಯ ಪಕ್ಷಗಳು ಮುಂದಿನ ಬಿಬಿಎಂಪಿ ಮತ್ತು ವಿಧಾನಸಭೆ ಚುನಾವಣೆಗೆ ಸಿದ್ಧತೆ ಮಾಡಿಕೊಳ್ಳಲು ಸಹಕಾರಿಯಾಗುವಂತೆ ಮಾಡಲಾಗುತ್ತಿದೆ.

| **ಮತದಾರರ ಪಟ್ಟಿಯಿಂದ ಹೆಸರು ತೆಗೆದ ವಿವರ** | |
|---|---|
| **ವಿಧಾನಸಭಾ ಕ್ಷೇತ್ರ** | **ತೆಗೆದು ಹಾಕಲಾದ ಮತದಾರರ ಸಂಖ್ಯೆ** |
| ಯಲಹಂಕ | 21968 |
| ಕೆ.ಆರ್. ಪುರ | 39763 |
| ಬ್ಯಾಟರಯನಪುರ | 30757 |
| ಯಶವಂತಪುರ | 35829 |
| ರಾಜರಾಜೇಶ್ವರಿನಗರ | 33009 |
| ದಾಸರಹಳ್ಳಿ | 35086 |
| ಮಹಾಲಕ್ಷ್ಮಿ ಲೇಔಟ್ | 20404 |
| ಮಲ್ಲೇಶ್ವರಂ | 11788 |

| | |
|---|---|
| ಹೆಬ್ಬಾಳ | 20039 |
| ಪುಲಕೇಶಿನಗರ | 22196 |
| ಸರ್ವಜ್ಞನಗರ | 28691 |
| ಸಿ.ವಿ. ರಾಮನ್‌ನಗರ | 21457 |
| ಶಿವಾಜಿನಗರ | 14679 |
| ಶಾಂತಿನಗರ | 20386 |
| ಗಾಂಧಿನಗರ | 16465 |
| ರಾಜಾಜಿನಗರ | 12757 |
| ಗೋವಿಂದರಾಜನಗರ | 20067 |
| ವಿಜಯನಗರ | 28562 |
| ಚಾಮರಾಜಪೇಟೆ | 19304 |
| ಚಿಕ್ಕಪೇಟೆ | 16231 |
| ಬಸವನಗುಡಿ | 18838 |
| ಪದ್ಮನಾಭನಗರ | 17435 |
| ಬಿಟಿಎಂ ಲೇಔಟ್ | 16141 |
| ಜಯನಗರ | 13061 |
| ಮಹದೇವಪುರ | 33376 |
| ಬೊಮ್ಮನಹಳ್ಳಿ | 31157 |
| ಬೆಂಗಳೂರು ದಕ್ಷಿಣ | 45927 |
| ಆನೇಕಲ್ | 24279 |
| **ಒಟ್ಟು** | **6,69,652** |

ಆಧಾರ: ಉದಯವಾಣಿ, ದಿನಾಂಕ:19.11.2022

## 58. ರಾಜ್ಯದ ರೈಲ್ವೆ ಯೋಜನೆಗಳ ಅನುಷ್ಠಾನಕ್ಕೆ ಕೇಂದ್ರ–ರಾಜ್ಯ ಸಮನ್ವಯ ಸಮಿತಿ ರಚನೆ

ರಾಜ್ಯದಲ್ಲಿ ಅನುಷ್ಠಾನಗೊಳಿಸುತ್ತಿರುವ ರೈಲ್ವೆ ಯೋಜನೆಗಳ ತ್ವರಿತ ಅನುಷ್ಠಾನಕ್ಕಾಗಿ ರೈಲ್ವೆ ಇಲಾಖೆ ಹಾಗೂ ಕರ್ನಾಟಕ ಸರ್ಕಾರದ ಹಿರಿಯ ಅಧಿಕಾರಿಗಳ ತಂಡ ರಚಿಸಲು ನಿರ್ಧರಿಸಲಾಗಿದೆ.

ಮುಖ್ಯಮಂತ್ರಿಯವರು ಹಾಗೂ ಕೇಂದ್ರ ರೈಲ್ವೆ ಸಚಿವ ಅಶ್ವಿನಿ ವೈಷ್ಣವ್ ಅವರು ರಾಜ್ಯದ ರೈಲ್ವೆ ಯೋಜನೆಗಳ ಪ್ರಗತಿ ಪರಿಶೀಲಿಸಿದ ವೇಳೆ ಈ ತೀರ್ಮಾನ ಕೈಗೊಳ್ಳಲಾಗಿದೆ. ರಾಜ್ಯದಲ್ಲಿ ಕೇಂದ್ರ ಸರ್ಕಾರದೊಂದಿಗೆ 50:50 ವೆಚ್ಚ ಹಂಚಿಕೆ ಆಧಾರದಲ್ಲಿ 9 ಹೊಸ ರೈಲು ಮಾರ್ಗ ಯೋಜನೆಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, ಈ ಯೋಜನೆಗಳ ಪ್ರಗತಿ ಬಗ್ಗೆ ಪರಿಶೀಲನೆ ನಡೆಸಲಾಗಿದೆ. ಈ ಸಂದರ್ಭದಲ್ಲಿ ಯೋಜನೆಗಳು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಲು ಉತ್ತಮ ಸಮನ್ವಯ ಸಾಧಿಸುವ ಹಾಗೂ ತೊಡಕುಗಳನ್ನು ನಿವಾರಿಸುವ ಉದ್ದೇಶದಿಂದ ಅಧಿಕಾರಿಗಳ ತಂಡ ರಚಿಸುವುದಾಗಿ ಉಭಯ ನಾಯಕರು ತಿಳಿಸಿದರು.

ರೈಲ್ವೆ ಯೋಜನೆಗಳಿಗೆ ಅಗತ್ಯವಿರುವ ಭೂ ಸ್ವಾಧೀನಕ್ಕೆ ಮೊದಲ ಅದ್ಯತೆ ನೀಡುವಂತೆ ಸೂಚಿಸಿದ ಮುಖ್ಯಮಂತ್ರಿಯವರು, ಅತಿ ಹೆಚ್ಚು ಬೇಡಿಕೆಯ ಹಾಗೂ ತ್ವರಿತವಾಗಿ ಪೂರ್ಣಗೊಳಿಸಲು ಸಾಧ್ಯವಿರುವ ಯೋಜನೆಗಳಿಗೆ ಆಧ್ಯತೆಯ ಮೇರೆಗೆ ಭೂ ಸ್ವಾಧೀನ ಮಾಡುವಂತೆ ತಿಳಿಸಿದರು.

ವೆಚ್ಚ ಹಂಚಿಕೆಯಡಿ ಆರಂಭಿಸುವ 9 ರೈಲ್ವೆ ಯೋಜನೆಗಳಿಗೆ ಒಟ್ಟು 15 ಸಾವಿರ ಎಕರೆ ಭೂಮಿ ಅಗತ್ಯವಿದ್ದು, ಈವರೆಗೆ 900 ಎಕರೆ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಂಡಿದೆ. 6000 ಎಕರೆ ಭೂಸ್ವಾಧೀನ ಮಾಡಿಕೊಡಬೇಕಾಗಿದೆ ಎಂದು ಅಧಿಕಾರಿಗಳು ಮಾಹಿತಿ ನೀಡಿದರು.

ಗದಗ–ವಾಡಿ, ರಾಯದುರ್ಗ–ತುಮಕೂರು, ಗಿಣಿಗೇರಾ–ರಾಯಚೂರು, ತುಮಕೂರು, ಚಿತ್ರದುರ್ಗ–ದಾವಣಗೆರೆ, ಬಾಗಲಕೋಟೆ–ಕುಡಚಿ, ಕಡೂರು, ಚಿಕ್ಕಮಗಳೂರು– ಬೇಲೂರು, ಹಾಸನ–ಬೇಲೂರು, ಶಿವಮೊಗ್ಗ–ರಾಣಿಬೆನ್ನೂರು, ಮಾರಿಕುಪ್ಪಂ–ಕುಪ್ಪಂ, ಬೆಳಗಾವಿ–ಧಾರವಾಡ ಮೊದಲಾದ ಹೊಸ ರೈಲು ಮಾರ್ಗಗಳಿಗೆ ಸಂಬಂಧಿಸಿದಂತೆ ಪ್ರಗತಿ ಪರಿಶೀಲನೆ ನಡೆಸಲಾಯಿತು. ಇದರೊಂದಿಗೆ ಬೆಂಗಳೂರು ಸಬ್ ಅರ್ಬನ್ ರೈಲು ಮಾರ್ಗ ರೈಲು ಮಾರ್ಗಗಳ ವಿದ್ಯುದೀಕರಣ ಮೊದಲಾದ ವಿಷಯಗಳ ಕುರಿತು ಸಹ ಚರ್ಚಿಸಲಾಯಿತು.

**2023ರ ಮಾರ್ಚ್‌ಗೆ ಹುಬ್ಬಳ್ಳಿ–ಬೆಂಗಳೂರು ವಂದೇ ಭಾರತ್ ರೈಲು**: ಮಾರ್ಚ್ 2023ರ ವೇಳೆಗೆ ಹುಬ್ಬಳ್ಳಿ–ಬೆಂಗಳೂರು ನಡುವೆ ವಂದೇ ಭಾರತ್ ಎಕ್ಸ್‌ಪ್ರೆಸ್ ರೈಲಿಗೆ ಚಾಲನೆ ನೀಡುವ ಗುರಿಯಿದ್ದು ಇದಕ್ಕೆ, ಪೂರಕವಾಗಿ ರೈಲು ಮಾರ್ಗ ವಿದ್ಯುದೀಕರಣ ಪ್ರಕ್ರಿಯೆ ಪೂರ್ಣಗೊಳಿಸಲು ಕ್ರಮಗಳನ್ನು ಕೈಗೊಳ್ಳುವಂತೆ ಕೆಪಿಟಿಸಿಎಲ್‌ಗೆ ಸೂಚಿಸಲಾಯಿತು. ಕೇಂದ್ರ ಕಲ್ಲಿದ್ದಲು ಗಣಿ ಹಾಗೂ ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ ಜೋಶಿ ಸಂಸದ ಎಸ್ ಮುನಿಸ್ವಾಮಿ ಸೇರಿದಂತೆ ರಾಜ್ಯ ಸರ್ಕಾರ ಮತ್ತು ರೈಲ್ವೆ ಇಲಾಖೆ ಅಧಿಕಾರಿಗಳು ಇದ್ದರು.

ರೈಲ್ವೆ ಯೋಜನೆಗಳ ತ್ವರಿತ ಅನುಷ್ಠಾನ ನಮ್ಮ ಅದ್ಯತೆಯಾಗಿದೆ. ಇದಕ್ಕಾಗಿ ಹೆಚ್ಚಿನ ಸಮನ್ವಯದೊಂದಿಗೆ ರಾಜ್ಯ ಸರ್ಕಾರ ಹಾಗೂ ರೈಲ್ವೆ ಅಧಿಕಾರಿಗಳು ಕಾರ್ಯನಿರ್ವಹಿಸಬೇಕಾಗಿದೆ.

ಅಶ್ವಿನಿ ವೈಷ್ಣವ್, ಕೇಂದ್ರ ಸಚಿವ

ಆಧಾರ: ವಿಶ್ವವಾಣಿ, ದಿನಾಂಕ:20.11.2022

## 59. ಮಾಹಿತಿ ಕಳವು : ಚಿಲುಮೆ ಆಡಳಿತಾಧಿಕಾರಿ ಸೆರೆ

ಮತದಾರರ ಮಾಹಿತಿ ಕಳವು ಪ್ರಕರಣದ ತನಿಖೆ ತೀವ್ರಗೊಳಿಸಿರುವ ಹಲಸೂರು ಗೇಟ್ ಠಾಣೆ ಪೊಲೀಸರು ತಲೆಮರೆಸಿಕೊಂಡಿದ್ದ ಚಿಲುಮೆ ಸಂಸ್ಥೆಯ ಆಡಳಿತಾಧಿಕಾರಿ ಕೆ.ಎಂ. ಲೋಕೇಶ್‌ನನ್ನು ಬಂಧಿಸಿದ್ದಾರೆ.

ಚಿಲುಮೆ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಗ್ರಾಮೀಣಾಭಿವೃದ್ಧಿ ಸಂಸ್ಥೆಗೆ ನಗರದ ಮತದಾರರ ಮತಪಟ್ಟಿ ಪರಿಷ್ಕರಣೆ ಕುರಿತು ಜಾಗೃತಿ ಹಾಗೂ ಮತದಾರರ ಗುರುತಿನ ಚೀಟಿಗೆ ಆಧಾರ್ ಸಂಖ್ಯೆ ಲಿಂಗ್ ಮಾಡಲು ಬಿಬಿಎಂಪಿ ಷರತ್ತುಬದ್ಧ ಅನುಮತಿ ನೀಡಿತ್ತು. ಈ ಷರತ್ತುಗಳನ್ನು ಉಲ್ಲಂಘಿಸಿದ ಆರೋಪದಡಿ ಅನುಮತಿ ರದ್ದುಗೊಳಿಸಲಾಗಿತ್ತು. ಆದರೂ ಚಿಲುಮೆ ಸಂಸ್ಥೆಯ ಮುಖ್ಯಸ್ಥ ರವಿಕುಮಾರ್‌ನ ಆಪ್ತನಾಗಿರುವ ಆರೋಪಿ ಕೆ.ಎಂ. ಲೋಕೇಶ್ ಬಿಬಿಎಂಪಿಯಿಂದ ಯಾವುದೇ ಅನುಮತಿ ಪಡೆಯದೆ ಮತಗಟ್ಟೆ ಮಟ್ಟದ ಸಮನ್ವಯ ಅಧಿಕಾರಿ ಎಂಬ ನಕಲಿ ಗುರುತಿನ ಚೀಟಿ ಸೃಷ್ಟಿಸಿಕೊಂಡಿದ್ದ.

ಅಷ್ಟೇ ಅಲ್ಲದೆ, ಚಿಲುಮೆ ಸಂಸ್ಥೆಯ ಸಿಬ್ಬಂದಿಗೆ ಮತಗಟ್ಟೆ ಮಟ್ಟದ ಅಧಿಕಾರಿ (ಬಿಎಲ್‌ಒ) ಎಂಬ ಗುರುತಿನ ಚೀಟಿ ಸೃಷ್ಟಿಸಿಕೊಟ್ಟು ಮತದಾರರ ಮನೆಗಳಿಗೆ ತೆರಳಿ ಮತದಾರರ ಮಾಹಿತಿ ಹಾಗೂ ಆಧಾರ್ ಕಾರ್ಡ್ ಮಾಹಿತಿ ಸಂಗ್ರಹಿಸಿದ್ದ ಬಳಿಕ ಮತದಾರರ ವೈಯಕ್ತಿಕ ಮಾಹಿತಿಯನ್ನು ದುರ್ಬಳಕೆ ಮಾಡಿಕೊಂಡಿದ್ದ ಮತದಾರರ ಮಾಹಿತಿ ಕಳವು ಆರೋಪ ಸಂಬಂಧ ಎಫ್‌ಐಆರ್ ದಾಖಲಾದ ಬೆನ್ನಲ್ಲೇ

ಆರೋಪಿ ತಲೆಮರೆಸಿಕೊಂಡಿದ್ದ ಈ ಹಿನ್ನಲೆಯಲ್ಲಿ ಪೊಲೀಸರ ವಿಶೇಷ ತಂಡ ಆರೋಪಿಯ ಬಂಧನಕ್ಕೆ ಶೋಧ ಕಾರ್ಯ ಕೈಗೊಂಡಿದ್ದು ಅರೋಪಿಯನ್ನು ಬಂಧಿಸುವಲ್ಲಿ ಯಶಸ್ವಿಯಾಗಿದೆ.

ಈಗಾಗಲೇ ಚಿಲುಮೆ ಸಂಸ್ಥೆಯ ಮುಖ್ಯಸ್ಥ ರವಿಕುಮಾರ್ ಸೇರಿದಂತೆ ಐವರು ಆರೋಪಿಗಳನ್ನು ಪೊಲೀಸರು ಬಂಧಿಸಿದ್ದಾರೆ ಆರೋಪಿ ಕೆ.ಎಂ. ಲೋಕೇಶ್‌ನನ್ನು ಹೆಚ್ಚಿನ ವಿಚಾರಣೆಗೆ ಒಳಪಡಿಸುವ ನಿಟ್ಟಿನಲ್ಲಿ ನ್ಯಾಯಾಲಯಕ್ಕೆ ಹಾಜರುಪಡಿಸಿ ಕಸ್ಟಡಿಗೆ ಪಡೆಯಲು ಪೊಲೀಸರು ಸಿದ್ಧತೆ ನಡೆಸಿದ್ದಾರೆ.

ಪೊಲೀಸರು ಆರೋಪಿಯನ್ನು ಕಸ್ಟಡಿಗೆ ಪಡೆದ ಎಷ್ಟು ಸಮಯದಿಂದ ಮತದಾರರ ಮಾಹಿತಿ ಸಂಗ್ರಹಿಸಲಾಗಿದೆ. ಯಾರೊಂದಿಗೆ ಈ ಮಾಹಿತಿ ಹಂಚಿಕೊಳ್ಳಲಾಗಿದೆ. ರಾಜಕಾರಣಿಗಳೊಂದಿಗೆ ಸಂಪರ್ಕ ಸೇರಿದಂತೆ ಹಲವು ವಿಚಾರಗಳ ಬಗ್ಗೆ ವಿಚಾರಣೆಗೆ ಒಳಪಡಿಸಲಿದ್ದಾರೆ.

ಬಂಧಿತ ಆರೋಪಿ ಕೆ.ಎಂ. ಲೋಕೇಶ್ ಚಿಲುಮೆ ಸಂಸ್ಥೆಯ ಮುಖ್ಯಸ್ಥ ರವಿಕುಮಾರ್‌ನ ಆಪ್ತನಾಗಿದ್ದಾನೆ. ಈತ ಮಹದೇವಪುರ ಕ್ಷೇತ್ರದ ವ್ಯಾಪ್ತಿಯಲ್ಲಿ ಹೆಚ್ಚಿನ ಮತದಾರರ ಮಾಹಿತಿ ಸಂಗ್ರಹಿಸಿರುವ ಬಗ್ಗೆ ಗೊತ್ತಾಗಿದೆ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ವಶಕ್ಕೆ ಪಡೆದು ಹೆಚ್ಚಿನ ವಿಚಾರಣೆಗೆ ಒಳಪಡಿಸಲಾಗುವುದು.

ಶ್ರೀನಿವಾಸ, ಕೇಂದ್ರ ವಿಭಾಗದ ಡಿಸಿಪಿ

**ಮೊಬೈಲ್, ಲ್ಯಾಪ್‌ಟಾಪ್ ಎಫ್‌ಎಸ್‌ಎಲ್‌ಗೆ:** ಪ್ರಕರಣ ಪ್ರಮುಖ ಆರೋಪಿ ಚಿಲುಮೆ ಸಂಸ್ಥೆಯ ಮುಖ್ಯಸ್ಥ ರವಿಕುಮಾರ್‌ನ ವಿಚಾರಣೆ ತೀವ್ರಗೊಳಿಸಿರುವ ಪೊಲೀಸರು ಮತದಾರರ ಮಾಹಿತಿ ದುರ್ಬಳಕೆ ಬಗ್ಗೆ ಕೂಲಂಕಷವಾಗಿ ಮಾಹಿತಿ ಪಡಯುತ್ತಿದ್ದಾರೆ. ಅಷ್ಟೇ ಅಲ್ಲದೆ, ಆರೋಪಿಯಿಂದ ಜಪ್ತಿ ಮಾಡಲಾದ ಮೊಬೈಲ್ ಹಾಗೂ ಲ್ಯಾಪ್ ಟಾಪ್‌ಗಳಲ್ಲಿ ಸಂಗ್ರಹಿಸಿದ್ದ ದತ್ತಾಂಶಗಳನ್ನು ಡಿಲಿಟ್ ಮಾಡಲಾಗಿದೆ. ಪೊಲೀಸರು ದತ್ತಾಂಶವನ್ನು ರೀಟ್ರೀವ್ ಮಾಡಲು ಮೊಬೈಲ್ ಹಾಗೂ ಲ್ಯಾಪ್‌ಟಾಪ್ ಅನ್ನು ವಿಧಿವಿಜ್ಞಾನ ಪ್ರಯೋಗಾಲಯಕ್ಕೆ ಕಳುಹಿಸಿದ್ದಾರೆ.

**ಬಿಬಿಎಂಪಿ, ಚಿಲುಮೆ ನಡುವಿನ ಹಲವು ದಾಖಲೆಗಳು ವಶಕ್ಕೆ** : ಈಗಾಗಲೇ ಚಿಲುಮೆ ಸಂಸ್ಥೆಯ ನಿರ್ದೇಶಕ ಕೆಂಪೇಗೌಡ, ಧರ್ಮೇಶ್‌ನನ್ನು ಬಂಧಿಸಿ ಹೆಚ್ಚಿನ ವಿಚಾರಣೆಗೆ ಒಳಪಡಿಸಲಾಗಿದೆ. ಆರೋಪಿಗಳು ವಿಚಾರಣೆ ವೇಳೆ ನೀಡಿದ ಮಾಹಿತಿ ಮೇರೆಗೆ ಈ ಇಬ್ಬರೂ ಆರೋಪಿಗಳ ಮನೆ, ಕಛೇರಿಗಳಿಗೆ ತೆರಳಿ ಸ್ಥಳ ಮಹಜರು ನಡೆಸಲಾಗಿದೆ. ಸ್ಥಳ ಮಹಜರು ವೇಳೆ ಬಿಬಿಎಂಪಿ ಹಾಗೂ ಚಿಲುಮೆ ಸಂಸ್ಥೆ ನಡುವೆ ನಡೆದಿದ್ದ ದಾಖಲೆಗಳು ಪೊಲೀಸರಿಗೆ ಸಿಕ್ಕಿವೆ ಎಂಬುದು ತಿಳಿದು ಬಂದಿದೆ.

**ಮೂವರು ಕಂದಾಯ ಅಧಿಕಾರಿಗಳಿಗೆ ಪೊಲೀಸ್ ನೋಟಿಸ್:** ಮತದಾರರ ಮಾಹಿತಿ ಸಂಗ್ರಹಿಸಲು ಚಿಲುಮೆ ಸಂಸ್ಥೆಯ ಸಿಬ್ಬಂದಿಗೆ ಬೂತ್ ಮಟ್ಟದ ಅಧಿಕಾರಿ (ಬಿಎಲ್‌ಓ) ಎಂಬ ಗುರುತಿನ ಚೀಟಿ ವಿತರಿಸಿ ಕರ್ತವ್ಯ ಲೋಪ ಎಸಗಿದ ಆರೋಪದಡಿ ಅಮಾನತ್ತಾಗಿರುವ ಕಂದಾಯ ಅಧಿಕಾರಿಗಳು ಹಾಗೂ ವಿಧಾನಸಭಾ ಕ್ಷೇತ್ರದ ಮತದಾರರ ನೋಂದಣಾಧಿಕಾರಿಗಳೂ ಆದ ಮಹದೇವಪುರ ಕ್ಷೇತ್ರದ ಕೆ. ಚಂದ್ರಶೇಖರ್, ಶಿವಾಜಿನಗರದ ಸುಹೇಲ್ ಅಹಮದ್ ಹಾಗೂ ಚಿಕ್ಕಪೇಟೆಯ ವಿ.ಬಿ. ಭೀಮಾಶಂಕರ್‌ಗೆ ವಿಚಾರಣೆ ಹಾಜರಾಗುವಂತೆ ಹಲಸೂರು ಗೇಟ್ ಠಾಣೆ ಪೊಲೀಸರು ನೋಟಿಸ್ ನೀಡಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ:23.11.2022

## 60. ಐದು ದಶಕದ ಬಳಿಕ ಹಕ್ಕುಪತ್ರ ಲಭ್ಯ

ಕಬಿನಿ ಜಲಾಶಯ ನಿರ್ಮಾಣದ ವೇಳೆ ಭೂಮಿ ಕಳೆದುಕೊಂಡು ಅರಣ್ಯ ಪ್ರದೇಶದಲ್ಲಿ ಉಳಿಮೆ ಮಾಡುತ್ತಿದ್ದವರಿಗೆ ಐದು ದಶಕದ ಬಳಿಕ ಹಕ್ಕುಪತ್ರ ಸಿಗುತ್ತಿದೆ.

ಹಲವು ದಶಕಗಳಿಂದ ನೆನಗುದಿಗೆ ಬಿದ್ದಿದ್ದ ಈ ಕಾರ್ಯ ಪೂರ್ಣಗೊಳಿಸಲು ರಾಜ್ಯ ಸರ್ಕಾರ ಮುಂದಾಗಿದ್ದು, ಮುಂದಿನ ಎರಡು ತಿಂಗಳಲ್ಲಿ ಹಕ್ಕುಪತ್ರವನ್ನು ಅರ್ಹರಿಗೆ ನೀಡಲು ತೀರ್ಮಾನಿಸಲಾಗಿದೆ.

ಈ ಬಗ್ಗೆ ವಿಧಾನಸೌಧದಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿದ ಕಂದಾಯ ಸಚಿವ ಆರ್. ಆಶೋಕ್, ಐದು ದಶಕಗಳಿಂದ ಭೂಮಿಗಾಗಿ ಹೋರಾಡುತ್ತಿರುವ ಎಚ್.ಡಿ. ಕೋಟೆ ತಾಲ್ಲೂಕಿನ ಹಾಡಿಗಳ ಜನರಿಗೆ ಇನ್ನೆರಡು ತಿಂಗಳಲ್ಲಿ ಹಕ್ಕುಪತ್ರ ಒದಗಿಸಲಾಗುವುದು ಎಂದು ತಿಳಿಸಿದರು.

ಕಬಿನಿ ಅಣೆಕಟ್ಟು ಕಟ್ಟುವಾಗ ಅರಣ್ಯ ಪ್ರದೇಶದಲ್ಲಿ ಉಳುಮೆ ಮಾಡುತ್ತಿದ್ದವರು ಭೂಮಿ ಕಳೆದುಕೊಂಡಿದ್ದರು. ಕಬಿನಿ ಅಣೆಕಟ್ಟು ಕಟ್ಟುವಾಗ ಕೆಂಚನಹಳ್ಳಿ, ಸೇರಿದಂತೆ, ಎಚ್.ಡಿ. ಕೋಟೆ ತಾಲ್ಲೂಕಿನ ಕೆಲ ಗ್ರಾಮಗಳ ಜನ 1070 ಎಕರೆಯಷ್ಟು ಭೂಮಿ ಕಳೆದುಕೊಂಡಿದ್ದರು. ಹೀಗೆ ಜಮೀನು ಕಳೆದುಕೊಂಡವರಿಗೆ ಪರ್ಯಾಯವಾಗಿ ಭೂಮಿ ಕೊಡುವಾಗ 800 ಎಕರೆಯಷ್ಟು ಭೂಮಿ ಮಾತ್ರ. ಅವರಿಗೆ ನೀಡಲಾಯಿತು ನಿಯಮದಂತೆ ಅವರಿಗೆ ಕೊಡಬೇಕಿದ್ದ ಭೂಮಿಯನ್ನು ಜನವರಿ ತಿಂಗಳಲ್ಲಿ ಕೊಡುವುದಾಗಿ ಹೇಳಿದರು.

**ಗ್ರಾಮ ವಾಸ್ತವ್ಯದ ವೇಳೆ ಮಾಹಿತಿ:** ಈ ಪ್ರದೇಶಗಳಲ್ಲಿ ವಾಸ್ತವ್ಯ ಮಾಡಿದ ಸಮಯದಲ್ಲಿ ಈ ವಿಷಯದ ಬಗ್ಗೆ ಹಲವು ವಿವರಗಳು ತಮಗೆ ಸಿಕ್ಕಿದ್ದು, ಅವರಿಗೆ ನ್ಯಾಯಯುತವಾಗಿ ಸಲ್ಲಬೇಕಾದ ಭೂಮಿಯನ್ನು ಮರಳಿ ಕೊಡಿಸುವ ಸಂಬಂಧ ಈ ವಾರ ಉನ್ನತ ಮಟ್ಟದ ಸಭೆ ನಡೆಸಲಾಗುವುದು. ಅರಣ್ಯ ಇಲಾಖೆ, ಕಂದಾಯ ಇಲಾಖೆ, ಪ್ರಧಾನ ಕಾರ್ಯದರ್ಶಿಗಳು ಮತ್ತು ಚಾಮರಾಜನಗರ ಜಿಲ್ಲಾಧಿಕಾರಿಗಳು ಸೇರಿದಂತೆ ಹಲವರು ಈ ಸಭೆಯಲ್ಲಿ ಭಾಗವಹಿಸಲಿದ್ದು, ಕಬಿನಿ ಸಂತ್ರಸ್ತರಿಗೆ ಸಲ್ಲಬೇಕಾದ ಭೂಮಿಯನ್ನು ಕೊಡುವ ಮಾರ್ಗೋಪಾಯಗಳ ಕುರಿತು ಚರ್ಚಿಸುವುದಾಗಿ ತಿಳಿಸಿದರು.

ಎರಡು ದಿನ ಆ ಪ್ರದೇಶದಲ್ಲಿ ಪ್ರವಾಸದಲ್ಲಿದ್ದಾಗ ಸದರಿ ಭೂಮಿ ಕೊಡಲು ಅಡ್ಡಗಾಲಾಗಿರುವ ಅರಣ್ಯ ಇಲಾಖೆಯ ಅಧಿಕಾರಿಗಳನ್ನು ಕರೆಸಿ ಮಾತನಾಡಿದ್ದೇನೆ. ಆ ಸಂದರ್ಭದಲ್ಲಿ ಅವರು ಕಬಿನಿ ಅಣೆಕಟ್ಟು ಯೋಜನೆಯಿಂದ ಸಂತ್ರಸ್ತರಾದವರಯ ಬೇರೆ ಊರಿನಲ್ಲಿ ಒತ್ತುವರಿ ಮಾಡಿಕೊಂಡಿದ್ದು ಅವರು ಭೂಮಿ ತೆರವು ಮಾಡದೇ ಇವರಿಗೆ ಹೇಗೆ ಭೂಮಿ ಕೊಡಲು ಸಾಧ್ಯ ಎಂದು ಕೇಳಿದರು.

ಆದರೆ, ಬೇರೆ ಯಾರೋ, ಮತ್ತೆಲ್ಲೊ ಭೂಮಿ ಒತ್ತುವರಿ ಮಾಡಿಕೊಂಡಿದ್ದಕ್ಕೂ ಇದಕ್ಕೂ ಸಂಬಂಧವಿಲ್ಲ. ಒತ್ತುವರಿ ಮಾಡಿಕೊಂಡವರನ್ನು ನೀವು ತೆರವುಗೊಳಿಸಿ, ಆದರೆ ಅದಕ್ಕೂ ಈ ಪ್ರಕರಣಕ್ಕೂ ಹೋಲಿಕೆ ಮಾಡಬೇಡಿ ಇಲ್ಲಿ ಭೂಮಿಗಾಗಿ ಹೋರಾಡುತ್ತಿರುವವರು ತಮ್ಮ ಹಕ್ಕಿನ ಪರವಾಗಿ ಹೋರಾಡುತ್ತಿದ್ದಾರೆ. ಅವರಿಗೆ ಕೊಡಬೇಕಾದ ಮುನ್ನೂರು ಎಕರೆ ಭೂಮಿಯನ್ನು ಕೊಡಲೇಬೇಕು ಎಂದು ಹೇಳಿದ್ದೇನೆ ಎಂದರು.

ಭೂಮಿ ಕಳೆದುಕೊಂಡವರಲ್ಲಿ ಕಾಡು ಕುರುಬರು, ಜೇನುಕುರುಬರು, ಬೆಟ್ಟ ಕುರುಬರು ಎರವರು ಸೋಲಿಗ ಜನರಿದ್ದು ತಮ್ಮ ಬೇಡಿಕೆಗಾಗಿ ನಿರಂತರವಾಗಿ ಹೋರಾಡಿಕೊಂಡೂ ಬಂದಿದ್ದರು. ಎಚ್.ಡಿ. ಕೋಟೆ ಭಾಗದಲ್ಲಿ ಭೂಮಿಗಾಗಿ ದಶಕಗಳಿಂದ ಅಲ್ಲಿನ ಜನರ ಹೋರಾಟ ನಡೆಸಿದ್ದು ಅವರ ವಿರುದ್ಧ ಮೊಕದಮ್ಮೆಗಳನ್ನು ದಾಖಲಿಸಲಾಗಿದೆ. ಆ ಮೊಕದ್ದಮೆಗಳನ್ನು ಹಿಂಪಡೆಯಲು ಕ್ರಮ ಕೈಗೊಳ್ಳಲಾಗುವುದು

ಆರ್. ಅಶೋಕ್, ಕಂದಾಯ ಸಚಿವ.

**23 ಹಾಡಿ ಜನರಿಗೆ ಭೂಮಿ:** ಇನ್ನು ಮತ್ತೊಂದು ಉನ್ನತ ಮಟ್ಟದ ಸಭೆಯನ್ನು ಈ ವಾರದಲ್ಲಿ ನಡೆಸಿ, ಕೆಂಚನಹಳ್ಳಿ ಸೇರಿದಂತೆ 23 ಹಾಡಿಗಳ ಜನರಿಗೆ ಭೂಮಿ ನೀಡುವ ಕಾರ್ಯಕ್ಕೆ ಚಾಲನೆ ನೀಡಲಾಗುವುದು. ಸಾಮಾನ್ಯವಾಗಿ ಒಂದೊಂದು ಹಾಡಿಯಲ್ಲಿ 30 ರಿಂದ 40 ಕುಟುಂಬಗಳಿರುತ್ತವೆ. ಇವರಿಗೆ ನ್ಯಾಯ ಕೊಡಿಸುವ ಹಾಗೂ ಗೌರವಯುತವಾಗಿ ಜೀವಿಸುವುದಕ್ಕೆ ಅನುಕೂಲವಾಗುವಂತೆ ಕ್ರಮವಹಿಸಲಾಗುವುದು ಎಂದರು

- 270 ಎಕರೆ ಭೂಮಿಗಾಗಿ ದಶಕಗಳ ಕಾಲದಿಂದ ನಿರಂತರವಾಗಿ ಹೋರಾಟ.
- ಕಬಿನಿ ಅಣೆಕಟ್ಟು ಕಟ್ಟುವಾಗ ಭೂಮಿ ಕಳೆದುಕೊಂಡಿದ್ದರು.

- ಕೆಂಚನಹಳ್ಳಿ ಸೇರಿದಂತೆ ಎಚ್.ಡಿ.ಕೋಟೆ ತಾಲ್ಲೂಕಿನ ಕೆಲ ಗ್ರಾಮಗಳ ಜನ 1070 ಎಕರೆ ಭೂಮಿ ಕಳೆದುಕೊಂಡಿದ್ದರು.
- ಭೂಮಿ ಕಳೆದುಕೊಂಡವರಿಗೆ ಜನವರಿನಲ್ಲಿ ಹಕ್ಕುಪತ್ರ ವಿತರಣೆ.

ಆಧಾರ: ವಿಶ್ವವಾಣಿ,, ದಿನಾಂಕ:23.11.2022

## 61. ಮಹಾವಿರುದ್ಧ ಕಿಡಿ.

ಬೆಳಗಾವಿ ಗಡಿ ವಿವಾದ ಸಂಬಂಧ ಮಹಾರಾಷ್ಟ್ರ ಸರ್ಕಾರ ಅನುಸರಿಸುತ್ತಿರುವ ನಡೆ ಬಗ್ಗೆ ರಾಜ್ಯಾದ್ಯಂತ ಭಾರೀ ಆಕ್ರೋಶ ವ್ಯಕ್ತವಾಗಿದೆ.

ಮಹಾರಾಷ್ಟ್ರ ಸರ್ಕಾರ ಸಲ್ಲಿಕೆ ಮಾಡಿರುವ ಅರ್ಜಿ ಸುಪ್ರಿಂಕೋರ್ಟ್ ಮುಂದೆ ಬರಲಿದೆ. ವಿಚಿತ್ರವೆಂದರೆ, ಈ ಅರ್ಜಿ ಮಾನ್ಯ ಮಾಡಬೇಕೋ ಅಥವಾ ಬೇಡವೋ ಎಂಬ ಬಗ್ಗೆ ಸುಪ್ರೀಂಕೋರ್ಟ್ ಇನ್ನು ತೀರ್ಮಾನಿಸಿಲ್ಲ. ಒಂದು ವೇಳೆ ಅರ್ಜಿ ಸ್ವೀಕಾರ ಮಾಡುವುದಿಲ್ಲ ಎಂದು ಸುಪ್ರೀಂಕೋರ್ಟ್ ಹೇಳಿದರೆ ಮಹಾರಾಷ್ಟ್ರದ ಕಾನೂನು ಸಮರ ಅಂತ್ಯಗೊಳ್ಳಲಿದೆ. ಈಗಾಗಲೇ ಗಡಿ ವಿವಾದ ಮುಗಿದ ಅಧ್ಯಾಯವಾದರೂ ಮತ್ತೆ ಮತ್ತೆ ರಾಜಕೀಯ ಕಾರಣದಿಂದಾಗಿ ಆಗಾಗ್ಗೆ ಈ ಬಗ್ಗೆ ಕೆದಕುತ್ತಲೇ ಇದೆ. ಈ ಸಂಬಂಧ ರಾಜ್ಯದಲ್ಲಿಯೂ ಪಕ್ಷಾತೀತವಾಗಿ ವಿರೋಧ ವ್ಯಕ್ತವಾಗಿದೆ.

ಈ ವಿಚಾರದಲ್ಲಿ ಸರ್ಕಾರ ಎಚ್ಚರದಿಂದ ಕಣ್ಣಲ್ಲಿ ಕಣ್ಣಿಟ್ಟು ನಡೆಯಬೇಕಾಗಿದೆ. ಕೇಂದ್ರ ಸರ್ಕಾರದ ಮೇಲೆ ಒತ್ತಡ ಹೇರಿ ಆ ಅರ್ಜಿ ವಾದಕ್ಕೆ ಬಾರದ ರೀತಿಯಲ್ಲಿ ಕಾರ್ಯನಿರ್ವಹಿಸಬೇಕಾಗಿದೆ. ರಾಜ್ಯ ಸರ್ಕಾರವು ಗಡಿ ಉಸ್ತುವಾರಿ ಸಚಿವರನ್ನು ನೇಮಕ ಮಾಡಬೇಕು ಎಂದು ಕನ್ನಡ ಪರ ಹೋರಾಟಗಾರರು ಸಾಹಿತಿಗಳು ಆಗ್ರಹಿಸಿದ್ದಾರೆ.

ಈ ಮಧ್ಯೆ ಮುಖ್ಯಮಂತ್ರಿಯವರು ಮಾತನಾಡಿ, ಮಹಾರಾಷ್ಟ್ರ ಮುಖ್ಯಮಂತ್ರಿಗಳ ನಡುವೆ ವ್ಯಾಜ ಹೆಚ್ಚಿಸುವ ಕೆಲಸವನ್ನು ಮಾಡಬಾರದು ಎಂದು ಗುಡುಗಿದ್ದಾರೆ. ಎರಡು ರಾಜ್ಯಗಳ ನಡುವೆ ಸೌಹಾರ್ದತೆ ಇರುವಾಗ ಎಲ್ಲಾ ಭಾಷಿಕರನ್ನು ಒಂದೇ ರೀತಿಯಲ್ಲಿ ನೋಡಿಕೊಳ್ಳುವಾಗ ಮಹಾರಾಷ್ಟ್ರದಲ್ಲಿ ದೊಡ್ಡ ಪ್ರಮಾಣದಲ್ಲಿ ಕನ್ನಡಿಗರು ಇರುವ ಅವರ ಹಿತರಕ್ಷಣೆ ಮಾಡುವುದು ನಮ್ಮ ಕರ್ತವ್ಯ ಎಂದು ಹೇಳಿದ್ದಾರೆ.

**ಜತ್ ತಾಲ್ಲೂಕು ಕರ್ನಾಟಕಕ್ಕೆ ಸೇರಲಿ:** ಮಹಾರಾಷ್ಟ್ರದ ಜತ್ ತಾಲ್ಲೂಕಿನಲ್ಲಿ ತೀವ್ರ ಬರಗಾಲವಿದ್ದು ಕುಡಿಯುವ ನೀರಿನ ಸಮಸ್ಯೆ ಇತ್ತು. ನಾವೂ ನೀರು ಕೊಟ್ಟು ಸಹಾಯ ಮಾಡಬೇಕೆಂದು ಯೋಜನೆಗಳನ್ನು ರೂಪಿಸಿದ್ದೇವೆ. ಜತ್ ತಾಲ್ಲೂಕು ಕರ್ನಾಟಕಕ್ಕೆ ಸೇರಬೇಕೆಂದು ಎಲ್ಲಾ ಗ್ರಾಮ ಪಂಚಾಯಿತಿಗಳು ನಿರ್ಧರಿಸಿದ್ದವು. ನಾವು ಅದನ್ನು ಗಂಭೀರವಾಗಿ ಪರಿಗಣಿಸುತ್ತದ್ದೇವೆ ಎಂದು ಹೇಳುವ ಮೂಲಕ ಮುಖ್ಯಮಂತ್ರಿಯರು ಮಹಾರಾಷ್ಟ್ರಕ್ಕೆ ತಿರುಗೇಟು ನೀಡಿದ್ದಾರೆ.

**ವರದಿ ನಿರಾಕರಣೆ ಸರಿಯಲ್ಲ**: ಬೆಳಗಾವಿ ವಿಚಾರದಲ್ಲಿ ಮಹಾರಾಷ್ಟ್ರ ತಗಾದೆ ಎತ್ತುತ್ತಲೇ ಇದೆ. ಮಹಾಜನ್ ಆಯೋಗದ ರಚನೆಗೆ ಒತ್ತಾಯ ಮಾಡಿದ್ದೇ ಮಹಾರಾಷ್ಟ್ರ. ಆದರೆ ಮಹಾಜನ್ ಆಯೋಗ ಬೆಳಗಾವಿ ಕರ್ನಾಟಕಕ್ಕೆ ಸೇರಬೇಕು ಎಂಬ ವರದಿ ನೀಡಿದೆ. ಆದರೆ, ಮಹಾಜನ್ ಆಯೋಗದ ವರದಿ ತಮಗೆ ಪೂರಕವಾಗಿಲ್ಲ ಎಂಬ ಕಾರಣಕ್ಕೆ ಮಹಾರಾಷ್ಟ ವರದಿ ನಿರಾಕರಿಸುತ್ತಿದೆ. ಈ ಬಗ್ಗೆಯೂ ಸುಪ್ರಿಂಕೋರ್ಟ್ ಗಮನ ಸೆಳೆಯಬೇಕಿದೆ ಎಂದು ಕೆಪಿಸಿಸಿ ಮಾಜಿ ಅಧ್ಯಕ್ಷ ದಿನೇಶ್ ಗುಂಡೂರಾವ್ ಅವರು ಒತ್ತಾಯಿಸಿದ್ದಾರೆ.

**ಪೀಠವೇ ರಚನೆಯಾಗಿಲ್ಲ:** ಮಹಾಜನ್ ಆಯೋಗದ ವರದಿ ಬಳಿಕ ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳ ನಡುವೆ ಕಾನೂನು ಸಮರ ನಡೆಯುತ್ತಲೇ ಇದೆ. ಅಂದರೆ, 2004 ರಿಂದಲೂ ಈ ವಿವಾದ ಸುಪ್ರೀಂಕೋರ್ಟ್‌ನಲ್ಲಿದೆ. ಕರ್ನಾಟಕದಲ್ಲಿರುವ 814 ಹಳ್ಳಿಗಳನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕು

ಎಂಬುದು ಅಲ್ಲಿನವರ ಒತ್ತಾಯ. ಆದರೆ, ಈ ವಿಚಾರದಲ್ಲಿ ಮಹಾಜನ್ ವರದಿಯೇ ಅಂತಿಮ, ನಮ್ಮ ಕಡೆಯಿಂದ ಯಾವುದೇ ಹಳ್ಳಿಗಳನ್ನು ಕೊಡುವುದಿಲ್ಲ ಎಂದು ಕರ್ನಾಟಕ ಪ್ರಭಲವಾಗಿ ವಾದ ಮಂಡಿಸಿದೆ. ಇದರ ನಡುವೆಯೇ ಕರ್ನಾಟಕ ಸುಪ್ರಿಂಕೋರ್ಟ್‌ನಲ್ಲಿ ಅರ್ಜಿಯೊಂದನ್ನು ಸಲ್ಲಿಸಿದ್ದು, ಗಡಿ ವಿವಾದ ಇತ್ಯರ್ಥ ಮಾಡುವ ಅಧಿಕಾರ ಕೋರ್ಟ್‌ಗಿಲ್ಲ. ಅಂಥ ಅಧಿಕಾರ ಕೇವಲ ಸಂಸತ್‌ಗಿದೆ ಎಂದು ಕರ್ನಾಟಕ ಸರ್ಕಾರ ವಾದ ಮಂಡಿಸುತ್ತಿದೆ.

**ಮಹಾರಾಷ್ಟ್ರದಲ್ಲಿನ ಕನ್ನಡ ಹೋರಾಟಗಾರರಿಗೆ ಪಿಂಚಣಿ:** ಗಡಿ ಅಭಿವೃದ್ಧಿ ಪ್ರಾಧಿಕಾರವು ಮಹಾರಾಷ್ಟ್ರದಲ್ಲಿರುವ ಕನ್ನಡ ಶಾಲೆಯ ಅಭಿವೃದ್ಧಿಗೆ ವಿಶೇಷ ಅನುದಾನ ನೀಡಬೇಕು ಎನ್ನು ತೀರ್ಮಾನ ಮಾಡಿದೆ. ಏಕೀಕರಣ ಹಾಗೂ ಸ್ವಾತಂತ್ರ್ಯ ಹೋರಾಟದಲ್ಲಿ ಹಾಗೂ ಗೋವಾ ವಿಮೋಚನೆಗೆ ಕೆಲಸ ಮಾಡಿದ ಮಹಾರಾಷ್ಟ್ರದಲ್ಲಿರುವ ಕನ್ನಡಿಗರ ದಾಖಲೆಗಳನ್ನು ತರಿಸಿ ಅವರಿಗೂ ಪಿಂಚಣಿ ನೀಡುವ ಕೆಲಸವನ್ನು ಕಾರ್ಯಗತ ಮಾಡಲಾಗುವುದು ಎಂದು ಮುಖ್ಯಮಂತ್ರಿಯವರು ಹೇಳಿದ್ದಾರೆ.

- ರಾಜ್ಯದಿಂದಲೂ ಕಾನೂನು ಸಮರಕ್ಕೆ ಸಿದ್ಧತೆ
- ಕೇಂದ್ರದ ಮೇಲೆ ಒತ್ತಡ ಹೇರುವಂತೆ ಒತ್ತಾಯ.

**ಕಾನೂನು ತಜ್ಞರ ಜೊತೆ ಮುಖ್ಯಮಂತ್ರಿ ಸಭೆ:** ಸುಪ್ರೀಂಕೋರ್ಟ್‌ನಲ್ಲಿ ಬೆಳಗಾವಿ ಗಡಿ ವಿವಾದಕ್ಕೆ ಸಂಬಂಧಿಸಿದಂತೆ ವಿಚಾರಣೆಯಿದ್ದು ಮುಖ್ಯಮಂತ್ರಿಯವರು ರಾತ್ರಿ ಮುಕುಲ್ ರೋಹಟಗಿ, ಉದಯ್ ಹೊಳ್ಳ ಸೇರಿ ಹಿರಿಯ ವಕೀಲರ ಜೊತೆ ವಿಡಿಯೋ ಕಾನ್ಫರೆನ್ಸ್ ಮೂಲಕ ಚರ್ಚಿಸಿದರು. ಮುಂದಿನ ಕಾನೂನು ಸಮರ ಹೇಗಿರಬೇಕು ಎಂಬ ಬಗ್ಗೆ ಮಾತುಕತೆ ನಡೆಸಿದರು.

**ತಂದೆ ಶಿಫಾರಸ್ಸಿಗೆ ಸಿಕ್ಕೀತೆ ಪುತ್ರನ ಒಪ್ಪಿಗೆ:** ಬೆಳಗಾವಿ ವಿವಾದ ಕುರಿತ ಕಾನೂನು ಸಂಗ್ರಾಮದಲ್ಲೇ ಒಂದು ರೋಚಕತೆ ಇದೆ. ಗಡಿ ವಿಚಾದ ಸಂಬಂಧ ಸುಪ್ರೀಂಕೋರ್ಟ್, ರಾಜ್ಯಗಳ ಅರ್ಜಿಗಳನ್ನು ಒಪ್ಪಿಕೊಳ್ಳಲು ಅವಕಾಶವಿದೆಯೇ ಅಥವಾ ಇಲ್ಲವೇ ಎಂಬುದನ್ನು ಅಧ್ಯಯನ ನಡೆಸಲು ಮಹಾರಾಷ್ಟ್ರ ಸರ್ಕಾರ 2004ಕ್ಕೂ ಮುನ್ನವೇ ನಿವೃತ್ತ ನ್ಯಾ. ವೈ.ಎ. ಚಂದ್ರಚೂಡ್ ಅವರ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಿತ್ತು. ಈ ಸಮಿತಿಯು ಸಂವಿಧಾನದ ಆರ್ಟಿಕಲ್ 131ರ ಪ್ರಕಾರ ಸುಪ್ರೀಂಕೋರ್ಟ್‌ನಲ್ಲಿ ಯಾವುದೇ ವಿಷಯವನ್ನು ಬೇಕಾದರೂ ಪ್ರಶ್ನಿಸಬಹುದು ಎಂದು ವರದಿ ನೀಡಿತ್ತು. ಇವರ ಶಿಫಾರಸ್ಸಿನಂತೆಯೇ ಮಹಾರಾಷ್ಟ್ರ 2004ರಲ್ಲಿ ಅರ್ಜಿ ಸಲ್ಲಿಸಿತ್ತು. ಈಗ ಸುಪ್ರಿಂಕೋರ್ಟ್‌ನಲ್ಲಿ ಇವರ ಪುತ್ರ ನ್ಯಾ. ಡಿ. ವೈ ಚಂದ್ರಚೂಡ್ ಅವರು ಮುಖ್ಯ ನ್ಯಾಯಾಮೂರ್ತಿಯಾಗಿದ್ದಾರೆ. ಸುಪ್ರಿಂಕೋರ್ಟ್ ಮಹಾರಾಷ್ಟ್ರ ಅರ್ಜಿಯನ್ನು ಮಾನ್ಯ ಮಾಡುವುದೇ ಅಥವಾ ಇಲ್ಲವೇ ಎಂಬುದನ್ನು ಕಾದು ನೋಡಬೇಕಾಗಿದೆ.

ಆಧಾರ: ಉದಯವಾಣಿ, ದಿನಾಂಕ:23.11.2022

## 62. ಕರ್ನಾಟಕಕ್ಕೆ ಜತ್ : ಮುಖ್ಯಮಂತ್ರಿ ಸ್ಪಂದನೆ

ಗಡಿ ವಿವಾದ ಮತ್ತೆ ಕೆದಕಿದ ಮಹಾರಾಷ್ಟ್ರಕ್ಕೆ ತೀರುಗೇಟು ನೀಡಿದ ಮುಖ್ಯಮಂತ್ರಿಯವರು, ಮಹಾರಾಷ್ಟ್ರದ ಜತ್ ತಾಲ್ಲೂಕನ್ನು ರಾಜ್ಯಕ್ಕೆ ಸೇರಿಸಬೇಕೆಂಬ ಬೇಡಿಕೆಯನ್ನು ಗಂಭೀರವಾಗಿ ಪರಿಗಣಿಸುತ್ತೇವೆ ಮತ್ತು ಕರ್ನಾಟಕ ಏಕೀಕರಣಕ್ಕೆ ಹೋರಾಡಿ ಮಹಾರಾಷ್ಟ್ರದಲ್ಲಿರುವ ಕನ್ನಡಿಗರಿಗೆ ಪಿಂಚಣಿ ಕಾರ್ಯಗತ ಮಾಡಲಾಗುವುದು ಎಂದು ಹೇಳಿದ್ದಾರೆ.

ಸುದ್ದಿಗಾರರೊಂದಿಗೆ ಮಾತನಾಡಿ ಎರಡು ರಾಜ್ಯಗಳ ನಡುವೆ ಸೌಹಾರ್ದತೆ ಇದ್ದು ಎಲ್ಲಾ ಭಾಷಿಕರನ್ನು ಒಂದೇ ರೀತಿಯಲ್ಲಿ ನೋಡಿಕೊಳ್ಳುವಾಗ ಮಹಾರಾಷ್ಟ್ರದಲ್ಲಿ ದೊಡ್ಡ ಪ್ರಮಾಣದಲ್ಲಿರುವ ಕನ್ನಡಿಗರ ಹಿತರಕ್ಷಣೆ ಮಾಡುವುದು ನಮ್ಮ ಕರ್ತವ್ಯ. ಅದನ್ನು ನಾವು ಮಾಡುತ್ತೇವೆ ಎಂದು ತಿಳಿಸಿದರು.

ಜತ್ ತಾಲ್ಲೂಕಿನಲ್ಲಿ ತೀವ್ರ ಬರಗಾಲವಿದ್ದು ಕುಡಿಯುವ ನೀರಿನ ಸಮಸ್ಯೆ ಇದೆ. ನಾವು ನೀರು ಕೊಟ್ಟು ಸಹಾಯ ಮಾಡಬೇಕೆಂದೂ ಯೋಜನೆ ರೂಪಿಸಲಾಗಿದೆ. ಜತ್ ತಾಲ್ಲೂಕು ಕರ್ನಾಟಕಕ್ಕೆ ಸೇರಬೇಕೆಂದು ಎಲ್ಲಾ ಗ್ರಾಮ ಪಂಚಾಯಿತಿಗಳು ನಿರ್ಧರಿಸಿದ್ದವು. ನಾವು ಅದನ್ನು ಗಂಭೀರವಾಗಿ ಪರಿಗಣಿಸುತ್ತಿದ್ದೇವೆ ಎಂದು ತಿರುಗೇಟು ನೀಡಿದರು.

ಗಡಿ ಅಭಿವೃದ್ಧಿ ಪ್ರಾಧಿಕಾರವು ಮಹಾರಾಷ್ಟ್ರದಲ್ಲಿರುವ ಕನ್ನಡ ಶಾಲೆ ಅಭಿವೃದ್ಧಿಗೆ ವಿಶೇಷ ಅನುಧಾನ ನೀಡಲು ತೀರ್ಮಾನಿಸಿದೆ. ಏಕೀಕರಣ, ಸ್ವಾತಂತ್ರ್ಯ ಹೋರಾಟ ಹಾಗೂ ಗೋವಾ ವಿಮೋಚನೆ ಕೆಲಸ ಮಾಡಿದ ಮಹಾರಾಷ್ಟ್ರದಲ್ಲಿರುವ ಕನ್ನಡಿಗರ ದಾಖಲೆಗಳನ್ನು ತರಿಸಿ ಅವರಿಗೂ ಪಿಂಚಣಿ ನೀಡುವುದನ್ನು ಕಾರ್ಯಗತಗೊಳಿಸಲಾಗುವುದು ಎಂದು ತಿಳಿಸಿದರು.

ಮಹಾರಾಷ್ಟ್ರ ಮುಖ್ಯಮಂತ್ರಿಗಳು ರಾಜ್ಯ ರಾಜ್ಯಗಳ ನಡುವೆ ವ್ಯಾಜ್ಯ ಹೆಚ್ಚಿಸುವ ಕೆಲಸ ಮಾಡಬಾರದು ಎಂದು ಹೇಳಿದರು.

**ಕಸಾಪ ಬೆಂಬಲ:** ಕರ್ನಾಟಕ–ಮಹಾರಾಷ್ಟ್ರ ಗಡಿ ವಿವಾದ ಕುರಿತು ಮಹಾರಾಷ್ಟ್ರ ಸರ್ಕಾರ ಸುಪ್ರೀಂಕೋರ್ಟ್‌ನಲ್ಲಿ ಸಲ್ಲಿಸಿರುವ ಅರ್ಜಿ ವಿಚಾರಣೆಗೆ ಬರಲಿದ್ದು ಗಡಿ ವಿಚಾದದ ಹೋರಾಟದಲ್ಲಿ ರಾಜ್ಯ ಸರ್ಕಾರದ ಪರ ಬೆಂಬಲ ನೀಡಲು ಕನ್ನಡ ಸಾಹಿತ್ಯ ಪರಿಷತ್ತು ನಿರ್ಧರಿಸಿದೆ. ಮಹಾರಾಷ್ಟ್ರ ಸಮರ್ಥ ವಾದಕ್ಕೆ ಪ್ರತಿಯಾಗಿ, ಗಡಿ ವಿವಾದಗಳನ್ನು ಬಗೆಹರಿಸಲು ಕಾನೂನಿನಲ್ಲಿ ನಿಪುಣರಾದ ಹಿರಿಯ ವಕೀಲರ ತಂಡವನ್ನು ಮುಖ್ಯಮಂತ್ರಿಯರು ರಚಿಸಿದ್ದಾರೆ ಎಂದೂ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ: ಮಹೇಶ್ ಜೋಶಿ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

**ಎಲ್ಲಿದೆ ಜತ್ ತಾಲ್ಲೂಕು:** ಅರಸೋತ್ತಿಗೆಯ ಸಂಸ್ಥನವಾಗಿದ್ದ ಜತ್ ತಾಲ್ಲೂಕು 93 ವರ್ಷಗಳ ಕಾಲ ಮಹಾರಾಷ್ಟ್ರದ ಸಾತಾರ ಮತ್ತು ಕೊಲ್ಲಾಪುರದಲ್ಲಿದ್ದರೆ 36 ವರ್ಷಗಳ ಕಾಲ ವಿಜಯಪುರದ ಆಡಳಿತದಲ್ಲಿತ್ತು. 1957ರಲ್ಲಿ ಮಹಾರಾಷ್ಟ್ರ ರಾಜ್ಯವು ಭಾರತ ಸರ್ಕಾರಕ್ಕೆ ಜತ್ ತಾಲ್ಲೂಕಿನ 44 ಹಳ್ಳಿಗಳನ್ನು ಮೈಸೂರು ರಾಜ್ಯಕ್ಕೆ ಸೇರಿಸುವಂತೆ ಪ್ರಸ್ತಾವ ಸಲ್ಲಿಸಿತ್ತು. ಈ ಪ್ರದೇಶದಲ್ಲಿ ಶೇ.72ರಷ್ಟು ಕನ್ನಡ ಭಾಷಿಕರಿದ್ದಾರೆ. ಮೈಸೂರು ರಾಜ್ಯ ಕೂಡ ಸಂಪೂರ್ಣ ಜತ್ ತಾಲ್ಲೂಕಿಗೆ ಬೇಡಿಕೆ ಇಟ್ಟಿತ್ತು. ನಂತರ ಮಹಾಜನ್ ವರದಿ ಕೂಡ ಜತ್, ಅಕ್ಕಲಕೋಟೆ, ಮತ್ತು ದಕ್ಕಿಣ ಸೊಲ್ಲಾಪುರ ತಾಲ್ಲೂಕುಗಳು ಕರ್ನಾಟಕಕ್ಕೆ ಸೇರಬೇಕೆಂದಿದೆ. ಜತ್ ತಾಲ್ಲೂಕು ವಿಜಯಪುರದಿಂದ 70 ಕಿ.ಮೀ. ಅಥಣಿಯಿಂದ 40 ಮತ್ತು ಬೆಳಗಾವಿ ನಗರದಿಂದ 160 ಕಿ.ಮೀ. ದೂರದಲ್ಲಿದೆ. ಸಂಪೂರ್ಣ ಕನ್ನಡಮಯವಾಗಿರುವ ತಾಲ್ಲೂಕಿನ 44 ಹಳ್ಳಿಗಳಲ್ಲಿ ಇಂದಿಗೂ ಮರಾಠಿ ಶಾಲೆಗಳಿಲ್ಲ. ಆದರೆ, ಮಹಾರಾಷ್ಟ್ರ ಸರ್ಕಾರದ ಕಟ್ಟಳೆಗಳಿಂದ ಜತ್ ಪ್ರದೇಶದ ಜನರು ವ್ಯವಹಾರಿಕವಾಗಿ ಮರಾಠಿ ಭಾಷೆಯಲ್ಲಿ ವ್ಯವಹರಿಸುತಿದ್ದಾರೆ. ಆದರೂ ಮನೆ ಭಾಷೆಯಾಗಿ ಕನ್ನಡವನ್ನೇ ಬಳಸುತ್ತಿದ್ದಾರೆ. ಅಂಗಡಿ ಮುಂಗ್ಗಟ್ಟುಗಳಿಗೆ ಕನ್ನಡ ಬೋರ್ಡ್ ಹಾಕಲೂ ಅಲ್ಲಿನ ಆಡಳಿತ ಅವಕಾಶ ನೀಡದಿರುವ ಕುರಿತು ಸ್ಥಳೀಯರಲ್ಲಿ ಅಸಮಾಧಾನವಿದೆ. ಕರ್ನಾಟಕ ಏಕೀಕರಣ ಹೋರಾಟ ಸಂದರ್ಭದಲ್ಲೂ ಸಿದ್ಧನಾಥ ಬಳ್ಳಾರಿ ಮತ್ತು ಚನ್ನವೀರ ಕಲ್ಯಾಣಶೆಟ್ಟಿ ಜತ್ ಪ್ರದೇಶದಲ್ಲಿ ಹೋರಾಟ ಸಕ್ರಿಯವಾಗಿಟ್ಟಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.11.2022

## 63. ತನಿಖೆ ಚುರುಕುಗೊಳಿಸಿದ ಕೇಂದ್ರ ಚುನಾವಣಾ ಆಯೋಗ

ಮತದಾರರ ಗೌಪ್ಯತೆ ಕಳವು ಪ್ರಕರಣಕ್ಕೆ ಸಂಬಂಧ ಕಾಂಗ್ರೆಸ್ ಹಾಗೂ ಬಿಜೆಪಿ ನಡುವೆ ರಾಜಕೀಯ ಕೆಸರೆರಚಾಟ ನಡೆದಿರುವ ನಡುವೆಯೇ ಭಾರತ ಚುನಾವಣಾ ಆಯೋಗ ತನಿಖೆ ತೀವ್ರಗೊಳಿಸಿದೆ.

ಕಾಂಗ್ರೆಸ್ ಮುಖಂಡರು ದೆಹಲಿಯಲ್ಲಿ ಕೇಂದ್ರ ಚುನಾವಣಾ ಆಯೋಗಕ್ಕೆ ದೂರು ನೀಡಿದ್ದರೆ, ಬಿಜೆಪಿ ರಾಜ್ಯದ ಮುಖ್ಯ ಚುನಾವಣಾಧಿಕಾರಿ ಮೂಲಕ ದೂರು ಸಲ್ಲಿಸಿತ್ತು. ಪ್ರಕರಣವನ್ನು ಗಂಭೀರವಾಗಿ

ಪರಿಗಣಿಸಿದ ಆಯೋಗ ತನಿಖೆ ಕೈಗೆತ್ತಿಕೊಂಡಿದೆ. ಉಪ ಚುನಾವಣಾ ಆಯುಕ್ತ ಅಜಯ್ ಬಾದೂ ಅವರನ್ನು ಬೆಂಗಳೂರಿಗೆ ರವಾನಿಸಿದೆ. ಬಿಬಿಎಂಪಿ ಮುಖ್ಯ ಆಯುಕ್ತರು ನಗರ ಪೊಲೀಸ್ ಆಯುಕ್ತರು ಹಾಗೂ ಪ್ರಕರಣದ ತನಿಖೆ ನಡೆಸಿರುವ ಬೆಂಗಳೂರು ಪ್ರಾದೇಶಿಕ ಆಯುಕ್ತರ ಸಭೆ ನಡೆಸಿ ಸಂಪೂರ್ಣ ಮಾಹಿತಿ ಪಡೆದಿದ್ದಾರೆ.

ಚಿಲುಮೆ ಸಂಸ್ಥೆಗೆ ಅನುಮತಿ ನೀಡಿದ್ದು ಹೇಗೆ, ಮತದಾರರ ಜಾಗೃತಿ ಮೂಡಿಸುವ ಕೆಲಸ ಬಿಟ್ಟು ಗೌಪ್ಯತೆ ಕದಿಯುವ ಕೆಲಸ ಮಾಡಿದ್ದು ಹೇಗೆ, ಸಂಸ್ಥೆಗೆ ಹಣ ವರ್ಗಾವಣೆ ಆಗಿದೆಯೇ ಶಾಸಕರ ಕಚೇರಿಯಲ್ಲಿ ಸಂಸ್ಥೆ ಸಿಬ್ಬಂದಿಗೆ ತರಬೇತಿ ನೀಡಿರುವುದು ಏಕೆ ಎಂಬ ಎಲ್ಲ ಮಾಹಿತಿಯನ್ನು ಕೂಡಾ ಪಡೆದುಕೊಂಡಿದ್ದಾರೆ.

ಪೊಲೀಸ್ ತನಿಖೆ ಏನೇನು ಆಗಿದೆ, ಎಷ್ಟು ದಿನದಲ್ಲಿ ತನಿಖೆ ಪೂರ್ಣಗೊಳ್ಳಲಿದೆ ಎಂಬ ಮಾಹಿತಿಯನ್ನು ಪೊಲೀಸ್ ಆಯುಕ್ತರಿಂದ ಪಡೆದುಕೊಂಡಿದ್ದಾರೆ. ಆದಷ್ಟು ಬೇಗ ತನಿಖೆ ಪೂರ್ಣಗೊಳಿಸಲು ಸೂಚಿಸಿದ್ದಾರೆ ಎಂದು ಆಯೋಗದ ಮೂಲಗಳು ಸ್ಪಷ್ಟಪಡಿಸಿವೆ.

ಎಲ್ಲ ಆಯಾಮಗಳಿಂದಲೂ ತನಿಖೆ ನಡೆಸಿ ವರದಿ ನೀಡಬೇಕೆಂದು ತನಿಖೆ ಹೊಣೆ ಹೊತ್ತಿರುವ ಪ್ರಾದೇಶಿಕ ಆಯುಕ್ತರಿಗೆ ನಿರ್ದೇಶನ ನೀಡಿದ್ದಾರೆ. ಆಯೋಗ ಈ ಪ್ರಕರಣವನ್ನು ಗಂಭೀರವಾಗಿ ಪರಿಗಣಿಸಿದೆ. ತಪ್ಪಿತಸ್ಥರನ್ನು ಶಿಕ್ಷೆಗೆ ಒಳಪಡಿಸಲೇಬೇಕು ಎಂದು ಸೂಚಿಸಿದ್ದಾರೆ ಎನ್ನಲಾಗಿದೆ. ಬಿಬಿಎಂಪಿ ಆಯುಕ್ತರಿಂದ ಈ ಸಂಸ್ಥೆಗೆ ಬಿಎಲ್‌ಒಗಳನ್ನು ನೇಮಕ ಮಾಡಿಕೊಳ್ಳಲು ಅನುಮತಿ ನೀಡಿದ್ದು ಏಕೆ, ಲೋಪ ಆದರೂ ಏಕೆ ಎಚ್ಚೆತ್ತುಕೊಳ್ಳಲಿಲ್ಲವೆಂದೂ ತರಾಟೆಗೆ ತೆಗೆದುಕೊಂಡರು ಎಂದು ಹೇಳಲಾಗುತ್ತಿದೆ.

**ಪಾಲಿಕೆ ವಿಶೇಷ ಆಯುಕ್ತರ ಸುತ್ತೋಲೆ:** ಕೇಂದ್ರ ಚುನಾವಣಾ ಆಯೋಗದ ಉಪ ಆಯುಕ್ತರು ಸೇರಿ ವಿವಿಧ ಅಧಿಕಾರಿಗಳು ಈಗಾಗಲೇ ನಗರಕ್ಕೆ ಆಗಮಿಸಿದ್ದು, 28 ವಿಧಾನಸಭಾ ಕ್ಷೇತ್ರಗಳ ಮತದಾರರ ನೋಂದಣಾಧಿಕಾರಿಗಳ ಕಛೇರಿಗಳಲ್ಲಿ ಭೇಟಿ ನೀಡಿ ಪರಿಶೀಲನೆ ನಡೆಸುವ ಸಾಧ್ಯತೆ ಇದೆ. ಜನವರಿ 1 ರಿಂದ ಈವರೆಗೆ ಮತದಾರರ ಪಟ್ಟಿಗೆ ಹೊಸದಾಗಿ ಹೆಸರು ನೋಂದಣಿ ಪಟ್ಟಿಯಿಂದ ಹೆಸರುಗಳು ತೆಗೆದುಹಾಕಿರುವುದು ಮತ್ತು ತಿದ್ದುಪಡಿ ಮಾಡಿರುವ ದಾಖಲೆಗಳ ಬಗ್ಗೆ ಮಾಹಿತಿ ಕಲೆಹಾಕಲಿದ್ದಾರೆ. ಇದರ ನಡುವೆ ಆಯೋಗದ ಅಧಿಕಾರಿಗಳು ಕೇಳಿರುವ ಎಲ್ಲ ದಾಖಲೆಗಳನ್ನು ನೀಡುವಂತೆ ಪಾಲಿಕೆಯ ವಿಶೇಷ ಆಯುಕ್ತ ರಂಗಪ್ಪ ಸುತ್ತೋಲೆ ಹೊರಡಿಸಿದ್ದಾರೆ. ಎಲ್ಲ ಮಾಹಿತಿಗಳನ್ನು ಕಲೆಹಾಕಲಿರುವ ಉಪ ಆಯುಕ್ತರು, ಕೇಂದ್ರ ಮುಖ್ಯ ಚುನಾವಣಾ ಆಯುಕ್ತರಿಗೆ ಅಂತಿಮವಾಗಿ ವರದಿ ನೀಡಲಿದ್ದಾರೆ ಎಂದು ಮೂಲಗಳು ತಿಳಿಸಿವೆ.

ಆಧಾರ: ವಿಜಯವಾಣಿ ದಿನಾಂಕ:25.11.2022

## 64. ಹೇಳದೆ ಕೇಳದೆ 1.69 ಲಕ್ಷ ಹೆಸರು ಮಾಯ

ಮತದಾರರ ಮಾಹಿತಿ ಸೋರಿಕೆ ಪ್ರಕರಣ ತನಿಖೆ ಇನ್ನೂ ನಡೆಯುತ್ತಿದೆ. ಅದರ ನಡುವೆಯೇ ಇದೀಗ ಮತದಾರರ ಪಟ್ಟಿಯಿಂದ ಹೆಸರು ತೆಗೆದು ಹಾಕುವ ಪ್ರಕ್ರಿಯೆಯಲ್ಲೂ ಸಾಕಷ್ಟು ಲೋಪವಾಗಿರುವುದು ಬೆಳಕಿಗೆ ಬಂದಿದ್ದು, ಫಾರಂ–7 ಸಲ್ಲಿಕೆಯಾಗಿದ್ದರೂ ಸುಮಾರು 1.69 ಲಕ್ಷ ಮತದಾರರನ್ನು ಪಟ್ಟಿಯಿಂದ ತೆಗೆದು ಹಾಕಲಾಗಿದೆ ಎಂಬ ಮಾಹಿತಿ ಹೊರಬಿದ್ದಿದೆ.

ಮತದಾರರ ಪಟ್ಟಿ ಪರಿಷ್ಕರಣೆಗೆ ಸಂಬಂಧಿಸಿದಂತೆ ಎರಡೆರಡು ಕಡೆ ಮತದಾನದ ಹಕ್ಕು ಹೊಂದಿರುವ 6.69 ಲಕ್ಷ ಮತದಾರರನ್ನು ಪಟ್ಟಿಯಿಂದ ತೆಗೆದು ಹಾಕಲಾಗಿದೆ ಎಂದು ಬೆಂಗಳೂರು ನಗರ ಜಿಲ್ಲಾ ಚುನಾವಣಾಧಿಕಾರಿಗಳು ಈ ಹಿಂದೆ ತಿಳಿಸಿದ್ದರು. ಹೀಗೆ ಮತದಾರರನ್ನು ಪಟ್ಟಿಯಿಂದ ತೆಗೆದು ಹಾಕುವ ಸಂದರ್ಭದಲ್ಲಿ ಸಂಬಂಧಪಟ್ಟವರ ಗಮನಕ್ಕೆ ತಂದು ಫಾರಂ–7ರಲ್ಲಿ ಅವರಿಂದ ಸಹಿ ಹಾಕಿಸಿಕೊಳ್ಳಲಾಗಿದೆ ಎಂದು ತಿಳಿಸಲಾಗಿತ್ತು. ಆದರೀಗ 6.69 ಲಕ್ಷ ಮತದಾರರ ಪಟ್ಟಿ 1.69 ಲಕ್ಷ

ಜನರಿಂದ ಫಾರಂ–7ಗೆ ಸಹಿ ಹಾಕಿಸಿಕೊಳ್ಳದೆ ಅವರನ್ನು ಸಂಪರ್ಕಿಸದೆ ಪಟ್ಟಿಯಿಂದ ತೆಗೆದು ಹಾಕಲಾಗಿದೆ ಎಂಬ ಮಾಹಿತಿ ತಿಳಿದು ಬಂದಿದೆ.

**1.69 ಲಕ್ಷ ಜನರ ಫಾರಂ–7 ಇಲ್ಲ:** ಮತದಾರರ ಮಾಹಿತಿ ಸೋರಿಕೆ ಪ್ರಕರಣ ಬೆಳಕಿಗೆ ಬರುತ್ತಿದ್ದಂತೆ ಮತದಾರರ ಪಟ್ಟಿಯಿಂದ ಹೆಸರು ತೆಗೆದು ಹಾಕಿರುವ ವಿಚಾರವು ಮುನ್ನಲೆಗೆ ಬಂದಿತ್ತು. ಇದರ ಬಗ್ಗೆ ಬಿಬಿಎಂಪಿ ಹಾಗೂ ಚುನಾವಣಾ ಆಯೋಗದ ಅಧಿಕಾರಿಗಳು ಪರಿಶೀಲಿಸಿದಾಗ ಪಟ್ಟಿಯಿಂದ ಹೆಸರು ತೆಗೆಯಲಾದ 6.69 ಲಕ್ಷ ಮತದಾರರ ಪೈಕಿ ಸುಮಾರು 1.69 ಲಕ್ಷ ಮತದಾರರ ಫಾರಂ–7 ಸಲ್ಲಿಕೆಯಾಗದಿದ್ದರೂ ಹೆಸರನ್ನು ಪಟ್ಟಿಯಿಂದ ತೆಗೆದುಹಾಕಲಾಗಿದೆ. ಅಲ್ಲದೆ ಫಾರಂ–7 ಇಲ್ಲದಿದ್ದರೂ, ಮತದಾರರ ಪಟ್ಟಿಯಿಂದ ಹೆಸರು ತೆಗೆದು ಹಾಕಲು ಅಗತ್ಯವಿರುವ ದಾಖಲೆಗಳು ಇಲ್ಲದಿರುವುದು ಬೆಳಕಿಗೆ ಬಂದಿದೆ.

**ಹೊಸದಾಗಿ ಮತಗಟ್ಟೆ ಅಧಿಕಾರಿಗಳ ನೇಮಕ:** ಈ ರಾದ್ಧಾಂತಗಳು ಬೆಳಕಿಗೆ ಬರುತಿದ್ದಂತೆ ಹೊಸದಾಗಿ ಮತಗಟ್ಟೆ ಮಟ್ಟದ ಅಧಿಕಾರಿಗಳ ನೇಮಕ ಮಾಡಿಕೊಳ್ಳಲಾಗುತ್ತಿದೆ. ಶಿಕ್ಷಕರು ಜಲಮಂಡಳಿ, ಬಿಎಂಟಿಸಿ, ಕೆಎಸ್‌ಆರ್‌ಟಿಸಿ ಸೇರಿ ಇನ್ನಿತರ ಇಲಾಖೆಗಳ ಸಿಬ್ಬಂದಿಯನ್ನು ಮತಗಟ್ಟೆ ಮಟ್ಟದ ಅಧಿಕಾರಿಗಳಾಗಿ ನೇಮಿಸಲಾಗುತ್ತಿದೆ. ನವೆಂಬರ್ 15 ರಿಂದ ನೇಮಕಾತಿ ಆದೇಶವನ್ನೂ ಸಿಬ್ಬಂದಿಗೆ ನೀಡಲಾಗುತ್ತಿದೆ. ಹೀಗೆ ನೇಮಕಾತಿ ಆದೇಶ ನೀಡುವ ಸಂದರ್ಭದಲ್ಲಿ ಸಿಬ್ಬಂದಿಗೆ ಮತದಾರರ ಪಟ್ಟಿ ವಿಶೇಷ ಪರಿಷ್ಕರಣೆ ಮತ್ತು ಮತದಾರರ ಪಟ್ಟಿಗಳ ವಿಶ್ವಾಸಾರ್ಹತೆ ಖಚಿತ ಪಡಿಸಿಕೊಳ್ಳಲು ನಿಮ್ಮನ್ನು ನೇಮಿಸಲಾಗುತ್ತಿದೆ ಎಂಬುದನ್ನು ತಿಳಿಸಲಾಗಿದೆ.

ಹೀಗೆ ನೇಮಕವಾಗಿರುವ ಮತಗಟ್ಟೆ ಮಟ್ಟದ ಅಧಿಕಾರಿಗಳು ಮತದಾರರ ಪಟ್ಟಿಯ ಕಸ್ಟೋಡಿಯನ್ ಆಗಿದ್ದು, ಮತದಾರರ ಪಟ್ಟಿಯನ್ನು ಸೆಕ್ಷನ್‌ವಾರು ಪರಿಶೀಲಿಸಬೇಕು ಎಂದು ತಿಳಿಸಲಾಗಿದೆ. ಮತದಾರರ ಪಟ್ಟಿಗಳ ವಿಶ್ವಾಸಾರ್ಹತೆ ಹೆಚ್ಚಿಸಲು ಕಾರ್ಯನಿರ್ವಹಿಸಬೇಕು. ತಮ್ಮ ವ್ಯಾಪ್ತಿಯಲ್ಲಿ ವರ್ಗಾವಣೆಗೊಂಡ ಮತ್ತು ಮೃತಪಟ್ಟ ಮತದಾರರ ಮಾಹಿತಿ ಸಂಗ್ರಹಿಸಿ ವರದಿ ಮಾಡಬೇಕು. ಮತದಾರರು ಪಟ್ಟಿಯಲ್ಲಿನ ಮೃತಪಟ್ಟ ಮತದಾರರು ಮತದಾರರ ಪಟ್ಟಿಯಿಂದ ತೆಗೆದು ಹಾಕುವ ಬಗ್ಗೆ, ಮರಣ ಸಮರ್ಥನೆ ಪತ್ರದ ದಾಖಲೆಗಳೊಂದಿಗೆ ಸಂಬಂಧಪಟ್ಟ ಹಿರಿಯ ಅಧಿಕಾರಿಗೆ ಕಾಲಕಾಲಕ್ಕೆ ವರದಿ ನೀಡುವಂತೆ ತಿಳಿಸಲಾಗಿದೆ.

**ಮತದಾರರ ಹೆಸರು ಕೈ ಬಿಡಲು ಅಧಿಕಾರಿಗಳಿಂದ ಕರೆ ಬಂದಿತ್ತು:** ಫಾರಂ–7 ಸಲ್ಲಿಕೆಯಾಗದಿದ್ದರೂ ಹೆಸರು ತೆಗೆದುಹಾಕಿರುವ ಕುರಿತಂತೆ ಸಂಬಂಧಪಟ್ಟ ಕಂದಾಯ ನಿರೀಕ್ಷಕರು ಸೇರಿ ಇನ್ನಿತರ ಅಧಿಕಾರಿಗಳನ್ನು ಕೇಳಿದರೆ ಮತದಾರರ ಹೆಸರನ್ನು ತೆಗೆದು ಹಾಕಲು ಬಿಎಲ್‌ಒ ಸೇರಿ ಇನ್ನಿತರ ಅಧಿಕಾರಿಗಳಿಂದ ಕರೆ ಬಂದಿತ್ತು. ತಾವು ನಂತರ ದಾಖಲೆ ಸಲ್ಲಿಸುತ್ತೇವೆ ಹೆಸರು ತೆಗೆದು ಹಾಕಿ ಎಂದು ಹೇಳಿದರು. ಹೀಗಾಗಿ ಹೆಸರು ತೆಗೆದು ಹಾಕಿದೆವು ಎಂಬ ಕುರಿದಂತೆ ಹಿರಿಯ ಅಧಿಕಾರಿಗಳ ಎದುರು ಹೇಳಿದ್ದಾರೆ ಎನ್ನಲಾಗಿದೆ.

**ಫಾರಂ–7 ಭರ್ತಿ ಕಡ್ಡಾಯ:** ಮತದಾರರ ಪಟ್ಟಿಗೆ ಹೊಸದಾಗಿ ಹೆಸರು ಸೇರ್ಪಡೆ ಮಾಡಲು ಮಾಹಿತಿ ತಿದ್ದುಪಡಿ ಮತ್ತು ಹೆಸರು ತೆಗೆದು ಹಾಕಲು ಮತದಾರರು ನಿರ್ದಿಷ್ಟ ಅರ್ಜಿಗಳನ್ನು ಭರ್ತಿ ಮಾಡಿ ಮತಗಟ್ಟೆ ಮಟ್ಟದ ಅಧಿಕಾರಿ ಅಥವಾ ಸಂಬಂಧಪಟ್ಟ ಅಧಿಕಾರಿ, ಕಚೇರಿಗೆ ಸಲ್ಲಿಸಬೇಕು. ಅದರ ಪ್ರಕಾರ ಹೊಸದಾಗಿ ಹೆಸರು ಸೇರ್ಪಡೆ ಮಾಡಲು ಫಾರಂ–6 ಭರ್ತಿ ಮಾಡಿ ಅದಕ್ಕೆ ಪೂರಕ ದಾಖಲೆಗಳೊಂದಿಗೆ ಸಲ್ಲಿಸಬೇಕು. ಅದೇ ಹೆಸರು ತೆಗೆದು ಹಾಕುವುದು ಅಥವಾ ಮಾಹಿತಿಯಲ್ಲಿ ಬದಲಾವಣೆ ಮಾಡಬೇಕೆಂದರೆ ಫಾರಂ–7 ಭರ್ತಿ ಮಾಡಿ, ಸಹಿ ಹಾಕಿ ಪೂರಕ ದಾಖಲೆಗಳನ್ನು ಸಲ್ಲಿಸಬೇಕು.

ಆಧಾರ: ಉದಯವಾಣಿ ದಿನಾಂಕ:26.11.2022

## 65. ಕರ್ನಾಟಕದತ್ತ ಜತ್ತ ಚಿತ್ತ

ಕರ್ನಾಟಕದ ಬೆಳಗಾವಿ, ನಿಪ್ಪಾಣಿ, ಕಾರವಾರ ಮೊದಲಾದ ಪ್ರದೇಶಗಳು ತನಗೆ ಸೇರಬೇಕು ಎಂದು ಪದೇಪದೇ ಕ್ಯಾತೆ ತೆಗೆದು ಪುಂಡಾಟಿಕೆ ನಡೆಸುತ್ತಿರುವ ಮಹಾರಾಷ್ಟ್ರಕ್ಕೆ ಈಗ ದೊಡ್ಡ ಮುಜುಗರ ಉಂಟಾಗಿದೆ. ಸಾಂಗ್ಲಿ ಜಿಲ್ಲೆಯ ಜತ್ತ ತಾಲ್ಲೂಕಿನ 42 ಗ್ರಾಮಗಳ ಜನರು 'ನಮಗೆ ನೀರು ಕೊಡಿ ಅಥವಾ ಕರ್ನಾಟಕಕ್ಕೆ ಸೇರಲು ಬಿಡಿ' ಎಂದು ಮಹರಾಷ್ಟ್ರ ಸರ್ಕಾರಕ್ಕೆ ಎಚ್ಚರಿಕೆ ನೀಡಿದ್ದಾರೆ.

ತಡರಾತ್ರಿ ಉಮದಿ ಗ್ರಾಮದಲ್ಲಿ ನೀರಾವರಿ ಹೋರಾಟ ಸಮಿತಿ ಸದಸ್ಯರು ಸಭೆ ಸೇರಿ 'ಕರ್ನಾಟಕದ ಮುಖ್ಯಮಂತ್ರಿಗಳಿಗೆ ಜಯವಾಗಲಿ' ಎನ್ನುವ ಮೂಲಕ ಸಭೆ ಪ್ರಾರಂಭಿಸಿದರು. 'ನಮಗೆ ನೀರು ಕೋಡಿ, ಇಲ್ಲದಿದ್ದರೆ ಎನ್‌ಓಸಿ ಕೊಡಿ' ಎಂದೂ ಘೋಷಣೆ ಕೂಗುತ್ತಾ ಮಹಾರಾಷ್ಟ್ರ ಸರ್ಕಾರ ವಿರುದ್ಧ ಆಕ್ರೋಶ ವ್ಯಕ್ತಪಡಿಸಿದ್ದರು. ನಮಗೆ ಮಹಾರಾಷ್ಟ್ರ ಸರ್ಕಾರ ನೀರು ಕೊಟ್ಟರೆ ಮಾತ್ರ ಇಲ್ಲಿ ಉಳಿದುಕೊಳ್ಳುತ್ತೇವೆ. ಇಲ್ಲದಿದ್ದರೆ ಕರ್ನಾಟಕಕ್ಕೆ ಸೇರಲು ಬಯಸುತ್ತೇವೆ ಎನ್ನುವ ಘೋಷಣೆಗಳು ಮೊಳಗಿದವು.

ಸಭೆಯಲ್ಲಿ ನೀರಾವರಿ ಹೋರಾಟ ಸಮಿತಿ ಮುಖಂಡ ಸುನೀಲ್ ಪೋತದಾರ್ ಮಾತನಾಡಿ, ಮಹಾರಾಷ್ಟ್ರ ಸರ್ಕಾರ ನಮಗೆ ಹಲವು ದಶಕಗಳಿಂದ ಅನ್ಯಾಯ ಮಾಡಿದೆ. ನೀರು ಕೊಡುವ ಭರವಸೆ ಮಾತ್ರ ನೀಡುತ್ತಿದೆ. ಮುಂದಿನ ಎಂಟು ದಿನಗಳಲ್ಲಿ ಮುಖ್ಯಮಂತ್ರಿ ಏಕನಾಥ ಶಿಂಧೆ, ಜಲ ಸಂಪನ್ಮೂಲ ಸಚಿವ ಸೇರಿ ಸಂಬಂಧಿಸಿದ ಅಧಿಕಾರಿಗಳು ಉಮದಿಗೆ ಬರಬೇಕು. ನಮ್ಮ ಜೊತೆ ಚರ್ಚೆ ಮಾಡಬೇಕು. ಜತ್ತ ತಾಲ್ಲೂಕಿನ 42 ಹಳ್ಳಿಗಳಿಗೆ ಯಾವ ರೀತಿ ಯೋಜನೆ ರೂಪಿಸಲಾಗಿದೆ ಹಾಗೂ ಅದಕ್ಕೆ ತಗಲುವ ವೆಚ್ಚದ ಬಗ್ಗೆ ಸಂಪೂರ್ಣವಾಗಿ ಮಾಹಿತಿ ನೀಡಬೇಕು ಎಂದು ಒತ್ತಾಯಿಸಿದರು.

ಒಂದು ವೇಳೆ ಸರ್ಕಾರ ಯಾವುದೇ ಕ್ರಮ ತೆಗೆದುಕೊಳ್ಳದೆ ಹೋದರೆ ನಾವು ಕರ್ನಾಟಕದ ಮುಖ್ಯಮಂತ್ರಿಗಳನ್ನು ಇಲ್ಲಿಗೆ ಆಗಮಿಸುವಂತೆ ಮನವಿ ಮಾಡುತ್ತೇವೆ. ಅವರ ಸಮ್ಮುಖದಲ್ಲಿ ಮತ್ತೊಮ್ಮೆ ನೀರು, ಆರೋಗ್ಯ ಹಾಗೂ ಶಿಕ್ಷಣ, ರಸ್ತೆ ಬಗ್ಗೆ ಇಲ್ಲಿನ ಸ್ಥಿತಿ ಮನವರಿಕೆ ಮಾಡಿಕೊಡಲಾಗುವುದು. ಈಗಾಗಲೇ ಕರ್ನಾಟಕ ಸರ್ಕಾರದ ಕೃಷ್ಣಾ ನದಿಯ ನೀರು ಮಹಾರಾಷ್ಟ್ರದ ಜತ್ತ ತಾಲ್ಲೂಕಿನ ಕೆಲ ಗ್ರಾಮಗಳಿಗೆ ನೈಸರ್ಗಿಕವಾಗಿ ಹರಿದು ಬರುತ್ತಿದೆ. ಇದರಿಂದ ಇಲ್ಲಿನ ಜನರಿಗೆ ಸಾಕಷ್ಟು ಅನುಕೂಲವಾಗಿದೆ ಎಂದು ಅವರು ಹೇಳಿದರು. ಮಾಜಿ ಜಿಲ್ಲಾ ಪಂಚಾಯಿತಿ ಸದಸ್ಯ ಚನ್ನಪ್ಪಾ ಹೋರ್ತಿ ಮಾತನಾಡಿ, ಕರ್ನಾಟಕ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿಕೆ ನಂತರ ಮಹಾರಾಷ್ಟ್ರ ಮುಖ್ಯಮಂತ್ರಿ 42 ಗ್ರಾಮಗಳಿಗೆ ನೀರು ಕೊಡುವುದಾಗಿ ಹೇಳಿದ್ದಾರೆಯೇ ಹೊರತು ಅದು ಅನುಷ್ಠಾನಕ್ಕೆ ಬಂದಿಲ್ಲ ಎಂದು ಆಕ್ರೋಶ ವ್ಯಕ್ತಪಡಿಸಿದರು ನೀರು ಹೋರಾಟ ಸಮಿತಿ ಸದಸ್ಯ ಅನೀಲ ಶಿಂಧೆ ಮಾತನಾಡಿ, ನಮ್ಮ ಬೇಡಿಕೆ ಈಡೇರದಿದ್ದರೆ ನಾವು ಕರ್ನಾಟಕಕ್ಕೆ ಸೇರಲು ಸಿದ್ಧರಿರುವುದಾಗಿ ಘೋಷಿಸಿದರು.

**ಹೋರಾಟದ ಹೆಜ್ಜೆ ಗುರುತು:** 2015–16ರಲ್ಲಿ ಜತ್ತ ತಾಲ್ಲೂಕಿನ ಉಮದಿ ಗ್ರಾಮದಲ್ಲಿ ನೀರು ಹೋರಾಟ ಸಮಿತಿ ನೀರಿಗಾಗಿ ಮಹಾರಾಷ್ಟ್ರ ಸರ್ಕಾರವನ್ನು ಒತ್ತಾಯಿಸಿ ಹಲವು ದಿನಗಳ ಕಾಲ ಉಪವಾಸ ಸತ್ಯಾಗ್ರಹ, ಮಶಾಲ ಪ್ರತಿಭಟನೆ, ಸರ್ಕಾರದ ವಿರುದ್ಧ ಪಿಂಡದಾನ (ನಮ್ಮ ಪಾಲಿಗೆ ಸರ್ಕಾರ ಸತ್ತಿದೆ) ಪ್ರತಿಭಟನೆಯನ್ನೂ ಮಾಡಿ ಕೊನೆಗೆ ಸುಮಾರು 150ಕ್ಕೂ ಹೆಚ್ಚು ಕಿ.ಲೋ ಮೀಟರ್ ಪಾದಯಾತ್ರೆ ಮಾಡಿ ಆಕ್ರೋಶ ಹೊರಹಾಕಿದ್ದರು. ಆಗ ಕೆಲ ರಾಜಕೀಯ ನಾಯಕರು ಕೆಲವೇ ದಿನಗಳಲ್ಲಿ ನೀರು ನೀಡುವ ಭರವಸೆ ನೀಡಿದ್ದರಿಂದ ಪ್ರತಿಭಟನೆ ನಿಲ್ಲಿಸಲಾಯಿತು. ಅಲ್ಲಿಂದ ಇಲ್ಲಿಯವರೆಗೆ ಯಾವುದೇ ಪೂರಕ ಯೋಜನೆ ಬಾರದ ಕಾರಣ ಜತ್ತ ತಾಲ್ಲೂಕಿನ 42 ಗ್ರಾಮಗಳ ಗ್ರಾಮಸ್ಥರು ನಮ್ಮ ಹಣೆಬರಹವೇ ಸರಿ ಇಲ್ಲ ಎಂದು ಸುಮ್ಮನಾಗಿದ್ದರು. ಆದರೆ, ಇತ್ತೀಚೆಗೆ ಕರ್ನಾಟಕ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಜತ್ತ ತಾಲ್ಲೂಕಿನಲ್ಲಿನ 42 ಗ್ರಾಮಗಳ ಜನತೆ ಬಹು ಕಾಲದಿಂದಲೂ ಬರಗಾಲ ಪೀಡಿತ ಪ್ರದೇಶವಾಗಿದೆ. ಅಲ್ಲಿನ ಜನರು ನೀರಿಗಾಗಿ ಪರಿತಪಿಸಬಾರದು. ಅವರ ಆಸೆಯಂತೆ ಕರ್ನಾಟಕ

ಸರ್ಕಾರ ಅವರಿಗೆ ನೀರು ನೀಡಲು ಹಾಗೂ ಜನತೆಯ ಹಿತ ಕಾಪಾಡಲು ಸಿದ್ಧವಿದೆ. ಅವರ ಬೇಡಿಕೆಯನ್ನು ಗಂಭೀರವಾಗಿ ಪರಿಗಣಿಸಲಾಗುವುದು ಎಂದು ಹೇಳಿಕೆ ನೀಡಿದ್ದರು. ಈ ಹೇಳಿಕೆ ಈ ಗ್ರಾಮಗಳಲ್ಲಿನ ಜನತೆಯ ಆಸೆ ಚಿಗುರೊಡೆಯಲು ಕಾರಣವಾಗಿದೆ. ಆದರೆ ಮುಖ್ಯಮಂತ್ರಿ ಹೇಳಿಕೆಗೆ ತೀವ್ರ ವಿರೋಧ ವ್ಯಕ್ತಪಡಿಸಿರುವ ಮಹಾರಾಷ್ಟ್ರ ಸರ್ಕಾರ ಹಾಗೂ ರಾಜಕೀಯ ನಾಯಕರು ಜತ್ತ ತಾಲ್ಲೂಕಿನ ಗ್ರಾಮಗಳಿಗೆ ಮೂಲ ಸೌಕರ್ಯ ನೀಡುವ ನಿಟ್ಟಿನಲ್ಲಿ ಪ್ರಯತ್ನಿಸುವುದಾಗಿ ಹೇಳಿಕೆ ನೀಡುತ್ತಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:27.11.2022.

## 66. ಗಡಿ ಬಿಕ್ಕಟ್ಟು: ಕಾನೂನು ಸಮರಕ್ಕೆ ಶಸ್ತ್ರಾಭ್ಯಾಸ

ರಾಜ್ಯದ ನೆಲ, ಜಲ ಸಂರಕ್ಷಣೆ ವಿಷಯದಲ್ಲಿ ರಾಜಿ ಮಾಡಿಕೊಳ್ಳದೆ, ಯಾವುದೇ ರೀತಿಯ ಕಾನೂನು ಸಮರಕ್ಕೂ ನಾವು ಸಿದ್ದವಾಗಿದ್ದೇವೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ತಿಳಿಸಿದ್ದಾರೆ.

ಗೃಹ ಕವೇರಿ ಕೃಷ್ಣಾದಲ್ಲಿ ಗಡಿ ವಿಚಾರದ ಪ್ರಕರಣಕ್ಕೆ ಸಂಬಂಧಿಸಿದಂತೆ ಕಾನೂನು ತಜ್ಞರು ಹಾಗೂ  ಅಧಿಕಾರಿಗಳೊಂದಿಗೆ ಸಭೆ ನಡೆಸಿದರು. ಮಹಾರಾಷ್ಟ್ರ ಗಡಿವಿವಾದ ಸುಪ್ರಿಂಕೋರ್ಟ್‌ನಲ್ಲಿ ಡಿಸೆಂಬರ್ 30ರಂದು ವಿಚಾರಣೆಗೆ ಬರಲಿರುವ ಹಿನ್ನೆಲೆಯಲ್ಲಿ ನೂತನವಾಗಿ ರಚಿತವಾದ ಕರ್ನಾಟಕ ಗಡಿ, ನದಿ ರಕ್ಷಣಾ ಆಯೋಗದ ಅಧ್ಯಕ್ಷ, ಸುಪ್ರೀಂ ಕೋರ್ಟ್ ನಿವೃತ್ತ ನ್ಯಾಯಮೂರ್ತಿ ಶಿವರಾಜ್ ಪಾಟೀಲ್ ಅವರೊಂದಿಗೆ ಮೊದಲ ಸಭೆ ನಡೆಸಿದರು.

ಗಡಿವಿವಾದಕ್ಕೆ ಸಂಬಂಧಿಸಿ 2004ರ ದಾವೆ ಬಳಿಕ ಏನೇನಾಗಿದೆ, ಯಾವೆಲ್ಲಾ ಅಂಶಗಳು ಪ್ರಸ್ತಾಪವಾಗಿವೆ ಎಂಬ ಬಗ್ಗೆ ಚರ್ಚಿಸಿದ್ದೇವೆ. 2017ರಲ್ಲಿ ಮಹಾರಾಷ್ಟ್ರ ಚಾಲೆಂಜ್ ಮಾಡಿರುವ ಕುರಿತು ಸಮಾಲೋಚಿಸಿದ್ದೇವೆ. ಸಂವಿಧಾನ ಮತ್ತು ಕಾನೂನು ನಮ್ಮ ಪರವಾಗಿದೆ ಎಂಬ ವಿಶ್ವಾಸ ತಜ್ಞರಿಂದ ವ್ಯಕ್ತವಾಗಿದೆ ಎಂದು ಸಿಎಂ ಮಾಧ್ಯಮಗಳಿಗೆ ವಿವರಿಸಿದರು.

ಸಭೆಯಲ್ಲಿ ಜಲಸಂಪನ್ಮೂಲ ಸಚಿವರಾದ ಗೋವಿಂದ ಕಾರಜೋಳ, ಗೃಹಸಚಿವ ಆರಗ ಜ್ಞಾನೇಂದ್ರ, ರಾಜ್ಯ ಅಡ್ವೋಕೇಟ್ ಜನರಲ್ ಪ್ರಭುಲಿಂಗ ನಾವಡಗಿ, ಹಿರಿಯ ವಕೀಲರಾದ ಉದಯ ಹೊಳ್ಳ, ಗಡಿ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಡಾ। ಸಿ.ಸೋಮಶೇಖರ್, ಮುಖ್ಯ ಕಾರ್ಯದರ್ಶಿ ವಂದಿತಾ ಶರ್ಮಾ, ಗೃಹ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ ರಜನೀಶ್ ಗೋಯಲ್, ಸಿಎಂ ಪ್ರಧಾನ ಕಾರ್ಯದರ್ಶಿ ಮಂಜುನಾಥ್ ಪ್ರಸಾದ್ ಉಪಸ್ಥಿತರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:28.11.2022.

## 67. ಮಿತ್ರಾ ಯೋಜನೆಯಡಿ 3 ಜಿಲ್ಲೆ ಪರಿಗಣಿಸಲು ಮನವಿ

ಕೇಂದ್ರ ಸರ್ಕಾರದ ಮಿತ್ರಾ ಯೋಜನೆಯಡಿ ರಾಜ್ಯದ ಮೂರು ಜಿಲ್ಲೆಗಳನ್ನು ಸೇರಿಸಿ ಜವಳಿ ಪಾರ್ಕ ನಿರ್ಮಾಣಕ್ಕೆ ಅನುದಾನ ನೀಡುವಂತೆ ಕೇಂದ್ರ ಕೈಗಾರಿಕೆ, ಜವಳಿ, ಆಹಾರ ಮತ್ತು ನಾಗರಿಕ ಸರಬರಾಜು ಖಾತೆ ಸಚಿವ ಪಿಯೂಷ್ ಗೋಯೆಲ್ ಅವರಿಗೆ ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಮನವಿ ಮಾಡಿದ್ದಾರೆ.

ದೆಹಲಿ ಪ್ರವಾಸದಲ್ಲಿರುವ ಅವರು ಸಚಿವ ಪಿಯುಷ ಗೋಯೆಲ್ ಅವರನ್ನು ಭೇಟಿಯಾಗಿ ರಾಜ್ಯಕ್ಕೆ ಸಂಬಂಧಿಸಿದ ವಿವಿಧ ವಿಷಯಗಳ ಕುರಿತು ಚರ್ಚಿಸಿದರು. ಕರ್ನಾಟಕದ ಕಲಬುರಗಿ, ತುಮಕೂರು, ವಿಜಯಪುರ ಜಿಲ್ಲೆಗಳಲ್ಲಿ ಮಿತ್ರ ಯೋಜನೆಯಡಿ ಸಹಾಯಾನುದಾನ ಪಡೆದು ವಿಶ್ವಮಟ್ಟದ ಮೆಗಾ ಜವಳಿ ಪಾರ್ಕ್ ಸ್ಥಾಪನೆಗೆ ರಾಜ್ಯ ಸರ್ಕಾರ ಮುಂದಾಗಿದೆ. ಈ ಜಿಲ್ಲೆಗಳಲ್ಲಿ ಮೆಗಾ ಜವಳಿ ಪಾರ್ಕ್ ಸ್ಥಾಪನೆಯಿಂದಾಗಿ ಅವುಗಳನ್ನು ಜವಳಿ ಕೇಂದ್ರವಾಗಿ ಪರಿವರ್ತಿಸಲು ಸಾಧ್ಯವಾಗಲಿದೆ. ಪ್ರಧಾನ ಮಂತ್ರಿಗಳ ಕನಸಿನಂತೆ ಜವಳಿ ಕೇತ್ರದಲ್ಲಿ ದೇಶ ಆತ್ಮನಿರ್ಭರ್ ಆಗಲು ಕೂಡ ಸಹಕಾರಿಯಾಗಲಿದೆ.

ಇದಲ್ಲದೇ ಮೂರೂ ಜಿಲ್ಲೆಗಳು ಶೈಕ್ಷಣಿಕ ಹಾಗೂ ತಾಂತ್ರಿಕ ಸಂಸ್ಥೆಗಳನ್ನು ಹೊಂದಿದ್ದು, ಕೌಶಲ್ಯವುಳ್ಳ ಮಾನವ ಸಂಪನ್ಮೂಲಗಳನ್ನು ಜವಳಿ ಉದ್ಯಮಕ್ಕೆ ಒದಗಿಸಲು ಶಕ್ತವಾಗಿರುವುದರಿಂದ ಮಿತ್ರಾ ಯೋಜನೆಯಡಿ ಈ ಮೂರು ಜಿಲ್ಲೆಗಳನ್ನು ಸೇರ್ಪಡೆಗೊಳಿಸುವಂತೆ ಕೋರಿದರು.

ಅಲ್ಲದೆ, ರಾಜ್ಯಕ್ಕೆ ಹತ್ತು ಸಾವಿರ ಮೆಟ್ರಿಕ್‌ಟನ್‌ಗಳ ಅಕ್ಕಿ ಸರಬರಾಜನ್ನು ಸೀಮಿತಗೊಳಿಸಿರುವ ನೀತಿಯನ್ನು ಮರು ಪರಿಶೀಲಿಸುವಂತೆ ಮನವಿ ಸಲ್ಲಿಸಿದರು. ಭಾರತೀಯ ಆಹಾರ ನಿಗಮದ ವತಿಯಿಂದ 2023ರ ಮಾರ್ಚ್‌ವರೆಗೆ ಮುಕ್ತ ಮಾರುಕಟ್ಟೆ ಮಾರಾಟ ಯೋಜನೆಯಡಿ 2 ಲಕ್ಷ ಮೆಟ್ರಿಕ್ ಟನ್ ಅಕ್ಕಿಯನ್ನು ವಿಶೇಷ ಪ್ರಕರಣವಾಗಿ ಪರಿಗಣಿಸಿ ಬಿಡುಗಡೆ ಮಾಡುವಂತೆ ಹಾಗೂ ತಕ್ಷಣವೇ 50 ಸಾವಿರ ಮೆಟ್ರಿಕ್ ಟನ್ ಅಕ್ಕಿ ಬಿಡುಗಡೆ ಮಾಡುವಂತೆಯೂ ಮುಖ್ಯಮಂತ್ರಿಗಳು ಕೋರಿದರು.

ಜಲಸಂಪನ್ಮೂಲ ಸಚಿವ ಗೋವಿಂದ ಕಾರಜೋಳ, ಜಲ ಸಂಪನ್ಮೂಲ ಇಲಾಖೆ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ರಾಕೇಶ್ ಸಿಂಗ್ ಇದ್ದರು.

**ಪರಿಸರ ಸೂಕ್ಷ್ಮ ವಲಯ ಎಂದು ಘೋಷಿಸಲು:** ದೆಹಲಿಯಲ್ಲಿ ಕೇಂದ್ರ ಅರಣ್ಯ ಸಚಿವ ಭೂಪೇಂದ್ರ ಯಾದವ್ ಅವರನ್ನು ಭೇಟಿ ಮಾಡಿದ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಗುಡೆಕೋಟೆ ಸ್ಲಾತ್ ಕರಡಿಧಾಮ ಹಾಗೂ ಭೀಮಾಗಡ್ ಅಭಯಾರಣ್ಯಗಳ ಸುತ್ತಮುತ್ತಲಿನ ಪ್ರದೇಶವನ್ನು ಪರಿಸರ ಸೂಕ್ಷ್ಮವಲಯ ಎಂದು ಘೋಷಿಸುವಂತೆ ಮನವಿ ಮಾಡಿದರು. ಈ ಕುರಿತ ಕರಡು ಅಧಿಸೂಚನೆಯನ್ನು ರಾಜ್ಯ ಸಚಿವ ಸಂಪುಟ ಸಭೆ ಅನುಮೋದಿಸಿದ್ದು, ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಮೂಲಕ ಶಿಫಾರಸ್ಸು ಮಾಡಲಾಗಿದೆ. ಶೀಘ್ರವೇ ಕೇಂದ್ರ ಸರ್ಕಾರ ಈ ಕುರಿತು ಘೋಷಣೆ ಮಾಡಬೇಕು ಎಂದು ಕೋರಿದರು. ಜಲಸಂಪನ್ಮೂಲ ಸಚಿವ ಗೋವಿಂದ ಕಾರಜೋಳ ಇದ್ದರು.

ಆಧಾರ: ವಿಶ್ವವಾಣಿ, ದಿನಾಂಕ:30.11.2022.

## 68. ಗಡಿಯುದ್ಧಕ್ಕೆ ರಾಜ್ಯ ಸನ್ನದ್ಧ

ಕರ್ನಾಟಕ–ಮಹಾರಾಷ್ಟ್ರ ಗಡಿ ವಿವಾದ ಸಂಬಂಧ ಸುಪ್ರೀಂ ಕೋರ್ಟ್‌ನಲ್ಲಿ ಸಮರ್ಥವಾಗಿ ಕಾನೂನು ಹೋರಾಟ ನಡೆಸಲು ರಾಜ್ಯ ಸಜ್ಜಾಗಿದ್ದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ದೆಹಲಿಯಲ್ಲಿ ಹಿರಿಯ ವಕೀಲರಾದ ಮುಕುಲ್ ರೋಹಟಗಿ ಅವರನ್ನು ಭೇಟಿ ಮಾಡಿ ರಾಜ್ಯದ ಪರ ಸಮರ್ಥವಾದ ಮಂಡನೆಯ ಕುರಿತು ಚರ್ಚಿಸಿದರು. ಬಳಿಕ ಮಾತನಾಡಿ, ಸುಪ್ರಿಂಕೋರ್ಟ್‌ನಲ್ಲಿ ಸಮರ್ಥವಾಗಿ ವಾದ ಮಂಡನೆ ಮಾಡಲು ಎಲ್ಲಾ ರೀತಿಯ ಸಿದ್ಧತೆ ನಡೆದಿದೆ ಎಂದು ತಿಳಿಸಿದರು.

ಬೊಮ್ಮಾಯಿ ಬೆಂಗಳೂರಿನಲ್ಲಿ ಕರ್ನಾಟಕ ಗಡಿ ಮತ್ತು ನದಿಗಳ ರಕ್ಷಣಾ ಆಯೋಗದ ಅಧ್ಯಕ್ಷ ಶಿವರಾಜ ಪಾಟೀಲ್ ಸೇರಿದಂತೆ ಸಚಿವರು, ಕಾನೂನು ತಜ್ಞರು ಹಾಗೂ ಹಿರಿಯ ಅಧಿಕಾರಿಗಳೊಂದಿಗೆ ಸಭೆ ನಡೆಸಿದ್ದರು.

ದೆಹಲಿಯಲ್ಲಿ ಕರ್ನಾಟಕದ ಪರ ವಾದಿಸುವ ವಕೀಲರನ್ನು ಭೇಟಿಯಾದರು. ನ್ಯಾಯಮೂರ್ತಿ ಕೆ.ಎಮ್.ಜೋಸೆಫ್, ನ್ಯಾಯಾಧೀಶರಾದ ವಿ.ರಾಮ ಸುಬ್ರಹ್ಮಣಿಯನ್ನ ಹಾಗೂ ನ್ಯಾ.ಬಿ.ವಿ.ನಾಗರತ್ನ ನೇತೃತ್ವದ ಸುಪ್ರೀಂಕೋರ್ಟ್‌ನ ತ್ರಿಸದಸ್ಯ ಪೀಠದ ಮುಂದೆ ಪ್ರಕರಣದ ವಿಚಾರಣೆ ನಿಗದಿಯಾಗಿದೆ. ಆದರೆ, ಪೂರ್ವ ನಿಗದಿಯಂತೆ ಪ್ರಕರಣ ವಿಚಾರಣೆಗೆ ಬರುವುದು ಅನುಮಾನವಾಗಿದೆ. ಏಕೆಂದರೆ, ನ್ಯಾಯಮೂರ್ತಿ ಕೆ.ಎಂ.ಜೋಸೆಫ್ ಅವರು ಸಾಂವಿಧಾನಿಕ ಪೀಠವೊಂದರಲ್ಲಿನ ಪ್ರಕರಣದ ವಿಚಾರಣೆಯಲ್ಲಿ ಪಾಲ್ಗೊಳ್ಳಬೇಕಿರುವುದರಿಂದ ಅವರು ಗಡಿ ವಿವಾದದ ಕುರಿತ ವಿಚಾರಣೆಗೆ ಹಾಜರಾಗುವುದು ಅನುಮಾನ ಎನ್ನಲಾಗುತ್ತಿದೆ. ಅವರು ಬಾರದಿದ್ದರೆ ವಿಚಾರಣೆ ಮುಂದಕ್ಕೆ ಹೋಗಲಿದೆ.

ಕರ್ನಾಟಕ–ಮಹಾರಾಷ್ಟ್ರ ನಡುವಿನ ಗಡಿ ವಿವಾದ ಅಂತಿಮ ಘಟ್ಟಕ್ಕೆ ಬಂದು ನಿಂತಿದ್ದು, ಗಡಿ ವಿವಾದವನ್ನು ಬಗೆಹರಿಸುವುದು ಕೋರ್ಟ್‌ನ ವ್ಯಾಪ್ತಿಗೆ ಬರುತ್ತದೆಯೋ, ಇಲ್ಲವೋ ಎಂಬ ಬಗ್ಗೆ ಅಂತಿಮ ತೀರ್ಪು ಪ್ರಕಟವಾಗಬೇಕಿದೆ.

**ಕರ್ನಾಟಕ–ಮಹಾರಾಷ್ಟ್ರ ಸಂಘರ್ಷ:** ಭಾಷಾವಾರು ಪ್ರಾಂತ್ಯ ರಚನೆಗಾಗಿ ಕೇಂದ್ರದಿಂದ 1953 ರಲ್ಲಿ ಫಸಲ್ ಅಲಿ ನೇತೃತ್ವದ ಸಮಿತಿ ರಚನೆಯಾಗಿತ್ತು. 1955ರಲ್ಲಿ ಅದು ಕೇಂದ್ರ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿತ್ತು. ಬಳಿಕ, 1966ರಲ್ಲಿ ಈ ಸಂಬಂಧ ಮಹಾಜನ್ ಆಯೋಗ ರಚನೆ ಮಾಡಲಾಗಿತ್ತು. ಎರಡೂ ಆಯೋಗದ ವರದಿಗಳು ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗ ಎಂದು ಹೇಳಿವೆ. ಆದರೆ, ಈ ಎರಡೂ ವರದಿಗೆ ಮಹಾರಾಷ್ಟ್ರ ಆಕ್ಷೇಪ ಎತ್ತಿದ್ದು, 2004ರಲ್ಲಿ ಬೆಳಗಾವಿ ಸೇರಿದಂತೆ ಗಡಿಭಾಗದಲ್ಲಿರುವ ಮರಾಠಿ ಬಹುಭಾಷಿಕರ ಪ್ರದೇಶಗಳನ್ನು ಮಹಾರಾಷ್ಟ್ರಕ್ಕೆ ಸೇರ್ಪಡೆ ಮಾಡುವಂತೆ ಕೋರಿ ಸುಪ್ರೀಂ ಕೋರ್ಟ್‌ನಲ್ಲಿ ಅರ್ಜಿ ಸಲ್ಲಿಸಿದೆ. ಇನ್ನು, ಮಹಾಜನ ವರದಿಯನ್ನು ಕೇಂದ್ರ ಸರ್ಕಾರ ಒಪ್ಪಿಯೂ ಇಲ್ಲ ತಿರಸ್ಕಾರವನ್ನೂ ಮಾಡಿಲ್ಲ. ಆದರೆ, ಕರ್ನಾಟಕ ಸರ್ಕಾರವು ಗಡಿ ವಿವಾದ ಇತ್ಯರ್ಥ ಮಾಡುವ ಅಧಿಕಾರ ಕೋರ್ಟ್‌ಗೆ ಇಲ್ಲ. ಸಂಸತ್ತಿಗೆ ಮಾತ್ರ ಇದೆ ಎಂದು ವಾದ ಮಾಡುತ್ತ ಬಂದಿದೆ. 18 ವರ್ಷಗಳಿಂದ ಈ ಕುರಿತ ವ್ಯಾಜ್ಯ ನಡೆಯುತ್ತಿದೆ.

**ಮಹಾರಾಷ್ಟ್ರದ ವಾದ:**

- ಭಾಷಾವಾರು ರಾಜ್ಯಗಳ ಪುನರ್ ವಿಂಗಡಣೆ ವೇಳೆ ಗಡಿಭಾಗದ ಮರಾಠಿಗರಿಗೆ ಅನ್ಯಾಯ.
- ಬೆಳಗಾವಿ, ಬೀದರ್, ಕಾರವಾರ, ಭಾಲ್ಕಿ, ನಿಪ್ಪಾಣಿ ಸೇರಿ 865 ಹಳ್ಳಿಗಳು ಮಹಾರಾಷ್ಟ್ರಕ್ಕೆ ಸೇರಬೇಕು.

**ಕರ್ನಾಟಕದ ವಾದ:**

- ಗಡಿ ವಿವಾದ ಸಂಬಂಧ ಮಹಾಜನ್ ವರದಿಯೇ ಅಂತಿಮ. ಅದನ್ನು ಯಥಾವತ್ ಜಾರಿಗೊಳಿಸಬೇಕು.
- ಬೆಳಗಾವಿಯು ಕರ್ನಾಟಕದ ಅವಿಭಾಜ್ಯ ಅಂಗ ಅದರ ಬಗೆಗಿನ ಗಡಿ ವಿವಾದ ಮುಗಿದ ಅಧ್ಯಾಯ
- ಗಡಿ ವಿವಾದಗಳು ನ್ಯಾಯಾಲಯದ ವ್ಯಾಪ್ತಿಗೆ ಬರುವುದಿಲ್ಲ ಸಂಸತ್ತಿಗೆ ವ್ಯಾಪ್ತಿಗೆ ಮಾತ್ರ ಬರುತ್ತವೆ.

**ಸಮರ್ಥ ವಾದಕ್ಕೆ ಕರ್ನಾಟಕ ಸಿದ್ಧ:** ನಮ್ಮ ಅಡ್ವೋಕೇಟ್ ಜನರಲ್ ರೋಹಟಗಿ ಅವರಿಗೆ ಗಡಿ ವಿವಾದದ ಕಾನೂನಾತ್ಮಕ ಹಿನ್ನೆಲೆಯ ಬಗ್ಗೆ ಮಾಹಿತಿ ನೀಡಲಾಗಿದೆ. ಸುಪ್ರೀಂ ಕೋರ್ಟ್‌ನಲ್ಲಿ ಸಮರ್ಥವಾಗಿ ವಾದ ಮಂಡನೆ ಮಾಡಲು ಎಲ್ಲಾ ರೀತಿಯ ಸಿದ್ಧತೆ ನಡೆದಿದೆ. ಮಹಾರಾಷ್ಟ್ರ ಸರ್ಕಾರ ಹಾಕಿರುವ ಮೆಂಟೇನಿಬಿಲಿಟಿ ಕುರಿತಾಗಿ ವಿಚಾರಣೆ ನಡೆಯಲಿದೆ.

ಬಸವರಾಜ ಬೊಮ್ಮಾಯಿ, ಮುಖ್ಯಮಂತ್ರಿ.

**ಮಹಾರಾಷ್ಟ್ರ ನಮಗೆ ನೀರೂ ಕೊಟ್ಟಿಲ್ಲ: ಜತ್ ಕನ್ನಡಿಗರು**

ಮಹಾರಾಷ್ಟ್ರ ಸರ್ಕಾರ 50 ವರ್ಷಗಳಿಂದ ನಮ್ಮನ್ನು ನಿರ್ಲಕ್ಷಿಸಿದೆ. ಮಾಚಾಳ್ ನೀರಾವರಿ ಯೋಜನೆ ಜಾರಿಗೊಳಿಸಿ ಕುಡಿಯುವ ನೀರು ನೀಡುತ್ತೇನೆಂದು ಹೇಳಿ ಇನ್ನೂ ನೀಡಿಲ್ಲ. ತಾಲ್ಲೂಕಿನಲ್ಲಿ 200ಕ್ಕೂ ಹೆಚ್ಚು ಕನ್ನಡ ಶಾಲೆಗಳಿದ್ದರೂ ಅವುಗಳಿಗೆ ಮೂಲ ಸೌಕರ್ಯ ನೀಡಿಲ್ಲ ಎಂದು ಮಹಾರಾಷ್ಟ್ರದ ಜತ್ ತಾಲ್ಲೂಕಿನ ಕನ್ನಡಿಗರು ಆರೋಪಿಸಿದ್ದಾರೆ.

ಆಧಾರ: ಕನ್ನಡ ಪ್ರಭ, ದಿನಾಂಕ:30.11.2022.

## 69. ರಾಷ್ಟ್ರಪತಿ, ಕೇಂದ್ರ ಸಚಿವರ ಭೇಟಿಯಾದ ಸಿಎಂ

ದೆಹಲಿ ಪ್ರವಾಸದಲ್ಲಿರುವ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಕೇಂದ್ರ ಜಲಶಕ್ತಿ ಸಚಿವ ಗಜೇಂದ್ರ ಸಿಂಗ್ ಶೇಖಾವತ್, ಸಾರಿಗೆ ಸಚಿವ ನಿತಿನ್ ಗಡ್ಕರಿ ಅವರನ್ನು ಭೇಟಿಯಾಗಿ ರಾಜ್ಯದ ವಿವಿಧ ಯೋಜನೆಗಳ ಕುರಿತು ಚರ್ಚೆ ನಡೆಸಿದರು.

ಮೊದಲಿಗೆ ಗಜೇಂದ್ರ ಸಿಂಗ್ ಶೇಖಾವತ್ ಅವರನ್ನು ಭೇಟಿಯಾಗಿ ವಿವಿಧ ಯೋಜನೆಗಳ ಕುರಿತು ಚರ್ಚಿಸಿದ ಬೊಮ್ಮಾಯಿ, ನೀರಾವರಿ ಯೋಜನೆಗಳಿಗೆ ಕೇಂದ್ರ ಸರ್ಕಾರದಿಂದ ಬರಬೇಕಿರುವ ತೀರುವಳಿ(ಬಾಕಿ)ಗಳನ್ನು ಶೀಘ್ರ ಒದಗಿಸುವಂತೆ ಆಗ್ರಹಿಸಿದರು. ಭದ್ರಾ ಮೇಲ್ದಂಡೆ ಯೋಜನೆ, ಕೃಷ್ಣಾ ಮೇಲ್ದಂಡೆ ಯೋಜನೆ 3ನೇ ಹಂತ, ಕಳಸಾ ಬಂಡೂರಿ ಯೋಜನೆ ಹಾಗೂ ಮೇಕೆದಾಟು ಯೋಜನೆಗಳು ಮಾತುಕತೆ ವೇಳೆ ಚರ್ಚೆಗೆ ಬಂತು. ಇದೇ ಸಂದರ್ಭದಲ್ಲಿ ರಾಜ್ಯದಲ್ಲಿ ಜಲ ಜೀವನ್ ಮಿಷನ್ ಯೋಜನೆ ತೀವ್ರಗತಿಯಲ್ಲಿ ಅನುಷ್ಠಾನಗೊಳ್ಳುತ್ತಿರುವ ಕುರಿತು ಜಲಶಕ್ತಿ ಸಚಿವರಿಗೆ ಮಾಹಿತಿ ನೀಡಿದರು.

**ಬೈಪಾಸ್ ರಸ್ತೆ ಕುರಿತು ಚರ್ಚೆ:** ಆ ಬಳಿಕ ನಿತಿನ್ ಗಡ್ಕರಿ ಅವರನ್ನು ಭೇಟಿಯಾದ ಬೊಮ್ಮಾಯಿ ಅವರು ಹುಬ್ಬಳ್ಳಿ–ಧಾರವಾಡ ಬೈಪಾಸ್ ರಸ್ತೆ ಅಗಲೀಕರಣ ಕುರಿತು ಚರ್ಚೆ ನಡೆಸಿದರು. ಇದರ ಮಧ್ಯೆ, ರಾಷ್ಟ್ರಪತಿ ದ್ರೌಪದಿ ಮುರ್ಮುರವರನ್ನು ಸೌಹಾರ್ದಯುತವಾಗಿ ಭೇಟಿಯಾಗಿ ಕೆಲಕಾಲ ಮಾತುಕತೆ ನಡೆಸಿದರು. ಕೇಂದ್ರ ಸಚಿವರಾದ ಭಗವಂತ ಖೂಬಾ, ಪ್ರಹ್ಲಾದ ಜೋಶಿ, ರಾಜ್ಯದ ಸಚಿವ ಶಂಕರ್ ಪಾಟೀಲ್ ಮುನೇನ ಕೊಪ್ಪ. ಸಚಿವ ಗೋವಿಂದ ಕಾರಜೋಳ ಮುಖ್ಯಮಂತ್ರಿಗೆ ಸಾಥ್ ನೀಡಿದರು.

**ನಾರಿಮನ್ ಭೇಟಿಯಾದ ಸಿಎಂ:** ಮುಖ್ಯಮಂತ್ರಿ ಬೊಮ್ಮಾಯಿ ಅವರು ಹಿರಿಯ ನ್ಯಾಯವಾದಿ ಫಾಲಿ ಎಸ್.ನಾರಿಮನ್ ಅವರನ್ನೂ ಭೇಟಿಯಾಗಿ ಕೆಲಕಾಲ ಮಾತುಕತೆ ನಡೆಸಿದರು.

ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಇದೊಂದು ಸೌಜನ್ಯದ ಭೇಟಿಯಾಗಿತ್ತು. ರಾಜ್ಯಕ್ಕೆ ಐದು ದಶಕಗಳ ಕಾಲ ಸೇವೆ ಸಲ್ಲಿಸಿರುವ ನಾರಿಮನ್ ಅವರು ಕರ್ನಾಟಕದ ನೀರಿನ ಹಿತರಕ್ಷಣೆ ಮಾಡಿದ್ದಾರೆ. ಈಗಲೂ ಅವರ ಸಲಹೆ ಸೂಚನೆಗಳಿಗೆ ಮೌಲ್ಯ ಇದೆ. ಮಾಜಿ ಮುಖ್ಯಮಂತ್ರಿಗಳಾದ ರಾಮಕೃಷ್ಣ ಹೆಗ್ಗಡೆ, ಎಸ್.ಆರ್.ಬೊಮ್ಮಾಯಿ, ಎಚ್.ಡಿ.ದೇವೇಗೌಡರ ಕಾಲದಲ್ಲಿ ಅವರು ಅನನ್ಯ ಸೇವೆ ಸಲ್ಲಿಸಿದ್ದಾರೆ ಎಂದರು. ಇದೊಂದು ಸೌಜನ್ಯದ ಭೇಟಿಯಾಗಿದ್ದು ಅವರಿಗೆ ಧನ್ಯವಾದ ಹೇಳಲು ಬಂದಿದ್ದೇನೆ. ಗಡಿ, ಜಲ ವಿಚಾರದ ಬಗ್ಗೆ ಯಾವುದೇ ವಿಶೇಷ ಚರ್ಚೆ ಮಾಡಿಲ್ಲ ಎಂದು ಹೇಳಿದರು.

ಆಧಾರ: ಕನ್ನಡ ಪ್ರಭ, ದಿನಾಂಕ:01.12.2022.

## 70. ಎನ್‌ಇಪಿಯಿಂದ ಉಜ್ವಲ ಭವಿಷ್ಯ

ಹಂಪಿ ಕಲೆ, ಸಾಹಿತ್ಯ ಸೇರಿದಂತೆ ಸಾಂಸ್ಕೃತಿಕ ನಿಧಿಯಾಗಿದೆ. ಹಂಪಿ ವಿಶ್ವಪರಂಪರೆ ತಾಣವಾಗಿದೆ. ಹಂಪಿ ವಿವಿ ಜ್ಞಾನದ ಭಂಡಾರವಾಗಿದೆ. ಡಾ॥ಚಂದ್ರಶೇಖರ ಕಂಬಾರರ ವಿಶೇಷ ಕಾಳಜಿಯಿಂದ ವಿವಿ ಉತ್ತಮ ರೀತಿಯಲ್ಲಿ ಬೆಳೆದಿದೆ. ಅವರು ಸುಭದ್ರ ಅಡಿಪಾಯ ಹಾಕಿದ್ದಾರೆ ಎಂದು ರಾಜ್ಯಪಾಲ ಥಾವರಚಂದ್ ಗೆಹಲೋಥ್ ಹೇಳಿದರು.

ಹಂಪಿ ಕನ್ನಡ ವಿಶ್ವವಿದ್ಯಾಲಯದ ನವರಂಗ ಬಯಲು ಮಂದಿರಲ್ಲಿ ನಡೆದ ಕನ್ನಡ ವಿವಿ 31ನೇ ಘಟಿಕೋತ್ಸವ ನುಡಿ ಹಬ್ಬದ ಘಟಿಕೋತ್ಸವ ಉದ್ಘಾಟಿಸಿ ಮಾತನಾಡಿದ ಅವರು, ಹಲವಾರು ಸಾಧಕರಿಗೆ ಕನ್ನಡ ವಿವಿ ಪ್ರತಿಷ್ಠಿತ ನಾಡೋಜ ಪುರಸ್ಕಾರ ನೀಡಿರುವುದು ಹೆಮ್ಮೆಯ ಸಂಗತಿ. ಎಲ್ಲ ಪದವಿ ಪಡೆದ ವಿದ್ಯಾರ್ಥಿಗಳು ಗುರು, ಹಿರಿಯರು, ತಂದೆ ತಾಯಂದಿರನ್ನು ಗೌರವ, ಪ್ರೇಮದಿಂದ ಕಾಣಬೇಕು. ರಾಷ್ಟ್ರೀಯ ಶಿಕ್ಷಣ ನೀತಿ ಮುಂದಿನ ಪೀಳಿಗೆಗೆ ಉಜ್ವಲ ಭವಿಷ್ಯವಾಗಲಿದೆ. ಮಾತೃಭಾಷೆಯಲ್ಲಿ ಅಧ್ಯಯನ ಮಾಡುವುದರಿಂದ ಉನ್ನತ ಶಿಕ್ಷಣ ಹೊಂದಲು ಸಹಕಾರಿಯಾಗಲಿದೆ ಎಂದರು.

ಮುಖ್ಯ ಅತಿಥಿಗಳಾಗಿದ್ದ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಮಾತನಾಡಿ, ಉನ್ನತ ಶಿಕ್ಷಣದಲ್ಲಿ ಕನ್ನಡವು ಸರ್ವಜ್ಞಾನಗಳ ತಾಯ್ನುಡಿ ಆಗಬೇಕಾದರೆ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕನ್ನಡವು ಜ್ಞಾನದ ಭಾಷೆಯಾಗಿ ರೂಪುಗೊಳ್ಳುವುದು ಅವಶ್ಯ ಎಂದರು.

ಸ್ನಾತಕ ಮತ್ತು ಸ್ನಾತಕೋತ್ತರ ಪದವಿಗಳಲ್ಲಿ ಕನ್ನಡ ಕಲಿಸಲು ಸಾಧ್ಯವಾಗುತ್ತದೆ. ಆದರೆ ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಾಲಾ ಹಂತಗಳಲ್ಲಿ ಶೇ.90ರಷ್ಟು ಇಂಗ್ಲೀಷ್ ಮಯವೇ ಆಗಿರುವಾಗ ಲೋಕೋಪಯೋಗಿ ಭಾಷೆಯಾಗಿ ಕನ್ನಡದ ಬಳಕೆ ಮತ್ತು ಉಳಿವು ಎಷ್ಟಿದೆ ಎಂಬುದನ್ನು ಚಿಂತಿಸಬೇಕಾದ ಕಾಲದಲ್ಲಿದ್ದೇವೆ. ಕನ್ನಡವು ಇಂಗ್ಲೀಷ್ ಭಾಷೆಯ ಬಂಧದಲ್ಲಿ ಸೊರಗುತ್ತಿದೆ. ನಮ್ಮ ನಾಡಿನ ಮಕ್ಕಳು ಇಂಗ್ಲೀಷ್ ಎಂಬ ಪೂತನಿಯ ಬಾಹುಗಳಲ್ಲಿ ಸಿಕ್ಕಿ ಹಾಕಿಕೊಂಡಿದ್ದಾರೆ. ಇದು ಹೀಗೆಯೇ ಮುಂದುವರಿದರೆ ಕನ್ನಡದ ಏಳ್ಗೆ ಎಂಬುದಕ್ಕೆ ಅರ್ಥವೇನಾದರೂ ಉಂಟೆ ಎಂಬ ಪ್ರಶ್ನೆಗೆ ನಮಗೆ ನಾವೇ ಉತ್ತರ ಕಂಡುಕೊಳ್ಳಬೇಕಾಗಿದೆ. ಇದು ಭಾವೋಪಯೋಗಿ ಮತ್ತು ಜ್ಞಾನೋಪಯೋಗಿ ನೆಲೆಗಳ ಮೇಲೆ ಕರಾಳಾತ್ಮಕ ಪರಿಣಾಮ ಉಂಟು ಮಾಡದೆ ಇರದೆಂಬುದನ್ನು ಇತ್ತೀಚಿನ ವರದಿಗಳು ಹೇಳುತ್ತಿವೆ ಎಂದು ಕಳವಳ ವ್ಯಕ್ತಪಡಿಸಿದರು.

ಇದೇ ಸಂದರ್ಭದಲ್ಲಿ ಸಾಹಿತಿ ಕೃಷ್ಣಪ್ಪ ಜಿ.(ಸಾಹಿತ್ಯ) ಹಾಗೂ ಅಂಕಣಕಾರ ಎಸ್.ಷಡಕ್ಷರಿ (ಸಾಹಿತ್ಯ–ಸಮಾಜ ಸೇವೆ 4) ಹಾಗೂ ಡಾ.ಸಿ.ಎನ್.ಮಂಜುನಾಥ್(ವೈದ್ಯಕೀಯ)ಅವರಿಗೆ ನಾಡೋಜ ಗೌರವ ಪದವಿ ಪ್ರಧಾನ ಮಾಡಲಾಯಿತು. ಒಂದು ಡಿ.ಲಿಟ್ ಹಾಗೂ 136 ಪಿಎಚ್ .ಡಿ ಪದವಿ ಪ್ರಧಾನ ಮಾಡಲಾಯಿತು.

ಕನ್ನಡ ವಿವಿ ಕುಲಪತಿ ಡಾ.ಸ.ಚಿ.ರಮೇಶ್ ಸ್ವಾಗತ ಭಾಷಣ ನೆರವೇರಿಸಿದರು. ಕುಲಸಚಿವ ಡಾ.ಎ. ಸುಬ್ಬಣ್ಣ ರೈ, ಕಾರ್ಯಕಾರಿ ಸಮಿತಿ, ಆಡಳಿತ ಮಂಡಳಿ ಸದಸ್ಯರು ಇದ್ದರು.

ಆಧಾರ: ವಿಶ್ವವಾಣಿ, ದಿನಾಂಕ:09.12.2022.

## 71. ದೇಗುಲಗಳಲ್ಲಿ ಸಲಾಂ ಆರತಿ ಬದಲು ಆರತಿ ನಮಸ್ಕಾರ

ರಾಜ್ಯದ ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಗೆ ಒಳಪಡುವ ದೇಗುಲಗಳಲ್ಲಿ ಟಿಪ್ಪು ಸುಲ್ತಾನ್ ಆಳ್ವಿಕೆ ಸಂದರ್ಭ ಜಾರಿಗೆ ತಂದಿದ್ದ "ದೀವಟಿಗೆ ಸಲಾಂ" ಎಂಬ ಪದವನ್ನು ಕೈಬಿಡಲು ಇಲಾಖೆ ತೀರ್ಮಾನಿಸಿದೆ.

ಈ ಕುರಿತು ಈಗಾಗಲೇ ಧಾರ್ಮಿಕ ಪರಿಷತ್ ಅಂತಿಮ ನಿರ್ಣಯ ಕೈಗೊಂಡಿದ್ದು 'ಸಲಾಂ ಆರತಿ' ಪದದ ಬದಲಾಗಿ 'ಆರತಿ ನಮಸ್ಕಾರ' ಎಂದು ಹೆಸರು ಬದಲಾಯಿಸಿ, ಸೇವೆಗಳನ್ನು ಮುಂದುವರಿಸಿಕೊಂಡು ಹೋಗುವುದಕ್ಕೆ ಧಾರ್ಮಿಕ ಪರಿಷತ್ ತೀರ್ಮಾನಿಸಿದೆ. ಈ ಹಿಂದೆ ಈ ಬಗ್ಗೆ ಪ್ರಸ್ತಾವ ಇದ್ದರೂ ನಿರ್ಣಯ ಕೈಗೊಂಡಿರಲಿಲ್ಲ ಕೆಲವು ದಿನಗಳ ಹಿಂದೆ ನಡೆದ ಧಾರ್ಮಿಕ ಪರಿಷತ್ ಸಭೆಯಲ್ಲಿ ಈ ಬಗ್ಗೆ ತೀರ್ಮಾನ ಕೈಗೊಳ್ಳಲಾಗಿದೆ. ಸಭೆಯಲ್ಲಿ ಧಾರ್ಮಿಕ ಮತ್ತು ದತ್ತಿ ಸಚಿವೆ ಶಶಿಕಲಾ ಜೊಲ್ಲೆಯವರೂ ಭಾಗಿಯಾಗಿದ್ದರು, ಈ ಬಗ್ಗೆ ಇಲಾಖೆಯಿಂದ ಶೀಘ್ರ ಸುತ್ತೋಲೆ ಹೊರಡಿಸಲಾಗುವುದು.

**ವಿಧಾನ ಬದಲಿಲ್ಲ:** ಟಿಪ್ಪು ಸುಲ್ತಾನ್ ಆಡಳಿತದ ಸಂದರ್ಭ ರಾಜ್ಯದ ಹಲವು ಪ್ರಮುಖ ದೇವಾಲಯಗಳಲ್ಲಿ ಮಧ್ಯಾಹ್ನ, ಸಾಯಂಕಾಲ ದೀವಟಿಗೆ/ಪಂಜು/ದೊಂದಿ ಹಿಡಿದು ದೇವಾಲಯಕ್ಕೆ ದೇವರಿಗೆ ಆರತಿಯಂತೆ ನಡೆಸುವ ಕಾರ್ಯಕ್ಕೆ ದೀವಟಿಗೆ ಸಲಾಂ/ಸಲಾಂ ಮಂಗಳಾರತಿ/ಸಲಾಂ ಆರತಿ ಎಂದು ಕರೆಯಲಾಗುತ್ತಿತ್ತು.

ಸಲಾಂ ಪದವು ಸಂಸ್ಕೃತ ಭಾಷೆಯದ್ದಲ್ಲ ಹಾಗಾಗಿ ಹಿಂದೂ ಧಾರ್ಮಿಕ ದತ್ತಿ ದೇವಾಲಯಗಳಲ್ಲಿ ಸಂಸ್ಕೃತ ಪದಗಳಿಂದ ಹೇಗೆ ಭಗವಂತನ ಸೇವೆಗಳನ್ನು ನಡೆಸಲಾಗುತ್ತದೆಯೋ ಅದೇ

ರೀತಿ ಸಲಾಂ ಬದಲಿಗೆ ಬೇರೆ ಸಂಸ್ಕೃತ ಪದವು ಬಳಸಬೇಕು ಎಂಬ ಅಭಿಪ್ರಾಯವನ್ನು ಪರಿಷತ್ ಸದಸ್ಯರು ವ್ಯಕ್ತಪಡಿಸಿದ್ದರು.

ಈ ಬಗ್ಗೆ ಆಗಮ ಪಂಡಿತರೊಂದಿಗೆ ಕೂಡ ಚರ್ಚಿಸಲಾಗಿದ್ದು, ಯಾವುದೇ ಪೂಜಾ ವಿಧಿ ವಿಧಾನಗಳಲ್ಲಿ ಸೇವಾ ಕಾರ್ಯಗಳಲ್ಲಿ ಬದಲಾವಣೆಯಾಗುವುದಿಲ್ಲ ಎಲ್ಲಾ ಸೇವಾ ಕಾರ್ಯಗಳು ಹಿಂದಿನಿಂದ ನಡೆದು ಬಂದ ರೂಢಿ, ಸಂಪ್ರದಾಯ ಪದ್ಧತಿಯಂತಯೇ ನಡೆಯುತ್ತವೆ, ಹಾಗಾಗೀ ದೇವಾಲಯಗಳ ಶಾಸ್ತ್ರ ಸಂಪ್ರದಾಯಕ್ಕೆ ಧಕ್ಕೆಯಾಗುವುದಿಲ್ಲ. ಬಳಸುವ 'ಸಲಾಂ' ಪದ ಮಾತ್ರ ಕಳಚಿಕೊಂಡು 'ನಮಸ್ಕಾರ' ಎಂಬ ಸಂಸ್ಕೃತ ಪದವನ್ನು ಬಳಸಿಕೊಳ್ಳಲಾಗುತ್ತದೆ.

ಕರಾವಳಿಯ ಪ್ರಮುಖ ದೇಗುಲಗಳಾದ ಕೊಲ್ಲೂರು ಶ್ರೀ ಮೂಕಾಂಬಿಕ ದೇವಸ್ಥಾನ, ಪುತ್ತೂರು ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಕುಕ್ಕೆ ಸುಬ್ರಹ್ಮಣ್ಯ ಸೇರಿದಂತೆ ರಾಜ್ಯಾದ್ಯಂತ ಈ ಆಚರಣೆ ಇದೆ.

**ಹಿಂದಿನ ಪದ್ಧತಿ:** ಟಿಪ್ಪು ಸುಲ್ತಾನ್ ಆಡಳಿತ ಕಾಲದಲ್ಲಿ ರಾಜನ ಬಗ್ಗೆ ಪ್ರಾರ್ಥನೆ ಮಾಡಬೇಕು ಎಂಬ ಆದೇಶ ಇತ್ತು. ಅದರಂತೆ ಪ್ರಾರ್ಥನೆ ನಡೆಸಲಾಗುತ್ತಿತು. ಟಿಪ್ಪು ಅಥವಾ ಆಡಳಿತದ ಪರ ಇದ್ದ ಅಧಿಕಾರಿಗಳು ಬಂದು ದೇವಸ್ಥಾನದಲ್ಲಿ ಪ್ರಸಾದ ತೆಗೆದುಕೊಳ್ಳುತ್ತಿದ್ದರು. ಈಗ ಬ್ಯಾಂಡ್ ವಾದ್ಯದವರು ಇರುತ್ತಾರೆ, ದೀಪ ಹಿಡಿಯುತ್ತಾರೆ, ನೈವೇದ್ಯ ಸಮರ್ಪಣೆಯಾಗುತ್ತದೆ, ಮಂಗಳಾರತಿ ಇರುತ್ತದೆ. ಆದರೆ ಪ್ರಸಾದ ಸ್ವೀಕರಿಸುವುದಕ್ಕೆ ಯಾರೂ ಇರುವುದಿಲ್ಲ ಆದರೂ ಈ ಪದ್ಧತಿಗೆ 'ಸಲಾಂ' ದೀವಟಿಗೆ ಎಂಬ ಹೆಸರು ಮುಂದುವರಿದಿದೆ.

**ಮುಜರಾಯಿ ಪದ ಬೇಡ:** ಪರ್ಷಿಯನ್ ಪದವಾದ 'ಮುಜರಾಯಿ' ಬಳಕೆಯನ್ನು ಕೂಡ ಹಿಂದೆಯೇ ಕೈಬಿಡಲಾಗಿತ್ತು. ಆದರೂ ಈಗಲೂ ಅದು ರೂಢಿಯಲ್ಲಿದೆ, ಆದರೆ ಇನ್ನು ಮುಂದೆ ಆ ಪದ ಬಳಕೆ ಮಾಡಬಾರದು. 'ಹಿಂದೂ ಧಾರ್ಮಿಕ ಸಂಸ್ಥೆಗಳು, ಧರ್ಮದಾಯ ದತ್ತಿ ಇಲಾಖೆ' ಎಂದೇ ಕರೆಯಬೇಕು ಎಂಬ ಸುತ್ತೋಲೆಯನ್ನು ಕಳುಹಿಸಲು ತೀರ್ಮಾನಿಸಲಾಗಿದೆ.

ಆಧಾರ: ಉದಯ ವಾಣಿ, ದಿನಾಂಕ:10.12.2022.

## 72. ನಾಳೆಯಿಂದ ಜಿ20 ಸಭೆ

ಭಾರತದ ಅಧ್ಯಕ್ಷತೆಯಲ್ಲಿ 'ಒಂದು ನೆಲ, ಒಂದು ಕುಟುಂಬ, ಒಂದು ಭವಿಷ್ಯ' ಧ್ಯೇಯ ವಾಕ್ಯದಡಿ ಆರಂಭವಾಗಿರುವ ಜಿ20 ಶೃಂಗದ ಸದಸ್ಯ ರಾಷ್ಟ್ರಗಳ ಸರಣಿ ಸಭೆಯ ಭಾಗವಾಗಿ ಹಣಕಾಸು ಮತ್ತು ಸೆಂಟ್ರಲ್ ಬ್ಯಾಂಕ್ ನಿಯೋಗಗಳ ಸಭೆಗೆ ನಗರದಲ್ಲಿ ಚಾಲನೆ ದೊರಯಲಿದೆ. ಜಿ20 ಫೈನಾನ್ಸ್ ಟ್ರ್ಯಾಕ್‌ನ ಕಾರ್ಯಸೂಚಿ ಮೇಲಿನ ಚರ್ಚೆಗಳ ಆರಂಭ ಸೂಚಿಸುವ ಈ ಸಭೆ 3 ದಿನ ನಡೆಯಲಿದ್ದು, ಹಣಕಾಸು ಸಚಿವಾಲಯ ಮತ್ತು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಜಂಟಿಯಾಗಿ ಆಯೋಜಿಸಿವೆ. ರಾಜ್ಯ ಸರ್ಕಾರದಿಂದ ಸಹಕಾರ, ಬೆಂಬಲ ನೀಡಲಾಗಿದೆ. ಮುಂದಿನ ಹಂತವಾಗಿ ರಾಜಧಾನಿಯಲ್ಲೇ 2023ರ ಫೆಬ್ರವರಿಯಿಂದ 25 ರವರೆಗೆ ಜಿ20 ರಾಷ್ಟ್ರಗಳ ಹಣಕಾಸು ಸಚಿವರು ಮತ್ತು ಸೆಂಟ್ರಲ್ ಬ್ಯಾಂಕ್ ಗವರ್ನರ್‌ಗಳ ನೇತೃತ್ವದ ಸಭೆ ನಡೆಲಿದೆ. ಇದು ಜಿ20 ಫೈನಾನ್ಸ್ ಟ್ರ್ಯಾಕ್, ಬಂಡವಾಳ ಮತ್ತು ಆರ್ಥಿಕ ವಿಷಯಗಳ ಮೇಲೆ ಕೇಂದ್ರೀಕೃತವಾಗಿದ್ದು, ಜಾಗತಿಕ ಆರ್ಥಿಕ ಚರ್ಚೆ ಮತ್ತು ನೀತಿ ಸಮನ್ವಯಕ್ಕೆ ಪರಿಣಾಮಕಾರಿ ವೇದಿಕೆ ಒದಗಿಸಲಿದೆ.

ಆರಂಭವಾಗುವ ಸಭೆಯ ನೇತೃತ್ವವನ್ನು ಕೇಂದ್ರ ವಾಣಿಜ್ಯ ವ್ಯವಹಾರಗಳ ಇಲಾಖೆಯ ಕಾರ್ಯದರ್ಶಿ ಅಜಯ್ ಸೇಠ್ ಮತ್ತು ಆರ್‌ಬಿಐನ ಡೆಪ್ಯುಟಿ ಗವರ್ನರ್ ಡಾ.ಮೈಕಲ್ ಡಿ. ಪಾತ್ರಾ ವಹಿಸುವರು. ಜಿ20 ಮತ್ತು ಭಾರತದಿಂದ ಆಹ್ವಾನಿಸಲ್ಪಟ್ಟ ಇತರ ದೇಶಗಳು ಅಂತಾರಾಷ್ಟ್ರೀಯ ಸಂಸ್ಥೆಗಳ ಸಹವರ್ತಿಗಳು ಭಾಗವಹಿಸಲಿದ್ದಾರೆ. 21ನೇ ಶತಮಾನದ ಜಾಗತಿಕ ಸವಾಲುಗಳನ್ನು ಎದುರಿಸಲು ಅಂತಾರಾಷ್ಟ್ರೀಯ ಹಣಕಾಸು ಸಂಸ್ಥೆಗಳನ್ನು ಪುನರುಜ್ಜೀವನಗೊಳಿಸುವುದು, ಭವಿಷ್ಯದ ದಿನಗಳಲ್ಲಿ

ಹಣಕಾಸು ಒದಗಿಸುವುದು, ಜಾಗತಿಕ ಸಾಲದ ದೌರ್ಬಲ್ಯಗಳ ನಿರ್ವಹಣೆ, ಸುಸ್ಥಿರ ಅಭಿವೃದ್ಧಿ ಗುರಿಗಳಿಗೆ ಹಣಕಾಸು ಒದಗಿಸುವುದು ಸೇರಿ ಅಂತಾರಾಷ್ಟ್ರೀಯ ತೆರಿಗೆ ಕಾರ್ಯಸೂಚಿ ತಯಾರಿಸುವ ಬಗ್ಗೆಯೂ ಸಭೆಯಲ್ಲಿ ಚರ್ಚೆ ನಡೆಯಲಿದೆ. ಸಭೆಯ ಜೊತೆಜೊತೆಗೆ '21ನೇ ಶತಮನದ ಜಾಗತಿಕ ಸವಾಲು ಎದರಿಸಲು ಬ್ಯಾಂಕುಗಳ ಪ್ರಬಲಪಡಿಸುವಿಕೆ' ಎಂಬ ವಿಷಯದ ಬಗ್ಗೆ ಸಮಿತಿ ಚರ್ಚೆ ನಡೆಸಲಿದೆ. 'ಸೂಕ್ಷ್ಮ ಹಣಕಾಸು ವ್ಯವಸ್ಥೆಯಲ್ಲಿ ಕೇಂದ್ರಿಯ ಬ್ಯಾಂಕುಗಳ ಪಾತ್ರ' ಕುರಿತ ವಿಚಾರ ಸಂಕೀರಣ ಇರಲಿದೆ.

ಬಾಲಿ ಜಿ–20 ಶೃಂಗ ಸಭೆಯ ಭಾಷಣದಲ್ಲಿ ಪ್ರಧಾನಿ ನರೇಂದ್ರ ಮೋದಿ, ಅಭಿವೃದ್ಧಿಯ ಪ್ರಯೋಜನಗಳು ಸಾರ್ವತ್ರಿಕ ಮತ್ತು ಸರ್ವವ್ಯಾಪಿಯಾಗಿರುವುದು ಇಂದಿನ ಅಗತ್ಯವಾಗಿದೆ ಎಂದು ಪ್ರತಿಪಾದಿಸಿದ್ದರು. ಹಣಕಾಸು ಸಚಿವಾಲಯವು ಈ ವಿಚಾರವನ್ನು ಜಿ–20 ಫೈನಾನ್ಸ್ ಟ್ರ್ಯಾಕ್‌ನ ಕಾರ್ಯಸೂಚಿಯಲ್ಲಿ ಅಳವಡಿಸಿಕೊಂಡಿದೆ. ಮುಂದಿನ ಒಂದು ವರ್ಷದಲ್ಲಿ ಹೊಸ ಆಲೋಚನೆಗಳನ್ನು ಕಲ್ಪಿಸಿ, ಸಾಮೂಹಿಕ ಕ್ರಿಯೆಯನ್ನು ತೀವ್ರಗೊಳಿಸಲು ಜಿ–20 ಜಾಗತಿಕ ಪ್ರಧಾನ ವಾಹಕವಾಗಿ ಕಾರ್ಯನಿರ್ವಹಿಸುವುದನ್ನು ಖಚಿತಪಡಿಸಿಕೊಳ್ಳಲು ಭಾರತವು ಶ್ರಮಿಸುತ್ತದೆ ಎಂಬ ದೃಷ್ಟಿಕೋನವನ್ನು ಪ್ರಧಾನ ಮಂತ್ರಿ ನೀಡಿದ್ದರು.

**ಚರ್ಚಾ ವಿಷಯ:** ಜಾಗತಿಕ ಆರ್ಥಿಕತೆ, ಆರ್ಥಿಕ ದೃಷ್ಟಿಕೋನ, ಅಂತರಾಷ್ಟ್ರೀಯ ಹಣಕಾಸು ರಚನೆ, ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು, ಸುಸ್ಥಿರ ಹಣಕಾಸು, ಜಾಗತಿಕ ಆರೋಗ್ಯ, ಅಂತರಾಷ್ಟ್ರಿಯ ತೆರಿಗೆ, ಹಣಕಾಸು ವಲಯದ ಸಮಸ್ಯೆ ಮತ್ತು ಜಾಗತಿಕ ಸಮಸ್ಯೆ ಮತ್ತು ಜಾಗತಿಕ ಆರ್ಥಿಕತೆ.

**ಸವಾಲಿನ ನಡುವೆ ನೇತೃತ್ವ :** ಕೋವಿಡ್‌ನಿಂದ ಉಂಟಾದ ಸಂಕಟಗಳು, ರಾಜಕೀಯ ಉದ್ವಿಗ್ನತೆ, ಆಹಾರ ಮತ್ತು ಇಂಧನ ಕ್ಷೇತ್ರದಲ್ಲಿನ ಕಳವಳಕಾರಿ ಬೆಳವಣಿಗೆಗಳು, ಹೆಚ್ಚುತ್ತಿರುವ ಸಾಲದ ಸಂಕಷ್ಟ, ಹಣದುಬ್ಬರದ ಒತ್ತಡ ಸೇರಿ ಅನೇಕ ಸವಾಲುಗಳ ಸಮಯದಲ್ಲಿ ಭಾರತವು ಜಿ–20 ಅಧ್ಯಕ್ಷ ಸ್ಥಾನವನ್ನು ವಹಿಸಿಕೊಂಡಿದೆ. ಅಂತಹ ಸವಾಲುಗಳನ್ನು ಎದುರಿಸಲು ಮಾರ್ಗದರ್ಶನ ನೀಡುವುದು ಶೃಂಗದ ಪ್ರಮುಖ ಪಾತ್ರವಾಗಿದೆ. ಫೈನಾನ್ಸ್ ಟ್ರ್ಯಾಕ್‌ನ ಅಂದಾಜು 40 ಸಭೆಗಳು ಭಾರತದ ಹಲವು ಸ್ಥಳಗಳಲ್ಲಿ ನಡೆಯಲಿವೆ. ಇದರಲ್ಲಿ ಸದಸ್ಯ ರಾಷ್ಟ್ರಗಳ ಹಣಕಾಸು ಸಚಿವರು ಮತ್ತು ಸೆಂಟ್ರಲ್ ಬ್ಯಾಂಕ್ ಗವರ್ನರ್‌ಗಳ ಸಭೆಗಳು ಸೇರಿವೆ.

**ಮುಖ್ಯಾಂಶಗಳು:**

- 13 ರಿಂದ 15ರವರೆಗೆ ಹಣಕಾಸು ಹಾಗೂ ಕೇಂದ್ರ ಬ್ಯಾಂಕುಗಳ ಪ್ರತಿನಿಧಿಗಳ ಸಭೆ
- 16 ಮತ್ತು 17 ರಂದು ನಿಯಮಾವಳಿ ರೂಪಿಸುವ ಕಾರ್ಯಕಾರಿ ಗುಂಪಿನ ಸಭೆ
- ಭಾರತದಲ್ಲಿ 200ಕ್ಕೂ ಹೆಚ್ಚು ಸಭೆ ನಡೆಯಲಿದ್ದು, ಕರ್ನಾಟಕದಲ್ಲಿ 14 ಸಭೆ ಆಯೋಜನೆ
- ದೆಹಲಿ ನಂತರ ಕರ್ನಾಟಕಕ್ಕೆ ಅತಿ ಹೆಚ್ಚಿನ ಜಿ–20 ಸಭೆಗಳ ಆತಿಥ್ಯ
- ಬೆಂಗಳೂರಲ್ಲಿ 11, ಹಂಪಿಯಲ್ಲಿ 2, ಮೈಸೂರಲ್ಲಿ 1 ಸಭೆ.

**ಯಾವೆಲ್ಲ ದೇಶಗಳು:**

ಅರ್ಜೆಂಟೀನಾ, ಆಸ್ಟ್ರೇಲಿಯಾ, ಬ್ರೆಜಿಲ್, ಕೆನಡಾ, ಚೀನಾ, ಫ್ರಾನ್ಸ್, ಜರ್ಮನಿ, ಇಂಡೋನೇಷ್ಯಾ, ಇಟಲಿ, ಜಪಾನ್, ಕೋರಿಯಾ, ಮೆಕ್ಸಿಕೊ, ರಷ್ಯಾ, ಸೌದಿ ಅರೇಬಿಯಾ, ದಕ್ಷಿಣ ಆಫ್ರಿಕಾ, ಟರ್ಕಿ, ಬ್ರಿಟನ್, ಅಮೆರಿಕ, ಯೂರೋಪ್ ಹಾಗೂ ಭಾರತ.

ಆಧಾರ: ವಿಜಯವಾಣಿ, ದಿನಾಂಕ:12.12.2022.

## 73. ಆರೋಗ್ಯ–ಶಿಕ್ಷಣಕ್ಕೆ ಮೊದಲ ಆದ್ಯತೆ

ಆರೋಗ್ಯ–ಶಿಕ್ಷಣಕ್ಕೆ ಸರ್ಕಾರ ಮೊದಲ ಆದ್ಯತೆ ನೀಡಿದೆ. ಆರೋಗ್ಯ ಇಲಾಖೆಗೆ ಬಜೆಟ್‌ನಲ್ಲಿ ರೂ.10 ಸಾವಿರ ಕೋಟಿಗಳನ್ನು ನೀಡಿದ್ದರೆ, ರಾಜ್ಯದಲ್ಲಿ ಒಂದೇ ವರ್ಷದಲ್ಲಿ ಸುಮಾರು ಎಂಟು ಸಾವಿರ ಶಾಲಾ ಕೊಠಡಿಗಳ ನಿರ್ಮಾಣಕ್ಕೆ ಕ್ರಮ ಕೈಗೊಂಡಿದ್ದೇವೆ. ಇದೇ ರಾಜ್ಯದ ಇತಿಹಾಸದಲ್ಲಿಯೇ ಮೊದಲಾಗಿ ಎಂದು ಮುಖ್ಯಮಂತ್ರಿ ಬೊಮ್ಮಾಯಿ ತಿಳಿಸಿದರು.

ನಗರದ ಬೈರಿದೇವರಕೊಪ್ಪದ ರೇಣುಕಾ ನಗರದಲ್ಲಿ 'ನಮ್ಮ ಕ್ಲಿನಿಕ್' ಉದ್ಘಾಟಿಸಿದ ನಂತರ ಅಧಿಕ ಆರೋಗ್ಯ–ಕ್ಷೇಮ ಕೇಂದ್ರಗಳನ್ನು ಆರಂಭಿಸಿದ್ದು 30 ವರ್ಷಕ್ಕೂಮ್ಮೆ ಮೇಲ್ಪಟ್ಟ ಪ್ರತಿಯೊಬ್ಬರೂ ವರ್ಷಕೊಮ್ಮೆಯಾದರು ಎಲ್ಲ ರೀತಿಯ ತಪಸಣೆಗೊಳಗಾಗಬೇಕೆಂಬ ಉದ್ದೇಶ ನಮ್ಮದಾಗಿದೆ ಎಂದರು.

ವಿವಿಧ ಸೌಲಭ್ಯಗಳಿಂದ ವಂಚಿತ ರಾಜ್ಯದ ಸುಮಾರು 110 ಮಹಾತ್ವಾಕಾಂಕ್ಷಿ ಅಥವಾ ಉದಯೋನ್ಮುಖ ತಾಲ್ಲೂಕುಗಳನ್ನು ಗುರುತಿಸಿದ್ದು, ಮೊದಲ ಬಾರಿಗೆ ಅಲ್ಲಿ ಆರೋಗ್ಯ–ಶಿಕ್ಷಣ ದೃಷ್ಟಿಯಿಂದ ವಿಶೇಷ ಕಾರ್ಯಾಕ್ರಮ ಕೈಗೋಳಲಾಗುತ್ತದೆ. ಸುಮಾರು 100 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಉನ್ನತೀಕರಿಸಲಾಗುತ್ತಿದೆ. ಅಂದಾಜು ರೂ.10 ಕೋಟಿ ವೆಚ್ಚದಲ್ಲಿ ತಾಲ್ಲೂಕುಗಳಲ್ಲಿ 30 ಹಾಸಿಗೆ ಆಸ್ಪತ್ರೆ ನಿರ್ಮಾಣ, ಕಲ್ಯಾಣ ಕರ್ನಾಟಕ ಭಾಗದಲ್ಲಿ 42 ಹೊಸ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಆರಂಭಿಸಲಾಗುತ್ತಿದೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಟೆಲಿಮಡಿಸಿನ್ ಸಂಪರ್ಕ ನೀಡಲಾಗುತ್ತಿದೆ. ರಾಜ್ಯದಲ್ಲಿ ನಿತ್ಯ ಡಯಾಲಿಸಿಸ್ 30 ಸಾವಿರ ಸೈಕಲ್ಸ್‌ನ್ನು 60 ಸಾವಿರಕ್ಕೆ ಹೆಚ್ಚಿಸಲಾಗಿದೆ. ಕ್ಯಾನ್ಸರ್ ರೋಗಿಗಳಿಗೆ ಕಿಮೋ ಥೆರಪಿ ದುಪ್ಪಟ್ಟು ಮಾಡಲಾಗಿದ್ದು, 12 ಹೊಸ ಕ್ಯಾನ್ಸರ್ ಚಿಕಿತ್ಸಾ ಕೇಂದ್ರ ಅರಂಭಿಸಲಾಗುತ್ತಿದೆ ಎಂದರು.

ರಾಜ್ಯದಲ್ಲಿ ಪ್ರಸ್ತುತ 1,250 ಜನೌಷಧಿ ಕೇಂದ್ರಗಳಿದ್ದು ಇನ್ನೂ ಒಂದು ಸಾವಿರ ಜನೌಷಧಿ ಕೇಂದ್ರಗಳನ್ನು ಆರಂಭಿಸಲಾಗುವುದು. ನಿಮ್ಹಾನ್ಸ್, ಕಿದ್ವಾಯಿ, ಜಯದೇವ ಆಸ್ಪತ್ರೆ ಅಲ್ಲದೇ ಪ್ರತಿ ತಾಲ್ಲೂಕು ಆರೋಗ್ಯ ಕೇಂದ್ರಗಳಿಗೂ ಟೆಲಿಮೆಡಿಸಿನ್ ಸಂಪರ್ಕ ಕಲ್ಪಿಸಲಾಗವುದು ಎಂದರು. ರೈತರಿಗೆ ಆರೋಗ್ಯ ಸೇವೆಯ ಯಶಸ್ವಿನಿ ಯೋಜನೆ ಪುನರಾರಂಭ ಮಾಡಲಾಗಿದ್ದು ಇದಕ್ಕಾಗಿ ರೂ.350 ಕೋಟಿಗಳನ್ನು ನೀಡಲಾಗಿದೆ. ಮಹಿಳೆಯರಿಗೆ ಪ್ರತ್ಯೇಕ ಆಸ್ಪತ್ರೆಗಳನ್ನು ಆರಂಭಿಸಲಾಗುವುದು. ಹುಬ್ಬಳ್ಳಿ ನವನಗರದ ಕರ್ನಾಟಕ ಕ್ಯಾನ್ಸರ್ ಚಿಕಿತ್ಸಾ ಕೇಂದ್ರಕ್ಕೆ ಯಂತ್ರೋಪಕರಣಗಳ ಖರೀದಿಗೆ ರೂ.10 ಕೋಟಿ ನೀಡಲಾಗಿದೆ ಎಂದರು.

**ಮಕ್ಕಳ ಆರೋಗ್ಯ ತಪಾಸಣೆಯಾಗಲಿ:** ರಾಜ್ಯದ ಎಲ್ಲ ಕಡೆಯ ಮಕ್ಕಳ ಆರೋಗ್ಯ ತಪಾಸಣೆಯಾಗಿ ದತ್ತಾಂಶ ಸಂಗ್ರಹ ಮಾಡಬೇಕಿದೆ. ಹಾವೇರಿ–ಉಡುಪಿ ಜಿಲ್ಲೆಗಳಲ್ಲಿ ಇದನ್ನು ಮಾಡಿಸಿದ್ದೇನೆ. ರಾಜ್ಯದ ಇತರೆ ಜಿಲ್ಲೆಗಳಲ್ಲಿಯೂ ಇದು ಮಾಡುವಂತಾಗಬೇಕು. ಹುಬ್ಬಳ್ಳಿಯಲ್ಲಿ ತಾಯಿ–ಮಗುವಿನ ಆಸ್ಪತ್ರೆ ಇನ್ನಷ್ಟು ದೊಡ್ಡ ಮಟ್ಟದಲ್ಲಿ ಆಗಬೇಕು ಎಂದರು. ಮಾಜಿ ಮುಖ್ಯಮಂತ್ರಿ ಜಗದೀಶ ಶೆಟ್ಟರ ಅಧ್ಯಕ್ಷತೆ ವಹಿಸಿದ್ದರು. ಸಚಿವರಾದ ಡಾ|ಕೆ.ಸುಧಾಕರ, ಹಾಲಪ್ಪ ಆಚಾರ್, ಸಿಸಿ.ಪಾಟೀಲ, ಶಾಸಕ ಅರವಿಂದ ಬೆಲ್ಲದ್, ಮಹಾಪೌರ ಈರೇಶ ಅಂಚಟಗೇರಿ ಇನ್ನಿತರರು ಇದ್ದರು.

ಆಧಾರ: ಉದಯವಾಣಿ, ದಿನಾಂಕ:15.12.2022.

## 74. ಸಾಂವಿಧಾನಿಕ ಪರಿಹಾರಕ್ಕೆ ಶಾ ಸೂತ್ರ

ಕರ್ನಾಟಕ ಮತ್ತು ಮಹಾರಾಷ್ಟ್ರ ನಡುವಿನ ಗಡಿ ಗದ್ದಲದ ಶಮನಕ್ಕಾಗಿ 6 ಸದಸ್ಯರ ಸಮಿತಿ ರಚಿಸಲು ಕೇಂದ್ರ ಗೃಹ ಸಚಿವ ಅಮಿತ್ ಶಾ ನೇತೃತ್ವದಲ್ಲಿ ನಡೆದ ಸಭೆಯಲ್ಲಿ ನಿರ್ಧರಿಸಲಾಗಿದೆ.

"ಉಭಯ ರಾಜ್ಯಗಳ ಗಡಿ ವಿವಾದ ಬೀದಿಯಲ್ಲಿ ನಿಂತು ಬಗೆಹರಿಸುವ ವಿಷಯವಲ್ಲ ಸಂವಿಧಾನ ಬದ್ಧವಾಗಿ ವಿವಾದ ಇತ್ಯರ್ಥಗೊಳ್ಳಬೇಕು. ಪ್ರತಿಪಕ್ಷಗಳು ಈ ವಿಚಾರದಲ್ಲಿ ರಾಜಕೀಯ

ಮಾಡಬಾರದು," ಎಂದು ಎರಡೂ ರಾಜ್ಯಗಳ ಮುಖ್ಯಮಂತ್ರಿ ಸಭೆಯಲ್ಲಿ ಅಮಿತ್ ಶಾ ಸಲಹೆ ನೀಡಿದ್ದಾರೆ.

ಸಭೆಯ ಬಳಿಕ ಈ ಬಗ್ಗೆ ಪ್ರತಿಕ್ರಿಯಿಸಿರುವ ಅವರು, "ಉಭಯ ರಾಜ್ಯಗಳಿಂದ ತಲಾ ಮೂವರು ಸಚಿವರಂತೆ ಒಟ್ಟು ಆರು ಸಚಿವರ ಸಮಿತಿ ರಚನೆ ಮಾಡಲಾಗುವುದು. ಅವರು ಒಟ್ಟಿಗೆ ಕುಳಿತು ಇದರ ಬಗ್ಗೆ ವಿಸ್ತೃತ ಚರ್ಚೆ ನಡೆಸಲಿದ್ದಾರೆ. ಎರಡೂ ರಾಜ್ಯಗಳ ನಡುವೆ ಇನ್ನೂ ಕೆಲವು ಸಣ್ಣಪುಟ್ಟ ವಿವಾದಗಳಿವೆ. ಅದು ಸಾಮಾನ್ಯವಾಗಿ ಎರಡು ರಾಜ್ಯಗಳ ನಡುವೆ ಇರುತ್ತದೆ. ಇದನ್ನು ಕೂಡ ಈ ಸಮಿತಿಯೇ ಬಗೆಹರಿಸಲಿದೆ," ಎಂದು ಹೇಳಿದ್ದಾರೆ.

ಕರ್ನಾಟಕ ಮಹಾರಾಷ್ಟ್ರ ಗಡಿ ವಿವಾದದ ಇತ್ಯರ್ಥ ಹಾಗೂ ಸಾಂವಿಧಾನಿಕ ಪರಿಹಾರಕ್ಕಾಗಿ ಕರ್ನಾಟಕದ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಮಹಾರಾಷ್ಟ್ರ ಸಿಎಂ ಏಕನಾಥ್ ಶಿಂಧೆ, ಡಿಸಿಎಂ ದೇವೇಂದ್ರ ಫಡ್ನವಿಸ್ ಮತ್ತು ಎರಡೂ ರಾಜ್ಯಗಳ ಇತರ ಮಂತ್ರಿಗಳ ಜೊತೆ ಅಮಿತ್ ಶಾ ಸಭೆ ನಡೆಸಿದರು.

"ಉತ್ತಮ ವಾತಾವರಣದಲ್ಲಿ ಮಾತುಕತೆ ನಡೆಯಿತು. ಇಬ್ಬರೂ ಮುಖ್ಯಮಂತ್ರಿಗಳು ಸಕಾರಾತ್ಮ ಧೋರಣೆ ತೋರಿದ್ದಾರೆ. ಸಭೆಯಲ್ಲಿ ಕೆಲವು ನಿರ್ಣಯಗಳನ್ನು ಕೈಗೊಳ್ಳಲಾಗಿದೆ. ಸುಪ್ರೀಂಕೋರ್ಟ್ ತೀರ್ಪು ಹೊರಬರುವವರೆಗೆ ಪರಸ್ಪರ ಎರಡೂ ರಾಜ್ಯಗಳು ಗಡಿಯ ಬಗ್ಗೆ ಹಕ್ಕು ಮಂಡನೆ ಮಾಡದಿರಲು ಒಪ್ಪಿದ್ದಾರೆ," ಎಂದು ಶಾ ಹೇಳಿದ್ದಾರೆ.

**ಪೋಲೀಸ್ ಅಧಿಕಾರಿಗಳ ಸಮಿತಿ:** "ಎರಡೂ ರಾಜ್ಯಗಳಲ್ಲಿ ಕಾನೂನು ಸುವ್ಯವಸ್ಥೆ ಉತ್ತಮವಾಗಿರಲಿದೆ. ಇತರ ಭಾಷೆಯ ಪ್ರವಾಸಿಗರು, ವ್ಯಾಪಾರಿಗಳು ಅಥವಾ ಜನರಿಗೆ ಯಾವುದೇ ತೊಂದರೆಯಾಗದಿರಲಿ ಎಂಬ ಕಾರಣಕ್ಕೆ ಹಿರಿಯ ಐಪಿಎಸ್ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ರಚಿಸಲು ನಿರ್ಧರಿಸಲಾಗಿದೆ," ಎಂದು ಮಾಹಿತಿ ನೀಡಿದ್ದಾರೆ. ಕರ್ನಾಟಕ ಮಹಾರಾಷ್ಟ್ರ ಗಡಿ ವಿಚಾರ ಕುರಿತು ಕೇಂದ್ರ ಗೃಹಸಚಿವ ಅಮಿತ್ ಶಾ ಕರೆದಿದ್ದ ಸಭೆಗೂ ಮುನ್ನ ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಅವರು ಅಮಿತ್ ಶಾ ಅವರನ್ನು ಸನ್ಮಾನಿಸಿದರು.

ಹಲವು ದಶಕಗಳಿಂದ ಗಡಿ ವಿವಾದ ನಡೆದು ಬಂದಿರುವ ಹಾದಿ, 2004ರಲ್ಲಿ ಮಹಾರಾಷ್ಟ್ರ ಸುಪ್ರೀಂಕೋರ್ಟ್‌ನಲ್ಲಿ ದಾವೆ ಹೂಡಿದ ನಂತರ ಬೆಳವಣಿಗೆ ಹಾಗೂ ಇತ್ತೀಚಿನ ಘಟನಾವಳಿಗಳ ಬಗ್ಗೆ ಅಮಿತ್ ಶಾ ಅವರಿಗೆ ಮಾಹಿತಿ ನೀಡಿದ್ದೇನೆ. ಮಹಾರಾಷ್ಟ್ರ ಸಿಎಂ ಕೂಡ ನೀಡಿದ್ದಾರೆ. ಎರಡೂ ಕಡೆಯವರ ವಾದ ಆಲಿಸಿದ ಅಮಿತ್ ಶಾ ಅವರು ಕೆಲ ಸೂಚನೆ ನೀಡಿದ್ದಾರೆ ಗಡಿ ವಿವಾದ ಸಂಬಂಧ 'ಮೆಂಟೆನೆಬಿಲಿಟಿ' (ವಿಚಾರಣೆಗೆ ಪರಿಗಣಿಸಬೇಕೆ, ಬೇಡವೇ ಎಂಬ ವಿಚಾರ) ಕುರಿತಂತೆ ವಿಚಾರಣೆ ಜನವರಿಯಲ್ಲಿ ನಡೆಯಲಿದೆ.

ಬಸವರಾಜ್ ಬೊಮ್ಮಾಯಿ, ಸಿಎಂ.

ಆಧಾರ: ವಿಜಯ ಕರ್ನಾಟಕ, ದಿನಾಂಕ:15.12.2022.

## 75. ಜನವರಿಯಲ್ಲಿ 243 ವಾರ್ಡ್‌ಗಳಲ್ಲೂ ನಮ್ಮ ಕ್ಲಿನಿಕ್‌ಗಳ ಕಾರ್ಯಾರಂಭ

ಬಿಬಿಎಂಪಿ ವ್ಯಾಪ್ತಿಯ 243 ವಾರ್ಡ್‌ಗಳಲ್ಲೂ ಜನವರಿ ಮೊದಲ ವಾರದೊಳಗೆ 'ನಮ್ಮ ಕ್ಲಿನಿಕ್' ಗಳನ್ನು ಆರಂಭಿಸಲು ಭರದ ಸಿದ್ಧತೆ ನಡೆಸಲಾಗುತ್ತಿದೆ.

ಈ ಸಂಬಂಧ ಆರೋಗ್ಯ ಇಲಾಖೆಯ ಅಧಿಕಾರಿಗಳೊಂದಿಗೆ ಸಭೆ ನಡೆಸಿದ ಪಾಲಿಕೆಯ ಮುಖ್ಯ ಆಯುಕ್ತ ತುಷಾರ್ ಗಿರಿನಾಥ್ ಅವರು, "ನಗರದಲ್ಲಿ ಜನವರಿ ಮೊದಲ ವಾರದೊಳಗೆ ಎಲ್ಲ 243 ವಾರ್ಡ್‌ಗಳಲ್ಲಿ ನಮ್ಮ್ ಕ್ಲಿನಿಕ್‌ಗಳನ್ನು ಆರಂಭಿಸಲು ಸೂಕ್ತ ಕ್ರಮ ಕೈಗೊಳ್ಳಬೇಕು. ಎಲ್ಲ ಕ್ಲಿನಿಕ್‌ಗಳಿಗೆ ಅಗತ್ಯವಿರುವ ವೈದ್ಯರನ್ನು ಅದಷ್ಟು ಶೀಘ್ರವಾಗಿ ನೇಮಕ ಮಾಡಿಕೊಳ್ಳಬೇಕು," ಎಂದು ಸೂಚಿಸಿದರು.

"ನಮ್ಮ್ ಕ್ಲಿನಿಕ್‌ಗಳಿಗೆ ಅವಶ್ಯವಿರುವ ಔಷಧಿಗಳನ್ನು ಎನ್‌ಯುಎಚ್‌ಎಂ ಮಾರ್ಗ ಸೂಚಿ ಅನ್ವಯ ಕೆಎಸ್‌ಎಂಎಸ್‌ಸಿಎಲ್‌ನಿಂದ ಸರಬರಾಜು ಮಾಡಿಕೊಳ್ಳಬೇಕು. ಹಾಗೆಯೇ, ವೈದ್ಯಕೀಯ ಉಪಕರಣಗಳು, ಪೀಠೋಪಕರಣಗಳು, ಐಸಿಟಿ ಉಪಕರಣಗಳು, ಲ್ಯಾಬ್ ರೀಏಜೆಂಟ್‌ಗಳು, ಬ್ರಾಂಡಿಂಗ್ ಕಾರ್ಯಗಳನ್ನು ಎನ್ ಎಚ್‌ಎಂ ಮಾರ್ಗಸೂಚಿಯಂತೆ ಟೆಂಡರ್ ಮೂಲಕ ಜನವರಿ ಮೊದಲ ವಾರದೊಳಗೆ ಎಲ್ಲ ಕ್ಲಿನಿಕ್‌ಗಳಿಗೆ ಪೂರೈಸಲು ಕ್ರಮವಹಿಸಬೇಕು," ಎಂದು ನಿರ್ದೇಶನ ನೀಡಿದರು.

"ನಮ್ಮ ಕ್ಲಿನಿಕ್‌ಗಳಿಗೆ ವೈದ್ಯಾಧಿಕಾರಿಗಳ ನೇಮಕ ಸಂಬಂಧ ಹಲವು ಬಾರಿ ವಾಕ್-ಇನ್ ಪ್ರಕ್ರಿಯೆ ಕೈಗೊಂಡರು ಅರ್ಹ ಅಭ್ಯರ್ಥಿಗಳು ಬಂದಿಲ್ಲ. ಹಾಗಾಗಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕೌನ್ಸೆಲಿಂಗ್‌ಗೆ ಅರ್ಹರಿರುವ ಕಡ್ಡಾಯ ಕರಾರು ಅವಧಿ ಸೇವೆಯ ಅಭ್ಯರ್ಥಿಗಳನ್ನು ಕ್ಲಿನಿಕ್‌ಗಳಿಗೆ ನಿಯೋಜಿಸಬೇಕು," ಎಂದು ಹೇಳಿದರು.

ಪಾಲಿಕೆಯ ಆರೋಗ್ಯ ವಿಭಾಗದ ವಿಶೇಷ ಆಯುಕ್ತ ಡಾ। ಕೆ.ವಿ.ತ್ರಿಲೋಕ್ ಚಂದ್ರ ಮಾತನಾಡಿ, "ನಮ್ಮ್ ಕ್ಲಿನಿಕ್ ದುರಸ್ತಿ, ನವೀಕರಣ ಕಾಮಗಾರಿಯ ಡಿಸೆಂಬರ್ ಅಂತ್ಯಕ್ಕೆ ಪೂರ್ಣಗೊಳ್ಳಲಿದೆ. ಜನವರಿ ಎರಡನೇ ವಾರದಲ್ಲಿ ಎಲ್ಲ 243 ಕ್ಲಿನಿಕ್‌ಗಳು ಉದ್ಘಾಟನೆಗೆ ಸಿದ್ಧವಾಗಲಿವೆ," ಎಂದು ತಿಳಿಸಿದರು.

**153 ವೈದ್ಯರ ನೇಮಕ ಬಾಕಿ:** "ಪಾಲಿಕೆ ವ್ಯಾಪ್ತಿಯಲ್ಲಿ ಶುರು ಮಾಡುತ್ತಿರುವ 243 ನಮ್ಮ ಕ್ಲಿನಿಕ್‌ಗಳಿಗೆ ತಲಾ ಒಬ್ಬರು ವೈದ್ಯರು, ಶುಶ್ರೂಷಕರು, ಫಾರ್ಮಸಿಸ್ಟ್, ಲ್ಯಾಬ್ ತಂತ್ರಜ್ಞರು ಹಾಗೂ 'ಡಿ' ಗ್ರೂಪ್ ನೌಕರರನ್ನು ನೇಮಕ ಮಾಡಿಕೊಳ್ಳಲಾಗುತ್ತಿದೆ. ವೈದ್ಯರನ್ನು ಹೊರತುಪಡಿಸಿ, ಉಳಿದವರ ನೇಮಕ ಪ್ರಕ್ರಿಯೆ ಮುಗಿದಿದೆ. ಇದುವರೆಗೆ 91 ಮಂದಿ ವೈದ್ಯರ ನೇಮಕಾತಿ ನಡೆದಿದ್ದು, ಇನ್ನೂ 153 ಮಂದಿ ವೈದ್ಯರ ಅಗತ್ಯವಿದೆ," ಎಂದರು.

"ವೈದ್ಯ ಪದವಿ ಪೂರ್ಣಗೊಳಿಸಿದವರು ಕಡ್ಡಾಯವಾಗಿ ಒಂದು ವರ್ಷ ಸರ್ಕಾರಿ ಸೇವೆಯಡಿ ಕರ್ತವ್ಯ ನಿರ್ವಹಿಸಬೇಕಿದೆ. ಇವರನ್ನು ನಮ್ಮ ಕ್ಲಿನಿಕ್‌ಗಳಿಗೆ ನಿಯೋಜಿಸುವಂತೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಸದ್ಯ 108 ಕ್ಲಿನಿಕ್‌ಗಳು ಸಿದ್ಧವಾಗಿದ್ದು, ಉಳಿದೆಡೆ 10 ದಿನಗಳಲ್ಲಿ ಸಿದ್ಧತೆ ಪೂರ್ಣಗೊಳ್ಳಲಿದೆ. 155 ಸ್ವಂತ ಕಟ್ಟಡಗಳಲ್ಲಿ ಕ್ಲಿನಿಕ್‌ಗಳನ್ನು ತೆರೆಯಲಾಗುತ್ತಿದೆ. ಉಳಿದ ಕಡೆ ಬಾಡಿಗೆಗೆ ಕಟ್ಟಡಗಳನ್ನು ಪಡೆದು ಕಾರ್ಯ ಆರಂಭಗೊಳಿಸಲಾಗುತ್ತಿದೆ," ಎಂದು ಹೇಳಿದರು.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಆಯುಕ್ತ ಡಿ.ರಂದೀಪ್, ರಾಷ್ಟ್ರಿಯ ಆರೋಗ್ಯ ಮಿಷನ್ ವ್ಯವಸ್ಥಾಪಕ ನವೀನ್ ಭಟ್, ಪಶ್ಚಿಮ ವಲಯದ ಜಂಟಿ ಆಯುಕ್ತ ಯೋಗೇಶ್, ಮುಖ್ಯ ಆಯೋಗ್ಯಾಧಿಕಾರಿ ಡಾ। ಬಾಲಸುಂದರ್ ಉಪಸ್ಥಿತರಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:16.12.2022.

## 76. ಮತ್ತೆ ಕೋಲಾರ ಬಂಗಾರ

ಕೋಲಾರ ಗೋಲ್ಡ್ ಫೀಲ್ಡ್‌ನಲ್ಲಿ (ಕೆಜಿಎಫ್) ಇನ್ನೂ ಉಳಿದಿರುವ ಅಪರಿಮಿತ ಸಂಪತ್ತನ್ನು ಬಳಸಿಕೊಳ್ಳಲು ವಿಶೇಷ ಆಸಕ್ತಿ ತೋರಿರುವ ಕೇಂದ್ರ ಸರ್ಕಾರ, ಜಾಗತಿಕ ಟೆಂಡರ್ ಕರೆಯಲು ಪ್ರಕ್ರಿಯೆ ಆರಂಭಿಸಿದೆ. ಈ ಯತ್ನ ಯಶ ನೀಡಿದಲ್ಲಿ ಕೆಜಿಎಫ್ ಮತ್ತೆ ಬಂಗಾರದ ಮೆರುಗು ಕಾಣಲಿದೆ.

ಕೋಲಾರದ ಚಿನ್ನದ ಗಣಿ ಬಾಗಿಲು ಮುಚ್ಚಿ ಎರಡು ದಶಕ ಕಳೆದಿದೆ. ಆದರೆ, ಗಣಿಗಾರಿಕೆಯಿಂದ ಹೊರಹಾಕಿರುವ ಭಾರಿ ಪ್ರಮಾಣದ ಮಣ್ಣಿನಲ್ಲಿಯೇ ಚಿನ್ನ ಹಾಗೂ ಅಪರೂಪದ ಬೆಲೆಬಾಳುವ ಲೋಹವಿದ್ದು, ಇದನ್ನು ಬಳಸಿಕೊಳ್ಳಬೇಕೆಂಬ ನಿಟ್ಟಿನಲ್ಲಿ ಕೇಂದ್ರ ಸರ್ಕಾರ ಮುಂದಾಗಿದೆ. ಇತ್ತೀಚಿನ ಬೆಳವಣಿಗೆಯಂತೆ ಟೆಂಡರ್ ಕರೆಯುವ ಸಂಬಂಧ ಮೂರು ಸುತ್ತಿನ ಸಭೆ ಕೂಡ ನಡೆದಿದೆ. 2023ರ ಮೊದಲಾರ್ಧದಲ್ಲಿ ಪ್ರಕ್ರಿಯೆಗಳು ನಡೆಯುವ ಸಾಧ್ಯತೆ ಹೆಚ್ಚಿದೆ. 2001ರ ಮಾರ್ಚ 1 ರಂದು ಕೆಜಿಎಫ್ ಚಿನ್ನದ ಗಣಿ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿತು. ಹತ್ತು ಗ್ರಾಂ ಚಿನ್ನ ತೆಗೆಯಲು ರೂ.12

ಸಾವಿರ ವೆಚ್ಚವಾಗುತ್ತಿದೆ. ಎಂಬ ಕಾರಣ ನೀಡಿ ಕೇಂದ್ರದ ಎನ್‌ಡಿಎ ಸರ್ಕಾರ ಗಣಿ ಮುಚ್ಚುವ ತೀರ್ಮಾನ ಪ್ರಕಟಿಸಿತು. ಗಣಿಗಾರಿಕೆಯ ಆರಂಭದಿಂದ ಹೊರಹಾಕಿದ 13 ದಶಲಕ್ಷ ಟನ್ ನಷ್ಟು ಮಣ್ಣಿನ ಅಗಾಧ ರಾಶಿಯಿದೆ. ಈ ಮಣ್ಣು ಅಂದಾಜು ಮೂರು ಸಾವಿರ ಎಕರೆ ಪ್ರದೇಶದಲ್ಲಿ ವ್ಯಾಪಿಸಿಕೊಂಡಿದೆ.

ಆಸ್ಟ್ರೇಲಿಯಾ ಮೂಲದ ಕಂಪನಿಯೊಂದು ಈ ಮಣ್ಣನ್ನು ಶೋಧಿಸಿ ಮತ್ತೆ ಚಿನ್ನ ಉತ್ಪಾದಿಸುವ ಬಗ್ಗೆ ಮಾತು ಕೇಳಿ ಬಂದಿತ್ತು. ಬಿ.ಎಸ್.ಯಡಿಯೂರಪ್ಪ ಮುಖ್ಯಮಂತ್ರಿಯಾಗಿದ್ದ ವೇಳೆ ಕೇಂದ್ರ ಸರ್ಕಾರದ ಜೊತೆ ಚರ್ಚೆ ನಡೆಸಿದ್ದರು. ಇದರ ಮುಂದುವರಿದ ಪ್ರಯತ್ನವಾಗಿ ಮಿನರಲ್ ಎಕ್ಸ್‌ಪ್ಲೋರೇಷನ್ ಕಾರ್ಪೊರೇಷನ್ ಲಿಮಿಟೆಡ್ ಈ ಮಣ್ಣಿನಲ್ಲಿ ಸಾಕಷ್ಟು ಚಿನ್ನದ ಅಂಶ ಹಾಗೂ ಪಲಾಡಿಯಂ, ಟಂಗಸ್ಟನ್ ಲೋಹ ಇದೆ ಎಂಬುದನ್ನು ಖಾತ್ರಿ ಮಾಡಿತ್ತು. ಈ ನಡುವೆ ರಾಜ್ಯ ಸರ್ಕಾರ ಕೆಜಿಎಫ್ ಭೂಮಿಯನ್ನು ಕೈಗಾರಿಕಾ ಉದ್ದೇಶಕ್ಕೆ ಬಳಸಲು ಕೋರಿಕೆ ಸಲ್ಲಿಸಿದಾಗ ಮತ್ತೊಂದು ಸುತ್ತಿನ ಪ್ರಯತ್ನ ನಡೆಯಿತು. 14 ಸಾವಿರ ಎಕರೆ ಭೂಮಿ ಭಾರತ್ ಗೋಲ್ಡ್ ಮೈನ್ಸ್ ವ್ಯಾಪ್ತಿಯಲ್ಲಿದ್ದು, ಗಣಿಯಿಂದ ತೆಗೆದ ಮಣ್ಣನ್ನು ರಾಶಿ ಹಾಕಿರುವ ಜಾಗ ಹೊರತು ಉಳಿದಿದ್ದನ್ನು ಬಳಸಿಕೊಳ್ಳುವ ಬಗ್ಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರದ ನಡುವೆ ಚರ್ಚೆಗಳು ನಡೆದಿದ್ದವು.

ಇಡೀ ಆಸ್ತಿಯನ್ನು ರಾಜ್ಯ ಸರ್ಕಾರವೇ ವಹಿಸಿಕೊಂಡು ಭಾರತ್ ಗೋಲ್ಡ್ ಮೈನ್ಸ್‌ನ ಹೊಣೆಗಾರಿಕೆಯನ್ನು ಹೋರುವಂತೆ ಕೇಂದ್ರ ಸರ್ಕಾರ ಸೂಚಿಸಿತ್ತು. ರಾಜ್ಯ ಸರ್ಕಾರ ಈ ಉಸಾಬರಿ ಅಸಾಧ್ಯವೆಂದು ಭಾವಿಸಿ ಕೈಚೆಲ್ಲಿತ್ತು ನಂತರ ಮತ್ತೆ ಪ್ರಯತ್ನ ನಡೆದು, ಕೇಂದ್ರದ ಮೇಲೆ ರಾಜ್ಯ ಸರ್ಕಾರದ ಒತ್ತಡ ಹೆಚ್ಚಾದಂತೆ ಪರಿಹಾರವಾಗಿ ಮೂರು ಸಾವಿರ ಎಕರೆ ಭೂಮಿಯಲ್ಲಿರುವ, ಗಣಿಯಿಂದ ತೆಗೆದ 13 ಸಾವಿರ ಮಿಲಿಯನ್ ಟನ್ ಮಣ್ಣನ್ನು ಸಂಸ್ಕರಿಸಿ ಚಿನ್ನ ಹಾಗೂ ಇತರ ಲೋಹ ಬಳಸಿಕೊಳ್ಳಲು ಮುಂದಾಯಿತು.

ಒಟ್ಟಾರೆ ಆ ಮಣ್ಣಿನಲ್ಲಿ ರೂ.25 ಸಾವಿರ ಕೋಟಿ ಮೌಲ್ಯದ ಚಿನ್ನ ಹಾಗೂ ಇತರ ಲೋಹ ಸಿಗಬಹುದೆಂಬ ಅಂದಾಜಿದ್ದು, ಪ್ರಸ್ತುತ ಮಣ್ಣನ್ನು ಸಂಸ್ಕರಿಸಿ ಚಿನ್ನವನ್ನು ಬೇರ್ಪಡಿಸುವ ಸಂಬಂಧ ಜಾಗತಿಕ ಟೆಂಡರ್ ಕರೆಯುವ ಕೆಲಸ ಆರಂಭವಾಗಿದೆ. ಮಾಹಿತಿ ಪ್ರಕಾರ ಜಾಗತಿಕವಾಗಿ ಏಳು ಕಂಪನಿಗಳು ಈ ಸಂಸ್ಕರಣೆ ನಡೆಸುವ ಸಾಮರ್ಥ್ಯ ಹೊಂದಿವೆ. ಅವುಗಳನ್ನು ಸಂಪರ್ಕಿಸಿ ಪ್ರಕ್ರಿಯೆಗೆ ವೇಗ ಕೊಡುವ ಕೆಲಸ ಆರಂಭವಾಗಿದೆ.

**ಮುಖ್ಯಾಂಶಗಳು:**

- ಕೋಲಾರ ಗೋಲ್ಡ್ ಫೀಲ್ಡ್‌ನಲ್ಲಿರುವ ಒಟ್ಟು ಭೂಮಿ 14 ಸಾವಿರ ಎಕರೆ.
- 3 ಸಾವಿರ ಎಕರೆಯಲ್ಲಿ ಗಣಿಯಿಂದ ತೆಗೆದ ಮಣ್ಣಿದೆ.
- ಈ ಮಣ್ಣಿನಲ್ಲಿ ರೂ.25 ಸಾವಿರ ಕೋಟಿ ಮೌಲ್ಯದ ಚಿನ್ನ .
- ಸಂಸ್ಕರಣೆ ನಡೆಸುವ ತಾಂತ್ರಿಕ ಇರುವುದು ಏಳು ಕಂಪನಿಗಳಿಗಷ್ಟೇ.

**ಸಂಸ್ಕರಣೆಗೆ ವೈಜ್ಞಾನಿಕ ಹಾದಿ:** ಆರ್ಸೆನಿಕ್ ರಾಸಾಯನಿಕ ಬಳಸಿ ಸಂಸ್ಕರಣೆ ಮಾಡುವ ಸುಲಭ ವಿಧಾನವಿದೆ. ಆದರೆ, ಈ ಮಾರ್ಗ ಅನುಸರಿಸಿದರೆ ಈ ಭಾಗದ ಜಲಮೂಲ ವಿಷಯವಾಗುವ ಸಂಧರ್ಭ ಹೆಚ್ಚಿರುತ್ತದೆ. ಈ ಕಾರಣಕ್ಕೆ ಆರ್ಸೆನಿಕ್ ರಹಿತವಾಗಿ ಸಂಸ್ಕರಣೆ ಮಾಡುವ ಬಗ್ಗೆ ಕೇಂದ್ರ ಹುಡುಕಾಟ ನಡೆಸಿದ್ದು, ವಿಶ್ವದ ವಿವಿಧೆಡೆ ಈ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವ ಕಂಪನಿಗಳಿಗೆ ಟೆಂಡರ್‌ನಲ್ಲಿ ಪಾಲ್ಗೊಳ್ಳಲು ಅವಕಾಶ ನೀಡಲು ಉದ್ದೇಶಿಸಲಾಗಿದೆ.

**ಗಣಿಗಾರಿಕೆ ಆರಂಭಿಸುತ್ತಾ:** ಸಂಸ್ಕರಣೆ ಬಳಿಕ ಈ ಜಾಗವನ್ನು ಬಳಸಿಕೊಳ್ಳುವ ಬಗ್ಗೆ ಕೇಂದ್ರ ಸರ್ಕಾರ ನಿರ್ಧರಿಸಲಿದೆ. ಮತ್ತೆ ಚಿನ್ನದ ಗಣಿ ಆರಂಭಿಸುವ ಉದ್ದೇಶ ಕಾಣಿಸುತ್ತಿಲ್ಲ. ಗಣಿಯಿಂದ

ಮಣ್ಣನ್ನು ತೆಗೆದು ಚಿನ್ನಾ ಉತ್ಪಾದಿಸುವ ವೆಚ್ಚ ಹೆಚ್ಚಾಗುವ ಕಾರಣ ವೈಜ್ಞಾನಿಕ ಮಾರ್ಗದ ಬಗ್ಗೆ ನಂತರ ಚಿಂತನೆ ನಡೆಸಲಾಗುತ್ತದೆ. ಅವಕಾಶಗಳು ಸಿಕ್ಕರೆ ತೀರ್ಮಾನ ಮಾಡಬಹುದು, ಈ ಹಂತದಲ್ಲಂತೂ ಯೋಚನೆ ಮಾಡಿಲ್ಲ ಎಂದು ಅಧಿಕಾರಿಗಳು ತಿಳಿಸುತ್ತಾರೆ. ಒಂದೊಮ್ಮೆ ಕೇಂದ್ರ ರಾಜ್ಯ ಸರ್ಕಾರ ಒಮ್ಮತಕ್ಕೆ ಬಂದರೆ 14 ಸಾವಿರ ಎಕರೆ ವಿಶಾಲ ಜಾಗ ಕೈಗಾರಿಕೆ ಉದ್ದೇಶಕ್ಕೆ ಬಳಕೆಯಾಗಬಹುದು. ಈ ಮೂಲಕ ಕೋಲಾರ ಭಾಗಕ್ಕೆ ಹೆಚ್ಚಿನ ಲಾಭವಾಗಬಹುದು ಎಂದು ವಿಶ್ಲೇಷಿಸಲಾಗುತ್ತಿದೆ.

ಆಧಾರ: ವಿಜಯವಾಣಿ, ದಿನಾಂಕ:16.12.2022.

## 77. ಸಾಹಿತಿ ಪ್ರತಿಮೆಗಳುಳ್ಳ ಮ್ಯೂಸಿಯಂ ಗೆ ಚಿಂತನೆ

ಕನ್ನಡ ನಾಡಿಗೆ ಜ್ಞಾನಪೀಠ ಪ್ರಶಸ್ತಿ ಹಾಗೂ ಅಪರೂಪದ ಸಾಹಿತ್ಯವನ್ನು ನೀಡಿದವರಿಗೆ ಬಯಲು ವಸ್ತು ಸಂಗ್ರಹಾಲಯ ಸ್ಥಾಪಿಸಿ ಅವರ ಪ್ರತಿಮೆಗಳನ್ನು ಅಳವಡಿಸುವ ಬಗ್ಗೆ ಚಿಂತಿಸಲಾಗವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಯಿ ತಿಳಿಸಿದರು.

ಸುಗಮ ಸಂಗೀತ ಗಾಯಕ ಶಿವಮೊಗ್ಗ ಸುಬ್ಬಣ್ಣ ಅವರ ನುಡಿನಮನ ಮೊದಲು ಮಾನವನಾಗು ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಅವರು ನಾನು ಸುಬ್ಬಣ್ಣ ಅವರ ಅಭಿಮಾನಿ. ಕನ್ನಡ ನಾಡಿನ ಅದ್ಭುತ ಸಾಹಿತ್ಯ, ಸಂಗೀತದ ರಕ್ಷಣೆಗೆ ಸದಾ ಬದ್ಧ ಎಂದರು. ಸಾಮಾನ್ಯವಾಗಿ ರಾಜಕಾರಣಿಗಳ ಪ್ರತಿಮೆಗಳನ್ನು ಸ್ಥಾಪಿಸಲಾಗುತ್ತದೆ. ಆದರೆ, ಸಾಹಿತಿಗಳ ಪ್ರತಿಮೆ ಅಪರೂಪ. ಸಂಗ್ರಹಾಲಯದಲ್ಲಿ ಶಿವಮೊಗ್ಗ ಸುಬ್ಬಣ್ಣ ಅವರಿಗೆ ವಿಶೇಷವಾದ ಸ್ಥಾನವಿರಲಿದೆ ಎಂದರು.

ವಿಭಿನ್ನ ವ್ಯಕ್ತಿಯಾಗಿದ್ದ ಸುಬ್ಬಣ್ಣ ಅವರ ವ್ಯಕ್ತಿತ್ವ ಧ್ವನಿ, ಆತ್ಮೀಯತೆ, ಚಿಂತನೆ, ತತ್ವಾದರ್ಶಗಳು ತಮ್ಮದೇ ಆದ ಮೆರಗನ್ನು ಹೊಂದಿವೆ. ಇನ್ನೊಬ್ಬ ಸುಬ್ಬಣ್ಣ ಇರಲು ಸಾಧ್ಯವಿಲ್ಲ ಹಾಗಾಗಿ ಸುಬ್ಬಣ್ಣ ಅವರನ್ನು ಎಲ್ಲರೂ ಚಿರಕಾಲ ಸ್ಮರಿಸುವ ಕೆಲಸವನ್ನು ಸರ್ಕಾರ ಮಾಡಲಿದೆ ಎಂದು ತಿಳಿಸಿದರು. ಸುಬ್ಬಣ್ಣ ಅವರ ಬಗ್ಗೆ ಗಾಯನಗಳ ಬಗ್ಗೆ ಅಧ್ಯಯನ ಮಾಡಿ, ಇನ್ನಷ್ಟು ಪ್ರಸಿದ್ಧಿಗೆ ತರುವ ಕೆಲಸವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ಮಾಡಲಾಗುವುದು ಎಂದರು.

ಈ ವೇಳೆ ಕಂದಾಯ ಸಚಿವ ಆರ್.ಅಶೋಕ್, ಸಾಹಿತಿ ಚಂದ್ರಶೇಖರ ಕಂಬಾರ, ಕವಿ ಎಚ್.ಎಸ್.ವೆಂಕಟೇಶ ಮೂರ್ತಿ, ಲಹರಿ ವೇಲು ಇತರರಿದ್ದರು.

ಆಧಾರ: ವಿಜಯವಾಣಿ, ದಿನಾಂಕ:16.12.2022.

## 78. ನೇಕಾರರಿಗೆ ಸರ್ಕಾರ ಭರ್ಜರಿ ಪ್ಯಾಕೇಜ್

ಕೈಮಗ್ಗ ನೇಕಾರರಿಗೆ ಬಂಪರ್ ಕೊಡುಗೆ ಘೋಷಣೆ ಮಾಡಿದ ರಾಜ್ಯ ಸರ್ಕಾರವು ಇದೀಗ ನೇಕಾರರಿಗೆ ಮತ್ತಷ್ಟು ಕಾರ್ಯಕ್ರಮಗಳನ್ನು ಘೋಷಿಸಿದೆ. ಇದರ ಜೊತೆಗೆ ವಿದ್ಯುತ್ ಮಗ್ಗ ನೇಕಾರರಿಗೂ ಬಂಪರ್ ಕೊಡುಗೆ ಪ್ರಕಟಿಸಿದೆ.

ವೃತ್ತಿಪರ ನೇಕಾರ ಸಮುದಾಯಗಳಿಗೆ ಶೇ.50ರಷ್ಟು ಸಹಾಯಧನ, ರೂ.ಎರಡು ಲಕ್ಷವರೆಗೆ ಶೂನ್ಯ ಬಡ್ಡಿದರದಲ್ಲಿ ಸಾಲ, ವಿದ್ಯುತ್ ಮಗ್ಗಗಳಿಗೆ 5 ಹೆಚ್.ಪಿವರೆಗೆ ಉಚಿತ ವಿದ್ಯುತ್, ವಿದ್ಯುತ್ ಕೈಮಗ್ಗ ನೌಕರರಿಗೂ ನೇಕಾರ ಸಮ್ಮಾನ್ ಯೋಜನೆ, ಮನೆಯಲ್ಲಿ ಉದ್ಯೋಗ ಮಾಡುವ ನೇಕಾರರಿಗೆ ಗುಡಿ ಕೈಗಾರಿಕೆ ಎಂದು ಪರಿಗಣಿಸಿ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ವಿನಾಯಿತಿ ಸೇರಿ ಹಲವು ಪ್ರಮುಖ ನಿರ್ಣಯಗಳನ್ನು ಸರ್ಕಾರ ಕೈಗೊಂಡಿದೆ.

ಗೃಹ ಕಚೇರಿ ಕೃಷ್ಣಾದಲ್ಲಿ ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಅಧ್ಯಕ್ಷತೆಯಲ್ಲಿ ನೇಕಾರರ ಸಮಸ್ಯೆಗಳ ಕುರಿತು ಸಭೆ ನಡೆಯಿತು. ಕೈಮಗ್ಗ ನೇಕಾರರಿಗೆ ನೀಡುವ ಆರ್ಥಿಕ ನೆರವು ಪರಿಷ್ಕರಿಸಿ ರೂ. 2 ಸಾವಿರ ನಿಂದ ರೂ.5 ಸಾವಿರಗಳಿಗೆ ಹೆಚ್ಚಳ ಮಾಡುವುದರ ಜೊತೆಗೆ ಹಲವು ಕಾರ್ಯಕ್ರಮ ನೀಡಿದ

ಸರ್ಕಾರವು ನೇಕಾರರಿಗೆ ಮತ್ತಷ್ಟು ಕಾರ್ಯಕ್ರಮಗಳನ್ನು ನೀಡುವ ಮಹತ್ವದ ನಿರ್ಧಾರಗಳನ್ನು ಕೈಗೊಂಡಿತು.

ವೃತ್ತಿಪರ ನೇಕಾರ ಸಮುದಾಯಗಳಿಗೆ ಶೇ.50ರಷ್ಟು ಸಹಾಯಧನ ನೀಡುವ ಯೋಜನೆ ರೂಪಿಸುವ ನಿರ್ಣಯ ಕೈಗೊಳ್ಳಲಾಯಿತು. ವಿದ್ಯುತ್ ಕೈಮಗ್ಗದಲ್ಲಿ ಕೆಲಸ ಮಾಡುತ್ತಿರುವ ನೇಕಾರರಿಗೆ ನೇಕಾರ ಸಮ್ಮಾನ್ ಯೋಜನೆ, ವೃತ್ತಿಪರ ನೇಕಾರರ ಕೈಮಗ್ಗಕ್ಕೆ ಕೈಗಾರಿಕಾ ಇಲಾಖೆಯಿಂದ ಶೇ.30ರಷ್ಟು ಸಹಾಯಧನ ನೀಡಲಾಗುತ್ತಿದ್ದು, ಅದನ್ನು ಶೇ.50ರಷ್ಟು ಹೆಚ್ಚಿಸುವ ಬೇಡಿಕೆಗೆ ಒಪ್ಪಿಗೆ ನೀಡಲಾಯಿತು. ನೇಕಾರರ ಜನವಸತಿ ಪ್ರದೇಶದಲ್ಲಿರುವವ ನೇಕಾರರಿಗೆ ಅಕ್ಯುಪೆನ್ಸಿ ಪ್ರಮಾಣ ಪತ್ರ ನೀಡಲು ಸಭೆಯಲ್ಲಿ ತೀರ್ಮಾನ ಕೈಗೊಳ್ಳಲಾಯಿತು.

ಮನೆಯಲ್ಲಿಯೇ ಉದ್ಯೋಗ ನಡೆಸುತ್ತಿರುವ ನೇಕಾರರಿಗೆ ಗುಡಿ ಕೈಗಾರಿಕೆಗಳೆಂದು ಪರಿಗಣಿಸಿ ಮಾಲಿನ್ಯ ನಿಯಂತ್ರಣ ಮಂಡಳಿ ಅನುಮತಿಯಿಂದ ವಿನಾಯಿತಿ ನೀಡುವ ಸಂಬಂಧ ಆದೇಶ ಹೊರಡಿಸಲು ನಿರ್ಣಯಿಸಲಾಗಿದೆ. ಸರ್ಕಾರದ ನೇಕಾರ(ಕೈಮಗ್ಗ ಮತ್ತು ವಿದ್ಯುತ್ ಚಾಲಿತ) ನಿಗಮಗಳ ಉತ್ಪಾದನಾ ಸಾಮರ್ಥ್ಯಕ್ಕೆ ಅನುಗುಣವಾಗಿ ವಿದ್ಯಾವಿಕಾಸ ಯೋಜನೆಯಡಿ ಸಮವಸ್ತ್ರ ಪೂರೈಕೆ ಪ್ರಮಾಣ ನಿಗದಿಪಡಿಸಿ, ಉಳಿದ ಪ್ರಮಾಣಕ್ಕೆ ಟೆಂಡರ್ ಕರೆಯಲು ತೀರ್ಮಾನಿಸಲಾಯಿತು. ಇದನ್ನು ಡಿಸೆಂಬರ್ ತಿಂಗಳಲ್ಲಿಯೇ ಕಾರ್ಯದೇಶ ನೀಡಿ, ಸಕಾಲದಲ್ಲಿ ಒದಗಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ಮುಖ್ಯಮಂತ್ರಿಗಳು ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಚನೆ ನೀಡಿದರು.

ವಿವಿಧ ಇಲಾಖೆಗಳ ಸಮವಸ್ತ್ರದ ಅಗತ್ಯತೆಯ ಶೇ.25ರಷ್ಟುನ್ನು ಕೈಮಗ್ಗ ನಿಗಮದ ಮೂಲಕ ಖರೀದಿಸುವ ನಿರ್ಣಯಕೈಗೊಳ್ಳಲಾಯಿತು. ನೇಕಾರರಿಗೆ 2ಲಕ್ಷರೂ. ವರೆಗೆ ಶೂನ್ಯ ಬಡ್ಡಿದರದಲ್ಲಿ ಸಾಲ ಒದಗಿಸಲು ತೀರ್ಮಾನಿಸಲಾಗಿದೆ. 5 ಹೆಚ್‌ಪಿ ವರೆಗಿನ ವಿದ್ಯುತ್ ಸಂಪರ್ಕ ಹೊಂದಿರುವ ವಿದ್ಯುತ್ ಮಗ್ಗ ಮತ್ತು ಮಗ್ಗ ಪೂರ್ವ ಘಟಕಳಿಗೆ ತಮಿಳುನಾಡು ಮಾದರಿಯಲ್ಲಿ ಉಚಿತ ವಿದ್ಯುತ್ ಒದಗಿಸಲು ನಿರ್ಧರಿಸಲಾಗಿದೆ. ಅಲ್ಲದೇ, ನಿಗದಿತ ದರದಲ್ಲಿ ಶೇ.50ರಷ್ಟು ರಿಯಾಯಿತಿ ನೀಡಲು ತೀರ್ಮಾನಿಸಲಾಗಿದೆ. ಕಟ್ಟಡ ನಿರ್ಮಾಣ ಕಾರ್ಮಿಕರಿಗೆ ಸಿಗುವ ಸೌಲಭ್ಯಗಳನ್ನು ವೃತ್ತಿಪರ ಕೂಲಿ ನೇಕಾರರು, ಕೃಷಿ ಕಾರ್ಮಿಕರು ಹೀಗೆ ವಿವಿಧ ಅಸಂಘಟಿತ ಕಾರ್ಮಿಕರ ಒಂದು ಮಂಡಳಿ ರಚಿಸಿ, ಅವರಿಗೂ ವಿವಿಧ ಸೌಲಭ್ಯಗಳನ್ನು ನೀಡುವ ಬೇಡಿಕೆ ಇದ್ದು, ಮುಂದಿನ ಬಜೆಟ್ ವೇಳೆ ಸೂಕ್ತ ನಿರ್ಣಯ ಕೈಗೊಳ್ಳುವ ಕುರಿತು ಸಭೆಯಲ್ಲಿ ಚರ್ಚಿಸಲಾಯಿತು.

ನೇಕಾರರ ಮಕ್ಕಳಿಗೆ ವಿದ್ಯಾನಿಧಿಯನ್ನು ಡಿಸೆಂಬರ್ ಅಂತ್ಯದೊಳಗೆ ಬಿಡುಗಡೆ ಮಾಡಲಾಗುವುದು. ಇದಕ್ಕೆ ಪೂರಕ ಮಾಹಿತಿಗಳನ್ನು ಸಂಗ್ರಹಿಸಲು ಅಧಿಕಾರಿಗಳು ಕ್ರಮ ಕೈಗೊಳ್ಳಬೇಕು. ಇಡೀ ನೇಕಾರಿಕೆಯ ವೃತ್ತಿಯಲ್ಲಿ ಸಂಶೋಧನೆಗಳಾಗಿವೆ. ಈಗಾಗಲೇ ಸಿಎನ್‌ಸಿ ಮಗ್ಗಗಳಿವೆ. ಅವುಗಳನ್ನು ಗುಣಮಟ್ಟದ ಉತ್ಪಾದನೆ ಮತ್ತು ಉತ್ಪಾದಕತೆ ಹೆಚ್ಚಾಗಬೇಕಿದೆ. ಮುಂದಿನ ಬಜೆಟ್‌ನಲ್ಲಿ ಈ ನಿಟ್ಟಿನಲ್ಲಿ ಕ್ರಮ ವಹಿಸಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಹೇಳಿದ್ದಾರೆ.

ಸಭೆಯಲ್ಲಿ ಜವಳಿ ಸಚಿವ ಶಂಕರ ಪಾಟೀಲ್ ಮುನೇನಕೊಪ್ಪ, ಕೆಎಚ್‌ಡಿಸಿ ಅಧ್ಯಕ್ಷ ಸಿದ್ದು ಸವದಿ, ಶಾಸಕರಾದ ಅಭಯ್ ಪಾಟೀಲ್, ಮಹದೇವಪ್ಪ್ ಯಾದವಾಡ ಮಾಜಿ ಶಾಸಕ ಎಮ್.ಡಿ.ಲಕ್ಷ್ಮೀನಾರಾಯಣ, ಆರ್ಥಿಕ ಇಲಾಖೆ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತ ಐಎಸ್‌ಎನ್ ಪ್ರಸಾದ್, ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಎನ್ ಮಂಜುನಾಥ್ ಪ್ರಸಾದ್ ಸೇರಿದಂತೆ ಇತರರು ಉಪಸ್ಥಿತರಿದ್ದರು.

**ಏನೇನು ನೆರವು:**

- ವೃತ್ತಿಪರ ನೇಕಾರ ಸಮುದಾಯಗಳಿಗೆ ಶೇ.50ರಷ್ಟು ಸಹಾಯಧನ.

- ನೇಕಾರಿಕೆಗೆ  ಮಾಲಿನ್ಯ ನಿಯಂತ್ರಣ ಮಂಡಳಿ ನಿಯಮಗಳಿಂದ ವಿನಾಯ್ತಿ.
- ಮನೆಯಲ್ಲಿನ ಉದ್ಯೋಗ ಮಾಡುವ ನೇಕಾರಿಕೆಗೆ ಗುಡಿ ಕೈಗಾರಿಕೆಯ ಮಾನ್ಯತೆ.
- ವಿದ್ಯುತ್ ಮಗ್ಗಗಳಿಗೆ 5 ಎಚ್‌ಪಿವರೆಗೆ  ಉಚಿತ ವಿದ್ಯುತ್ ಸರಬರಾಜು.
- ವಿದ್ಯುತ್ ಮಗ್ಗದ ನೇಕಾರಿಕೆಗೂ 'ನೇಕಾರ ಸಮ್ಮಾನ್' ಯೋಜನೆಯಡಿ ನೆರವು.
- ಶಾಲಾ ಮಕ್ಕಳಿಗೆ, ಇಲಾಖೆ ನೌಕರರಿಗೆ ನೇಕಾರರಿಂದ ಭಾಗಶಃ ಸಮವಸ್ತ್ರ ಖರೀದಿ.

ಆಧಾರ: ಕನ್ನಡ ಪ್ರಭ, ದಿನಾಂಕ:18.12.2022.

## 79. ಕೋಟಿಯ ಉಡುಗೊರೆ

ಕಂದಾಯ ಸಚಿವರು ಗ್ರಾಮ ವಾಸ್ತವ್ಯ ಮಾಡುವ ಪ್ರತಿ ಗ್ರಾಮದ ಅಭಿವೃದ್ಧಿಗಾಗಿ ರೂ.1 ಕೋಟಿಗಳ ವಿಶೇಷ ಅನುದಾನ ನೀಡಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಘೋಷಿಸಿದರು.

'ಜಿಲ್ಲಾಧಿಕಾರಿಗಳ ನಡೆ ಹಳ್ಳಿ ಕಡೆ' ಕಾರ್ಯಕ್ರಮದ ಭಾಗವಾಗಿ ಕಂದಾಯ ಸಚಿವ ಆರ್.ಅಶೋಕ ಅವರು ಶಿಗ್ಗಾವಿ ತಾಲ್ಲೂಕು ಬಾಡ ಗ್ರಾಮದಲ್ಲಿ ಗ್ರಾಮ ವಾಸ್ಯವ್ಯ ಹಾಗೂ 28 ಸಾವಿರಕ್ಕೂ ಅಧಿಕ ಫಲಾನುಭವಿಗಳಿಗೆ ಸೌಲಭ್ಯಗಳ ವಿತರಣೆ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಸಿಎಂ ಬೊಮ್ಮಾಯಿ ಅವರು, ಕಂದಾಯ ಸಚಿವರು ಗ್ರಾಮ ವಾಸ್ತವ್ಯ ಮಾಡುವ ಗ್ರಾಮದಲ್ಲಿ ಅಲ್ಲಿನ ಗ್ರಾಮಸ್ಥರು ಎಲ್ಲಾ ರೀತಿಯ ವ್ಯವಸ್ಥೆ ಮಾಡುತ್ತಾರೆ. ಪ್ರೀತಿಯ ಆತಿಥ್ಯ ನೀಡುತ್ತಾರೆ. ಅಂತಹ ಗ್ರಾಮಕ್ಕೆ ಏನಾದರೂ ವಿಶೇಷ ಕೊಡುಗೆ ನೀಡಬೇಕೆಂಬ ಚಿಂತನೆಯೊಂದಿಗೆ ರೂ.1 ಕೋಟಿಗಳ ನೆರವು ನೀಡುವ ತೀರ್ಮಾನ ಕೈಗೊಂಡಿದ್ದೇನೆ.  ಘೋಷಣೆ ಭಾಗವಾಗಿ ಬಾಡ  ಗ್ರಾಮಕ್ಕೆ ರೂ.1 ಕೋಟಿಗಳನ್ನು ಮಂಜೂರು ಮಾಡಲಾಗುವುದು ಎಂದು ಘೋಷಿಸಿದರು.

ಕನಕದಾಸರ ಪುಣ್ಯ ಭೂಮಿಯಲ್ಲಿ ಸುಮಾರು 30 ಸಾವಿರ ಫಲಾನುಭವಿಗಳಿಗೆ ಏಕಕಾಲಕ್ಕೆ ಸೌಲಭ್ಯಗಳ ವಿತರಣೆ ದಾಖಲೆಯಾಗಿದೆ. ಪ್ರತಿ ಜಿಲ್ಲೆ ತಾಲ್ಲೂಕಿನಲ್ಲಿಯೂ ಇಂತಹ  ಕಾರ್ಯಕ್ರಮಗಳು ನಡೆಯಬೇಕು ಎಂದರು.

**ಶಾಲಾ ಮಕ್ಕಳಿಗೆ ಪ್ರತ್ಯೇಕ ಬಸ್ ವ್ಯವಸ್ಥೆ:** ಪಿಪಿಪಿ ಮಾದರಿಯಲ್ಲಿ ಶಾಲಾ ಮಕ್ಕಳಿಗೆ ಪ್ರತ್ಯೇಕ ಬಸ್ ವ್ಯವಸ್ಥೆ ಮಾಡುವ ಯತ್ನ ನಡೆಯುತ್ತಿದ್ದು ಶೀಘ್ರದಲ್ಲಿಯೇ ಇದನ್ನು ಅನುಷ್ಠಾನಗೊಳಸಿಲಾಗುವುದು. ವಿದ್ಯಾರ್ಥಿಗಳು ಶಾಲಾ-ಕಾಲೆಜುಗಳಿಗೆ ಹೋಗಲು ಅನೇಕ ಕಡೆ ಬಸ್ ವ್ಯವಸ್ಥೆ ಇಲ್ಲ ಅದಕ್ಕಾಗಿ ಸರ್ಕಾರ ಪರ್ಯಾಯ ವ್ಯವಸ್ಥೆಗೆ ಚಿಂತನೆ ನಡೆಸಿದ್ದು. ಖಾಸಗಿ ಸಹಭಾಗಿತ್ವದಲ್ಲಿ ವಿಶೇಷ ಬಸ್ ವ್ಯವಸ್ಥೆ ಮಾಡುವ ನಿಟ್ಟಿನಲ್ಲಿ ಚರ್ಚೆ ನಡೆಸದಿದೆ. ಮೊದಲ ಪ್ರಯೋಗವನ್ನು ಶಿಗ್ಗಾವಿ ಕ್ಷೇತ್ರದಲ್ಲೇ ಕೈಗೊಳ್ಳುವೆ ಎಂದು ಸಿಎಂ ಭರವಸೆ ನೀಡಿದರು.

ಆಧಾರ: ಉದಯವಾಣಿ, ದಿನಾಂಕ:19.12.2022.

## 80. 10,000 ಉದ್ಯೋಗ ಪತ್ರ ವಿತರಣೆ

ರಾಜ್ಯದಲ್ಲಿ ತಿಂಗಳಿಗೆ ಒಮ್ಮೆಯಾದರೂ 10 ಸಾವಿರ ಉದ್ಯೋಗ ಪತ್ರಗಳನ್ನು ವಿತರಿಸುವ ಕೆಲಸವಾಗಬೇಕು. ಇದರಿಂದ ನಿರುದ್ಯೋಗ ಸಮಸ್ಯೆ ತನ್ನಿಂತಾನೇ ನಿವಾರಣೆಯಾಗುತ್ತದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಸಲಹೆ ನೀಡಿದ್ದಾರೆ.

'ಸುಶಾಸನ ದಿನ' (ಮಾಜಿ ಪ್ರಧಾನಿ ವಾಜಪೇಯಿ ಜನ್ಮದಿನ) ಅಂಗವಾಗಿ ನಗರದ ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ಉನ್ನತ ಶಿಕ್ಷಣ, ಐಟಿ–ಬಿಟಿ, ವಿಜ್ಞಾನ ತಂತ್ರಜ್ಞಾನ, ಕೌಶಲಭಿವೃದ್ಧಿ ಮತ್ತು ಜೀವನೋಪಾಯ ಇಲಾಖೆ ಸಹಯೋಗದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ 10 ಸಾವಿರ ಯುವಜನರಿಗೆ ಉದ್ಯೋಗ ಪತ್ರಗಳನ್ನು ಸಾಂಕೇತಿಕವಾಗಿ ವಿತರಿಸಿ ಮಾತನಾಡಿದರು. ಕರ್ನಾಟಕ ಹೊರತುಪಡಿಸಿ ಬೇರ್‍ಯಾವ ರಾಜ್ಯದಲ್ಲಿಯೂ ಉದ್ಯೋಗ ನೀತಿ ಇಲ್ಲ. ಇದಕ್ಕೆ ಪೂರಕವಾಗಿ ಸಂಶೋಧನೆ ಮತ್ತು ಅಭಿವೃದ್ಧಿ ನೀತಿಯನ್ನೂ ತರಲಾಗಿದೆ. ಸ್ಥಳೀಯರಿಗೆ ಉದ್ಯೋಗ ಸಿಗಬೇಕೆನ್ನುವುದು ಸರ್ಕಾರದ ಗುರಿಯಾಗಿದ್ದು, ನೇಮಕಾತಿಗೆ ತಕ್ಕ ಪ್ರೋತ್ಸಾಹ ನೀಡಲಾಗುತ್ತಿದೆ ಎಂದರು.

**ರಾಜ್ಯದಲ್ಲಿಯೇ ಘಟಕ ಸ್ಥಾಪಿಸಿ:** ವಿದ್ಯುತ್ ಚಾಲಿತ ವಾಹನಗಳ (ಇವಿ) ಕ್ಷೇತ್ರದಲ್ಲಿ ಕರ್ನಾಟಕ ಮುಂದಿದೆ. ಇವಿ ವಾಹನ ಮಾಲೀಕರು ಕೂಡ ರಾಜ್ಯದವರೇ ಹೆಚ್ಚಿದ್ದಾರೆ. ಆದ್ದರಿಂದ ಬೆಂಗಳೂರಿನಲ್ಲಿ ತಮ್ಮ ಆರ್ ಆ್ಯಂಡ್ ಡಿ ಕೇಂದ್ರಗಳನ್ನು ಹೊಂದಿರುವ ಕಂಪನಿಗಳು ರಾಜ್ಯದಲ್ಲಿಯೇ ಉತ್ಪಾದನಾ ಘಟಕಗಳನ್ನು ಕಡ್ಡಾಯವಾಗಿ ಸ್ಥಾಪಿಸಬೇಕು ಎಂದು ಸಿಎಂ ಸೂಚಿಸಿದರು.

ಕಾರ್ಯಕ್ರಮದಲ್ಲಿ ಕೌಶಲಾಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಎಸ್.ಸೆಲ್ವಕುಮಾರ್, ಕೌಶಲಾಭಿವೃದ್ಧಿ ನಿಗಮದ ಎಂಡಿ ಅಶ್ವಿನ್ ಗೌಡ, ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ ಆಯುಕ್ತ ಪಿ.ಪ್ರದೀಪ, ಜೀವನೋಪಾಯ ಮಿಷನ್ ವ್ಯವಸ್ಥಾಪಕ ನಿರ್ದೇಶಕಿ ರಾಗಪ್ರಿಯಾ, ಸಿಬ್ಬಂದಿ ಮತ್ತು ತರಬೇತಿ ಇಲಾಖೆ ಆಯುಕ್ತೆ ಜ್ಯೋತಿ, ಉನ್ನತ ಶಿಕ್ಷಣ ಪರಿಷತ್ತಿನ ಉಪಾಧ್ಯಕ್ಷ ಪ್ರೊ.ಬಿ.ತಿಮ್ಮೇಗೌಡ, ಜಿಟಿಸಿಸಿ ವ್ಯವಸ್ಥಾಪಕ ನಿರ್ದೇಶಕ ರಾಘವೇಂದ್ರ, ಐಟಿ–ಬಿಟಿ ಸೊಸೈಟಿ ವ್ಯವಸ್ಥಾಪಕ ನಿರ್ದೇಶಕ ಬಸವರಾಜು ಉಪಸ್ಥಿತರಿದ್ದರು.

ಆಧಾರ: ವಿಜಯವಾಣಿ, ದಿನಾಂಕ:26.12.2022.

## 81. ರಾಜ್ಯದ ಆರ್ಥಿಕ ಸ್ಥಿತಿ ಚೇತರಿಕೆ

ಪ್ರಸಕ್ತ 2022–23ನೇ ಸಾಲಿನ ಆರಂಭದಿಂದಲೂ ರಾಜ್ಯದ ಆರ್ಥಿಕತೆ ಚೇತರಿಕೆ ಹಾದಿಯಲಿದ್ದು, ಏಪ್ರಿಲ್‌ನಿಂದ ಸೆಪ್ಟಂಬರ್ ವರೆಗಿನ ಅವಧಿಯಲ್ಲಿ ರಾಜಸ್ವ ಆದಾಯ ಸಂಗ್ರಹದಲ್ಲಿ ಶೇ.10 ರಷ್ಟು ಹೆಚ್ಚಾಗಿದೆ. ಜೊತೆಗೆ ಜಿಎಸ್‌ಟಿ ಸಂಗ್ರಹವೂ ಉತ್ತಮವಾಗಿರುವುದರಿಂದ ಮಾರ್ಚ್‌ವರೆಗೆ ತೆರಿಗೆ ಸಂಗ್ರಹ ಏರುಮುಖವಾಗಿರುವ ಆಶಾಭಾವನೆ ಮೂಡಿಸಿದೆ.

ರಾಜ್ಯ ಹಣಕಾಸಿನ ಮಧ್ಯವಾರ್ಷಿಕ ಪರಿಶೀಲನಾ ವರದಿಯನ್ನು ಮುಖ್ಯಮಂತ್ರಿಗಳ ಪರವಾಗಿ ಸಚಿವ ಜೆ.ಸಿ.ಮಾಧುಸ್ವಾಮಿ ಅವರು ಸಂವಿಧಾನ ಸಭೆಯಲ್ಲಿ ಮಂಡಿಸಿದರು. ಕಳೆದ 2021–22ನೇ ಆರ್ಥಿಕತೆಯಲ್ಲಿ ಶೇ.9.5ರಷ್ಟು ಬೆಳವಣಿಗೆಯಾಗಿರುವುದು ವರದಿಯಲ್ಲಿ ದಾಖಲೆ ಆಗಿದೆ. ಪ್ರಸಕ್ತ ಸಾಲಿನ ತೆರಿಗೆ ಸಂಗ್ರಹ ಶೇ.10ರಷ್ಟು ಹೆಚ್ಚಳದಿಂದಾಗಿ ಬಜೆಟ್ ಅಂದಾಜಿನ ಶೇ.57 ರಷ್ಟು ಗುರಿಯನ್ನು ಆರು ತಿಂಗಳಲ್ಲಿ ತಲುಪಿದಂತಾಗಿದೆ.

ವಿದೇಶಿ ನೇರ ಬಂಡವಾಳ ಹೂಡಿಕೆ ಆಕರ್ಷಿಸುವಲ್ಲಿ ಪ್ರಮುಖ ರಾಜ್ಯವಾಗಿ ಹೊರಹೊಮ್ಮಿದ್ದು, ಪ್ರಸಕ್ತ ಆರ್ಥಿಕ ವರ್ಷದ ಮೊದಲ ತ್ರೈಮಾಸಿಕದಲ್ಲಿ ರಾಜ್ಯದಲ್ಲಿ ರೂ.21,480 ಕೋಟಿ ವಿದೇಶಿ ನೇರ ಬಂಡವಾಳ ಹೂಡಿಕೆಯಾಗಿದೆ. ಪ್ರಸಕ್ತ ವರ್ಷದ ಆರಂಭದಿಂದಲೂ ಆರ್ಥಿಕ ಬೆಳವಣಿಗೆಗೆ ತೊಡಕಾಗಿರುವ ಹಣದುಬ್ಬರವನ್ನು ನಿಯಂತ್ರಿಸಲು ಆರ್‌ಬಿಐ, ಕಟ್ಟುನಿಟ್ಟಾದ ಹಣಕಾಸು ನೀತಿಯನ್ನು ಅಳವಡಿಸಿಕೊಂಡಿದೆ.

ಏಪ್ರೀಲ್‌ನಲ್ಲಿ ಶೇ.6.39ರಷ್ಟಿದ್ದ ಹಣದುಬ್ಬರವನ್ನು ಸೆಪ್ಟಂಬರ್‌ನಲ್ಲಿ ಶೇ.5.81ಕ್ಕೆ ಇಳಿಸುವಲ್ಲಿ ರಾಜ್ಯ ಸರ್ಕಾರ ಯಶಸ್ವಿಯಾಗಿದೆ. ಇದು ಸೆಪ್ಟಂಬರ್‌ನಲ್ಲಿ ದೇಶದ ಹಣದುಬ್ಬರ ಪ್ರಮಾಣವಾದ ಶೇ.7.4ಕ್ಕಿಂತ ಕಡಿಮೆ ಇದೆ. 2022–23ನೇ ಸಾಲಿನಲ್ಲಿ ರಾಜ್ಯದ ವಿತ್ತೀಯ ಕೊರತೆಯು ಜಿಎಸ್‌ಡಿಪಿಯ (ರೂ.21.81

ಲಕ್ಷ ಕೋಟಿ) ಶೇ.2.82ರಷ್ಟಿರಲಿದೆ ಎಂದು ಅಂದಾಜಿಸಲಾಗಿದ್ದು, ಕರ್ನಾಟಕ ಆರ್ಥಿಕ ಹೊಣೆಗಾರಿಕೆ ಕಾಯಿದೆಯ ಮಿತಿಯನ್ನು ಕಾಯ್ದುಕೊಳ್ಳಲಾಗಿದೆ ಎಂಬುದು ಗಮನಾರ್ಹ.

**ಪರಿಹಾರೋಪಾಯಗಳು:**

- ಸ್ವಾಯತ್ತ ಸಂಸ್ಥೆಗಳಾದ ನಿಗಮ, ಮಂಡಳಿ, ಸ್ಥಾಯಿ ಸಂಸ್ಥೆಗಳಿಗೆ ಪರಸ್ಪರ ಸಹಕಾರದಿಂದ ಕಾರ್ಯನಿರ್ವಹಿಸಲು ಅವುಗಳನ್ನು ವಿಲೀನಗೊಳಿಸುವುದು. ರದ್ದುಪಡಿಸುವುದು ಹಾಗೂ ಅನುತ್ಪಾದಕ ಆಡಳಿತಾತ್ಮಕ ವೆಚ್ಚ ತಗ್ಗಿಸಬೇಕು.
- 2ನೇ ಆಡಳಿತ ಸುಧಾರಣಾ ಆಯೋಗವು ಇಲಾಖೆಗಳ ಪುನರ್ ರಚನೆ ಹಾಗೂ ಎಲ್ಲ ಹಂತಗಳಲ್ಲಿ ಸಿಬ್ಬಂದಿ ಬಲದ ಸಮರ್ಪಕ ಹೊಂದಾಣಿಕೆ ಸಂಬಂಧ ನೀಡಿರುವ ಶಿಫಾರಸ್ಸುಗಳನ್ನು ತ್ವರಿತವಾಗಿ ಜಾರಿಗೊಳಿಸಬೇಕು.
- ತಂತ್ರಾಜ್ಞಾನ ಬಳಕೆಯಿಂದಾಗಿ ಇಲಾಖೆಗಳಲ್ಲಿ ಅನಗತ್ಯವಾಗಿರುವ ಹುದ್ದೆಗಳನ್ನು ಗುರುತಿಸಿ ವೇತನ, ಪಿಂಚಣಿ ಮೇಲಿನ ವೆಚ್ಚವನ್ನು ಕಡಿಮೆ ಮಾಡುವುದು ಅಗತ್ಯ.
- ಕೇಂದ್ರ ಸರ್ಕಾರ ಬಂಡವಾಳ ಹೂಡಿಕೆಗಾಗಿ ರಾಜ್ಯಕ್ಕೆ ನೀಡಿರುವ ರೂ.2918 ಕೋಟಿ ವಿಶೇಷ ಅನುದಾನವನ್ನು ಪ್ರಸಕ್ತ ವರ್ಷದಲ್ಲೇ ಪೂರ್ಣವಾಗಿ ಬಳಸಬೇಕು.
- ಎಸ್ಕಾಂಗಳು, ಕೆಪಿಸಿಎಲ್‌ನ ಆರ್ಥಿಕ ಸ್ಥಿತಿ ಕ್ಷೀಣಿಸುತ್ತಿರುವ ಹಿನ್ನೆಲೆಯಲ್ಲಿ ಗುರುಚರಣ್ ಆಯೋಗದ ಶಿಫಾರಸ್ಸು ಜಾರಿಗೊಳಿಸಬೇಕು.
- ಜಲಸಂಪನ್ಮೂಲ, ಲೋಕೋಪಯೋಗಿ, ಸಣ್ಣ ನೀರಾವರಿ ಇಲಾಖೆಗಳಲ್ಲಿ ಬದ್ಧತಾ ವೆಚ್ಚ ಸಾಕಷ್ಟು ಹೆಚ್ಚಳವಾಗಿದೆ. ಈ ಯೋಜನೆ/ಕಾಮಗಾರಿಗಳ ಮೇಲಿನ ಬದ್ಧತೆ ಇಲಾಖೆಗಳ ಬಜೆಟ್ ಅನುದಾನಕ್ಕಿಂತ ಹೆಚ್ಚಿಗೆ ಇದೆ. ಹಾಗಾಗಿ ಹೊಸ ಯೋಜನೆ, ಕಾಮಗಾರಿಗಳಿಗೆ ಅನುಮೋದನೆ ನೀಡುವುದನ್ನು ನಿಯಂತ್ರಿಸುವುದು ಸೂಕ್ತ.

ಆಧಾರ: ವಿಜಯ ಕರ್ನಾಟಕ, ದಿನಾಂಕ:27.12.2022.

## 82. ಪಂಚಮಸಾಲಿ, ಒಕ್ಕಲಿಗ ಇಬ್ಬರಿಗೂ ಸಿಕ್ಕ ಮೀಸಲು

ಕೆಲ ತಿಂಗಳಿಂದ ಭಾರಿ ಚರ್ಚೆಗೆ ಕಾರಣವಾಗಿದ್ದ ಮೀಸಲು ಹೋರಾಟಕ್ಕೆ ರಾಜ್ಯ ಸರ್ಕಾರ ತನ್ನ ಮೂಗಿನ ನೇರಕ್ಕೆ ಕೊನೆ ಹಾಡಿದ್ದು, ಒಂದೇ ಕಲ್ಲಿಗೆ ಎರಡೂ ಹಕ್ಕಿ ಹೊಡೆಯುವ ಲೆಕ್ಕಾಚಾರ ಪ್ರಯೋಗಿಸಿದೆ. ಹಾಗೆ ನೋಡಿದರೆ ಪಂಚಮಸಾಲಿ–ಒಕ್ಕಲಿಗ ಎರಡೂ ಸಮುದಾಯಗಳು ಇಟ್ಟಿದ್ದ ಮೀಸಲು ಬೇಡಿಕೆ ಅನುಗುಣ ನೀಡದೇ ಮೂಗಿಗೆ ತುಪ್ಪ ಸವರುವ ಕೆಲಸವನ್ನು ಮಾಡಿದೆ.

ಹಿಂದುಳಿದ ವರ್ಗಗಳ 2ಎ ಪ್ರವರ್ಗದಲ್ಲಿ ಪಂಚಮ ಸಾಲಿಗಳಿಗೆ ನೀಡಲು ಸಾಧ್ಯವೇ ಇಲ್ಲ ಎನ್ನುವ ವರದಿಯನ್ನು ಒಬಿಸಿ ಆಯೋಗ ನೀಡುತ್ತಿದ್ದಂತೆ, 2ಸಿ ಹಾಗೂ 2ಡಿ ಪ್ರವರ್ಗವನ್ನು ಸೃಷ್ಟಿಸಿ, ಈ ಎರಡೂ ಪ್ರವರ್ಗಕ್ಕೆ ಲಿಂಗಾಯತ ಹಾಗೂ ಒಕ್ಕಲಿಗರನ್ನು ಸೇರಿಸಲು ತೀರ್ಮಾನಿಸಿದೆ. ಈ ಹಿಂದೆ 3ಎ ನಲ್ಲಿದ್ದ ಒಕ್ಕಲಿಗರಿಗೆ 2ಸಿ ಹಾಗೂ 3ಬಿ ನಲ್ಲಿದ್ದ ಲಿಂಗಾಯತರಿಗೆ 2ಡಿ ವರ್ಗಕ್ಕೆ ಸೇರಿಸಲು ರಾಜ್ಯ ಸರ್ಕಾರ ಸಂಪುಟ ಸಭೆಯಲ್ಲಿ ತೀರ್ಮಾನಿಸಿದೆ.

ಡಿಸೆಂಬರ್ 29 ರೊಳಗೆ ಪಂಚಮಸಾಲಿ ಲಿಂಗಾಯತರಿಗೆ ಮೀಸಲು ನೀಡುವ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳಬೇಕು ಎಂಬ ಎಚ್ಚರಿಕೆಯನ್ನು ಸಮುದಾಯದ ನಾಯಕರು ಹಾಕಿದ್ದರು, ಇದರೊಂದಿಗೆ ಒಕ್ಕಲಿಗ ಸಮುದಾಯದಿಂದ ತಮಗೂ ಶೇ.12ರಷ್ಟು ಮೀಸಲು ನೀಡಬೇಕು ಎನ್ನುವ ಒತ್ತಡವಿತ್ತು. ಈ ಎರಡೂ ಬೇಡಿಕೆಯನ್ನು ಒಪ್ಪಿಯೂ, ಒಪ್ಪದಿರುವಂತೆ ಮಾಡುವ ಕೆಲಸಕ್ಕೆ ರಾಜ್ಯ

ಸರ್ಕಾರ ತೀರ್ಮಾನ ಕೈಗೊಂಡಿದೆ. ಆದರೆ ಸರ್ಕಾರದ ಈ ನಡೆಯನ್ನು ಸ್ವಾಗತಿಸಬೇಕೋ.. ವಿರೋಧಿಸಬೇಕೋ ಎನ್ನುವ ಗೊಂದಲಕ್ಕೆ ಸಮುದಾಯದ ನಾಯಕರಿದ್ದಾರೆ ಎನ್ನುವುದು ಸ್ಪಷ್ಟ.

ಬೆಳಗಾವಿ ಸುವರ್ಣಸೌಧದಲ್ಲಿ ನಡೆ ಸಚಿವ ಸಂಪುಟ ಸಭೆಯಲ್ಲಿ ಈ ಎರಡೂ ಸಮುದಾಯಗಳಿಗೆ ಮೀಸಲು ಕಲ್ಪಿಸುವ ಮಹತ್ವದ ತೀರ್ಮಾನವನ್ನು ರಾಜ್ಯ ಸರ್ಕಾರ ತೆಗೆದುಕೊಂಡಿದೆ. ಅದಕ್ಕಾಗಿ 2ಸಿ ಹಾಗೂ 2ಡಿ ಪ್ರವರ್ಗವನ್ನು ಸೃಷ್ಟಿಸಿ ಈ ಎರಡೂ ವರ್ಗಕ್ಕೆ ಪಂಚಮಸಾಲಿ ಹಾಗೂ ಒಕ್ಕಲಿಗರನ್ನು ಸೇರಿಸಲು ತೀರ್ಮಾನಿಸಿದೆ. ಈ ಹಿಂದೆ 3ಎ ನಲ್ಲಿದ್ದ ಒಕ್ಕಲಿಗರನ್ನು 2ಸಿ ಹಾಗೂ 3ಬಿ ನಲ್ಲಿದ್ದ ಪಂಚಮಸಾಲಿ ಸಮುದಾಯವನ್ನು 2ಡಿ ಪ್ರವರ್ಗಕ್ಕೆ ಸೇರಿಸಲು ನಿರ್ಧರಿಸಿದೆ.

ಈಗಿರುವ ಮಾಹಿತಿಯ ಪ್ರಕಾರ ಪಂಚಮಸಾಲಿ ಸಮುದಾಯಕ್ಕೆ ಶೇ.7 ರಷ್ಟು ಹಾಗೂ ಶೇ.15 ರಷ್ಟು ಮೀಸಲು ಕೇಳಿದ್ದ ಒಕ್ಕಲಿಗರಿಗೆ ಶೇ.6 ರಷ್ಟು ಮೀಸಲು ನೀಡಲು ತೀರ್ಮಾನಿಸಲಾಗಿದೆ ಎಂದು ಮೂಲಗಳು ತಿಳಿಸಿವೆ.

**ಎರಡೂ ಸಮುದಾಯಕ್ಕೂ ಶೇ.2 ಏರಿಕೆ:** ಸರ್ಕಾರದ ಮೂಲಗಳ ಪ್ರಕಾರ ಈಗಾಗಲೇ ಒಕ್ಕಲಿಗರಿಗೆ ಶೇ.4ರಷ್ಟು ಹಾಗೂ ಲಿಂಗಾಯತರಿಗೆ ಶೇ.5 ರಷ್ಟು ಮೀಸಲನ್ನು ಪ್ರವರ್ಗ ಮೂರರಲ್ಲಿ ನೀಡಲಾಗಿದೆ. ಇದೀಗ ಆರ್ಥಿಕವಾಗಿ ಹಿಂದುಳಿದ ಮೀಸಲಿನಲ್ಲಿ ಸಿಗುವ ನಾಲ್ಕೈದು ಪರ್ಸೆಂಟ್ ಬಳಸಿಕೊಂಡು ಎರಡೂ ಸಮುದಾಯಕ್ಕೂ ಶೇ.2 ರಷ್ಟು ಮೀಸಲು ನೀಡಲು ತೀರ್ಮಾನಿಸಲಾಗಿದೆ. ಇನ್ನುಳಿದ ಆರು ಪರ್ಸೆಂಟ್‌ನಲ್ಲಿ ಇನ್ನುಳಿದಿರುವ ಮೇಲ್ವರ್ಗದ ಆರ್ಥಿಕ ಹಿಂದುಳಿದವರಿಗೆ ಮೀಸಲು ನೀಡುವ ಲೆಕ್ಕಾಚಾರದಲ್ಲಿದೆ.

ಇನ್ನು ರಾಜ್ಯದ ಒಬಿಸಿ ಪಟ್ಟಿಯಲ್ಲಿ ಒಕ್ಕಲಿಗ ಹಾಗೂ ಲಿಂಗಾಯತರಿದ್ದರೂ, ಕೇಂದ್ರ ಒಬಿಸಿ ಪಟ್ಟಿಯಲ್ಲಿ ಇಲ್ಲ. ಆದ್ದರಿಂದ ಆರ್ಥಿಕ ಹಿಂದುಳಿದ ವರ್ಗದ ಮೀಸಲನ್ನು ಪಡೆಯುವುದು ಸುಲಭ ಎನ್ನುವುದು ಕಾನೂನು ತಜ್ಞರ ಲೆಕ್ಕಾಚಾರವಾಗಿದೆ.

**ಯಾರಿಂದಲೂ ಕಸಿದಿಲ್ಲ–ಮಾಧುಸ್ವಾಮಿ:** ಸಚಿವ ಸಂಪುಟ ಸಭೆಯ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ ಅವರು, 2ಎ, 2ಬಿಯಲ್ಲಿರುವವರ ಯಾವ ಮೀಸಲನ್ನು ಬದಲಾಯಿಸುವುದಿಲ್ಲ. ಆದರೆ 2ಸಿ ಹಾಗೂ 2ಡಿ ಪ್ರವರ್ಗ ಸೃಷ್ಟಿಸಲಾಗಿದ್ದು, ಒಕ್ಕಲಿಗರಿಗೆ 2ಸಿಯಲ್ಲಿ ಹಾಗೂ ಪಂಚಮಸಾಲಿಗಳಿಗೆ 2ಡಿನಲ್ಲಿ ನೀಡಲಾಗಿದೆ. ಆದರೆ, ಯಾರಿಗೆ ಎಷ್ಟು ಮೀಸಲು ಎನ್ನುವುದನ್ನು ಹಿಂದುಳಿದ ವರ್ಗಗಳ ಅಯೋಗದ ಸಮಿತಿಯ ಅಂತಿಮ ವರದಿ ಬಂದ ಬಳಿಕವೇ ತೀರ್ಮನಿಸಲಾಗುವುದು. ಅದನ್ನು ಆಯೋಗವೇ ನಿರ್ಧರಿಸಲಿದೆ ಎಂದರು. ಯಾರ ಮೀಸಲನ್ನು ಹಿಂಪಡೆಯುವುದಿಲ್ಲ. ಆದರೆ ಕೇಂದ್ರ ಸರ್ಕರದ ಆರ್ಥಿಕ ಹಿಂದುಳಿದ ವರ್ಗದ ಮೀಸಲಿನಲ್ಲಿರುವ ಶೇ.10ರಷ್ಟರಲ್ಲಿ ಮೇಲ್ವರ್ಗದವರಿಗೆ ನೀಡುವ ಮೀಸಲಿನಲ್ಲಿ ಉಳಿಯುವುದನ್ನು ಈ ಎರಡೂ ಸಮುದಾಯಗಳಿಗೆ ನೀಡಲಾಗಿದೆ. ಅಲ್ಲದೇ, ರೂ. 8.5 ಲಕ್ಷಗಿಂತ ಕಡಿಮೆ ವಾರ್ಷಿಕ ವರಮಾನ ವಿದ್ದವರಿಗೆ ಮಾತ್ರ ಈ ಮೀಸಲು ಸಿಗಲಿದೆ ಎಂದು ಹೇಳಿದರು.

- ಬೀಸುವ ದೊಣ್ಣೆಯಿಂದ ಪಾರಾದ ಸರ್ಕಾರ.
- ಈ ಎರಡೂ ವರ್ಗದಿಂದ ಒಕ್ಕಲಿಗ, ಲಿಂಗಾಯತರಿಗೆ ರಾಜಕೀಯ ಮೀಸಲು ಸಿಗುವುದಿಲ್ಲ.
- ಈ ಹಿಂದೆ '3ಎ' ನಲ್ಲಿದ್ದ ಒಕ್ಕಲಿಗರು 2ಸಿ ಪ್ರವರ್ಗ ಶಿಫ್ಟ್
- ಈ ಹಿಂದೆ '3ಬಿ' ಪ್ರವರ್ಗದಲ್ಲಿದ್ದ ಪಂಚಮಸಾಲಿಗೆ '2ಡಿ' ಪ್ರವರ್ಗ
- ಸರ್ಕಾರದ ನಡೆಯಿಂದ ಗಲಿಬಿಲಿಯಾಗಿರುವ ಪಂಚಮಸಾಲಿ ಹೋರಾಟಗಾರರು

**ಯಾವ ವರ್ಗ ಏನು:**

- 2ಎ: ಅತಿ ಹಿಂದುಳಿವವರು
- 2ಬಿ: ಸ್ವಲ್ಪ ಪ್ರಮಾಣದಲ್ಲಿ ಹಿಂದುಳಿದವರು
- 2ಸಿ: ಹಿಂದುಳಿದವರು
- 2ಡಿ: ಹಿಂದುಳಿದವರು

**ತೀರ್ಮಾನಕ್ಕಿರುವ ಸಮಸ್ಯೆಯೇನು:**

- ಪಂಚಮಸಾಲಿಗಳಿಗೆ ಮೀಸಲು ಕೇಳಲಾಗಿತ್ತು. ಆದರೆ ಇಡೀ ಲಿಂಗಾಯತ ಸಮುದಾಯಕ್ಕೆ ನೀಡಲಾಗಿದೆ.
- ಒಕ್ಕಲಿಗರು ಕೇಳಿದ್ದ ಶೇ.12–15 ರಷ್ಟು ಮೀಸಲು ನೀಡಲು ಸಾಧ್ಯವಿಲ್ಲ ಎನ್ನುವುದು ಸದ್ಯದ ಪರಿಸ್ಥಿತಿಯಲ್ಲಿ ಸ್ಪಷ್ಟ.
- ಆರ್ಥಿಕ ಹಿಂದುಳಿದ ವರ್ಗದ ಮೀಸಲನ್ನೇ ಈ ಎರಡೂ ಸಮುದಯಕ್ಕೆ ನೀಡುವುದರಿಂದ ಎರಡೂ ಸಮುದಾಯಕ್ಕೇ ಶೇ.2–3 ರಷ್ಟು ಸಿಗುವ ಸಾಧ್ಯತೆ
- ಇಡಬ್ಲ್ಯೂಎಸ್‌ನಲ್ಲಿ ನೀಡುವುದರಿಂದ 8.5 ಲಕ್ಷ ವಾರ್ಷಿಕ ಆದಾಯ ಹೆಚ್ಚಿರುವವರಿಗೆ ಮೀಸಲು ಸಿಗುವುದಿಲ್ಲ.
- ಪಂಚಮಸಾಲಿಗಳು ಕೇಳಿದ್ದ ಮೀಸಲಿನ ವರ್ಗದಲ್ಲಿ ಬಾರದಿರುವುದರಿಂದ ಹೆಚ್ಚು ಲಾಭವಿಲ್ಲ

ಆಧಾರ: ವಿಶ್ವವಾಣಿ, ದಿನಾಂಕ:30.12.2022.

## 83. ಮಹದಾಯಿಗೆ ಜೈ

ಮಹದಾಯಿ ಯೋಜನೆಯ ಪರಿಷ್ಕೃತ ಸಮಗ್ರ ಯೋಜನಾ ವರದಿಗೆ (ಡಿಪಿಆರ್) ಕೇಂದ್ರ ಸರ್ಕಾರ ಅನುಮೋದನೆ ನೀಡಿದೆ. ಇದರೊಂದಿಗೆ ಕಳಸಾ–ಬಂಡೂರಿ ನಾಲಾ ತಿರುವು ಯೋಜನೆಯ ಸಾಕಾರದ ಹಾದಿ ಸುಗಮವಾಗಿದೆ. ಉತ್ತರ ಕರ್ನಾಟಕ ಭಾಗದ ದಶಕದ ಕನಸು ನನಸಾಗುವ ಸಮಯ ಬಂದಿದೆ. ಈ ಮೂಲಕ ವಿಧಾನಸಭೆ ಚುನಾವಣೆ ಹೊತ್ತಿನಲ್ಲಿ ವಿಶೇಷವಾಗಿ, ಕಿತ್ತೂರು ಕರ್ನಾಟಕ ಭಾಗದ ಜನರಿಗೆ ಕೇಂದ್ರ ಮತ್ತು ರಾಜ್ಯ ಬಿಜೆಪಿ ಡಬಲ್ ಎಂಜಿನ್ ಸರ್ಕಾರದ ಭರ್ಜರಿ ಕೊಡುಗೆ ನೀಡಿದೆ.

ಕಳಸಾದಲ್ಲಿ 1.72 ಟಿಎಂಸಿ ಅಡಿ ಹಾಗೂ ಬಂಡೂರಿಯಲ್ಲಿ 2.18 ಟಿಎಂಸಿ ಅಡಿ ಸೇರಿ ಒಟ್ಟು 3.9 ಟಿಎಂಸಿ ಅಡಿ ನೀರನ್ನು ಬಳಸಿಕೊಂಡು ಹುಬ್ಬಳ್ಳಿ–ಧಾರವಾಡ ಅವಳಿ ನಗರಗಳು ಹಾಗೂ ಸುತ್ತಮುತ್ತಲಿನ ಪಟ್ಟಣ, ಗ್ರಾಮಗಳಿಗೆ ಶಾಶ್ವತ ಕುಡಿಯುವ ನಿರೋದಗಿಸುವ ಯೋಜನೆ ಇದಾಗಿದೆ. ಡಿಪಿಆರ್‌ಗೆ ಕೇಂದ್ರ ಜಲ ಆಯೋಗ ಅನುಮೋದನೆ ನೀಡಿರುವ ಬೆನ್ನಲ್ಲೇ, ಟೆಂಡರ್ ಪ್ರಕ್ರಿಯೆ ಆರಂಭಿಸಿ, ಕಾಮಗಾರಿ ಆರಂಭಿಸುವ ತೀರ್ಮಾನವನ್ನು ಸಿಎಂ ಬಸವರಾಜ ಬೊಮ್ಮಾಯಿ ವಿಧಾನಸೌಧದಲ್ಲಿ ಪ್ರಕಟಿಸಿದರು.

ಮಹದಾಯಿ ನದಿ ನೀರು ವಿವಾದ ನ್ಯಾಯಾಧಿಕರಣ 2018ರ ಆಗಸ್ಟ್ 14 ರಂದು ಕಳಸಾ–ಬಂಡೂರಿ ಯೋಜನಗೆ ಒಟ್ಟು 3.90 ಟಿಎಂಸಿ ಅಡಿ ನೀರು ಹಂಚಿಕೆ ಮಾಡಿತ್ತು. ಈ ಯೋಜನೆ ಅನುಷ್ಠಾನಕ್ಕೆ ಧಾರವಾಡ ಸುತ್ತಮುತ್ತಲಿನ ಭಾಗದ ರೈತರ ಬೃಹತ ಹೋರಾಟ ನಡೆದಿತ್ತು. ಹೋರಾಟದ ಒತ್ತಡಕ್ಕೆ ಮಣಿದ ಸರ್ಕಾರ, ಯೋಜನೆಗೆ ಕೇಂದ್ರದ ಒಪ್ಪಿಗೆ ಪಡೆಯಲು ಅವಿರತ ಪ್ರಯತ್ನ ನಡೆಸಿತ್ತು. ಯೋಜನೆ ಕಾಮಗಾರಿ ಆರಂಭಿಸಲು ಬಜೆಟ್‌ನಲ್ಲಿ ರೂ.500 ಕೋಟಿ ಮೀಸಲಿಟ್ಟಿತ್ತು.

**ಪ್ರಧಾನಿಗೆ ಸಿಎಂ ಅಭಿನಂದನೆ:** ಹೋರಾಟದ ನೆಲವಾದ ಸುವರ್ಣ ವಿಧಾನಸೌಧದಲ್ಲಿ ವಿಧಾನಮಂಡಲ ಅಧಿವೇಶನದ ಕೊನೆಯ ದಿನವಾದ ಈ ಸಿಹಿ ಸುದ್ದಿಯನ್ನು ಸಿಎಂ ಬಸವರಾಜ್ ಬೊಮ್ಮಾಯಿ ಪ್ರಕಟಿಸಿದರು. " ಈ ಭಾಗದ ಜನರು ಬಹುದಿನಗಳ ಕನಸು ಸಾಕರವಾಗಿದೆ. ಉತ್ತರ ಕನ್ನಡ ಭಾಗದ ಜನರಿಗೆ ಇದು ಪ್ರಧಾನಿ ನರೇಂದ್ರ ಮೋದಿ ಅವರ ಕೊಡುಗೆ. ಅದಕ್ಕಾಗಿ ರಾಜ್ಯದ ವಿಶೇಷವಾಗಿ, ಉತ್ತರ ಕನ್ನಡ ಭಾಗದ ಜನರ ಪರವಾಗಿ ಪ್ರಧಾನಿಗೆ ಅಭಿನಂದನೆ ಸಲ್ಲಿಸುವುದಾಗಿ," ಹೇಳಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:30.12.2022.

## 84. ದೇಶಕ್ಕೊಂದೇ ಸಹಕಾರಿ ನೀತಿ

ದೇಶದ ಉದ್ದಗಲದಲ್ಲಿ ಸಹಕಾರ ಕ್ಷೇತ್ರದ ಏಕರೂಪದ ಪ್ರಗತಿಗೆ ಉತ್ತೇಜನ ನೀಡುವ ಉದ್ದೇಶದಿಂದ ಇಡೀ ದೇಶಕ್ಕೆ ಅನ್ವಯವಾಗುವಂತೆ ಒಂದೇ ಸಹಕಾರಿ ನೀತಿ ಜಾರಿಗೊಳಿಸಲಾಗುವುದು ಎಂದು ಕೇಂದ್ರ ಗೃಹ ಹಾಗೂ ಸಹಕಾರ ಸಚಿವ ಅಮಿತ್ ಶಾ ಹೇಳಿದರು.

ರಾಜ್ಯದ ಸಹಕಾರ ಇಲಾಖೆ ವತಿಯಿಂದ ನಗರದ ಅರಮನೆ ಮೈದಾನದಲ್ಲಿ ಆಯೋಜಿಸಿದ್ದ ಸಹಕಾರ ಫಲಾನುಭವಿಗಳ ಸಮ್ಮೇಳನ ಉದ್ಘಾಟಿಸಿ ಮಾತನಾಡಿದ ಅವರು, 'ದೇಶದಲ್ಲಿ ಸಹಕಾರ ಕ್ಷೇತ್ರದ ಚಟುವಟಿಕೆಗಳು ಒಂದೇ ಸ್ವರೂಪದಲ್ಲಿ ಇಲ್ಲ. ಸಹಕಾರ ನೀತಿ ಜಾರಿಗೊಳಿಸುವ ಮೂಲಕ ಎಲ್ಲ ಸಹಕಾರ ಸಂಸ್ಥೆಗಳಲ್ಲೂ ಏಕರೂಪತೆ ತರಲಾಗುವುದು. ನೀತಿ ರೂಪಿಸುವುದಕ್ಕಾಗಿ ಕೇಂದ್ರದ ಮಾಜಿ ರೈಲ್ವೆ ಸಚಿವ ಸುರೇಶ ಪ್ರಭು ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಲಾಗಿದೆ' ಎಂದರು.

ಒಂದೊಂದು ಚಟುವಟಿಕೆಗೂ ಪ್ರತ್ಯೇಕವಾದ ಸಹಕಾರ ಸಂಸ್ಥೆಗಳಿವೆ. ಕೃಷಿ ಉತ್ಪನ್ನಗಳ ಖರೀದಿ, ಮಾರಾಟ, ರಸಗೊಬ್ಬರ ಪೂರೈಕೆ, ಸಕ್ಕರೆ ಕಾರ್ಖಾನೆಗಳನ್ನು ನಡೆಸುವುದು ಸೇರಿದಂತೆ ಹಲವು ಬಗೆಯ ಸಹಕಾರಿ ಸಂಸ್ಥೆಗಳು ಅಸ್ಥಿತ್ವದಲ್ಲಿವೆ, ಒಂದೇ ಸಹಕಾರಿ ಸಂಸ್ಥೆಯು ಬಹುವಿಧದ ಚುಟುವಟಿಕೆಗಳನ್ನು ನಡೆಸುವ ವ್ಯವಸ್ಥೆ ಜಾರಿಗೆ ಬರಬೇಕು. ಆಗ ಸಹಕಾರಿ ಸಂಸ್ಥೆಗಳು ಹೆಚ್ಚು ಲಾಭಗಳಿಸಲು ಮತ್ತು ಸದೃಢವಾಗಿ ಬೆಳೆಯಲು ಅನುಕೂಲವಾಗುತ್ತದೆ. ಹೊಸ ಸಹಕಾರಿ ನೀತಿಯು ಅದಕ್ಕೆ ಪೂರಕವಾಗಿರಲಿದೆ ಎಂದು ತಿಳಿಸಿದರು.

ಪ್ರತಿ ಗ್ರಾಮ ಪಂಚಾಯಿತಿ ಮಟ್ಟದಲ್ಲೂ ಸಹಕಾರಿ ಚಟುವಟಿಕೆ ವೇಗ ಪಡೆಯಬೇಕು ಸಾವಯವ ಉತ್ಪನ್ನಗಳಿಗೆ ಮಾರುಕಟ್ಟೆ ಒದಗಿಸುವ ಉದ್ದೇಶದಿಂದ ಬಹು ರಾಜ್ಯಗಳ ಸಹಕಾರ ಸಂಸ್ಥೆ ಆರಂಭಿಸುವ ಪ್ರಸ್ತಾವವಿದೆ. ಕೃಷಿ ಬೆಳೆಗಳ ಬೀಜ ಉತ್ಪಾದನೆ, ಸಂಗ್ರಹ, ಮಾರಾಟ, ಕೃಷಿ ಉತ್ಪನ್ನಗಳ ರಫ್ತು ಚುಟುವಟಿಕೆಗಳನ್ನು ನಡೆಸುವುದಕ್ಕೂ ಅಂತಹ ಪ್ರತ್ಯೇಕ ಸಂಸ್ಥೆ ಸ್ಥಾಪಿಸುವ ಯೋಚನೆ ಇದೆ ಎಂದರು.

**ಪಾರದರ್ಶಕ ಚುನಾವಣೆಗೆ ಕಾಯ್ದೆ:** ಸಹಕಾರಿ ಸಂಸ್ಥೆಗಳ ಚುನಾವಣೆಯನ್ನು ಪಾರದರ್ಶಕವಾಗಿ ನಡೆಸುವುದಕ್ಕಾಗಿ ಪ್ರತ್ಯೇಕ ಕಾಯ್ದೆಯೊಂದನ್ನು ಜಾರಿಗೊಳಸಲು ಕೇಂದ್ರ ಸರ್ಕಾರ ನಿರ್ಧರಿಸಿದೆ. ಅದಕ್ಕಾಗಿ ಸಿದ್ಧಪಡಿಸಿರುವ ಮಸೂದೆಯು ಸಂಸತ್ತಿನ ಸ್ಥಾಯಿ ಸಮಿತಿ ಪರಿಶೀಲನೆಯಲ್ಲಿದೆ. ಶೀಘ್ರದಲ್ಲಿ ಮಸೂದೆಗೆ ಒಪ್ಪಿಗೆ ನೀಡುವ ಮೂಲಕ ಸಹಕಾರ ಸಂಸ್ಥೆಗಳ ಚುನಾವಣೆ ವ್ಯವಸ್ಥೆಯಲ್ಲಿ ಪಾರದರ್ಶಕತೆ ತರುವತ್ತ ಹೆಜ್ಜೆ ಇಡಲಾಗುವುದು ಎಂದು ಅಮಿತ್ ಶಾ ತಿಳಿಸಿದರು.

ಕೆಲವು ರಾಜ್ಯಗಳಲ್ಲಿ ಸಹಕಾರಿ ಕ್ಷೇತ್ರ ಇನ್ನೂ ಸರಿಯಾಗಿ ಬೆಳವಣಿಗೆ ಹೊಂದಿಲ್ಲ. ಆದರೆ, ಕರ್ನಾಟಕದ ಸಹಕಾರಿ ರಂಗವು ದೇಶದಲ್ಲೇ ಮುಂಚೂಣಿಯಲ್ಲಿದೆ. ಇಲ್ಲಿನ ಸಹಕಾರಿ ಸಂಸ್ಥೆಗಳ ಪ್ರಗತಿಯು ದೇಶಕ್ಕೆ ದಿಕ್ಸೂಚಿಯಾಗಬೇಕು ಎಂದರು.

ಪ್ರಾಸ್ತವಿಕವಾಗಿ ಮಾತನಾಡಿದ ಸಹಕಾರ ಸಚಿವ ಎಸ್.ಟಿ.ಸೋಮಶೇಖರ್, 'ಕರ್ನಾಟಕವು ಸಹಕಾರ ಕ್ಷೇತ್ರದಲ್ಲಿ ದೇಶದಲ್ಲಿ ಮೂರನೇ ಸ್ಥಾನದಲ್ಲಿದೆ. 45,000 ಸಹಕಾರ ಸಂಸ್ಥೆಗಳಲ್ಲಿ 2.3 ಕೋಟಿ

ಸದಸ್ಯರಿದ್ದಾರೆ. ಪ್ರಸಕ್ತ ಆರ್ಥಿಕ ವರ್ಷ 30ಲಕ್ಷ ರೈತರಿಗೆ ರೂ.24,000 ಕೋಟಿ ಸಾಲ ವಿತರಿಸುವ ಗುರಿ ಇದೆ. ಈವರೆಗೆ 18.11 ಲಕ್ಷ ರೈತರಿಗೆ ರೂ.13,480 ಕೋಟಿ ಸಾಲ ವಿತರಿಸಲಾಗಿದೆ' ಎಂದು ತಿಳಿಸಿದರು.

ಕೇಂದ್ರ ಸಚಿವ ಪ್ರಲ್ಹಾದ ಜೋಶಿ, ಸಚಿವರಾದ ಆರ್.ಅಶೋಕ್, ಆರಗ ಜ್ಞಾನೇಂದ್ರ, ಸಿ.ಎನ್.ಅಶ್ವತ್ ನಾರಾಯಣ, ಎಂ.ಟಿ.ಬಿ.ನಾಗರಾಜು, ಸಂಸದರಾದ ಡಿ.ವಿ.ಸದಾನಂದಗೌಡ, ಪಿ.ಸಿ.ಮೋಹನ್ ಉಪಸ್ಥಿತರಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:31.12.2022.

## 85. ಕರ್ನಾಟಕ ಏನೇ ಮಾಡಿದರೂ ಕಾನೂನು ಬದ್ಧ

ಮಹದಾಯಿ ಯೋಜನೆಯ ಪರಿಷ್ಕೃತ ಸಮಗ್ರ ಯೋಜನಾ ವರದಿ(ಡಿಪಿಆರ್)ಗೆ ಕೇಂದ್ರ ಸರ್ಕಾರ ಅನುಮೋದನೆ ನೀಡಿರುವ ಹಿನ್ನೆಲೆಯಲ್ಲಿ ಮುಂದಿನ ಕ್ರಮಗಳನ್ನು ಕಾನೂನುಬದ್ಧವಾಗಿಯೇ ತೆಗೆದುಕೊಳ್ಳಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು.

ಕರ್ನಾಟಕದ ಮಹದಾಯಿ ಯೋಜನೆ ಜಾರಿಯಾಗದು ಎಂಬುದಾಗಿ ಗೋವಾ ಮುಖ್ಯಮಂತ್ರಿ ಹೇಳಿಕೆ ಬಗ್ಗೆ ನಗರದಲ್ಲಿ ಸುದ್ದಿಗಾರರಿಗೆ ಪ್ರತಿಕ್ರಿಯಿಸಿದ ಅವರು, "ಗೋವಾ ಮುಖ್ಯಮಂತ್ರಿಗಳು ಸಹಜವಾಗಿ ಆ ರೀತಿಯೇ ಹೇಳಬೇಕು. ಹಾಗಾಗಿ ಅವರಿಂದ ಬೇರೆ ಏನನ್ನೂ ನಿರೀಕ್ಷಿಸಲಾಗದು. ಆದರೆ ಈ ದೇಶ ಕಾನೂನಿನ ಮೇಲೆ ನಡೆಯುತ್ತಿದೆ. ಅಂತರಾಜ್ಯ ಜಲ ವಿವಾದ ಕಾಯಿದೆ ಇದೆ. ಕೇಂದ್ರ ಸರ್ಕಾರ, ಸುಪ್ರೀಂ ಕೋರ್ಟ್ ಇದ್ದು, ನ್ಯಾಯಧೀಕರಣ ತೀರ್ಪು ನೀಡಿದೆ. ಪ್ರಧಾನಿ ನರೇಂದ್ರ ಮೋದಿಯವರ ನೇತೃತ್ವದ ಕೇಂದ್ರ ಸರ್ಕಾರ 2018 ರಲ್ಲೇ ಅಧಿಸೂಚನೆ ಹೊರಡಿಸಿದೆ," ಎಂದು ತಿಳಿಸಿದರು.

"ಕೇಂದ್ರ ಸರ್ಕಾರ ಈ ಡಿಪಿಆರ್‌ಗೆ ಅನುಮೋದನೆ ನೀಡಿದ್ದು, ಇವೆಲ್ಲವೂ ಕಾನೂನು ಬದ್ಧವಾಗಿದೆ. ಕರ್ನಾಟಕ ಏನೇ ಮಾಡಿದರು ಕಾನೂನು ಬದ್ಧವಾಗಿ ಮಾಡುತ್ತದೆ. ಡಿಪಿಆರ್ ಅನುಮೋದಿಸುವ ಮೂಲಕ ಕೇಂದ್ರವು ಮುಂದಿನ ಕೆಲಸಕ್ಕೆ ಹಸಿರು ನಿಶಾನೆ ತೋರಿದೆ. ಕಾನೂನು ಬದ್ಧವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು. ನ್ಯಾಯಧೀಕರಣವು ಗೋವಾದ ಹಿತರಕ್ಷಣೆ ಮನವಿ ಹಾಗೂ ನಮ್ಮ ಬೇಡಿಕೆಯನ್ನು ಆಲಿಸಿದೆ. ಯಾರಿಗೂ ಧಕ್ಕೆಯಾಗದಂತೆ ನ್ಯಾಯಾಧೀಕರಣ ತೀರ್ಪು ನೀಡಿದ್ದು, ಎಲ್ಲರೂ ದೇಶದ ಕಾನೂನನ್ನು ಗೌರವಿಸಬೇಕು," ಎಂದು ಹೇಳಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:31.12.2022.

# ಭಾಗ – 5

# ರಾಜ್ಯ ನೆಲ, ಜಲ, ಭಾಷೆ

## 1. ರಾಜ್ಯಕ್ಕೆ ಪೆನ್ನಾರ್ ಹಿನ್ನಡೆ

ಚಿಕ್ಕಬಳ್ಳಾಪುರ ಜಿಲ್ಲೆಯ ನಂದಿಬೆಟ್ಟಗಳಲ್ಲಿ ಉಗಮಿಸುವ ಪೆನ್ನಾರ್ (ರಾಜ್ಯದಲ್ಲಿ ದಕ್ಷಿಣ ಪಿನಾಕಿನಿ) ನದಿ ನೀರಿಗೆ ಸಂಬಂಧಿಸಿದಂತೆ ತಮಿಳುನಾಡು ಮತ್ತು ಕರ್ನಾಟಕದ ನಡುವಿನ ವ್ಯಾಜ್ಯ ಪರಿಹಾರಕ್ಕೆ ಹೊಸ ನ್ಯಾಯಾಧಿಕರಣ ರಚಿಸಲು ಸುಪ್ರೀಂಕೋರ್ಟ್ ಆದೇಶ ನೀಡಿದೆ.

ಕಾವೇರಿ (ಮೇಕೆದಾಟು), ಕೃಷ್ಣಾ, ಮಹದಾಯಿ ನೀರಾವರಿ ಯೋಜನೆಗಳಿಗೆ ಕೇಂದ್ರದಿಂದ ಅನುಮೋದನೆ ಪಡೆದುಕೊಳ್ಳಲು ರಾಜ್ಯ ಸರ್ಕಾರ ಹರಸಾಹಸ ಪಡುತ್ತಿರುವ ಮಧ್ಯೆ ಸುಪ್ರೀಂಕೋರ್ಟ್‌ನಿಂದ ಈ ಆದೇಶ ಹೊರಬಿದ್ದಿರುವುದು ರಾಜ್ಯಕ್ಕೆ ಆಘಾತ ತಂದಿದೆ. ತಮಿಳುನಾಡಿನ ವಾದಕ್ಕೆ ಒಪ್ಪಿಕೊಂಡು ನ್ಯಾಯಾಧೀಕರಣ ರಚನೆ ಮಾಡಬಾರದು ಎಂದು ಕರ್ನಾಟಕದ ವಕೀಲರು ವಾದ ಮಂಡಿಸಿದ್ದರೂ, ಕೇಂದ್ರ ಸರ್ಕಾರ ನ್ಯಾಯಾಧೀಕರಣ ರಚನೆಗೆ ಒಲವು ತೋರಿದ್ದರಿಂದ ಸುಪ್ರೀಂಕೋರ್ಟ್ ಈ ತೀರ್ಮಾನ ಪ್ರಕಟಿಸಿದೆ. ನ್ಯಾಯಾಧೀಕರಣ ರಚನೆಗೆ ಕೇಂದ್ರ ಸರ್ಕಾರ 6 ತಿಂಗಳ ಕಾಲಾವಕಾಶ ಕೇಳಿತು. ಆದರೆ, ನ್ಯಾ.ಎಂ.ಆರ್. ಶಾ ನೇತೃತ್ವದ ನ್ಯಾಯಪೀಠ 3 ತಿಂಗಳಲ್ಲಿ ನ್ಯಾಯಮೂರ್ತಿಗಳ ನೇಮಕ ಮಾಡಿ ವಿಚಾರಣೆ ಆರಂಭಿಸಬೇಕು ಎಂದು ಸೂಚನೆ ನೀಡಿದೆ. ನ್ಯಾಯಾಧೀಕರಣ ರಚನೆ ಮಾಡುವುದಕ್ಕೆ ಕೇಂದ್ರ ಜಲಶಕ್ತಿ ಸಚಿವರ ಒಪ್ಪಿಗೆ ನೀಡಿದ್ದಾರೆ.

ಆದರೆ, ಸಂಬಂಧಪಟ್ಟ ಎಲ್ಲಾ ಇಲಾಖೆಗಳ ಅನುಮೋದನೆ ಪಡೆಯಲು ಸಮಯ ಬೇಕಾಗುತ್ತದೆ. ಹೀಗಾಗಿ 6 ತಿಂಗಳು ಅವಕಾಶ ಬೇಕೆಂದು ಕೇಂದ್ರದ ಹೆಚ್ಚುವರಿ ಸಾಲಿಸಿಟರ್ ಜನರಲ್ ಕೋರಿದ್ದರು.

ನದಿ ನೀರಿನ ಹಂಚಿಕೆ ಬಗ್ಗೆ ರಾಜ್ಯಗಳು ಪರಸ್ಪರ ಪರಿಹಾರ ಕಂಡುಕೊಳ್ಳಲು ಸಾಧ್ಯವಿಲ್ಲ ಎಂದಿದ್ದ ತಮಿಳುನಾಡು ಸರ್ಕಾರ, ನ್ಯಾಯಾಧೀಕರಣ ರಚನೆಯೇ ಇದಕ್ಕೆ ಸೂಕ್ತ ಪರಿಹಾರ ಎಂದು ವಾದಿಸಿತ್ತು. 2020ರಲ್ಲಿ ಕೇಂದ್ರ ಸರ್ಕಾರದ ಸಂಧಾನ ಸಮಿತಿಯು ಎರಡು ಸಭೆಗಳನ್ನು ನಡೆಸಿತ್ತು. ಆದರೆ, ಪರಿಹಾರ ಸಿಗಲಿಲ್ಲ. ಇದಾಗಿ 2 ವರ್ಷಗಳ ಕಾಲ ಕೇಂದ್ರ ಸರ್ಕಾರ ಯಾವುದೇ ಹೆಚ್ಚುವರಿ ಪ್ರಯತ್ನಗಳನ್ನು ಮಾಡಲಿಲ್ಲ ಮತ್ತು ಸಭೆಗಳನ್ನೂ ನಡೆಸಲಿಲ್ಲ. ನ್ಯಾಯಾಧೀಕರಣ ರಚನೆಯಲ್ಲೂ ವಿಳಂಬ ಧೋರಣೆ ತಾಳಲಾಗಿದೆ. ಹೀಗಾಗಿ, ಸುಪ್ರೀಂಕೋರ್ಟ್ ಕೇಂದ್ರಕ್ಕೆ ಸೂಕ್ತ ನಿರ್ದೇಶನ ನೀಡಬೇಕು ಎಂದು ತಮಿಳುನಾಡು ವಕೀಲ ಕೃಷ್ಣಮೂರ್ತಿ ಒತ್ತಾಯಿಸಿದ್ದರು.

ಕೇಂದ್ರ ಸರ್ಕಾರದ ವಕೀಲೆ ಐಶ್ವರ್ಯ ಭಾಟಿ ಅವರೂ ಹಿಂದಿನ ವಿಚಾರಣೆ ವೇಳೆ ಇದೇ ನಿಲುವನ್ನು ನ್ಯಾಯಪೀಠದ ಮುಂದಿಟ್ಟಿದ್ದರು. ಮಾತುಕತೆ ಫಲಪ್ರದವಾಗಿಲ್ಲ ಎಂದ ಮೇಲೆ ನ್ಯಾಯಾಧಿಕರಣ ರಚನೆ ಮಾಡುವುದೇ ಸೂಕ್ತ ಎಂದು ನ್ಯಾಯಪೀಠ ಅಭಿಪ್ರಾಯಪಟ್ಟಿತ್ತು. ಇದನ್ನು ವಿರೋಧಿಸಿದ್ದ ರಾಜ್ಯ ಸರ್ಕಾರ, ಪರಸ್ಪರ ಮಾತುಕತೆಗೆ ಈಗಲೂ ಅವಕಾಶವಿದೆ ಎಂದು ಹೇಳಿದ್ದರೂ ಸುಪ್ರೀಂಕೋರ್ಟ್ ಒಪ್ಪಲಿಲ್ಲ. ನಿಮಗೆ ಪರಿಹಾರ ಬೇಕೋ ಬೇಡವೋ ಅಥವಾ ವ್ಯಾಜ್ಯವನ್ನು ಹೀಗೆ ಮುಂದುವರಿಸಿಕೊಂಡು ಹೋಗೋಣವೇ ಎಂದು ಪ್ರಶ್ನಿಸಿತ್ತು.

**ಪ್ರಕರಣ ಏನು?:** ತಮಿಳುನಾಡಿನ ಪೆನ್ನಾರ್ ಕಣಿವೆಯ ವ್ಯಾಪ್ತಿಗೆ ಬರುವ ಮತ್ತು ಕರ್ನಾಟಕದಲ್ಲಿ ಉಗಮ ಸ್ಥಾನವಿರುವ ಮಾರ್ಕಂಡೇಯ ನದಿ (ಪೆನ್ನಾರ್ ಉಪನದಿ)ಗೆ ಅಡ್ಡಲಾಗಿ ಹೊಸ ಅಣೆಕಟ್ಟನ್ನು ಕರ್ನಾಟಕ ನಿರ್ಮಾಣ ಮಾಡಿದೆ. ಇದನ್ನು ಪ್ರಶ್ನಿಸಿ ತಮಿಳುನಾಡು ಸರ್ಕಾರ ಸುಪ್ರೀಂಕೋರ್ಟ್ ಮೆಟ್ಟಿಲೇರಿತ್ತು. ಈ ಹಿನ್ನೆಲೆಯಲ್ಲಿ ಮಾತುಕತೆ ಮೂಲಕ ಬಗೆಹರಿಸಿಕೊಳ್ಳಲು ಕೇಂದ್ರ ಸರ್ಕಾರಕ್ಕೆ ಸುಪ್ರೀಂಕೋರ್ಟ್ ಸಲಹೆ ನೀಡಿತ್ತು. ಕೇಂದ್ರ ಜಲ ಆಯೋಗದ ಅಧಿಕಾರಿಗಳು ಎರಡೂ ರಾಜ್ಯಗಳ ಜಲ ಸಂಪನ್ಮೂಲ ಇಲಾಖೆ ಕಾರ್ಯದರ್ಶಿಗಳ ಜತೆ ಎರಡು ಬಾರಿ ಸಭೆ ನಡೆಸಿದ್ದರು. ಕೋಲಾರ, ಮಾಲೂರು, ಬಂಗಾರಪೇಟೆ ಪಟ್ಟಣಗಳಿಗೆ ಕುಡಿಯುವ ನೀರು ಪೂರೈಸಲು ಸರ್ಕಾರ ಈ ಜಲಾಶಯ ನಿರ್ಮಾಣ ಯೋಜನೆ ಕೈಗೆತ್ತಿಕೊಂಡಿದೆ. ಆದರೆ ಯೋಜನೆಯಿಂದ ಪೆನ್ನಾರ್ ಕಣಿವೆಯಲ್ಲಿ ನೀರಿನ ಕೊರತೆ ಉಂಟಾಗಲಿದೆ ಎಂದು ತಮಿಳು ನಾಡು ಸುಪ್ರೀಂ ಮೆಟ್ಟಿಲೇರಿದೆ.

**ಅಫಿಡವಿಟ್:** ಪೆನ್ನಾರ್ ವಿವಾದದ ಸಂಧಾನಕ್ಕೆ ಸಂಬಂಧಿಸಿ ಸುಪ್ರೀಂ ಕೋರ್ಟ್‌ಗೆ ಅಫಿಡವಿಟ್ ಸಲ್ಲಿಸಿರುವ ರಾಜ್ಯ ಸರ್ಕಾರ, ಸಂಧಾನ ಸಮಿತಿ ವ್ಯಾಪ್ತಿಯಲ್ಲಿ ಮಾತುಕತೆ ಮುಂದುವರಿಯಬೇಕು. 2020 ರಲ್ಲಿ ಕರೊನಾ ಬಂದಿದ್ದರಿಂದ ಅರ್ಥಪೂರ್ಣ ಮಾತುಕತೆಗೆ ಅಡಚಣೆ ಉಂಟಾಯಿತು. ಈಗ ಕರೊನಾ ಬಾಧೆಯಿಲ್ಲ. ಹೀಗಾಗಿ, ಕೇಂದ್ರ ಸಂಧಾನ ಸಮಿತಿ ಪ್ರಕ್ರಿಯೆ ಮುಂದುವರಿಸಬೇಕು ಮತ್ತು ತಮಿಳುನಾಡು ವಿತಂಡವಾದ ಬದಿಗೆ ಸರಿಸಬೇಕು ಎಂದು ಆಗ್ರಹಿಸಿದೆ.

**ವಾರ್ಷಿಕವಾಗಿ ರಾಜ್ಯಕ್ಕೆ 11 ಟಿಎಂಸಿ**

ದಕ್ಷಿಣ ಪೆನ್ನಾರ್ ಜಲಾನಯನ ಪ್ರದೇಶದ ಕರ್ನಾಟಕಕ್ಕೆ ಸೇರಿದ ಕಣಿವೆಯಲ್ಲಿ ವಾರ್ಷಿಕವಾಗಿ 11 ಟಿಎಂಸಿ ನೀರು ಲಭ್ಯವಿದೆ. 10 ಟಿಎಂಸಿ ನೀರಿಗಾಗಿ ಯೋಜಿಸಿರುವ ಯೋಜನೆಗಳು ಕುಡಿಯುವ ನೀರು ಮತ್ತು ನೀರಾವರಿ ಅವಶ್ಯಕತೆ ಪೂರೈಸುತ್ತದೆ. ಈ ನೀರು ಕಾವೇರಿ ನದಿ ನೀರು ವ್ಯಾಜ್ಯದಲ್ಲಿ ಕರ್ನಾಟಕಕ್ಕೆ ಹಂಚಿಕೆಯಾದ ನೀರಿನ ಭಾಗವೇ ಆಗಿದೆ. ಕರ್ನಾಟಕವು ಬೆಂಗಳೂರಿನ ಕುಡಿಯುವ ನೀರು ಪೂರೈಕೆಗಾಗಿ 12 ಟಿಎಂಸಿ ಕಾವೇರಿ ನೀರನ್ನು ದಕ್ಷಿಣ ಪೆನ್ನಾರ್ ಜಲಾನಯನ ಪ್ರದೇಶಕ್ಕೆ ತಿರುಗಿಸಿದೆ. ಈ ಹರಿವಿನಿಂದ

ಸೃಷ್ಟಿಯಾಗುವ ಸುಮಾರು 8.4 ಟಿಎಂಸಿ ನೀರು ರಾಜ್ಯಕ್ಕೆ ಪ್ರತ್ಯೇಕವಾಗಿ ಸೇರಿದೆ. ಆದ್ದರಿಂದ, ಈ ನೀರಿನ ಯಾವುದೇ ಭಾಗವನ್ನು ಪಡೆಯಲು ತಮಿಳುನಾಡಿಗೆ ಹಕ್ಕಿಲ್ಲ. ಕರ್ನಾಟಕ ಯೋಜಿಸಿರುವ 5 ಯೋಜನೆಗಳಿಗೆ ಈ ನೀರನ್ನು ಬಳಸಿಕೊಳ್ಳಲಾಗುತ್ತಿದೆ.

**ವಿರೋಧ ಯಾವ್ಯಾವುದಕ್ಕೆ?**

- ಕುಡಿಯುವ ನೀರಿನ ಉದ್ದೇಶಕ್ಕಾಗಿ ಉಪನದಿಯಾಗಿರುವ ಮಾರ್ಕಂಡೇಯ ನದಿಗೆ ಅಡ್ಡಲಾಗಿ 500 ಮಿಲಿಯನ್ ಕ್ಯೂಬಿಕ್ ನೀರು ಸಂಗ್ರಹ ಸಾಮರ್ಥ್ಯದ ಜಲಾಶಯ ನಿರ್ಮಾಣಕ್ಕೆ ಕರ್ನಾಟಕ ಉದ್ದೇಶಿಸಿರುವುದು.
- ವರ್ತೂರು ಕೆರೆಯ ಹೆಚ್ಚುವರಿ ನೀರನ್ನು ನರಸಾಪುರ ಟ್ಯಾಂಕ್‌ಗೆ ತಿರುಗಿಸುವುದು.
- ಎಲ್ಲಮಲ್ಲಪ್ಪ ಚೆಟ್ಟಿ ಟ್ಯಾಂಕ್‌ನಲ್ಲಿ ಏತ ನೀರಾವರಿ ಯೋಜನೆ.
- ಬ್ಯಾಲಹಳ್ಳಿ ಗ್ರಾಮದಲ್ಲಿ ಪೆನ್ನಾರ್ ನದಿಯಿಂದ ನೀರನ್ನು ಪಂಪ್ ಮಾಡುವುದು.
- ಪೆನ್ನಾರ್ ನದಿ ನೀರನ್ನು ತಟ್ಟನೂರು ಗ್ರಾಮದಿಂದ ಪಂಪ್ ಮಾಡುವ ಯೋಜನೆ.

ಪೆನ್ನಾರ್ ನ್ಯಾಯಾಧೀಕರಣ ರಚನೆ ಬಗ್ಗೆ ನಾವು ಮರುಪರಿಶೀಲನಾ ಅರ್ಜಿ ಸಲ್ಲಿಸಲಿದ್ದೇವೆ. ಕೇಂದ್ರ ಸಚಿವರ ಜೊತೆಗೂ ಚರ್ಚೆ ಮಾಡಲಿದ್ದೇವೆ. ರಾಜ್ಯದ ಅಭಿಪ್ರಾಯವನ್ನು ಮತ್ತೆ ಮನವರಿಕೆ ಮಾಡುತ್ತೇವೆ.

– ಬಸವರಾಜ ಬೊಮ್ಮಾಯಿ, ಮುಖ್ಯಮಂತ್ರಿ

ಆಧಾರ: ಕನ್ನಡ ಪ್ರಭ, ದಿನಾಂಕ: 15.12.2022

## 2. ರಾಜ್ಯದ ಗಡಿ ನಿಲುವೇನು

ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿ ವಿವಾದಕ್ಕೆ ಸಂಬಂಧಿಸಿದಂತೆ ಕೇಂದ್ರ ಗೃಹ ಸಚಿವ ಅಮಿತ್ ಷಾ ಡಿಸೆಂಬರ್ 14ರಂದು ಕರೆದಿರುವ ಸಭೆಯಲ್ಲಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಕೈಗೊಳ್ಳಲಿರುವ ನಿಲುವೇನು? ಮಹಾರಾಷ್ಟ್ರದ ಒತ್ತಡಕ್ಕೆ ಮಣಿದು ಅಮಿತ್ ಷಾ ಎರಡು ರಾಜ್ಯದ ಮುಖ್ಯಮಂತ್ರಿಗಳ ಸಭೆ ಕರೆದಿರುವ ಸುದ್ದಿ ಬರುತ್ತಿದ್ದಂತೆ ರಾಜ್ಯ ರಾಜಕೀಯ ವಲಯದಲ್ಲಿ ಈ ಬಗ್ಗೆ ಚರ್ಚೆ ಆರಂಭವಾಗಿದೆ.

ಮುಖ್ಯಮಂತ್ರಿ ಬೊಮ್ಮಾಯಿ ಅತ್ಯಂತ ಎಚ್ಚರಿಕೆಯ ಹೆಜ್ಜೆಯನ್ನಿಡದಿದ್ದರೆ ಐತಿಹಾಸಿಕ ಪ್ರಮಾದಕ್ಕೆ ಕಾರಣ ಆಗಬಹುದೆಂಬ ಆತಂಕ ಕೇವಲ ಗಡಿಯಲ್ಲಿ ಮಾತ್ರವಲ್ಲ. ರಾಜ್ಯಾದ್ಯಂತ ಚರ್ಚೆಯಾಗುತ್ತಿದೆ.

ಮಹಾಜನ್ ವರದಿಯೇ ಅಂತಿಮವೆಂಬ ನಿರ್ಣಯವನ್ನು ರಾಜ್ಯ ವಿಧಾನಮಂಡಲದಲ್ಲಿ ಈಗಾಗಲೇ ಐದು ಬಾರಿ ಅಂಗೀಕರಿಸಲಾಗಿದೆ. ಆ ನಿಲುವಿಗೆ ಪ್ರತ್ಯೇಕವಾದ ನಿಲುವನ್ನು ತೆಗೆದುಕೊಳ್ಳುವ ಸ್ಥಿತಿಯಲ್ಲಿಯೂ ಮುಖ್ಯಮಂತ್ರಿ ಬೊಮ್ಮಾಯಿ ಇಲ್ಲ. ಆದರೆ, ಅದೇ ನಿಲುವಿಗೆ ಅಂಟಿಕೊಳ್ಳುವುದಕ್ಕೂ ಅವರು ಸಿದ್ಧರಿಲ್ಲ.

ಅಮಿತ್ ಷಾ ಸಭೆ ಕರೆದಿದ್ದರೂ ಸರ್ಕಾರ ರಾಜ್ಯದಲ್ಲಿ ಸರ್ವಪಕ್ಷ ಸಭೆ ಕರೆದು ಚರ್ಚೆ ನಡೆಸುವ ಗೋಜಿಗೆ ಹೋಗದಿರುವುದು ಕುತೂಹಲ ಕೆರಳಿಸಿದೆ. ಸರ್ವಪಕ್ಷಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ ಬೊಮ್ಮಾಯಿ ಅವರು ಅಮಿತ್ ಷಾ ಸಭೆಯಲ್ಲಿ ಯಾವ ನಿಲುವನ್ನು ವ್ಯಕ್ತಪಡಿಸಲಿದ್ದಾರೆ ಎಂಬ ಪ್ರಶ್ನೆ ಬೃಹದಾಕಾರವಾಗಿದೆ.

2004ರಿಂದಲೂ ಸುಪ್ರೀಂಕೋರ್ಟ್ ಮುಂದೆ ಇರುವ ರಿಟ್ ಅರ್ಜಿ ವಿಚಾರಣೆಗೆ ಅಂಗೀಕಾರವಾಗಿಲ್ಲ. ಮಹಾರಾಷ್ಟ್ರ ಆಗಾಗ ರಾಜಕೀಯ ಕಾರಣಗಳಿಗಾಗಿ ವಿವಾದ ಕೆದಕುತ್ತಿರುತ್ತದೆ.

**ರಾಜ್ಯ ರಚನೆಯೇ ಅಂತಿಮ:** ಬಸವರಾಜ ಬೊಮ್ಮಾಯಿ ಇದುವರೆಗೂ ಎಲ್ಲಿಯೂ ಮಹಾಜನ್ ವರದಿ ಅಂತಿಮವೆಂಬ ಮಾತನ್ನು ಹೇಳಿಲ್ಲ. ಹೋರಾಟಗಾರರು, ಪ್ರತಿಪಕ್ಷಗಳು ಈ ಮಾತನ್ನು ಪುನರುಚ್ಚರಿಸುತ್ತಿದ್ದಾರೆ. ಆದರೆ, ಸರ್ಕಾರದ ಮೂಲಗಳಿಂದ ತಿಳಿದುಬಂದ ಮಾಹಿತಿ ಪ್ರಕಾರ, ಭಾಷಾವಾರು ಪ್ರಾಂತ್ಯದ ಆಧಾರದ ಮೇಲೆ ರಾಜ್ಯಗಳು ಏನು ರಚನೆಯಾಗಿವೆಯೋ ಅದೇ ಅಂತಿಮ ಹಾಗೂ ಯಥಾಸ್ಥಿತಿ ಮುಂದುವರಿಯುವುದೇ ಉತ್ತಮವೆಂಬ ನಿಲುವನ್ನು ಬೊಮ್ಮಾಯಿ ವ್ಯಕ್ತಪಡಿಸುವ ಸಾಧ್ಯತೆಗಳಿವೆ ಎಂದು ಹೇಳಲಾಗುತ್ತಿದೆ. ಕೇಂದ್ರ ಸರ್ಕಾರ 1956ರಲ್ಲಿ ರಚನೆ ಮಾಡಿದ ಫಜಲ್ ಅಲಿ ಆಯೋಗದ ವರದಿ ಆಧಾರದಲ್ಲಿ ರಾಜ್ಯಗಳು ರಚನೆಯಾಗಿದ್ದವು. ಇದೀಗ ಯಾವುದೇ ಬದಲಾವಣೆಗಳು ಸಾಧ್ಯವಿಲ್ಲವೆಂಬ ನಿಲುವಿಗೆ ಬೊಮ್ಮಾಯಿ ಬದ್ಧವಾಗಲಿದ್ದಾರೆ ಎಂದು ಹೇಳಲಾಗುತ್ತಿದೆ.

**ಮಹಾಜನ್ ವರದಿ ಒಪ್ಪಿಕೊಂಡಿದ್ದ ರಾಜ್ಯ**

ಮಹಾಜನ್ ವರದಿ 1970 ರಲ್ಲಿ ಸಂಸತ್ತಿನಲ್ಲಿ ಮಂಡನೆಯಾದ ನಂತರ ರಾಜ್ಯ ವಿಧಾನಮಂಡಲದಲ್ಲಿ 4 ಬಾರಿ ನಿರ್ಣಯ ಕೈಗೊಳ್ಳಲಾಗಿದೆ. ಅದಕ್ಕೆ ವಿರುದ್ಧವಾಗಿ ಹೋಗಲು ಸಾಧ್ಯವಾಗುವುದೇ ಎಂಬ ಪ್ರಶ್ನೆ ಇದೆ. ಮಹಾಜನ್ ವರದಿ ರಚನೆಗೆ ಕಾರಣ: ಮುಂಬೈನಲ್ಲಿ 1966ರ ಅಕ್ಟೋಬರ್‌ನಲ್ಲಿ ನಡೆದ ಕಾಂಗ್ರೆಸ್ ಕಾರ್ಯಕಾರಿಣಿ ಸಂದರ್ಭದಲ್ಲಿ ಇಬ್ಬರು ಸ್ವಾತಂತ್ರ್ಯ ಹೋರಾಟಗಾರರು ಬೆಳಗಾವಿಗಾಗಿ ಪಟ್ಟು ಹಿಡಿದು ಉಪವಾಸ ಸತ್ಯಾಗ್ರಹ ನಡೆಸಿದರು. ಆಗ ರಾಜ್ಯದ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ಹಾಗೂ ಮಹಾರಾಷ್ಟ್ರ ಮುಖ್ಯಮಂತ್ರಿ ವಿ.ಪಿ. ನಾಯಕ್ ಅವರೊಂದಿಗೆ ಇಂದಿರಾ ಗಾಂಧಿ ಚರ್ಚೆ ನಡೆಸಿದರು. ಮಹಾಜನ್ ಆಯೋಗ ರಚನೆಯ ಪ್ರಸ್ತಾಪ ಮಾಡಿದರು. ಆಗ ನಿಜಲಿಂಗಪ್ಪ ವಿರೋಧ

ಮಾಡಿದರೂ ಇಂದಿರಾ ಒತ್ತಡಕ್ಕೆ ಒಪ್ಪಿದರು. ಇಬ್ಬರು ಮುಖ್ಯಮಂತ್ರಿಗಳು ಸಹ ಮಹಾಜನ್ ವರದಿಗೆ ಬದ್ಧವಾಗಿರತಕ್ಕದ್ದು ಎಂದೇ ಹೇಳಿದ್ದರು. ಆದರೆ, ಆಯೋಗಕ್ಕೆ ಒಪ್ಪಿದ್ದಕ್ಕಾಗಿ ರಾಜ್ಯದಲ್ಲಿ ನಿಜಲಿಂಗಪ್ಪ ವಿರುದ್ಧ ದೊಡ್ಡ ಪ್ರಮಾಣದ ಹೋರಾಟ ನಡೆದಿತ್ತು.

**ವಿಧಾನಮಂಡಲ ನಿರ್ಣಯ ಯಾವಾಗ?**

- 1967 (ಎಸ್. ನಿಜಲಿಂಗಪ್ಪ ಮುಖ್ಯಮಂತ್ರಿ ಅವಧಿ)
- 1976 (ದೇವರಾಜ ಅರಸು ಮುಖ್ಯಮಂತ್ರಿ ಅವಧಿ)
- 1985 (ರಾಮಕೃಷ್ಣ ಹೆಗಡೆ ಮುಖ್ಯಮಂತ್ರಿ ಅವಧಿ)
- 2006 (ಎಚ್.ಡಿ. ಕುಮಾರಸ್ವಾಮಿ ಮುಖ್ಯಮಂತ್ರಿ ಅವಧಿ)
- 2008 (ಬಿ.ಎಸ್. ಯಡಿಯೂರಪ್ಪ ಮುಖ್ಯಮಂತ್ರಿ ಅವಧಿ)

**ಸಿಎಂಗೆ ಸಲಹೆಗಳೇನು?**

- ಯಾವುದೇ ನಿಲುವು ವ್ಯಕ್ತಪಡಿಸುವ ಮುನ್ನ ಸರ್ವಪಕ್ಷ ಸಭೆ ಕರೆಯಬೇಕು.
- ವಿಧಾನಮಂಡಲ ನಿರ್ಣಯಕ್ಕೆ ವಿರೋಧ ಬೇಡ. ಗಡಿ ವಿವಾದಕ್ಕೆ ಕೇರಳ ಸೇರಿಸಿ.
- ಷಾ ಸಭೆ ನಡೆಸುವಾಗ ಕೇರಳ ಸಿಎಂ ಸಹ ಕರೆಯುವಂತೆ ಒತ್ತಡ.
- ಸಂಸತ್ತಿನ ಸ್ವತ್ತು ಆಗಿರುವ ಮಹಾಜನ್ ವರದಿಯ ಬಗ್ಗೆ ನಿರ್ಧಾರ ಮಾಡುವಂತೆ ಷಾ ಗೆ ಒತ್ತಡ ಹಾಕಲು ಒತ್ತಾಯ.
- ಗಡಿ ವಿಚಾರದಲ್ಲಿ ಸುಪ್ರೀಂಕೋರ್ಟ್‌ಗಿಂತ ಸಂಸತ್‌ಗೆ ಹೆಚ್ಚಿನ ಅಧಿಕಾರ.
- ಫಜಲ್ ಅಲಿ ಆಯೋಗಕ್ಕೆ ಬದ್ಧವಾಗಿರುವಂತೆ ಬೇಕಾದರೂ ಪಟ್ಟು ಹಾಕಲಿ.
- ಶೀಘ್ರ ಗಡಿ ಸಚಿವರ ನೇಮಕವಾಗಲಿ.

**ಬೆಳಗಾವಿ ರಾಜ್ಯ ಕೈ ಬಿಡಲ್ಲ**

ಕೇಂದ್ರ ಸರ್ಕಾರ ಮಹಾಜನ್ ವರದಿ ಅಥವಾ ಫಜಲ್ ಅಲಿ ವರದಿ ಎರಡರಲ್ಲಿ ಯಾವುದನ್ನು ಒಪ್ಪಿದರೂ ಬೆಳಗಾವಿ ಮಾತ್ರ ರಾಜ್ಯದಿಂದ ಕೈ ಬಿಟ್ಟು ಹೋಗುವುದಿಲ್ಲ. ಆದ್ದರಿಂದ ರಾಜ್ಯ ಈ ಎರಡು ಅಂಶಗಳನ್ನು ಬಿಟ್ಟು ಬೇರೆ ಯಾವುದೇ ರೀತಿಯ ಒತ್ತಡಕ್ಕೂ ಮಣಿಯದೇ ನಿಲುವಿನಿಂದ ಹಿಂದೆ ಸರಿಯಬಾರದು ಎಂಬ ಸಲಹೆಗಳು ಇವೆ.

**ಮೂರು ರಾಜ್ಯಗಳ ಸಮಸ್ಯೆ**

ಮಹಾಜನ್ ವರದಿ ಜಾರಿಗೆ ಬರಬೇಕೆಂದು ಕರ್ನಾಟಕ ಮೊದಲಿನಿಂದಲೂ ಪಟ್ಟು ಹಿಡಿದಿದೆ. ಗಡಿ ವಿವಾದ ಕೇವಲ ಕರ್ನಾಟಕ ಮತ್ತು ಮಹಾರಾಷ್ಟ್ರಕ್ಕೆ ಸಂಬಂಧಿಸಿಲ್ಲ. ಕೇರಳವೂ ಸೇರುತ್ತದೆ. ಆದರೆ ಮಹಾರಾಷ್ಟ್ರ ಬೆಳಗಾವಿಗೆ ಪಟ್ಟು ಹಿಡಿದಿದೆ. ಮಹಾರಾಷ್ಟ್ರ ಸಿಎಂ ಏಕನಾಥ ಶಿಂಧೆ ಗಡಿ ವಿವಾದದಿಂದಲೇ ನಾಯಕರಾಗಿ ಬೆಳೆದವರು. ಸಮಸ್ಯೆ ಸದ್ಯಕ್ಕೆ ಬಗೆಹರಿಯುವ ಯಾವ ಲಕ್ಷಣವೂ ಇಲ್ಲ.

**ವರದಿ ಹೇಳುವುದೇನು?**

- ಕರ್ನಾಟಕದ 264 ಹಳ್ಳಿ ಹಾಗೂ ಪಟ್ಟಣ ಮಹಾರಾಷ್ಟ್ರಕ್ಕೆ ಸೇರಬೇಕು.
- ಖಾನಾಪುರ, ನಿಪ್ಪಾಣಿ, ನಂದಘಡ ಮಹಾರಾಷ್ಟ್ರದ ಪಾಲಾಗಬೇಕು.
- ಮಹಾರಾಷ್ಟ್ರದ 247 ಹಳ್ಳಿ ಹಾಗೂ ಪಟ್ಟಣ ಕರ್ನಾಟಕಕ್ಕೆ ಸೇರಬೇಕು
- ಮಹಾರಾಷ್ಟ್ರದ ಜತ್, ದಕ್ಷಿಣ ಸೊಲ್ಲಾಪುರ, ಅಕ್ಕಲಕೋಟೆ, ಕೇರಳದ ಕಾಸರಗೋಡು ಕರ್ನಾಟಕಕ್ಕೆ ಬರಬೇಕು.

ರಾಜ್ಯದ ಗಡಿ ವಿಚಾರದಲ್ಲಿ ಸರ್ಕಾರದ ನಿಲುವು ಸ್ಪಷ್ಟವಾಗಿದೆ. ಯಾವುದೇ ಕಾರಣಕ್ಕೂ ಗಡಿಯ ಒಂದಿಂಚೂ ಬಿಟ್ಟುಕೊಡುವ ಪ್ರಶ್ನೆಯೇ ಇಲ್ಲ. ಈಗಾಗಲೆ ರಾಜ್ಯಗಳು ರಚನೆಯಾಗಿವೆ. ಅದರಲ್ಲಿ ಈಗ ಬದಲಾವಣೆ ಸಾಧ್ಯವಿಲ್ಲ. ರಾಜ್ಯದ ಹಿತ ಕಾಪಾಡಲು ಸರ್ಕಾರ ಬದ್ಧವಾಗಿದೆ.

– ಬಸವರಾಜ ಬೊಮ್ಮಾಯಿ ಮುಖ್ಯಮಂತ್ರಿ

ಆಧಾರ: ವಿಜಯವಾಣಿ, ದಿನಾಂಕ: 13.12.2022

## 3. ಮೇಕೆದಾಟು ಪ್ರಸ್ತಾಪಿಸಿದ ದೇವೆಗೌಡ

ಮೇಕೆದಾಟು ಯೋಜನೆ ಸೇರಿದಂತೆ ರಾಜ್ಯದ ನೀರಾವರಿ ಸಮಸ್ಯೆಗಳ ಬಗ್ಗೆ ರಾಜ್ಯಸಭೆಯಲ್ಲಿ ಪ್ರಸ್ತಾಪಿಸಿದ ಮಾಜಿ ಪ್ರಧಾನಿ ಎಚ್.ಡಿ.ದೇವೇಗೌಡ, ಈ ಸಮಸ್ಯೆಗಳನ್ನು ಬಗೆಹರಿಸಲೇ ಬೇಕು ಎಂದು ಕೇಂದ್ರ ಸರಕಾರವನ್ನು ಒತ್ತಾಯಿಸಿದ್ದಾರೆ.

ಶೂನ್ಯ ವೇಳೆಯಲ್ಲಿ ರಾಜ್ಯದ ಕುಡಿಯುವ ನೀರಿನ ಸಮಸ್ಯೆಗಳ ಕುರಿತು ಪ್ರಸ್ತಾಪಿಸಿ, ಕರ್ನಾಟಕವು ಕುಡಿಯುವ ನೀರಿನ ತೀವ್ರ ಸಮಸ್ಯೆ ಎದುರಿಸುತ್ತಿದೆ. ಇದಕ್ಕಾಗಿ ಸಾಕಷ್ಟು ಸಮಯದಿಂದ ಹೋರಾಟಗಳನ್ನು ನಡೆಸಲಾಗುತ್ತಿದೆ. ಆದರೆ, ಸಮಸ್ಯೆ ಬಗೆಹರಿಯುತ್ತಿಲ್ಲ. ರಾಜ್ಯದಲ್ಲಿ ನೀರಿನ ಮಟ್ಟ ಇಳಿಮುಖವಾಗುತ್ತಲೇ ಇದ್ದು, ಈ ಬಗ್ಗೆ ಕೇಂದ್ರ ಮತ್ತು ರಾಜ್ಯದ ಸರಕಾರಗಳು ಯಾವುದೇ ಕ್ರಮ ಕೈಗೊಳ್ಳುತ್ತಿಲ್ಲ ಎಂದರು.

ಪ್ರಸ್ತುತ ಮೇಕೆದಾಟು ಯೋಜನೆ ಪ್ರಮುಖ ವಿಷಯವಾಗಿದೆ. ಕರ್ನಾಟಕವು ಬೇರೆ ರಾಜ್ಯಗಳಿಗೆ ತೊಂದರೆಯಾಗದಂತೆ ಮತ್ತು ಆ ರಾಜ್ಯದ ಯಾವುದೇ ಭೂಮಿಯನ್ನು ಬಳಸಿಕೊಳ್ಳದೆ ತನ್ನದೇ ಜಾಗದಲ್ಲಿ ಮೇಕೆದಾಟು ಅಣೆಕಟ್ಟು ನಿರ್ಮಿಸಲು ಮುಂದಾಗಿದೆ ಎಂದಾಗ ತಮಿಳುನಾಡಿನ ಸದಸ್ಯರು ಇದಕ್ಕೆ ಆಕ್ಷೇಪ ವ್ಯಕ್ತಪಡಿಸಿದರು. ಇದಕ್ಕೆ ಪ್ರತಿಕ್ರಿಯಿಸಿದ ದೇವೇಗೌಡರು, ಈ ವಿಚಾರದಲ್ಲಿ ಯಾರು ಏನೇ ಮಾತನಾಡುವುದಿದ್ದರೂ ಅವರ ಸಮಯ ಬಂದಾಗ ಮಾತನಾಡಲಿ. ಅವರ ಪ್ರಶ್ನೆಗೆ ಉತ್ತರಿಸಲು ಸಿದ್ಧ. ನಾನು ಸದನದಲ್ಲೇ ಕುಳಿತಿರುತ್ತೇನೆ ಎಂದು ತಿರುಗೇಟು ನೀಡಿದರು.

ಒಂದು ಸಣ್ಣ ಪ್ರದೇಶದಲ್ಲಿ ಯಾರಿಗೂ ತೊಂದರೆಯಾಗದಂತೆ ನಮ್ಮ ಜಾಗದಲ್ಲಿ ಮೇಕೆದಾಟು ಅಣೆಕಟ್ಟು ನಿರ್ಮಿಸಲು ಕರ್ನಾಟಕ ಮುಂದಾದರೆ ಅವರು (ತಮಿಳುನಾಡು) ಅಡ್ಡಿಪಡಿಸುತ್ತಿದ್ದಾರೆ. ಕರ್ನಾಟಕದಲ್ಲಿ ನೀರಿನ ಕೊರತೆ ಇದೆ. ನೀರಾವರಿಗೆ ಸಂಬಂಧಿಸಿದ ಅನೇಕ ವಿಚಾರಗಳು ಕೇಂದ್ರದಲ್ಲಿ ಸಾಕಷ್ಟು ಸಮಯದಿಂದ ಬಾಕಿ ಉಳಿದಿವೆ. ಕರ್ನಾಟಕ ನೀರಾವರಿ ಕೊರತೆ ಇರುವ ರಾಜ್ಯ. ತುಂಗಭದ್ರಾ, ಮಹದಾಯಿ ಸೇರಿದಂತೆ ಹಳೇ ಭಾಗದ ಹಲವು ಯೋಜನೆಗಳು ಅನುಷ್ಠಾನವಾಗಬೇಕಿದೆ. ಹಳೇ ಮೈಸೂರು ಭಾಗದ 9 ಜಿಲ್ಲೆಗಳಲ್ಲಿ ನೀರಿಗೆ ಬೇಡಿಕೊಳ್ಳುವ ಪರಿಸ್ಥಿತಿ ಇದೆ. ಈ ಸಮಸ್ಯೆಗಳನ್ನು ನೋಡಿಯಾದರೂ ಅದನ್ನು ಬಗೆಹರಿಸಲೇ ಬೇಕು. ಪ್ರಮುಖವಾಗಿ ಮಹದಾಯಿ ಮತ್ತಿತರ ಯೋಜನೆಗಳ ಬಗ್ಗೆ ಆದ್ಯತೆ ನೀಡಬೇಕು ಎಂದು ಒತ್ತಾಯಿಸಿದರು. ದೇವೇಗೌಡರು ಇನ್ನೂ ಮಾತು ಮುಂದುವರಿಸಿದರಾದರೂ ಶೂನ್ಯ ವೇಳೆ ಮುಗಿದಿದೆ ಎಂದು ಘೋಷಿಸಿದ ಉಪಸಭಾಪತಿ ಬೇರೆ ವಿಚಾರ ಕೈಗೆತ್ತಿಕೊಂಡರು.

ಆಧಾರ: ವಿಶ್ವವಾಣಿ, ದಿನಾಂಕ: 10.12.2022

## 4. ಎತ್ತಿನಹೊಳೆ ವೆಚ್ಚ ರೂ.23,251 ಕೋಟಿಗೆ ಏರಿಕೆ

ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ವೆಚ್ಚವನ್ನು ರೂ. 23,251.66 ಕೋಟಿಗೆ ಪರಿಷ್ಕರಿಸಿದ್ದು, ಗುರುವಾರ ನಡೆದ ಸಚಿವ ಸಂಪುಟ ಸಭೆ ಪರಿಷ್ಕೃತ ಮೊತ್ತಕ್ಕೆ ಅನುಮೋದನೆ ನೀಡಿದೆ.

ಕಾನೂನು ಮತ್ತು ಸಂಸದೀಯ ಸಚಿವ ಜೆ.ಸಿ.ಮಾಧುಸ್ವಾಮಿ ಅವರು ಸಂಪುಟ ಸಭೆಯ ಬಳಿಕ ಸುದ್ದಿಗೋಷ್ಠಿಯಲ್ಲಿ ಈ ಕುರಿತು ವಿವರ ನೀಡಿದರು.

2012ರಲ್ಲಿ ಯೋಜನೆಯ ಆರಂಭಿಕ ವೆಚ್ಚ ರೂ.8,323.50 ಕೋಟಿ ಇತ್ತು. ಬಳಿಕ ರೂ.12,912.36 ಕೋಟಿಗೆ ಪರಿಷ್ಕರಿಸಲಾಗಿತ್ತು. ಯೋಜನೆಯ ವೆಚ್ಚ ಹೆಚ್ಚಳವಾಗಲು ಸಿವಿಲ್ ಕಾಮಗಾರಿಗಳ ಸಾಮಗ್ರಿಗಳಾದ ಸಿಮೆಂಟ್, ಉಕ್ಕು, ಮರಳು ಮುಂತಾದವುಗಳ ದರ ಹೆಚ್ಚಾಗಿರುವುದು. ಒಂದು ಕಾರಣವಾದರೆ,

ಭೂಸ್ವಾಧೀನಕ್ಕಾಗಿ ಕೊಡಬೇಕಾದ ಪರಿಹಾರ ಮೊತ್ತವೂ ಮಾರ್ಗಸೂಚಿ ದರಕ್ಕಿಂತ ನಾಲ್ಕು ಪಟ್ಟು ಹೆಚ್ಚಾಗಿದೆ. ಇದೇ ಬಹು ದೊಡ್ಡ ಹೊರೆಯಾಗಿದೆ. 2013 ರಲ್ಲಿ ಭೂಸ್ವಾಧೀನ ಕಾಯ್ದೆ ಬಂದ ನಂತರ ಸ್ವಾಧೀನ ವೆಚ್ಚ ಮೂರು ಪಟ್ಟು ಹೆಚ್ಚಾಯಿತು ಎಂದರು.

ಅಲ್ಲದೆ, ದೊಡ್ಡಬಳ್ಳಾಪುರ ಮತ್ತು ಕೊರಟಗೆರೆಗಳಲ್ಲಿ ಭೂಸ್ವಾಧೀನ ವೆಚ್ಚ ವ್ಯತ್ಯಾಸ ಇರುವುದರಿಂದ ಭೂಮಿ ಕೊಡಲು ರೈತರು ಒಪ್ಪುತ್ತಿಲ್ಲ. ತಮಗೂ ಅದೇ ಮೊತ್ತ ನೀಡಬೇಕು ಎಂದು ರೈತರು ಪಟ್ಟು ಹಿಡಿದಿದ್ದಾರೆ ಎಂದು ಮಾಧುಸ್ವಾಮಿ ಹೇಳಿದರು.

ಯಾವುದೇ ಯೋಜನೆಯನ್ನು ನಿಗದಿತ ಸಮಯದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗದೇ ಇದ್ದರೆ ಯೋಜನಾ ವೆಚ್ಚವೂ ಹೆಚ್ಚಾಗುತ್ತಾ ಹೋಗುತ್ತದೆ. ಅಂದಿನ ಖರ್ಚು–ವೆಚ್ಚಕ್ಕೆ ಅನುಗುಣವಾಗಿ ಪರಿಷ್ಕರಣೆ ಮಾಡಲೇಬೇಕಾಗುತ್ತದೆ. 2013 ರ ಭೂಸ್ವಾಧೀನ ಕಾಯ್ದೆಯ ಪರಿಹಾರವನ್ನು ಕೊಟ್ಟು, ನಾವು ಎಷ್ಟೇ ತ್ವರಿತಗತಿಯಲ್ಲಿ ಕಾರ್ಯ ನಿರ್ವಹಿಸಿದರೂ ಸ್ವಾಧೀನಕ್ಕೆ ಆರರಿಂದ ಏಳು ತಿಂಗಳು ಬೇಕಾಗುತ್ತದೆ. ಇವೆಲ್ಲ ಕಾರಣಗಳಿಂದ ಯೋಜನಾ ವೆಚ್ಚ ಸಹಜವಾಗಿ ಹೆಚ್ಚಾಗುತ್ತದೆ. ಈ ಬಗ್ಗೆ ಸಿದ್ದರಾಮಯ್ಯ, ಕುಮಾರಸ್ವಾಮಿ ಯಡಿಯೂರಪ್ಪ, ಯಾರು ಏನೇ ಮಾತನಾಡಿದರೂ ಅಷ್ಟೇ ಎಂದರು.

6 ಟಿಎಂಸಿ ನೀರು ಸಂಗ್ರಹ ಮಾಡುವ ಜಲಾಶಯ ನಿರ್ಮಾಣಕ್ಕೆ ತೊಡಕು ಉಂಟಾಗಿರುವುದರಿಂದ ರೈತರ ಜತೆ ಮಾತುಕತೆ ಮಾಡುವ ಉದ್ದೇಶ ಸರ್ಕಾರಕ್ಕಿದೆ. ಮಾತುಕತೆಯ ಬಳಿಕವೇ ಜಲಾಶಯ ನಿರ್ಮಾಣದ ಬಗ್ಗೆ ತೀರ್ಮಾನ ತೆಗೆದುಕೊಳ್ಳಲಾಗುವುದು ಎಂದು ಮಾಧುಸ್ವಾಮಿ ತಿಳಿಸಿದರು.

**ಶಾಶ್ವತ ಹಂಚಿಕೆ:** ರಾಜ್ಯದ ನಾಲ್ಕೂ ಸಾರಿಗೆ ಸಂಸ್ಥೆಗಳ ದರ್ಜೆ–3 ಮೇಲ್ವಿಚಾರಕ ಸಿಬ್ಬಂದಿ, ದರ್ಜೆ–2 ಮತ್ತು ದರ್ಜೆ–1 (ಕಿರಿಯ ಶ್ರೇಣಿ) ಅಧಿಕಾರಿಗಳನ್ನು ಆಯಾ ಸಾರಿಗೆ ಸಂಸ್ಥೆಗಳಿಗೆ ಶಾಶ್ವತ ಹಂಚಿಕೆ ಮಾಡಿ, ದರ್ಜೆ–1 (ಹಿರಿಯ ಶ್ರೇಣಿ) ಮತ್ತು ಮೇಲ್ಪಟ್ಟ ವೃಂದಗಳ ನಿರ್ವಹಣೆಯನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದಲ್ಲಿ ಮುಂದುವರಿಸಲು ತೀರ್ಮಾನಿಸಲಾಗಿದೆ.

**ಕರ್ನಾಟಕ ಯುವನೀತಿ–22ಕ್ಕೆ ಒಪ್ಪಿಗೆ**

ರಾಜ್ಯದಲ್ಲಿ ಯುವ ಜನರ ಸಮಗ್ರ ಅಭಿವೃದ್ಧಿಯನ್ನು ಸಕ್ರಿಯಗೊಳಿಸುವುದು ಮತ್ತು ರಚನಾತ್ಮಕ ಸಾಮಾಜಿಕ ಬದಲಾವಣೆ ತಂದು ಯುವ ಜನರನ್ನು ಸಶಕ್ತರನ್ನಾಗಿಸುವ ಉದ್ದೇಶ ಹೊಂದಿರುವ ಕರ್ನಾಟಕ ಯುವ ನೀತಿ–22ಕ್ಕೆ ಸಚಿವ ಸಂಪುಟ ಸಭೆ ಒಪ್ಪಿಗೆ ನೀಡಿದೆ.

ಯುವ ನೀತಿ ರೂಪಿಸಲು ರಾಜ್ಯ ಸರ್ಕಾರ ರಚಿಸಿದ್ದ ಡಾ.ಆರ್. ಬಾಲಸುಬ್ರಹ್ಮಣ್ಯಂ ಅಧ್ಯಕ್ಷತೆಯ ಸಮಿತಿಯು ಈ ಕುರಿತು ಶಿಫಾರಸ್ಸು ಮಾಡಿತ್ತು.

ಸಚಿವ ಸಂಪುಟ ಸಭೆಯ ಬಳಿಕ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಕಾನೂನು ಮತ್ತು ಸಂಸದೀಯ ಸಚಿವ ಜೆ.ಸಿ. ಮಾಧುಸ್ವಾಮಿ ಈ ವಿಷಯ ತಿಳಿಸಿದರು. ಯುವ ಜನರ ಸುಸ್ಥಿರ ಅಭಿವೃದ್ಧಿಗಾಗಿ 2030 ರ ಕಾರ್ಯ ಸೂಚಿಯೊಂದಿಗೆ ಯುವ ನೀತಿಯು ಎಂಟು ವರ್ಷಗಳ ಅವಧಿಗೆ ಅಂದರೆ, 2030 ರವರೆಗೆ ಕಾರ್ಯ ನಿರ್ವಹಿಸಲಿದೆ ಎಂದರು.

**ಉದ್ದೇಶಗಳು:**

- ಹೆಚ್ಚು ಹೆಚ್ಚು ವಿದ್ಯಾವಂತರೂ ಮತ್ತು ಪರಿಣಿತ ಯುವ ಜನರನ್ನು ರೂಪಿಸಲು ಶಿಕ್ಷಣ ಮತ್ತು ತರಬೇತಿಯ ಪ್ರತಿ ಹಂತದಲ್ಲಿ ದಾಖಲಾತಿ ಮತ್ತು ಸಾಧನೆಯ ಮಟ್ಟವನ್ನು ಹೆಚ್ಚಿಸುವುದು.
- ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವುದು ಮತ್ತು ಯುವ ಜನರು ಭವಿಷ್ಯದ ಸವಾಲುಗಳನ್ನು ಎದುರಿಸಲು ಸಿದ್ಧಗೊಳಿಸಲು ಅವರಿಗೆ ತರಬೇತಿ ನೀಡುವುದು.
- ಸ್ವಯಂ ಉದ್ಯೋಗವನ್ನು ಪ್ರೋತ್ಸಾಹಿಸಲು ಯುವ ಜನ ಉದ್ಯಮಶೀಲರಿಗೆ/ ಉದ್ಯಮಿಗಳಿಗೆ ಆರ್ಥಿಕ ಬೆಂಬಲ ಮತ್ತು ಮಾರ್ಗದರ್ಶನ ನೀಡುವುದು.
- ಯುವ ಜನರ ಆರೋಗ್ಯ ಮತ್ತು ಯೋಗಕ್ಷೇಮವನ್ನು ಸುಧಾರಿಸಲು ಯುವ ಜನರ ಪೋಷಣೆ, ಲೈಂಗಿಕ ಮತ್ತು ಸಂತಾನೋತ್ಪತ್ತಿ ಆರೋಗ್ಯ ಮತ್ತು ಮಾನಸಿಕ ಆರೋಗ್ಯದ ಮೇಲೆ ಕೇಂದ್ರೀಕರಿಸುವುದು.
- ರಾಜ್ಯದ ಶ್ರೀಮಂತ ಮತ್ತು ವೈವಿಧ್ಯಮಯ ಕಲಾತ್ಮಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಸಂರಕ್ಷಿಸಲು ಯುವ ಜನರಲ್ಲಿ ಅರಿವು ಮೂಡಿಸಲು ಮತ್ತು ತೊಡಗಿಸಿಕೊಳ್ಳಲು ಮಾರ್ಗಗಳನ್ನು / ವಿಧಾನಗಳನ್ನು ಅಭಿವೃದ್ಧಿಪಡಿಸುವುದು.
- ನಾಯಕತ್ವ ಗುಣಗಳನ್ನು ಬೆಳೆಸುವ ಮೂಲಕ ಯುವಜನರು ನಾಗರಿಕ ಮತ್ತು ರಾಜಕೀಯ ಭಾಗವಹಿಸುವಿಕೆಯನ್ನು ಸಕ್ರಿಯಗೊಳಿಸುವುದು.

**ನಾಗರಿಕ ಸೇವಾ ನಿಯಮ ತಿದ್ದುಪಡಿ ಪ್ರಸ್ತಾವ ಮುಂದಕ್ಕೆ**

ಧರ್ಮ, ಜನಾಂಗ, ಪ್ರದೇಶ, ಭಾಷೆ, ಕೋಮುಭಾವನೆಗಳನ್ನು ಕೆರಳಿಸುವ ಸಂಘ–ಸಂಸ್ಥೆ ಮತ್ತು ಸಂಘಟನೆಗಳ ಜೊತೆ ಸರ್ಕಾರಿ ನೌಕರರು ಕೈ ಜೋಡಿಸುವುದನ್ನು ನಿಷೇಧಿಸಲು ಕರ್ನಾಟಕ ರಾಜ್ಯ

ನಾಗರಿಕ ಸೇವಾ (ನಡತೆ) ನಿಯಮಗಳಿಗೆ ತಿದ್ದುಪಡಿ ಮಾಡುವ ವಿಷಯವನ್ನು ಸಂಪುಟ ಸಭೆ ಮುಂದೂಡಿದೆ.

'ಕರಡು ಪ್ರಸ್ತಾವ ಸರಿಯಾಗಿಲ್ಲ. ಕೆಲವು ಸಮಸ್ಯೆಗಳು ಇರುವುದರಿಂದ ಕಾರ್ಯಸೂಚಿಯನ್ನು ಮುಂದಕ್ಕೆ ಹಾಕಲಾಯಿತು' ಎಂದು ಸಚಿವ ಮಾಧುಸ್ವಾಮಿ ತಿಳಿಸಿದರು.

ಜಾತಿ, ಧರ್ಮ, ಭಾಷೆ ಆಧಾರದಲ್ಲಿ ರಚನೆಗೊಂಡ ಸಂಘಟನೆಗಳು, ತಮ್ಮ ಉದ್ದೇಶಗಳ ಈಡೇರಿಕೆಗಾಗಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತವೆ. ಇದು ವಿವಿಧ ಸಮುದಾಯಗಳ ನಡುವೆ ಕೋಮು ದ್ವೇಷ ಮತ್ತು ಅಸೂಯೆಗೆ ಪ್ರಚೋದನೆ ನೀಡುವುದರಿಂದ ನಿಯಮಕ್ಕೆ ತಿದ್ದುಪಡಿ ಮಾಡಲು ಸರ್ಕಾರ ನಿರ್ಧರಿಸಿತ್ತು.

ಆಧಾರ: ಪ್ರಜಾವಾಣಿ, ದಿನಾಂಕ: 09.12.2022

# ಭಾಗ – 6

# ನ್ಯಾಯಾಲಯ ಸುದ್ದಿಗಳು

## 1. 'Quota no solution, it has to end one day'

WITHIN 24 hours after an all-party meeting, the state Cabinet accepted the Justice Nagmohan Das Committee report on increasing reservation for Scheduled Caste and Scheduled Tribe communities. Justice Nagmohan Das in an interview with The New Sunday Express speaks about the challenges and issues of the reservation system Experts.

**The Cabinet has approved your Committee's recommendations,**

**what next?**

One of my recommendations was to formulate a reservation Bill, and request the Union Government to amend the Constitution, include it in the 9th Schedule. There is no need for approval of the Union Government. Irrespective of whether it is include in the 9th Schedule, the state government can implement the Bill immediately. Including it under the 9th Schedule is just a protective measure.

**What are the challenges before the State government?**

There are no challenges but it needs political will to implement. They should bring in a Bill and pass it. I gave the report two years, four months ago and it's been accepted now. Wisdom has prevailed over political parties in Karnataka. All parties unanimously accepted our report.

**How is it in other states**?

Nine states- Madhya Pradesh, Maharashtra, Rajasthan, Punjab, Uttar Pradesh, Uttarakhand, Jharkhand and Tamil nadu have crossed 50 percent reservation.

**Can reservation exceed 50 percent?**

The Supreme Court, in the Indra Sawhney case, put a cap of 50 percent on all reservation, but it can be relaxed in exceptional circumstances. The Union government was giving 49.5 percent reservation to SC, ST and OBC. In 2019, it amended the Constitution and introduced 10 percent reservation for Economically Weaker Sections in General Category. When the Centre can cross 50 percent, why not the State?

**Does reservation reach the beneficiaries**?

Budget allocation is made on the basis of SC/ST population. Today, some SC/STs are not enjoying the fruits of reservation. That is because many of them don't have basic education. Government employment prescribes minimum education and some of them don't have even this qualification. Therefore, the government should focus on their education.

Instead of giving free sites, cattle or loans the government should spend on education of SC/ST communities.

**Will an increase in reservation allow other communities to demand they be included**?

Our report mentions it. Reservation is there for past 75 years. It has benefited a small section, but a large section remains without any benefits. Reservation alone is not the solution. We must think of providing better education and employment opportunities.

**Till when do we need treservation**?

We cannot fix a time for this. Even if the government decides to end reservation today, one cannot see its fruits tomorrow. We have to work on the policy and programme. If we start now we can see abandant changes in the next three or four years. There is a solution for every problem and the government should work towards it. Let us not live with the illusion of getting better through reservation. We need to continue reservation till we reach a particular environment in the country. I say reservation has to come to an end. With cabinet approval, we have taken one step forward to give social justice. But one should not be under the illusion that it will solve all problems.

**How long did it take you to prepare this report?**

In 2019 a committee was constituted during the coalition government but the government collapsed within a week. When the Yediyurappa government took charge, it was reconstituted and we submitted the report on July 21, 2020 as per schedule.

**What was the basis for increasing reservation-two percent for SC and four percent for ST**?

According to population STs alone are eligible for more than 7.5 percent cent reservation and SCs for 18 percent. But the terms of reference were to make it 17 percent from the existing 15 percent for SC and 7 percent from 3 percent for ST. WE have to work within the terms of reference. My hands were tied with the terms of reference.

**Does it not cause injustice to General Category**?

We have suggested to taking it from General Category. By increasing reservation to SC and ST, we will not cause injustice to General Category. SCs, STs and OBCs together constitute 76 percent population of the state the remaining 24 percent is General. It also means 50 percent reservation is given to 76 percent, and remaining 50 percent to 24 percent. We are just trying to balance it.

Courtesy: Indian Express, Dated: 09.10.2022

## 2. ಹಿಜಾಬ್‌ಗೆ ಸುಪ್ರೀಂ ಭಿನ್ನ ನಿಲುವು

ಶಿಕ್ಷಣ ಸಂಸ್ಥೆಗಳಲ್ಲಿ ಹಿಜಾಬ್ ನಿಷೇಧಿಸಿರುವ ಕರ್ನಾಟಕ ಸರ್ಕಾರದ ಆದೇಶ ಹಾಗೂ ಹೈಕೋರ್ಟ್ ತೀರ್ಪನ್ನು ಪ್ರಶ್ನಿಸಿ ಸಲ್ಲಿಸಲಾಗಿದ್ದ ಮೇಲ್ಮನವಿ ಅರ್ಜಿಗಳ ಕುರಿತು ಸುಪ್ರೀಂಕೋರ್ಟ್ ಭಿನ್ನ ನಿಲುವು ತೆಳೆದಿದೆ. ದ್ವಿಸದಸ್ಯ ಪೀಠದ ನ್ಯಾಯಮೂರ್ತಿಗಳ ಮಧ್ಯೆಯೇ ಭಿನ್ನಾಭಿಪ್ರಾಯ ಮೂಡಿದ್ದು, ಕಳೆದೊಂದು ವರ್ಷದಿಂದ ಭಾರಿ ವಿವಾದಕ್ಕೆ ಗ್ರಾಸವಾಗಿರುವ ಹಿಜಾಬ್ ವಿವಾದ ಸದ್ಯದ ಮಟ್ಟಿಗೆ ತಾರ್ತಿಕ ಅಂತ್ಯ ಕಾಣುವಲ್ಲಿ ವಿಫಲವಾಗಿದೆ.

ಹೀಗಾಗಿ ರಾಜ್ಯದ ಶಾಲಾ–ಕಾಲೇಜುಗಳಲ್ಲಿ ಹಿಜಾಬ್ ನಿಷೇಧ ಮುಂದುವರಿಯಲಿದ್ದು, ತ್ರಿಸದಸ್ಯ ಪೀಠದ ತೀರ್ಪಿನವರೆಗೆ ರಾಜ್ಯ ಹೈಕೋರ್ಟ್ ತೀರ್ಪು ಕೂಡ ಜಾರಿಯಲ್ಲಿರುತ್ತದೆ.

ಹಿರಿಯ ನ್ಯಾಯಮೂರ್ತಿ ಹೇಮಂತ್ ಗುಪ್ತಾ ಹಿಜಾಬ್ ನಿಷೇಧಿಸುವ ರಾಜ್ಯ ಸರ್ಕಾರದ ತೀರ್ಮಾನ ಬೆಂಬಲಿಸಿ ತೀರ್ಪು ನೀಡಿದರೆ, ಮತ್ತೋರ್ವ ನ್ಯಾಯಮೂರ್ತಿ ಸುಧಾಂಶು ಧುಲಿಯಾ, ಹೈಕೋರ್ಟ್ ತೀರ್ಪನ್ನು ವಜಾಗೊಳಿಸಿ, ಮುಸ್ಲಿಂ ಹೆಣ್ಣುಮಕ್ಕಳ ವಿದ್ಯಾಭ್ಯಾಸ ಗಮನದಲ್ಲಿಟ್ಟುಕೊಂಡು ಹಿಜಾಬ್ ಧಾರಣೆ ಅವರವರ ಆಯ್ಕೆಗೆ ಬಿಟ್ಟ ವಿಷಯ ಎಂದು ತೀರ್ಪಿನಲ್ಲಿ ಉಲ್ಲೇಖಿಸಿದ್ದಾರೆ. ಪ್ರತ್ಯೇಕ ತೀರ್ಪುಗಳ ಹಿನ್ನೆಲೆಯಲ್ಲಿ ಹಿಜಾಬ್ ಪ್ರಕರಣವನ್ನು ಸುಪ್ರೀಂಕೋರ್ಟ್ ಮುಖ್ಯನ್ಯಾಯಮೂರ್ತಿ ಯು.ಯು.ಲಲಿತ್ ನೇತೃತ್ವದ ನ್ಯಾಯಪೀಠದ ಮುಂದಿರಿಸಲಾಗಿದ್ದು, ಸೂಕ್ತ ನ್ಯಾಯಪೀಠಕ್ಕೆ ಪ್ರಕರಣವನ್ನು ವರ್ಗಾಯಿಸಬಹುದು ಎಂದು ಇಬ್ಬರೂ ಶಿಫಾರಸು ಮಾಡಿದ್ದಾರೆ.

**ಸಿಜೆಐ ಪೀಠಕ್ಕೆ ವರ್ಗಾವಣೆ:** ಹಿಜಾಬ್ ಪ್ರಕರಣವನ್ನು ಸೂಕ್ತ ನ್ಯಾಯಪೀಠಕ್ಕೆ ವರ್ಗಾಯಿಸಿ ಎಂದು ನ್ಯಾಯಮೂರ್ತಿ ಗುಪ್ತಾ ಮತ್ತು ನ್ಯಾಯಮೂರ್ತಿ ಧುಲಿಯಾ ಸಿಜೆಐಗೆ ಶಿಫಾರಸು ಮಾಡಿರುವುದರಿಂದ ಮೂವರು ನ್ಯಾಯ ಮೂರ್ತಿಗಳನ್ನೊಳಗೊಂಡ ತ್ರಿಸದಸ್ಯ ಪೀಠಕ್ಕೆ ಪ್ರಕರಣ ವರ್ಗಾವಣೆಯಾಗಲಿದೆ. ತ್ರಿಸದಸ್ಯ ಪೀಠವನ್ನು ಸಿಜೆಐ ರಚನೆ ಮಾಡಿದ ಬಳಿಕ ವಿಚಾರಣೆ ಮರು ಆರಂಭವಾಗಲಿದೆ. ಹಿಜಾಬ್ ವಿಚಾರದಲ್ಲಿ ಸಾಂವಿಧಾನಿಕ ಪ್ರಶ್ನೆಗಳನ್ನು ಮೊದಲು ನಿರ್ಧರಿಸಬೇಕಿದೆ ಎಂದು ತ್ರಿಸದಸ್ಯ ಪೀಠ ಅಭಿಪ್ರಾಯಪಟ್ಟಲ್ಲಿ, ನಂತರ ಈ ಪ್ರಕರಣ ಸಾಂವಿಧಾನಿಕ ಪೀಠಕ್ಕೆ ವರ್ಗಾವಣೆಯಾಗಬಹುದಷ್ಟೇ.

ಹಿಜಾಬ್ ಧಾರಣೆ ಇಸ್ಲಾಂ ಧರ್ಮದ ಅಗತ್ಯ ಆಚರಣೆ ಎಂಬ ಬಗ್ಗೆ ಸಾಂವಿಧಾನಿಕ ಖಚಿತತೆ ಇಲ್ಲ. ಏಕೆಂದರೆ ದೇಶದಲ್ಲಿ ಎಷ್ಟೋ ಮಂದಿ ಮುಸ್ಲಿಂ ಮಹಿಳೆಯರು ಹಿಜಾಬ್ ಧರಿಸುವುದನ್ನು ವಿರೋಧಿಸುತ್ತಾರೆ ಮತ್ತು ಅದನ್ನು ಧರ್ಮಾಚರಣೆಯ ಭಾಗ ಎಂದು ಪರಿಗಣಿಸಿಲ್ಲ. ಹಿಜಾಬ್ ಅತ್ಯಗತ್ಯ ಆಚರಣೆ ಎಂದಾದಲ್ಲಿ ಧರ್ಮದ ಪ್ರಕಾರ ಎಲ್ಲಾ ಮಹಿಳೆಯರು ಹಿಜಾಬ್ ಧರಿಸುವುದು ಕಡ್ಡಾಯವಾದೀತು. ಹೀಗಾಗಿ ಶಾಲೆಗಳಲ್ಲಿ ಹಿಜಾಬ್ ಬೇಕೇ ಬೇಡವೇ ಎಂಬ ಸೀಮಿತ ವಿಷಯದ ಬಗ್ಗೆ ತ್ರಿಸದಸ್ಯ ಪೀಠ ವಿಚಾರಣೆ ನಡೆಸುವುದೋ ಅಥವಾ ಅದರಾಚೆಗಿನ ಅಂಶಗಳನ್ನು ತೀರ್ಮಾನಿಸಲು ಬಯಸುವುದೋ ಎಂಬುದನ್ನು ಕಾದು ನೋಡಬೇಕು.

ಆಧಾರ:ವಿಜಯ ವಾಣಿ, ದಿನಾಂಕ:14.10.2022

## 3. ನ್ಯಾಯದಾನಕ್ಕೆ ಸಂವಿಧಾನವೇ ತಳಹದಿ

'ನ್ಯಾಯದಾನಕ್ಕೆ ಸಂವಿಧಾನ ತಳಹದಿಯಾಗಬೇಕೇ ಹೊರತು ಧರ್ಮವಲ್ಲ' ಎಂದು ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಪ್ರಸನ್ನ ಬಾಲಚಂದ್ರ ವರಾಳೆ ಅಭಿಪ್ರಾಯಪಟ್ಟರು.

ರಾಜ್ಯ ಹೈಕೋರ್ಟ್‌ಗೆ ನೂತನ ಮುಖ್ಯ ನ್ಯಾಯಮೂರ್ತಿಯಾಗಿ ನೇಮಕಗೊಂಡ ಪಿ.ಬಿ.ವರಾಳೆ ಅವರಿಗೆ ಹೈಕೋರ್ಟ್ ವಕೀಲರ ಸಭಾಂಗಣದಲ್ಲಿ ಬೆಂಗಳೂರು ವಕೀಲರ ಸಂಘದ ವತಿಯಿಂದ ಸ್ವಾಗತಿಸಲಾಯಿತು. ಈ ಸಮಾರಂಭದಲ್ಲಿ ಗೌರವ ಸ್ವೀಕರಿಸಿ ಅವರು ಮಾತನಾಡಿದರು.

'ಯಾರ ಹುಟ್ಟೂ ಅವರ ಕೈಯಲ್ಲಿ ಇರುವುದಿಲ್ಲ. ಔರಂಗಾಬಾದ್ ನನ್ನ ಜೀವನದ ದಿಕ್ಕು ಬದಲಿಸಿದ ಊರು. ನಾನು ವೃತ್ತಿಯಲ್ಲಿ ನಡೆದು ಬಂದ ಹಾದಿಯನ್ನು ಅವಲೋಕಿಸಿಕೊಂಡಾಗ ಆಶ್ಚರ್ಯವಾಗುತ್ತದೆ. ಸಮಾನತೆಯ ಸಂವಿಧಾನ ಕರ್ತೃ ಅಂಬೇಡ್ಕರ್ ಅವರ ಕಾರಣದಿಂದ ನಾನಿಂದು ಈ ಸ್ಥಾನದಲ್ಲಿ ನಿಂತಿದ್ದೇನೆ' ಎಂದು ಬಿ.ಆರ್.ಅಂಬೇಡ್ಕರ್ ಅವರ ಜೊತೆ ನಿಕಟವಾಗಿದ್ದ ತಮ್ಮ ಅಜ್ಜ ಮತ್ತು ತಂದೆಯನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡರು.

'ಭಾಷೆ ಮತ್ತು ನೆಲದ ದೃಷ್ಟಿಯಿಂದ ನಾನು ಮಹಾರಾಷ್ಟ್ರದ ಮೂಲ ಹೊಂದಿದ್ದರೂ ಕನ್ನಡವನ್ನು ತಕ್ಕಮಟ್ಟಿಗೆ ಬಲ್ಲೆ. ಎರಡೂ ರಾಜ್ಯಗಳ ಬಾಂಧವ್ಯ ಅನನ್ಯವಾದುದು. ಇದಕ್ಕೆ ತನ್ನದೇ ಆದ ಇತಿಹಾಸವಿದೆ. ಬೆಂಗಳೂರು ವಕೀಲರ ಸಂಘ ಪುಷ್ಪವನವಿದ್ದಂತೆ. ಈ ಸಂಘದ ಪರಿಮಳದಲ್ಲಿ ನ್ಯಾಯ ತತ್ವಗಳ ಆಧಾರದಲ್ಲಿ ನಾನು ಕೆಲಸ ಮಾಡುತ್ತೇನೆ' ಎಂದರು.

'ಕಿರಿಯ ವಕೀಲರು ಇಂದು ತಂತ್ರಜ್ಞಾನ ಆಧಾರಿತ ವೃತ್ತಿಪರರಾಗಿದ್ದಾರೆ. ಹಿರಿಯ ವಕೀಲರಿಂದ ಮಾರ್ಗದರ್ಶನ ಪಡೆಯುವ ಮೂಲಕ ಅವರು ಹೆಚ್ಚಿನ ಸಾಧನೆ ಮಾಡಬೇಕು' ಎಂದು ವರಾಳೆ ಆಶಿಸಿದರು.

ವರಾಳೆ ಅವರನ್ನು ಸನ್ಮಾನಿಸಿ ಮಾತನಾಡಿದ ಸಂಘದ ಅಧ್ಯಕ್ಷ, ಹಿರಿಯ ವಕೀಲ ವಿವೇಕ ಸುಬ್ಬಾರೆಡ್ಡಿ 'ಕರ್ನಾಟಕ–ಮಹಾರಾಷ್ಟ್ರ ನಡುವೆ ಗಡಿ ಎಂಬುದಿಲ್ಲ. ಅಷ್ಟೊಂದು ಸೌಹಾರ್ದ ಸಂಬಂಧ ಎರಡೂ ರಾಜ್ಯಗಳ ಜೊತೆ ಇದೆ. ಈ ಹಿಂದಿನ ಅತ್ಯುತ್ತಮ ಮುಖ್ಯ ನ್ಯಾಯಮೂರ್ತಿಗಳಂತೆಯೇ ವರಾಳೆ ಅವರೂ ತಮ್ಮದೇ ಆದ ಛಾಪು ಮೂಡಿಸಲಿ ಎಂದು ಸಂಘ ಬಯಸುತ್ತದೆ' ಎಂದರು.

ಅಡ್ವೊಕೇಟ್ ಜನರಲ್ ಪ್ರಭುಲಿಂಗ ಕೆ.ನಾವದಗಿ, 'ನೀವೂ ನಮ್ಮೊಳಗೊಬ್ಬರಿದ್ದಂತೆ' ಎಂದರು. ಈ ಕಾರ್ಯಕ್ರಮಕ್ಕೂ ಮೊದಲಿಗೆ ಕೋರ್ಟ್ ಹಾಲ್ ಸಂಖ್ಯೆ 1 ರಲ್ಲಿ ರಾಜ್ಯ ವಕೀಲರ ಪರಿಷತ್ ವತಿಯಿಂದ ಅಧ್ಯಕ್ಷ ಮೋತಕಪಲ್ಲಿ ಕಾಶಿನಾಥ್ ಸ್ವಾಗತಿಸಿದರು.

ಆಧಾರ:ಪ್ರಜಾವಾಣಿ, ದಿನಾಂಕ:18.10.2022

## 4. ಅಂಗವಿಕಲರಿಗೆ ಹುದ್ದೆ ಪರಿಶೀಲಿಸಲು ಸೂಚನೆ

ನಾಗರಿಕ ಸೇವೆಯ ವಿವಿಧ ಹುದ್ದೆಗಳಿಗೆ ಅಂಗವಿಕಲರನ್ನು ಹೇಗೆ ನಿಯೋಜಿಸಬಹುದು ಎಂಬುದನ್ನು ಪರಿಶೀಲಿಸುವಂತೆ ಕೇಂದ್ರ ಸರ್ಕಾರಕ್ಕೆ ಸುಪ್ರೀಂಕೋರ್ಟ್ ಸೂಚಿಸಿದೆ.

ಉದ್ಯೋಗಾವಕಾಶದಲ್ಲಿ ಅಂಗವೈಕಲ್ಯದವರಿಗೆ ಸಹಾನುಭೂತಿಯು ಒಂದು ಅಂಶ. ಆದರೆ ನಿರ್ಧಾರದ ಪ್ರಾಯೋಗಿಕತೆಯನ್ನು ಗಣನೆಗೆ ತೆಗೆದುಕೊಳ್ಳಬೇಕು. ಇಂತಹ ಅಭ್ಯರ್ಥಿಗಳು ಎಲ್ಲ ವಿಭಾಗಗಳಿಗೆ ಹೊಂದಿಕೆಯಾಗದಿರಬಹುದು ಎಂದು ನ್ಯಾಯಮೂರ್ತಿಗಳಾದ ಎಸ್.ಎ ನಜೀರ್ ಮತ್ತು ವಿ.ರಾಮಸುಬ್ರಮಣಿಯನ್ ಅವರಿದ್ದ ಪೀಠ ಹೇಳಿದೆ. ಕೇಂದ್ರದ ಪರ ವಾದ ಮಂಡಿಸಿದ ಅಟಾರ್ನಿ ಜನರಲ್ ಆರ್. ವೆಂಕಟ್ರಮಣಿ, ಸರ್ಕಾರ ಈ ಬಗ್ಗೆ ಪರಿಶೀಲನೆ ನಡೆಸುತ್ತಿದ್ದು, ಕಾಲಾವಕಾಶ ನೀಡಬೇಕೆಂದು ಕೋರಿದರು. ಕೋರ್ಟ್, 8 ವಾರಗಳ ಅವಕಾಶ ನೀಡಿದೆ.

**ಚಂದ್ರಚೂಡ್ ವಿರೋಧಿಸಿದ್ದ ಅರ್ಜಿ ವಜಾ:** ಹಿರಿಯ ನ್ಯಾಯಮೂರ್ತಿ ಡಿ.ವೈ.ಚಂದ್ರಚೂಡ್ 9ರಂದು ದೇಶದ 50ನೇ ಮುಖ್ಯ ನ್ಯಾಯಮೂರ್ತಿಯಾಗಿ (ಸಿಜೆಐ) ಪ್ರಮಾಣ ವಚನ ಸ್ವೀಕರಿಸುವುದನ್ನು ತಡೆಯಬೇಕೆಂದು ಕೋರಿದ್ದ ಅರ್ಜಿಯನ್ನು ಸುಪ್ರೀಂಕೋರ್ಟ್ ವಜಾಗೊಳಿಸಿದೆ.

ಮುಖ್ಯ ನ್ಯಾಯಮೂರ್ತಿ ಯು. ಯು. ಲಲಿತ್ ಮತ್ತು ನ್ಯಾಯಮೂರ್ತಿಗಳಾದ ಎಸ್ ಆರ್ ಭಟ್ ಮತ್ತು ಬೇಲಾ ಎಂ. ತ್ರಿವೇದಿ ಅವರಿದ್ದ ಪೀಠವು, ಇದನ್ನು ಪರಿಗಣಿಸಲು ಯಾವುದೇ ಸಕಾರಣ ಇಲ್ಲ. ತಪ್ಪಾಗಿ ಗ್ರಹಿಸಿಕೊಂಡು ಅರ್ಜಿಯನ್ನು ಸಲ್ಲಿಸಲಾಗಿದೆ. ಆದ್ದರಿಂದ ಅದನ್ನು ವಜಾಗೊಳಿಸಲಾಗಿದೆ ಎಂದು ತಿಳಿಸಿದೆ. ಅಧಿಕಾರ ದುರುಪಯೋಗ ಮಾಡಿಕೊಂಡಿರುವ ನ್ಯಾ. ಚಂದ್ರಚೂಡ್ ಸಿಜೆಐ ಆಗಿ ಪ್ರಮಾಣ ವಚನ ಸ್ವೀಕರಿಸುವುದನ್ನು ತಡೆಯಬೇಕೆಂದು ಮುರ್ಸಲಿನ್ ಅಸಿಜಿತ್ ಶೇಖ್ ಅರ್ಜಿ ಸಲ್ಲಿಸಿದ್ದರು.

**ಗಂಭೀರ ಅಪರಾಧ:** ಮಕ್ಕಳ ವಿರುದ್ಧದ ಲೈಂಗಿಕ ದೌರ್ಜನ್ಯವನ್ನು ವರದಿ ಮಾಡದಿರುವುದು ಕೂಡ ಗಂಭೀರ ಅಪರಾಧ ಎಂದು ಸುಪ್ರೀಂಕೋರ್ಟ್ ಹೇಳಿದೆ. ಇದು ಅಧಿಕಾರಿಗಳನ್ನು ರಕ್ಷಿಸುವ ಉದ್ದೇಶ ಎಂದಿರುವ ಪೀಠ, ಬಾಂಬೆ ಹೈಕೋರ್ಟ್‌ನ ತೀರ್ಪನ್ನು ವಜಾ ಮಾಡಿದೆ. ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಬಾಲಕಿಯನ್ನು ಪರೀಕ್ಷಿಸಿದ ವೈದ್ಯಾಧಿಕಾರಿ ಅದನ್ನು ಕಾನೂನು ಪಾಲನಾ ಇಲಾಖೆಗೆ ವರದಿ ಮಾಡಿರಲಿಲ್ಲ. ಅವರ ವಿರುದ್ಧ ಎಫ್ಐಆರ್ ದಾಖಲಾಗಿತ್ತು. ಅದನ್ನು ಬಾಂಬೆ ಹೈಕೋರ್ಟ್ ರದ್ದುಗೊಳಿಸಿತ್ತು.

**ಭ್ರಷ್ಟಾಚಾರ ಗ್ರಹಿಕೆ ಕುರಿತ ಪಿಐಎಲ್ ವಜಾ**

ಜಾಗತಿಕ ಭ್ರಷ್ಟಾಚಾರ ಗ್ರಹಿಕೆ ಸೂಚ್ಯಂಕದಲ್ಲಿ ಭಾರತದ ಕಳಪೆ ಶ್ರೇಯಾಂಕದ ಸುಧಾರಣೆಗೆ ಸಲಹೆ ನೀಡಲು ತಜ್ಞರ ಸಮಿತಿ ರಚಿಸುವಂತೆ ಕೇಂದ್ರ, ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ನಿರ್ದೇಶನ ನೀಡುವಂತೆ ಕೋರಿದ್ದ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಸುಪ್ರೀಂಕೋರ್ಟ್ ತಿರಸ್ಕರಿಸಿದೆ.

ಆಧಾರ: ವಿಶ್ವವಾಣಿ, ದಿನಾಂಕ: 03.11.2022

## 5. ಅನಿರ್ದಿಷ್ಟಾವಧಿ ಮೀಸಲಾತಿ ಬೇಡ

ಮೀಸಲಾತಿಯನ್ನು ಅನಿರ್ಧಿಷ್ಟಾವಧಿಗೆ ಮುಂದುವರಿಸುವುದನ್ನು ವಿರೋಧಿಸಿರುವ ನ್ಯಾ. ಜೆ.ಬಿ. ಪರ್ದೀವಾಲಾ ತಮ್ಮ 117 ಪುಟಗಳ ತೀರ್ಪಿನಲ್ಲಿ ಅಭಿವೃದ್ಧಿ ಮತ್ತು ಶಿಕ್ಷಣದ ಹರಡುವಿಕೆಯಿಂದಾಗಿ ವಿವಿಧ ವರ್ಗಗಳ ನಡುವಿನ ಕಂದಕ ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗಿದೆ. ಹೆಚ್ಚಿನ ಶೇಕಡಾವಾರು ಹಿಂದುಳಿದ ವರ್ಗದ ಸದಸ್ಯರು ಶಿಕ್ಷಣ ಮತ್ತು ಉದ್ಯೋಗದ ಸ್ವೀಕಾರಾರ್ಹ ಗುಣಮಟ್ಟ ಸಾಧಿಸುವುದರಿಂದ, ಅವರನ್ನು ಹಿಂದುಳಿದ ವರ್ಗಗಳಿಂದ ತೆಗೆದುಹಾಕಬೇಕು. ಇದರಿಂದ ನಿಜವಾಗಿ ಯಾರಿಗೆ ಮೀಸಲಾತಿ ಅಗತ್ಯವಿದೆಯೋ ಅವರಿಗೆ ಸಹಾಯ ಮಾಡಲು ಗಮನಹರಿಸಬಹುದು ಎಂಬ ಮಹತ್ವದ ಅಭಿಪ್ರಾಯ ಹೊರಹಾಕುದ್ದಾರೆ.

ಹಿಂದುಳಿದ ವರ್ಗಗಳ ಗುರುತಿಸುವಿಕೆ ಮತ್ತು ನಿರ್ಣಯದ ವಿಧಾನವನ್ನು ಪುನರ್ ಪರಿಶೀಲಿಸುವುದು, ಹಿಂದುಳಿದ ವರ್ಗಗಳ ಅಂತಹ ವರ್ಗೀಕರಣಕ್ಕೆ ಅನ್ವಯಿಸುವ ಮಾನದಂಡಗಳು

ಈಗಿನ ಸನ್ನಿವೇಶದಲ್ಲಿ ಪ್ರಸ್ತುತವಾಗಿದೆಯೇ ಎನ್ನುವುದನ್ನು ಖಚಿತಪಡಿಸಿಕೊಳ್ಳುವ ಅಗತ್ಯವಿದೆ. ಬಾಬಾ ಸಾಹೇಬ್ ಅಂಬೇಡ್ಕರ್ ಅವರು 10 ವರ್ಷಗಳವರೆಗೆ ಮಾತ್ರ ಮೀಸಲಾತಿ ಪರಿಚಯಿಸಿ ಸಾಮಾಜಿಕ ಸಾಮರಸ್ಯ ತರುವ ಉದ್ದೇಶ ಹೊಂದಿದ್ದರು. ಆದರೆ, ಏಳು ದಶಕಗಳ ನಂತರವೂ ಇದು ಮುಂದುವರಿದಿದೆ. ಮೀಸಲಾತಿ ಅನಿರ್ದಿಷ್ಟಾವಧಿಗೆ ಮುಂದುವರಿದು ಪಟ್ಟಭದ್ರರ ಹಿತಾಸಕ್ತಿಗೆ ಕಾರಣವಾಗಬಾರದು ಎಂದ ಅವರು, 10% ಮೀಸಲಾತಿಯು ಜಾತಿ ಆಧಾರಿತ ಮೀಸಲಾತಿಯನ್ನು ತೆಗೆದು ಹಾಕುವ ಪ್ರಕ್ರಿಯೆಯ ಮೊದಲ ಹೆಜ್ಜೆ. 103ನೇ ತಿದ್ದುಪಡಿಯು ಜಾತಿ ರಹಿತ ಸಮಾಜದ ಸಾಂವಿಧಾನಿಕ ಗುರಿಯೊಂದಿಗೆ ಸಮನ್ವಯಗೊಳಿಸುತ್ತದೆ ಎಂದು ಸಮರ್ಥಿಸಿದ್ದಾರೆ.

ಸಂವಿಧಾನದ 46ನೇ ವಿಧಿಯಲ್ಲಿ ಬಳಸಲಾದ ದುರ್ಬಲ ವರ್ಗಗಳು ಎಂಬ ಪದವನ್ನು ಕೇವಲ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೀಮಿತಗೊಳಿಸಲಾಗದು. ದುರ್ಬಲ ವರ್ಗಗಳು ಎಂಬ ಪದದ ಅರ್ಥವನ್ನು ಪರಿಶಿಷ ಜಾತಿ ಮತ್ತು ಪರಿಶಿಷ್ಟ ಪಂಗಡ ಅಥವಾ ಹಿಂದುಳಿದ ವರ್ಗಗಳಿಗೆ ಮಾತ್ರ ಸೀಮಿತಗೊಳಿಸಿದರೆ, ಇತರೆ ನಾಗರಿಕ ದುರ್ಬಲ ವರ್ಗಗಳನ್ನು ಯಾವುದೇ ರಕ್ಷಣೆಯಿಲ್ಲದೆ ಶೋಷಣೆಗೆ ಮುಕ್ತಗೊಳಿಸುತ್ತದೆ. ಆರ್ಥಿಕ ದುರ್ಬಲರ ಮೀಸಲಾತಿಯು ಅಂತ್ಯವಲ್ಲ. ಅದು ಸಾಮಾಜಿಕ ಮತ್ತು ಆರ್ಥಿಕ ನ್ಯಾಯವನ್ನು ಭದ್ರಪಡಿಸುವ ಸಾಧನ. ಅದು ಪಟ್ಟಭದ್ರ ಹಿತಾಸಕ್ತಿಯಾಗಲು ಅವಕಾಶ ನೀಡಬಾರದು ಎಂದು ನ್ಯಾ.ಪರ್ದೀವಾಲಾ ತೀರ್ಪು ನೀಡಿದ್ದಾರೆ.

ದುರ್ಬಲ ವರ್ಗಗಳ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಹಿಂದುಳಿದಿರುವಿಕೆಗೆ ಕಾರಣವಾದ ಅಂಶಗಳನ್ನು ಪತ್ತೆ ಹಚ್ಚಿ ಅವುಗಳನ್ನು ಅಂತ್ಯಗೊಳಿಸುವುದರಲ್ಲಿ ನೈಜ ಪರಿಹಾರವಿದೆ. ಇಂಥದ್ದೊಂದು ಪ್ರಯತ್ನ ಸ್ವಾತಂತ್ರ್ಯ ಸಿಕ್ಕ ತಕ್ಷಣದಿಂದಲೇ ಪಾರಂಭವಾಗಿದೆ. ಆದರೆ ಏಳು ದಶಕಗಳ ನಂತರವೂ ಅದಿನ್ನೂ ಮುಂದುವರಿದಿರುವುದು ವಿಪರ್ಯಾಸ ಎಂದು ಬೇಸರ ಹಂಚಿಕೊಂಡಿದಾರೆ.

ಸಾಮಾಜಿಕ ನ್ಯಾಯಕ್ಕಾಗಿ ಶತಮಾನಗಳಿಂದ ನಡೆಸುತ್ತಿದ್ದ ಹೋರಾಟಕ್ಕೆ ಸುಪ್ರೀಂಕೋರ್ಟ್ ತೀರ್ಪಿನಿಂದ ಸೋಲಾಗಿದೆ. ತಮಿಳುನಾಡಿನ ರಾಜಕೀಯ ಪಕ್ಷಗಳು ಮತ್ತು ಎಲ್ಲಾ ಸಮಾನ ಮನಸ್ಕ ಸಂಘಟನೆಗಳು ಸಾಮಾಜಿಕ ನ್ಯಾಯವನ್ನು ರಕ್ಷಿಸಲು ಒಗ್ಗೂಡಬೇಕು ಮತ್ತು ಈ ದನಿಯು ದೇಶದಾದ್ಯಂತ ಮೊಳಗಬೇಕು.

ಎಂ.ಕೆ. ಸ್ಟಾಲಿನ್, ತಮಿಳುನಾಡಿನ ಮುಖ್ಯಮಂತ್ರಿ.

ಆರ್ಥಿಕ ದುರ್ಬಲರಿಗೆ ಮೀಸಲಾತಿ ನೀಡಿದ್ದರ ಕಾನೂನು ಬದ್ಧತೆಯನ್ನು ಸುಪ್ರೀಂಕೋರ್ಟ್ ಎತ್ತಿಹಿಡಿದಿದೆ. ಇದು ಪ್ರಧಾನಿ ನರೇಂದ್ರ ಮೋದಿಯವರ ಗರೀಬ್ ಕಲ್ಯಾಣದ ದೂರದೃಷ್ಟಿಗೆ ಸಿಕ್ಕ ಮತ್ತೊಂದು ಕ್ರೆಡಿಟ್. ಇದು ಸಾಮಾಜಿಕ ನ್ಯಾಯದ ದಿಕ್ಕಿನಲ್ಲಿ ಸಾಗಲು ಸಿಕ್ಕ ಮತ್ತೊಂದೂ ಪ್ರೋತ್ಸಾಹದಾಯಕ ಬೆಳವಣಿಗೆ.

ಬಿ.ಎಲ್. ಸಂತೋಷ್, ಬಿಜೆಪಿ ರಾಷ್ಟ್ರೀಯ ಸಂಘಟನಾ ಕಾರ್ಯದರ್ಶಿ.

2005–06ರಲ್ಲಿ ಮಾಜಿ ಪ್ರಧಾನಿ ಮನಮೋಹನ್ ಸಿಂಗ್ ನೇತೃತ್ವದ ಯುಪಿಎ ಸರ್ಕಾರವು ಸಿನ್ಹೋ ಆಯೋಗ ರಚನೆ ಮಾಡುವುದರ ಮೂಲಕ ಇಡಬ್ಲ್ಯೂಎಸ್ ಮೀಸಲಾತಿ ಪ್ರಕ್ರಿಯೆ ಆರಂಭಕ್ಕೆ ನಾಂದಿ ಹಾಡಿತ್ತು. 2010ರಲ್ಲಿ ಈ ಸಮಿತಿ ವರದಿ ನೀಡಿತ್ತು. ನಂತರ ವ್ಯಾಪಕ ಸಮಾಲೋಚನೆಗಳನ್ನು ನಡೆಸಲಾಯಿತು ಮತ್ತು 2014ರ ವೇಳೆಗೆ ಮಸೂದೆ ಸಿದ್ಧವಾಯಿತು. ಮಸೂದೆಯನ್ನು ಜಾರಿಗೆ ತರಲು ಮೋದಿ ಸರ್ಕಾರಕ್ಕೆ ಐದು ವರ್ಷಗಳು ಬೇಕಾದವು

ಜೈರಾಮ್ ರಮೇಶ್, ಕಾಂಗ್ರೆಸ್ ಸಂವಹನ ವಿಭಾಗ ಮುಖ್ಯಸ್ಥ

ದೇಶದ ಬಡವರಿಗೆ ಸಾಮಾಜಿಕ ನ್ಯಾಯ ಒದಗಿಸುವ ಮಿಷನ್‌ನಲ್ಲಿ ಪ್ರಧಾನಿ ನರೇಂದ್ರ ಮೋದಿಯವರಿಗೆ ವಿಜಯವಾಗಿದೆ. ಸುಪ್ರೀಂಕೋರ್ಟ್ ಜಾತಿವಾದಿ ಎಂದು ಕಾಂಗ್ರೆಸ್ ನಾಯಕ ಉದಿತ್

ರಾಜ್ ಆರೋಪಿಸಿದ್ದಾರೆ. ಇದು ವಿರೋಧ ಪಕ್ಷದ ಬಡವರ ವಿರೋಧಿ ಮನಸ್ಥಿತಿಯನ್ನು ಬಹಿರಂಗಪಡಿಸಿದೆ.

ಗೌರವ್ ಭಾಟಿಯಾ, ಬಿಜೆಪಿ ರಾಷ್ಟ್ರೀಯ ವಕ್ತಾರ.

**ಸಾಂವಿಧಾನಿಕ ಪ್ರಶ್ನೆ:** ಸುಪ್ರೀಂಕೋರ್ಟ್ ನಿರ್ದೇಶನದಂತೆ ಮಾಜಿ ಅಟಾರ್ನಿ ಜನರಲ್ ಕೆ.ಕೆ. ವೇಣುಗೋಪಾಲ್ ಅವರು ಮೂರು ಪ್ರಮುಖ ಸಾಂವಿಧಾನಿಕ ಪ್ರಶ್ನೆಗಳನ್ನು ರೂಪಿಸಿ, ಈ ಬಗ್ಗೆ ಸುಪ್ರೀಂಕೋರ್ಟ್ ತೀರ್ಪು ನೀಡಬಹುದು ಎಂದು ತಿಳಿಸಿದ್ದರು. ಈ ಪ್ರಶ್ನೆಗಳಿಗೆ ನ್ಯಾಯಾಪೀಠ ವಿಸ್ತೃತವಾದ ಉತ್ತರವನ್ನು ತೀರ್ಪಿನಲ್ಲಿ ನೀಡಿದೆ. ಪ್ರಶ್ನೆಗಳು ಹೀಗಿದ್ದವು:

- ಆರ್ಥಿಕ ಮಾನದಂಡಗಳ ಆಧಾರದ ಮೇಲೆ ಮೀಸಲಾತಿ ಸೇರಿದಂತೆ ವಿಶೇಷ ನಿಬಂಧನೆಗಳನ್ನು ಮಾಡಲು ಸರ್ಕಾರಕ್ಕೆ ಅನುಮತಿ ನೀಡುವ 103ನೇ ಸಂವಿಧಾನದ ತಿದ್ದುಪಡಿಯು ಸಂವಿಧಾನದ ಮೂಲ ರಚನೆಯನ್ನು ಉಲ್ಲಂಘಿಸುತ್ತದೆಯೇ.
- 103ನೇ ಸಂವಿಧಾನ ತಿದ್ದುಪಡಿಯು ಖಾಸಗಿ ಅನುದಾನರಹಿತ ಸಂಸ್ಥೆಗಳ ಪ್ರವೇಶಕ್ಕೆ ಸಂಬಂಧಿಸಿದಂತೆ ವಿಶೇಷ ನಿಬಂಧನೆಗಳನ್ನು ರೂಪಿಸಲು ಸರ್ಕಾರಕ್ಕೆ ಅನುಮತಿ ನೀಡುವ ಮೂಲಕ ಸಂವಿಧಾನದ ಮೂಲ ರಚನೆಗೆ ಅಡ್ಡಿಯುಂಟು ಮಾಡುತ್ತದೆಯೇ
- 103ನೇ ಸಂವಿಧಾನ ತಿದ್ದುಪಡಿಯು ಎಸ್ಇಬಿಸಿ/ಒಬಿಸಿ/ಎಸ್ಸಿ/ಎಸ್ಟಿಗಳನ್ನು ಇಡಬ್ಲ್ಯೂಎಸ್ ಮೀಸಲಾತಿ ವ್ಯಾಪ್ತಿಯಿಂದ ಹೊರಗಿಡುವುದರಿಂದ ಸಂವಿಧಾನದ ಮೂಲ ರಚನೆಗೆ ಹಾನಿಯಾಗುತ್ತದೆಯೇ

**ಸಮಾಜದ ಹಿತಾಸಕ್ತಿ ಮುಖ್ಯ:** ದೇಶದಲ್ಲಿ ಸಂವಿಧಾನ ಅಸ್ತಿತ್ವಕ್ಕೆ ಬಂದ 50 ವರ್ಷಗಳಲ್ಲಿ ಮೀಸಲಾತಿಯಿಂದ ಏನನ್ನು ಸಾಧಿಸಬೇಕಿತ್ತೋ ಅದನ್ನು ಸಾಧಿಸಲು ನಮ್ಮಿಂದ ಸಾಧ್ಯವಾಗಿಲ್ಲ ಎಂದು ನ್ಯಾ ಬೇಲಾ ತ್ರೀವೇದಿ ವಿಷಾದ ವ್ಯಕ್ತಪಡಿಸಿದ್ದು, ಸ್ವಾತಂತ್ರ್ಯದ ಎಪ್ಪತ್ತೈದು ವರ್ಷ ಪೂರ್ಣಗೊಂಡ ಸಮಯದಲ್ಲಾದರೂ, ಪರಿವರ್ತನೆಯ ಸಾಂವಿಧಾನಿಕತೆಯತ್ತ ನಾವು ಹೆಜ್ಜೆ ಇಡಬೇಕಿದೆ. ಒಟ್ಟಾರೆ ಸಮಾಜದ ಹಿತಾಸಕ್ತಿ ದೃಷ್ಟಿಯಿಂದ ಮೀಸಲಾತಿ ವ್ಯವಸ್ಥೆಯನ್ನು ನಾವು ಮರುಪರಿಶೀಲಿಸಬೇಕಾಗಿದೆ ಎಂದು ಒತ್ತಿ ಹೇಳಿದ್ದಾರೆ. ಆರ್ಥಿಕ ದುರ್ಬಲರ ಮೀಸಲಾತಿ ಪ್ರಕರಣದಲ್ಲಿ ಕೇಂದ್ರ ಸರ್ಕಾರದ ಸಂವಿಧಾನದ 103ನೇ ತಿದ್ದುಪಡಿ ಬೆಂಬಲಿಸಿ ತೀರ್ಪು ನೀಡಿರುವ ಅವರು, ಸಂವಿಧಾನದ 334ನೇ ವಿಧಿಯನ್ನು ಉಲ್ಲೇಖಿಸಿ, ಸಂವಿಧಾನದ ಪ್ರಾರಂಭದಿಂದ ಎಂಭತ್ತೂ ವರ್ಷ ಪೂರ್ಣಗೊಳ್ಳುವ ವೇಳೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸಂಸತ್ತು ರಾಜ್ಯ ವಿಧಾನಸಭೆಗಳಲ್ಲಿ ಸ್ಥಾನಗಳ ಮೀಸಲಾತಿ ನಿಲ್ಲಿಸುವ ಬಗ್ಗೆ ಆಲೋಚಿಸಬೇಕು. ಸಂಸತ್ತಿನಲ್ಲಿ ಮತ್ತು ಶಾಸಕಾಂಗ ಸಭೆಗಳಲ್ಲಿ ಆಂಗ್ಲೋ–ಇಂಡಿಯನ್ ಸಮುದಾಯದ ಪ್ರಾತಿನಿಧ್ಯವು 2020ರಲ್ಲಿ ನಿಲ್ಲಿಸಲಾಗಿದೆ. ಸಂವಿಧಾನದ 15 ಮತ್ತು 16ನೇ ವಿಧಿಯಲ್ಲಿ ಒದಗಿಸಲಾದ ಮೀಸಲಾತಿ ಮತ್ತು ಪ್ರಾತಿನಿಧ್ಯಗಳಿಗೆ ಸಂಬಂಧಿಸಿದಂತೆ ಇದೇ ರೀತಿಯ ಕಾಲಮಿತಿಯನ್ನು ಸೂಚಿಸಿದರೆ, ಸಮಾನತೆ, ಜಾತಿರಹಿತ, ವರ್ಗರಹಿತ ಸಮಾಜಕ್ಕೆ ದಾರಿ ಮಾಡಕೊಡಬಹುದು ಎಂದು ಅಭಿಪ್ರಾಯಪಟ್ಟಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:06.11.2022

## 6. EWS ಮೀಸಲಿಗೆ YES

ಆರ್ಥಿಕವಾಗಿ ಹಿಂದುಳಿದ ವರ್ಗದವರು (ಎಕನಾಮಿಕಲಿ ವೀಕರ್ ಸೆಕ್ಷನ್–ಇಡಬ್ಲ್ಯೂಎಸ್) ಉದ್ಯೋಗ ಮತ್ತು ಶಿಕ್ಷಣದಲ್ಲಿ 10% ಮೀಸಲು ಪಡೆಯಲು ಹಾದಿ ಸುಗಮವಾಗಿದೆ. ಹಾಲಿ

ಎಸ್ಸಿ/ಎಸ್ಟಿ/ಒಬಿಸಿ ವರ್ಗದ ಮಾದರಿಯಲ್ಲಿಯೇ ಸಾಮಾನ್ಯ ವರ್ಗದ ಬಡವರಿಗೂ ಮೀಸಲು ಸೌಲಭ್ಯ ದೊರೆಯಲಿದೆ.

ಆರ್ಥಿಕವಾಗಿ ಹಿಂದುಳಿದ ವರ್ಗಕ್ಕೆ (ಇಡಬ್ಲ್ಯೂಎಸ್) 10% ಮೀಸಲು ಕಲ್ಪಿಸಿ ಕೇಂದ್ರ ಸರಕಾರ 2019ರಲ್ಲಿ ತಂದಿದ್ದ ಸಂವಿಧಾನ ತಿದ್ದುಪಡಿಯನ್ನು ಸುಪ್ರೀಂ ಕೋರ್ಟ್ ಎತ್ತಿ ಹಿಡಿದಿದೆ. 'ಸಂವಿಧಾನ ತಿದ್ದುಪಡಿ (103ನೇ) ಕಾಯಿದೆ–2019' ಹಾಗೂ ಅದರ ಮೂಲಕ ಜಾರಿ ಮಾಡಲಾದ 10% ಮೀಸಲಾತಿ ಸಿಂಧುವೆಂದು ನ್ಯಾಯಪೀಠ ಹೇಳಿದೆ.

ಆದರೆ, ಸಿಜೆಐ ಯು.ಯು. ಲಲಿತ್ ನೇತೃತ್ವದ ಪಂಚ ಸದಸ್ಯ ಪೀಠವು 3:2 ಬಹುಮತದ ತೀರ್ಪು ನೀಡಿದೆ. ಮೂವರು ನ್ಯಾಯಮೂರ್ತಿಗಳು ಆರ್ಥಿಕವಾಗಿ ಹಿಂದುಳಿದ ಸಾಮಾನ್ಯ ವರ್ಗಕ್ಕೆ 10% ಮೀಸಲು ಸಮರ್ಥಿಸಿದರೆ, ಮತ್ತಿಬ್ಬರು ನ್ಯಾಯಮೂರ್ತಿಗಳು ಇದರ ವಿರುದ್ಧ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಐವರಲ್ಲಿ ಮೂವರು ನ್ಯಾಯಮೂರ್ತಿಗಳು ಮೀಸಲಾತಿ ಪರವಾಗಿಯೇ ತೀರ್ಪು ನೀಡಿರುವುದರಿಂದ ಬಹುಮತದ ತೀರ್ಪು ಅಂತಿಮವಾಗಿದೆ.

**40 ಅರ್ಜಿ ವಿಚಾರಣೆ:** ಸಂವಿಧಾನದ ತಿದ್ದುಪಡಿ (103ನೇ) ಕಾಯಿದೆಯ ಸಿಂಧುತ್ವವನ್ನು ಪ್ರಶ್ನಿಸಿ ಒಟ್ಟು 40 ಅರ್ಜಿಗಳು ಸಲ್ಲಿಕೆಯಾಗಿದ್ದವು. ಇವುಗಳ ವಿಚಾರಣೆ ಪೂರ್ಣಗೊಳಿಸಿದ್ದ ನ್ಯಾಯಪೀಠ ಸೆ.27ರಂದು ತೀರ್ಪನ್ನು ಕಾಯ್ದಿರಿಸಿತು.

**ಪಕ್ಷಾತೀತ ಬೆಂಬಲ:** ತಮಿಳುನಾಡಿನ ಆಡಳಿತಾರೂಢ ಡಿಎಂಕೆ ಹೊರತುಪಡಿಸಿ ಬಹುತೇಕ ಎಲ್ಲಾ ರಾಜಕೀಯ ಪಕ್ಷಗಳೂ ಸುಪ್ರೀಂ ಕೋರ್ಟ್ ತೀರ್ಪನ್ನು ಸ್ವಾಗತಿಸಿವೆ.

**ಹಾಲಿ 50%ಗೆ ಧಕ್ಕೆಯಿಲ್ಲ**

ಎಸ್ಸಿ/ಎಸ್ಟಿ/ಒಬಿಸಿ ವರ್ಗಕ್ಕೆ ಹಾಲಿ ಕಲ್ಪಿಸಲಾಗಿರುವ ಒಟ್ಟಾರೆ 50% ಮೀಸಲಿಗೆ 'EWS' ಮೀಸಲಾತಿಯಿಂದ ಧಕ್ಕೆಯಾಗುವುದಿಲ್ಲ. ಸಾಮಾನ್ಯ ವರ್ಗಕ್ಕೆ ಇದ್ದ 50% ಸೀಟು/ಹುದ್ದೆಗಳಲ್ಲಿ 10% ಸಾಮಾನ್ಯ ವರ್ಗದ ಸಾಮಾಜಿಕ/ ಆರ್ಥಿಕವಾಗಿ ಹಿಂದುಳಿದವರ ಪಾಲಾಗಲಿದೆ. ಉಳಿದ 40% ಸೀಟು/ಹುದ್ದೆಗಳಿಗೆ ಸಾಮಾನ್ಯ ವರ್ಗದ ಇತರೆ ಅಭ್ಯರ್ಥಿಗಳು ಸ್ಪರ್ಧಿಸಬೇಕಿದೆ.

**ಪರಿಶಿಷ್ಟರು/ಒಬಿಸಿಗೆ ಇಲ್ಲ**

ಈ ಮೀಸಲು ಸೌಲಭ್ಯ ಪರಿಶಿಷ್ಟರು ಹಾಗೂ ಇತರೆ ಹಿಂದುಳಿದ ವರ್ಗದ ಬಡವರಿಗೆ ಅನ್ವಯಿಸುವುದಿಲ್ಲ ಅಂದರೆ, ಜನಬಳಕೆಯಲ್ಲಿರುವ ಸಾಮಾನ್ಯ ವರ್ಗದ ಬಡವರಿಗೆ ಮಾತ್ರ ಅನ್ವಯಿಸುತ್ತದೆ.

**ಯಾರು ಮೀಸಲಿಗೆ ಅರ್ಹರು?**

- ಸಾಮಾನ್ಯ ವರ್ಗಕ್ಕೆ ಸೇರಿದವರಾಗಿರಬೇಕು.
- ಕುಟುಂಬದ ವಾರ್ಷಿಕ ಆದಾಯ 8 ಲಕ್ಷ ರೂ. ಮೀರಬಾರದು.
- ಕುಟುಂಬಕ್ಕೆ 5 ಎಕರೆಗಿಂತ ಹೆಚ್ಚು ಕೃಷಿ ಭೂಮಿ ಇರಬಾರದು.
- 1000 ಚ.ಅಡಿಗಿಂತ ಹೆಚ್ಚು ವಿಸ್ತೀರ್ಣದ ಮನೆ ಇರಬಾರದು.

**ಮೀಸಲು ಪರ ತೀರ್ಪು**

ನ್ಯಾ. ದಿನೇಶ್ ಮಹೇಶ್ವರಿ

ನ್ಯಾ. ಬಿ.ಎಂ. ತ್ರಿವೇದಿ

ನ್ಯಾ. ಜೆ.ಬಿ. ಪರ್ದಿವಾಲಾ

**ವಿರುದ್ಧ ಅಭಿಮತ**

ಸಿಜೆಐ.ಯು.ಯು. ಲಲಿತ್

ನ್ಯಾ. ರವೀಂದ್ರ ಭಟ್

ಇಡಬ್ಲ್ಯೂಎಸ್ ಮೀಸಲಾತಿಯಿಂದ ಸಂವಿಧಾನದ ಮೂಲ ಸ್ವರೂಪಕ್ಕೆ ಧಕ್ಕೆಯಾಗುವುದಿಲ್ಲ. ಹಾಲಿ ಮೀಸಲಾತಿಗೆ 10% ಮೀಸಲು ಸೇರ್ಪಡೆಯಿಂದ ಸಂವಿಧಾನದ ನಿಯಮಗಳ ಉಲ್ಲಂಘನೆಯಾಗದು.

– ನ್ಯಾ. ದಿನೇಶ್ ಮಹೇಶ್ವರಿ

ಆರ್ಥಿಕವಾಗಿ ಹಿಂದುಳಿದ ವರ್ಗದ ಬಹುತೇಕ ಜನರು 'ಎಸ್ಸಿ' ಮತ್ತು 'ಒಬಿಸಿ'ಗೆ ಸೇರಿದವರು. ಅವರನ್ನು ಈ ಮೀಸಲಾತಿಯಿಂದ ಹೊರಗಿಡುವುದು ಸಮಾನತೆ ಸಂಹಿತೆಯ ಉಲ್ಲಂಘನೆ.

– ನ್ಯಾ. ರವೀಂದ್ರ ಭಟ್

ಆಧಾರ: ವಿಜಯ ಕರ್ನಾಟಕ, ದಿನಾಂಕ: 08.11.2022

## 7. ಅನಿರ್ದಿಷ್ಟ ಮೀಸಲು ಸಲ್ಲದು : ಸುಪ್ರೀಂ ಜಡ್ಜ್‌ಗಳ ಅಭಿಮತ

ಮೀಸಲಾತಿ ಪರಿಧಿಯಿಂದ ಹೊರಗಿರುವ ಸಮುದಾಯಗಳ ಆರ್ಥಿಕವಾಗಿ ಹಿಂದುಳಿದ ಜನರಿಗೆ ಶೇ.10 ಮೀಸಲಾತಿ ನೀಡುವ ಕೇಂದ್ರ ಸರ್ಕಾರದ ಕ್ರಮವನ್ನು ಎತ್ತಿ ಹಿಡಿದ ಸಂವಿಧಾನಿಕ ಪೀಠದಲ್ಲಿದ್ದ ಇಬ್ಬರು ನ್ಯಾಯಮೂರ್ತಿಗಳು ಮೀಸಲಾತಿಗೆ ಕಾಲಮಿತಿ ಇರಲಿ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ನ್ಯಾ। ಬೇಲಾ ತ್ರಿವೇದಿ ಅವರು ಈ ಕುರಿತು ವ್ಯಕ್ತಪಡಿಸಿರುವ ಅಭಿಪ್ರಾಯಕ್ಕೆ ನ್ಯಾ। ಜೆ.ಬಿ.ಪರ್ದೀವಾಲಾ ಕೂಡ ದನಿಗೂಡಿಸಿದ್ದು, ಮೀಸಲು ನೀತಿಯ ಮರುಪರಿಶೀಲನೆ ನಡೆಯಬೇಕಾದ ಅಗತ್ಯವಿದೆ ಎಂದು ಹೇಳಿದ್ದಾರೆ.

**ಕಾಲಮಿತಿ ಇರಬೇಕಿತ್ತು– ನ್ಯಾ। ಬೇಲಾ:** 'ಸಂವಿಧಾನಶಿಲ್ಪಿಗಳ ದೂರದೃಷ್ಟಿಯಂತೆ, 1985ರಲ್ಲಿ ಸುಪ್ರೀಂಕೋರ್ಟಿನ ಸಂವಿಧಾನಿಕ ಪೀಠ ಪ್ರಸ್ತಾಪಿಸಿದಂತೆ, ಸಂವಿಧಾನದ 50ನೇ ವರ್ಷಾಚರಣೆ ಆಗಮನದ ಹೊತ್ತಿಗೆ ಮೀಸಲಾತಿಗೆ ಕಾಲಮಿತಿ ಇರಬೇಕಿತ್ತು.

ಆದರೆ ಸ್ವಾತಂತ್ರ್ಯದ 75ನೇ ವರ್ಷಾಚರಣೆ ಮುಗಿದಿದ್ದರೂ ಅದನ್ನು ಸಾಧಿಸಲಾಗಿಲ್ಲ' ಎಂದು ನ್ಯಾಯಮೂರ್ತಿ ತಮ್ಮ ತೀರ್ಪಿನಲ್ಲಿ ಬರೆದಿದ್ದಾರೆ.

'ಪುರಾತನ ಜಾತಿ ವ್ಯವಸ್ಥೆಯೇ ದೇಶದಲ್ಲಿ ಮೀಸಲಾತಿಯ ಉದಯಕ್ಕೆ ಕಾರಣ ಎಂದು ಹೇಳಲಾಗದು. ಪ.ಜಾತಿ, ಪಂಗಡ ಹಾಗೂ "ಇನ್ನಿತರೆ ಹಿಂದುಳಿದ ವರ್ಗಗಳ ಜನರು ಅನುಭವಿಸಿದ ಐತಿಹಾಸಿಕ ಅನ್ಯಾಯವನ್ನು ಸರಿಪಡಿಸಲು ಹಾಗೂ ಅವರಿಗೆ ಸಮಾನ ಅವಕಾಶ ಒದಗಿಸಲು ಮೀಸಲಾತಿಯನ್ನು ಜಾರಿಗೆ ತರಲಾಯಿತು. ಆದರೆ ಸ್ವಾತಂತ್ರ್ಯದ 75ನೇ ವರ್ಷಾಚರಣೆಯ ಅಂತ್ಯದಲ್ಲಿರುವ ನಾವು ಸಮಾಜದ ವಿಶಾಲ ದೃಷ್ಟಿಕೋನ ಹಾಗೂ ಸಂವಿಧಾನಿಕ ವ್ಯವಸ್ಥೆಯ ರೂಪಾಂತರದತ್ತ ಹೆಜ್ಜೆ ಇಡುವ ನಿಟ್ಟಿನಲ್ಲಿ ಮೀಸಲು ವ್ಯವಸ್ಥೆಯ ಬಗ್ಗೆ ಮರುವಿಮರ್ಶೆ ನಡೆಸಬೇಕಿದೆ' ಎಂದಿದ್ದಾರೆ.

'ಎಸ್ಸಿ, ಎಸ್ಟಿ ವರ್ಗದವರಿಗೆ ಶಾಸನಸಭೆಗಳಲ್ಲಿ ಮೀಸಲಾತಿ ನೀಡುವುದಕ್ಕೆ 2030ರವರೆಗೆ ಕಾಲ ಮಿತಿ ಇದೆ. ಸಂಸತ್ತು ಹಾಗೂ ರಾಜ್ಯ ವಿಧಾನ ಸಭೆಗಳಲ್ಲಿ ಆಂಗ್ಲೋ ಇಂಡಿಯನ್ ಸಮುದಾಯಕ್ಕೆ ನೀಡಲಾಗುತ್ತಿದ್ದ ಪ್ರಾತಿನಿಧ್ಯವನ್ನು ಸಂವಿಧಾನಕ್ಕೆ 104ನೇ ತಿದ್ದುಪಡಿ ತಂದು ನಿಷ್ಕ್ರಿಯಗೊಳಿಸಲಾಗಿದೆ. ಸಂವಿಧಾನದ ಪರಿಚ್ಛೇದ 15 ಹಾಗೂ 16ರಡಿ ಮೀಸಲಾತಿ ಪಡೆಯುತ್ತಿರುವ ಎಸ್ಸಿ/ಎಸ್ಟಿ/ಒಬಿಸಿಗೂ ಅದೇ ರೀತಿಯ ಕಾಲಮಿತಿ ನಿಗದಿಗೊಳಿಸಿದರೆ ವರ್ಗಾತೀತ ಹಾಗೂ ಜಾತಿರಹಿತ ಸರ್ವಸಮಾನತೆಯ ಸಮಾಜಕ್ಕೆ ಎಡೆ ಮಾಡಿಕೊಡಲಿದೆ' ಎಂದು ತಿಳಿಸಿದ್ದಾರೆ.

**ಅನಿರ್ದಿಷ್ಟಾವಧಿ ಬೇಡ – ನ್ಯಾ। ಪರ್ದೀವಾಲಾ:** ಇದಕ್ಕೆ ಸಹಮತ ವ್ಯಕ್ತಪಡಿಸಿದ ನ್ಯಾ। ಪರ್ದೀವಾಲಾ ಅವರು, 'ಮೀಸಲಾತಿ ಅನಿರ್ದಿಷ್ಟಾವಧಿಗೆ ಮುಂದುವರಿದು ಪಟ್ಟಭದ್ರ ಹಿತಾಸಕ್ತಿಯಾಗಬಾರದು. ಇದು ಸಾಮಾಜಿಕ ಹಾಗೂ ಆರ್ಥಿಕ ನ್ಯಾಯ ಪಡೆಯುವ ದಾರಿ' ಎಂದಿದ್ದಾರೆ.

ಸಾಮಾಜಿಕ ನ್ಯಾಯಕ್ಕಾಗಿ 10 ವರ್ಷಗಳ ಅವಧಿಗೆ ಮೀಸಲಾತಿಯನ್ನು ಜಾರಿಗೆ ತರಲಾಗಿದೆ ಎಂಬ ಡಾ। ಬಿ.ಆರ್.ಅಂಬೇಡ್ಕರ್ ಅವರ ಮಾತುಗಳನ್ನು ಉಲ್ಲೇಖಿಸಿದ ಅವರು, '70 ವರ್ಷವಾದರೂ ಮೀಸಲಾತಿ ಮುಂದುವರಿದಿದೆ' ಎಂದು ಬೇಸರ ವ್ಯಕ್ತಪಡಿಸಿದ್ದಾರೆ.

ಸಂವಿಧಾನಶಿಲ್ಪಿಗಳ ದೂರದೃಷ್ಟಿಯಂತೆ, 1985ರಲ್ಲಿ ಸುಪ್ರೀಂಕೋರ್ಟ್‌ನ ಸಂವಿಧಾನಿಕ ಪೀಠ ಹೇಳಿದಂತೆ ಮೀಸಲಾತಿಗೆ ಕಾಲಮಿತಿ ಇರಬೇಕಿತ್ತು. ಈಗಲಾದರೂ ಮೀಸಲಾತಿಯ ಪುನರ್ ವಿಮರ್ಶೆ ನಡೆಸಬೇಕಿದೆ. ಮೀಸಲಾತಿ ಅನಿರ್ದಿಷ್ಟಾವಧಿಗೆ ಮುಂದುವರಿದು ಪಟ್ಟಭದ್ರ ಹಿತಾಸಕ್ತಿಯಾಗಬಾರದು.

– ನ್ಯಾ। ಬೇಲಾ ತ್ರಿವೇದಿ, ನ್ಯಾ। ಜೆ.ಬಿ.ಪರ್ದೀವಾಲಾ

ಆಧಾರ: ಕನ್ನಡಪ್ರಭ, ದಿನಾಂಕ: 08.11.2022

## 8. ಚಂದ್ರಚೂಡ್ 50ನೇ ಮುಖ್ಯ ನ್ಯಾಯಮೂರ್ತಿ

ದೇಶದ 50ನೇ ಮುಖ್ಯ ನ್ಯಾಯಮೂರ್ತಿಯಾಗಿ ನ್ಯಾಯಮೂರ್ತಿ ಧನಂಜಯ್ ಯಶವಂತ್ ಚಂದ್ರಚೂಡ್ ಅವರು ಪ್ರಮಾಣ ವಚನ ಸ್ವೀಕರಿಸಿದರು.

ರಾಷ್ಟ್ರಪತಿ ಭವನದಲ್ಲಿ ನಡೆದ ಸಮಾರಂಭದಲ್ಲಿ ರಾಷ್ಟ್ರಪತಿ ದ್ರೌಪದಿ ಮುರ್ಮು ಅವರು ನೂತನ ಸಿಜೆಐಗೆ ಪ್ರಮಾಣ ವಚನ ಬೋಧಿಸಿದರು. ನ್ಯಾಯಮೂರ್ತಿ ಚಂದ್ರಚೂಡ್ 2 ವರ್ಷಗಳ ಕಾಲ ಅಂದರೆ 2024ರ ನವೆಂಬರ್ 10ರವರೆಗೆ ಅಧಿಕಾರದಲ್ಲಿ ಇರಲಿದ್ದಾರೆ. ಇವರು 74 ದಿನಗಳ ಅಲ್ಪಾವಧಿಗೆ ಸಿಜೆಐ ಆಗಿದ್ದ ನ್ಯಾ. ಉದಯ್ ಉಮೇಶ್ ಲಲಿತ್ ಅವರ ಉತ್ತರಾಧಿಕಾರಿಯಾಗಿದ್ದಾರೆ.

1959 ನವೆಂಬರ್ 11ರಂದು ಜನಿಸಿದ ಡಿ ವೈ ಚಂದ್ರಚೂಡ್ ಅವರು 1998ರಲ್ಲಿ ಭಾರತದ ಹೆಚ್ಚುವರಿ ಸಾಲಿಸಿಟರ್ ಜನರಲ್ ಆಗಿ ಸೇವೆ ಸಲ್ಲಿಸಿದ್ದರು. 2013ರಲ್ಲಿ ಅಲಹಾಬಾದ್ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿಯಾಗಿ ನೇಮಕಗೊಂಡರು. 2016 ಮೇ 13ರಂದು ಸುಪ್ರಿಂಕೋರ್ಟ್ ನ್ಯಾಯಾಧೀಶರಾಗಿ ಬಡ್ತಿ ಪಡೆದಿದ್ದರು. ಅವರು ಅಯೋಧ್ಯೆ ಭೂ ವಿವಾದ, ಶಬರಿಮಲೆ ಪ್ರಕರಣ, ಆಧಾರ್‌ಗೆ ಮಾನ್ಯತೆ ಮತ್ತು ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳು, ಕ್ರಿಮಿನಲ್ ಕಾನೂನುಗಳು, ಖಾಸಗಿತನದ ಹಕ್ಕು ಸೇರಿದಂತೆ ಹಲವಾರು ಐತಿಹಾಸಿಕ ತೀರ್ಪುಗಳನ್ನು ನೀಡಿದ ನ್ಯಾಯಪೀಠದ ಭಾಗವಾಗಿದ್ದಾರೆ.

**ತಂದೆಯೂ ಸಿಜೆಐ ಆಗಿದ್ದರು**

ಡಿ.ವೈ ಚಂದ್ರಚೂಡ್ ಅವರು ದೇಶದ 16ನೇ ಮುಖ್ಯ ನ್ಯಾಯಮೂರ್ತಿಯಾಗಿದ್ದ ನ್ಯಾಯಮೂರ್ತಿ ದಿವಂಗತ ಯಶವಂತ ವಿಷ್ಣು ಚಂದ್ರಚೂಡ್ ಅವರ ಪುತ್ರರಾಗಿದ್ದಾರೆ. ವೈ.ವಿ. ಚಂದ್ರಚೂಡ್ ಅವರು ಅತೀ ದೀರ್ಘಾವಧಿವರೆಗೆ ಅಂದರೆ 7 ವರ್ಷಗಳ ಕಾಲ ಭಾರತದ ಮುಖ್ಯ ನ್ಯಾಯಮೂರ್ತಿಯಾಗಿದ್ದರು. ಕುತೂಹಲಕಾರಿ ಅಂಶವೆಂದರೆ ನ್ಯಾಯಮೂರ್ತಿ ವೈ.ವಿ. ಚಂದ್ರಚೂಡ್ ನೇತೃತ್ವದ ಪೀಠ ನೀಡಿದ್ದ ತೀರ್ಪುಗಳನ್ನು ನ್ಯಾ. ಡಿ.ವೈ. ಚಂದ್ರಚೂಡ್ ಅವರು ಎರಡು ಬಾರಿ ರದ್ದುಗೊಳಿಸಿದ್ದಾರೆ. 44 ವರ್ಷಗಳ ಬಳಿಕ ತಂದೆ ಅಲಂಕರಿಸಿದ ಸ್ಥಾನವನ್ನು ಡಿ.ವೈ. ಚಂದ್ರಚೂಡ್ ವಹಿಸಿಕೊಂಡಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ: 10.11.2022

## 9. ಕ್ರೈಸ್ತ–ಮುಸ್ಲಿಂ ದಲಿತರಿಗೆ ಮೀಸಲು ಇಲ್ಲ

'ಕ್ರೈಸ್ತ ಮತ್ತು ಇಸ್ಲಾಂ ಧರ್ಮಕ್ಕೆ ಮತಾಂತರವಾದ ದಲಿತರಿಗೆ 'ಪರಿಶಿಷ್ಟ ಜಾತಿ' ಸ್ಥಾನಮಾನ ನೀಡಲು ಸಾಧ್ಯವಿಲ್ಲ. ಅವರಿಗೆ ಮೀಸಲಾತಿ ನೀಡಿದರೆ, ಹಿಂದೂ ಧರ್ಮದಲ್ಲಿರುವ ಪರಿಶಿಷ್ಟ ಜಾತಿಯ ಜನರ ಹಕ್ಕಿಗೆ ಧಕ್ಕೆಯಾಗುತ್ತದೆ' ಎಂದು ಕೇಂದ್ರ ಸರ್ಕಾರವು ಸುಪ್ರೀಂ ಕೋರ್ಟ್‌ಗೆ ಹೇಳಿದೆ. ಈ ಸಂಬಂಧ ವಸ್ತುಸ್ಥಿತಿಯ ಅಧ್ಯಯನಕ್ಕೆ ತಾನೇ ರಚಿಸಿರುವ ಆಯೋಗವು, ವರದಿ ಸಲ್ಲಿಸುವ ಮುನ್ನವೇ ಸರ್ಕಾರವು ಹೀಗೆ ಹೇಳಿದೆ.

ದಲಿತ ಕ್ರಿಶ್ಚಿಯನ್ನರು ಮತ್ತು ದಲಿತ ಮುಸ್ಲಿಮರಿಗೆ ಪರಿಶಿಷ್ಟ ಜಾತಿಯ ಸ್ಥಾನಮಾನ ನೀಡಬೇಕು ಎಂದು ಕೋರಿ ಸಿಪಿಐಎಲ್ ಎಂಬ ಸ್ವಯಂಸೇವಾ ಸಂಸ್ಥೆ ಅರ್ಜಿ (ಪಿಐಎಲ್) ಸಲ್ಲಿಸಿತ್ತು. ಈ ಅರ್ಜಿಯ ವಿಚಾರಣೆ ನಡೆಸಿದ್ದ ಸುಪ್ರೀಂ ಕೋರ್ಟ್ ಪೀಠವು, ನಿಲುವು ಸ್ಪಷ್ಟಪಡಿಸಿ ಎಂದು ಕೇಂದ್ರ ಸರ್ಕಾರಕ್ಕೆ ಸೂಚನೆ ನೀಡಿತ್ತು. ಕ್ರೈಸ್ತ ಮತ್ತು ಇಸ್ಲಾಂ ಧರ್ಮಕ್ಕೆ ಮತಾಂತರವಾದ ದಲಿತರಿಗೆ ಪರಿಶಿಷ್ಟ ಜಾತಿಯ ಸ್ಥಾನಮಾನ ನೀಡಬೇಕೇ ಅಥವಾ ಬೇಡವೇ ಎಂಬುದನ್ನು ಪರಿಶೀಲಿಸಲು ಆಯೋಗ ರಚಿಸುತ್ತೇವೆ' ಎಂದು ಸರ್ಕಾರವು ಹಿಂದಿನ ವಿಚಾರಣೆ ವೇಳೆ ಪೀಠಕ್ಕೆ ಮಾಹಿತಿ ನೀಡಿತ್ತು.

ಆನಂತರ ಸುಪ್ರೀಂ ಕೋರ್ಟ್ ನಿವೃತ್ತ ಮುಖ್ಯ ನ್ಯಾಯಮೂರ್ತಿ ಕೆ.ಜಿ. ಬಾಲಕೃಷ್ಣನ್ ನೇತೃತ್ವದಲ್ಲಿ ಆಯೋಗ ರಚಿಸಿತ್ತು. ಆಯೋಗವು ವರದಿಯನ್ನು ಇನ್ನಷ್ಟೇ ಸಲ್ಲಿಸಬೇಕಿದೆ. ಆದರೆ ಅದಕ್ಕೂ ಮುನ್ನವೇ, ಸರ್ಕಾರವು ಈ ಸಂಬಂಧ ಸುಪ್ರೀಂ ಕೋರ್ಟ್‌ಗೆ ಪ್ರಮಾಣ ಪತ್ರ ಸಲ್ಲಿಸಿದೆ.

'1950ರ ಸಂವಿಧಾನ (ಪರಿಶಿಷ್ಟ ಜಾತಿ) ಆದೇಶದ ಪ್ರಕಾರ ಪರಿಶಿಷ್ಟ ಜಾತಿಯ ಜನರು ಹಿಂದೂ, ಸಿಖ್ ಮತ್ತು ಬೌದ್ಧ ಧರ್ಮದಲ್ಲಿ ಇದ್ದರೆ ಮಾತ್ರ ಅವರಿಗೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿ ನೀಡಬಹುದು. ವಿದೇಶಿ ಧರ್ಮಗಳಾದ ಕ್ರೈಸ್ತ ಮತ್ತು ಇಸ್ಲಾಂಗೆ ಮತಾಂತರವಾದ ದಲಿತರಿಗೆ ಈ ಸ್ಥಾನಮಾನ ಮತ್ತು ಮೀಸಲಾತಿಯನ್ನು ವಿಸ್ತರಿಸಲು ಸಾಧ್ಯವಿಲ್ಲ' ಎಂದು ಸರ್ಕಾರವು ಪ್ರಮಾಣಪತ್ರದಲ್ಲಿ ತನ್ನ ನಿಲುವು ಸ್ಪಷ್ಟಪಡಿಸಿದೆ.

'ಕ್ರೈಸ್ತ ಮತ್ತು ಇಸ್ಲಾಂನಲ್ಲಿ ಅಸ್ಪೃಶ್ಯತೆಯಂತಹ ದಬ್ಬಾಳಿಕೆಗಳು ಇಲ್ಲ ಎಂಬುದನ್ನು 1950ರ ಸಂವಿಧಾನ (ಪರಿಶಿಷ್ಟ ಜಾತಿ) ಆದೇಶವು ಈಗಾಗಲೇ ಸಾಬೀತು ಮಾಡಿದೆ. ಆ ಎರಡೂ ಧರ್ಮಗಳಲ್ಲಿ ಅಸ್ಪೃಶ್ಯತೆಯಂತಹ ಆಚರಣೆಗಳು ಇಲ್ಲ ಎಂಬ ಕಾರಣಕ್ಕೇ ಪರಿಶಿಷ್ಟ ಜಾತಿಗೆ ಸೇರಿದ ಜನರು ಆ ಧರ್ಮಗಳಿಗೆ ಮತಾಂತರವಾಗಿದ್ದಾರೆ. ಅಲ್ಲಿ ಅವರು ಅಂತಹ ದೌರ್ಜನ್ಯಕ್ಕೆ ಒಳಗಾಗುತ್ತಿಲ್ಲ. ಈ

ಕಾರಣದಿಂದ ಅವರಿಗೆ ಪರಿಶಿಷ್ಟ ಜಾತಿಯ ಸ್ಥಾನಮಾನ ಮತ್ತು ಮೀಸಲಾತಿ ನೀಡಲು ಸಾಧ್ಯವಿಲ್ಲ' ಎಂದು ಸರ್ಕಾರವು ಪ್ರಮಾಣ ಪತ್ರದಲ್ಲಿ ಹೇಳಿದೆ.

'ಕೆಲವು ಸಾಮಾಜಿಕ ಆಚರಣೆಗಳ ಕಾರಣದಿಂದ 1956ರಲ್ಲಿ ಡಾ.ಬಿ.ಆರ್.ಅಂಬೇಡ್ಕರ್ ಅವರ ಕರೆಯ ಮೇರೆಗೆ ಪರಿಶಿಷ್ಟ ಜಾತಿಯ ಜನರು ಬೌದ್ಧ ಧರ್ಮಕ್ಕೆ ಮತಾಂತರವಾದರು. ಹೀಗೆ ಮತಾಂತರವಾದವರ ಮೂಲ ಜಾತಿ ಯಾವುದು ಎಂಬುದನ್ನು ಸುಲಭವಾಗಿ ಪತ್ತೆ ಮಾಡಬಹುದು. ಆದರೆ, ಕ್ರೈಸ್ತ ಮತ್ತು ಇಸ್ಲಾಂ ಧರ್ಮಕ್ಕೆ ಮತಾಂತರವಾದ ದಲಿತರ ಮೂಲ ಜಾತಿ ಪತ್ತೆ ಮಾಡಲು ಸಾಧ್ಯವಿಲ್ಲ. ಈ ಎರಡೂ ಧರ್ಮಗಳಿಗೆ ನಡೆಯುವ ಮತಾಂತರದ ಪ್ರಕ್ರಿಯೆಯೂ ಭಿನ್ನವಾದುದು. ಅಲ್ಲದೆ ಈ ಧರ್ಮಗಳಿಗೆ ಮತಾಂತರವೂ ಬೇರೆ ಬೇರೆ ಕಾರಣಗಳಿಗೆ ನಡೆಯುತ್ತದೆ' ಎಂದು ಸರ್ಕಾರ ಹೇಳಿದೆ.

ಸುಪ್ರೀಂ ಕೋರ್ಟ್ ಈ ಅರ್ಜಿಯ ವಿಚಾರಣೆಯನ್ನು ಇದೇ 16ಕ್ಕೆ ಮುಂದೂಡಿದೆ.

**'ದೌರ್ಜನ್ಯ ದೃಢೀಕರಿಸುವ ದಾಖಲೆ ಇಲ್ಲ'**

'ಹಿಂದೂ ಧರ್ಮದಲ್ಲಿದ್ದಾಗ ಅನುಭವಿಸಿದ್ದಕ್ಕಿಂತ ಹೆಚ್ಚಿನ ದೌರ್ಜನ್ಯವನ್ನು ಕ್ರೈಸ್ತ ಮತ್ತು ಇಸ್ಲಾಂನಲ್ಲಿ ದಲಿತರು ಎದುರಿಸುತ್ತಿದ್ದಾರೆ ಎಂಬುದಕ್ಕೆ ದೃಢೀಕೃತ ಮಾಹಿತಿ ಮತ್ತು ಅಧ್ಯಯನ ಆಧಾರಿತ ದಾಖಲೆಗಳು ಲಭ್ಯವಿಲ್ಲ. ಎಲ್ಲಾ ಧರ್ಮದಲ್ಲಿರುವ ದಲಿತರಿಗೆ ಪರಿಶಿಷ್ಟ ಜಾತಿಯ ಸ್ಥಾನಮಾನ ನೀಡಬೇಕು ಎಂದು ನ್ಯಾಯಮೂರ್ತಿ ರಂಗನಾಥ್ ಮಿಶ್ರಾ ಆಯೋಗದ ವರದಿಯಲ್ಲಿ ಶಿಫಾರಸ್ಸು ಮಾಡಲಾಗಿತ್ತು. ಯಾವುದೇ ಅಧ್ಯಯನ ನಡೆಸದೆಯೇ ಅಂತಹ ಶಿಫಾರಸ್ಸು ಮಾಡಲಾಗಿತ್ತು. ಆ ವರದಿಯು ಲೋಪಗಳಿಂದ ಕೂಡಿತ್ತು. ವಸ್ತುಸ್ಥಿತಿ ಅಧ್ಯಯನ ಮಾಡದೆಯೇ ಎಲ್ಲರಿಗೂ ಮೀಸಲಾತಿ ನೀಡಿದರೆ, ಹಿಂದೂ ಧರ್ಮದಲ್ಲಿರುವ ಪರಿಶಿಷ್ಟ ಜಾತಿಯ ಜನರ ಹಕ್ಕುಗಳನ್ನು ಕಸಿದುಕೊಂಡಂತಾಗುತ್ತದೆ' ಎಂದು ಸರ್ಕಾರವು ತನ್ನ ಪ್ರಮಾಣ ಪತ್ರದಲ್ಲಿ ವಿವರಿಸಿದೆ.

ಆಧಾರ: ಪ್ರಜಾವಾಣಿ, ದಿನಾಂಕ: 11.11.2022

## 10. ಹಿರಿಯ ನ್ಯಾಯಮೂರ್ತಿ ಪ್ರಸನ್ನ ಬಾಲಚಂದ್ರ ವರಾಲೆ ನೂತನ ಸಿಜೆ

ಕರ್ನಾಟಕ ಹೈಕೋರ್ಟ್‌ಗೆ ನೂತನ ಮುಖ್ಯನ್ಯಾಯಮರ್ತಿಗಳನ್ನು ನೇಮಕ ಮಾಡಲಾಗಿದೆ. ಬಾಂಬೆ ಹೈಕೋರ್ಟ್ ಹಿರಿಯ ನ್ಯಾಯಮೂರ್ತಿ ಪ್ರಸನ್ನ ಬಾಲಚಂದ್ರ ವರಾಲೆ ಅವರನ್ನು ಕರ್ನಾಟಕ ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿಯನ್ನಾಗಿ ನೇಮಕ ಮಾಡಿ ಕೇಂದ್ರ ಸರ್ಕಾರ ಅಧಿಸೂಚನೆ ಹೊರಡಿಸಿದೆ. ನ್ಯಾಯಮೂರ್ತಿ ವರಾಲೆ ಅವರ ಹುಟ್ಟೂರು ಬೆಳಗಾವಿ ಜಿಲ್ಲೆಯ ನಿಪ್ಪಾಣಿ ಅನ್ನುವುದು ವಿಶೇಷ.

ನ್ಯಾಯಮೂರ್ತಿ ವರಾಲೆ ಅವರನ್ನು ಕರ್ನಾಟಕ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಹುದ್ದೆಗೆ ಪದೋನ್ನತಿ ನೀಡಲು ಸುಪ್ರೀಂಕೋರ್ಟ್ ಮುಖ್ಯ ನ್ಯಾಯಮೂರ್ತಿ ಯು.ಯು. ಲಲಿತ್ ಅವರ ನೇತೃತ್ವದ

ಸುಪ್ರೀಂಕೋರ್ಟ್ ಕೊಲಿಜಿಯಂ ಸೆಪ್ಟೆಂಬರ್ 28ರಂದು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿತ್ತು. ಅದರಂತೆ, ಕೇಂದ್ರ ಕಾನೂನು ಮತ್ತು ನ್ಯಾಯ ಸಚಿವಾಲಯ ನೇಮಕಾತಿ ಅಧಿಸೂಚನೆ ಹೊರಡಿಸಿದೆ.

ಕರ್ನಾಟಕ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿಗಳಾಗಿದ್ದ ರಿತುರಾಜ್ ಅವಸ್ಥಿ ಅವರು 2022ರ ಜುಲೈ 2 ರಂದು ನಿವೃತ್ತಿ ಹೊಂದಿದ್ದರು. ಸದ್ಯ ಹೈಕೋರ್ಟ್‌ನ ಹಿರಿಯ ನ್ಯಾಯಮೂರ್ತಿ ಅಲೋಕ್ ಅರಾಧೆ ಅವರು ಹಂಗಾಮಿ ಮುಖ್ಯನ್ಯಾಯಮೂರ್ತಿಗಳಾಗಿ ಕಾರ್ಯಾಭಾರ ನಿರ್ವಹಿಸುತ್ತಿದ್ದಾರೆ. ನ್ಯಾಯಮೂರ್ತಿ ವರಾಲೆ ಕರ್ನಾಟಕ ಹೈಕೋರ್ಟ್‌ನ 32ನೇ ಮುಖ್ಯ ನ್ಯಾಯಮೂರ್ತಿಗಳಾಗಿದ್ದಾರೆ.

ನ್ಯಾಯಮೂರ್ತಿ ವರಾಲೆ ಅವರು ಬೆಳಗಾವಿ ಜಿಲ್ಲೆಯ ನಿಪ್ಪಾಣಿಯಲ್ಲಿ 1962 ಜೂನ್ 23ರಂದು ಜನಿಸಿದರು. ಔರಂಗಾಬಾದ್‌ನ ಡಾ.ಬಾಬಾಸಾಹೇಬ್ ಅಂಬೇಡ್ಕರ್ ಮರಾಠವಾಡ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಪಡೆದರು. 1985ರಲ್ಲಿ ವಕೀಲ ವೃತ್ತಿ ಆರಂಭಿಸಿದರು. 90ರ ದಶಕದಲ್ಲಿ ಡಾ.ಬಾಬಾಸಾಹೇಬ್ ಅಂಬೇಡ್ಕರ್ ಮರಾಠವಾಡ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕರಾಗಿಯೂ ಸೇವೆ ಸಲ್ಲಿಸಿದ್ದರು. 2008ರ ಜುಲೈ 18ರಂದು ಬಾಂಬೆ ಹೈಕೋರ್ಟ್ ನ್ಯಾಯಮೂರ್ತಿಯಾಗಿ ನೇಮಕಗೊಂಡಿದ್ದರು. ಇದಕ್ಕೂ ಮೊದಲು ಬಾಂಬೆ ಹೈಕೋರ್ಟ್‌ನ ಔರಂಗಬಾದ ಪೀಠದಲ್ಲಿ ಸಹಾಯಕ ಸರ್ಕಾರಿ ಪ್ಲೀಡರ್, ಹೆಚ್ಚುವರಿ ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿ ಮತ್ತು ಕೇಂದ್ರ ಸರ್ಕಾರದ ಹೆಚ್ಚುವರಿ ವಕೀಲರಾಗಿ ನ್ಯಾಯಮೂರ್ತಿ ವರಾಲೆ ಸೇವೆ ಸಲ್ಲಿಸಿದ್ದರು.

ಆಧಾರ:ಉದಯವಾಣಿ, ದಿನಾಂಕ:12.11.2022

## 11. ದತ್ತು ಮಕ್ಕಳಿಗೂ ಅನುಕಂಪದ ಉದ್ಯೋಗ

ಅನುಕಂಪದ ಆಧಾರದಲ್ಲಿ ಉದ್ಯೋಗ ನೀಡುವಾಗ ಮೃತರ ಸ್ವಂತ ಮಕ್ಕಳು, ದತ್ತು ಮಕ್ಕಳೆಂಬ ತಾರತಮ್ಯ ಮಾಡುವುದರಿಂದ ದತ್ತು ಸ್ವೀಕಾರದ ಮೂಲ ಉದ್ದೇಶವೇ ಈಡೇರುವುದಿಲ್ಲ ಎಂದು ಅಭಿಪ್ರಾಯಪಟ್ಟಿರುವ ಹೈಕೋರ್ಟ್, ದತ್ತು ಮಕ್ಕಳೂ ಅನುಕಂಪದ ಉದ್ಯೋಗ ಪಡೆಯಲು ಅರ್ಹರಾಗಿರುತ್ತಾರೆ.

ದತ್ತು ಮಕ್ಕಳಿಗೆ ಅನುಕಂಪದ ಆಧಾರದಲ್ಲಿ ಉದ್ಯೋಗ ನೀಡಲು ಕಾನೂನಿನಲ್ಲಿ ಅವಕಾಶವಿಲ್ಲ ಎಂದು ತಿಳಿಸಿ ಹೈಕೋರ್ಟ್, ಏಕಸದಸ್ಯ ಪೀಠ ಹೊರಡಿಸಿದ ಆದೇಶ ಪ್ರಶ್ನಿಸಿ ಬಾಗಲಕೋಟೆಯ ಬನಹಟ್ಟಿ ತಾಲ್ಲೂಕಿನ ಎಸ್.ಗಿರೀಶ್ (32) ಸಲ್ಲಿಸಿದ್ದ ಮೇಲ್ಮನವಿ ಮಾನ್ಯ ಮಾಡಿರುವ ನ್ಯಾಯಮೂರ್ತಿ ಸೂರಜ್ ಗೋವಿಂದರಾಜ್ ಹಾಗೂ ನ್ಯಾಯಮೂರ್ತಿ ಜಿ.ಬಸವರಾಜು ಅವರಿದ್ದ ಪೀಠ ಈ ಆದೇಶ ಮಾಡಿದೆ. ಜೊತೆಗೆ, ಮೇಲ್ಮನವಿದಾರ ಗಿರೀಶ್ ಅವರನ್ನು ಮೃತ ವಿನಾಯಕ ಮುತ್ತತ್ತಿ ಸ್ವಂತ ಮಗನಂತೆಯೇ ಭಾವಿಸಿ, ಅನುಕಂಪದ ಉದ್ಯೋಗಕ್ಕಾಗಿ ಅವರು ಸಲ್ಲಿಸಿರುವ ಅರ್ಜಿಯನ್ನು 12 ವಾರಗಳಲ್ಲಿ ಪರಿಗಣಿಸಬೇಕು ಎಂದು ಸರ್ಕಾರಕ್ಕೆ ಹೈಕೋರ್ಟ್ ನಿರ್ದೇಶಿಸಿದೆ.

**ಪ್ರಕರಣವೇನು:** ವಿನಾಯಕ ಎಂ. ಮುತ್ತತ್ತಿ ಬನಹಟ್ಟಿಯ ಜೆಎಂಎಫ್‌ಸಿ ನ್ಯಾಯಾಲಯದ ಸಹಾಯಕ ಪಬ್ಲಿಕ್ ಪ್ರಾಸಿಕೂಟರ್ ಕಛೇರಿಯಲ್ಲಿ ದಲಾಯತ್ ಆಗಿದ್ದರು. 2010ರಲ್ಲಿ ವಿನಾಯಕ ಅವರ ಪುತ್ರ ರಸ್ತೆ ಅಪಘಾತದಲ್ಲಿ ಮೃತಪಟ್ಟಿದ್ದ. ಇದರಿಂದ, 2011ರಲ್ಲಿ ಗಿರೀಶ್ ಅವರನ್ನು ದತ್ತು ಪಡೆದುಕೊಂಡಿದ್ದ ಅವರು, ದತ್ತು ಸ್ವೀಕಾರ ಪತ್ರ ಬರೆಸಿದ್ದರು.

ಈ ಮಧ್ಯೆ 2018ರ ಮಾರ್ಚ್ 27ರಂದು ವಿನಾಯಕ ಮೃತಪಟ್ಟಿದ್ದರು. ಅನುಕಂಪದ ಆಧಾರದಲ್ಲಿ ತಂದೆಯ ಉದ್ಯೋಗ ನೀಡುವಂತೆ ದತ್ತು ಪುತ್ರ ಗಿರೀಶ್ ಅದೇ ವರ್ಷ ಜೂನ್ 7ರಂದು ಅಭಿಯೋಜನಾ ಇಲಾಖೆಗೆ ಅರ್ಜಿ ಸಲ್ಲಿಸಿದ್ದರು. ದತ್ತು ಮಗನಾಗಿರುವ ಗಿರೀಶ್‌ಗೆ (ಅರ್ಜಿ ಸಲ್ಲಿಸಿದ ದಿನಾಂಕದಂದು) ಅನುಕಂಪದ ಉದ್ಯೋಗ ನೀಡಲು 'ಕರ್ನಾಟಕ ನಾಗರಿಕ ಸೇವೆಗಳು (ಅನುಕಂಪದ

ಆಧಾರದಲ್ಲಿ ನೇಮಕಾತಿ) ನಿಯಮಗಳು–1995' ರಲ್ಲಿ ಅವಕಾಶವಿಲ್ಲ ಎಂದು ತಿಳಿಸಿ, 2018ರ ಆಗಸ್ಟ್‌ನಲ್ಲಿ ಹಿಂಬರಹ ನೀಡಲಾಗಿತ್ತು.

ಇದನ್ನು ಪ್ರಶ್ನಿಸಿ ಗಿರೀಶ್ ಹೈಕೋರ್ಟ್‌ಗೆ ತಕರಾರು ಅರ್ಜಿ ಸಲ್ಲಿಸಿದ್ದರು. ವಿಚಾರಣೆ ನಡೆಸಿದ್ದ ಏಕಸದಸ್ಯ ಪೀಠ, ದತ್ತು ಮಕ್ಕಳಿಗೆ ಅನುಕಂಪದ ಉದ್ಯೋಗ ನೀಡಲು ಕಾನೂನಿನಲ್ಲಿ ಅವಕಾಶವಿಲ್ಲ ಎಂದು ಅಭಿಪ್ರಾಯಪಟ್ಟು 2021ರ ಜೂನ್ 24 ಎಂದು ಅರ್ಜಿ ವಜಾಗೊಳಿಸಿತ್ತು. ಇದರಿಂದ ಗಿರೀಶ್ ವಿಭಾಗೀಯ ಪೀಠಕ್ಕೆ ಮೇಲ್ಮನವಿ ಸಲ್ಲಿಸಿದ್ದರು.

**ಸಮಾನತೆಯ ಹಕ್ಕು ಉಲ್ಲಂಘನೆ:** ಮೃತ ವಿನಾಯಕ ಅವರು ಪತ್ನಿ, ಬುದ್ಧಿಮಾದ್ಯ ಮತ್ತು ಅಂಗವಿಕಲ ಪುತ್ರಿ (ಸ್ವಂತ ಮಗಳು) ಹಾಗೂ ದತ್ತುಪುತ್ರನನ್ನು ಅಗಲಿದ್ದಾರೆ. ಅನುಕಂಪದ ಮೇಲೆ ಉದ್ಯೋಗದ ಅರ್ಜಿ ಪರಿಗಣಿಸುವಾಗ ಅರ್ಜಿದಾರರ ಆರ್ಥಿಕ ಪರಿಸ್ಥಿತಿಯನ್ನೂ ಗಮನಿಸಬೇಕಾಗುತ್ತದೆ. ಸ್ವಂತ ಮಗ ಮೃತಪಟ್ಟ ಹಿನ್ನೆಲೆಯಲ್ಲಿ ಮನೆಯ ಜವಾಬ್ದಾರಿ ನೋಡಿಕೊಳ್ಳಲು ಗಿರೀಶ್ ಅವರನ್ನು ವಿನಾಯಕ ದತ್ತು ಪಡೆದಿದ್ದಾರೆ. ವಾಸ್ತವದಲ್ಲಿ ಅವರ ಸ್ವಂತ ಮಗಳಿಗೆ ಅನುಕಂಪದ ಉದ್ಯೋಗ ನೀಡಬೇಕಾಗುತ್ತದೆಯಾದರೂ, ಆಕೆ ಅಂಗವಿಕಲ ಹಾಗೂ ಬುದ್ಧಿಮಾಂದ್ಯಳಾಗಿದ್ದಾರೆ. ಇಂತಹ ಸಂದರ್ಭದಲ್ಲಿ ಮನೆ ಜವಾಬ್ದಾರಿ ಹೊತ್ತಿರುವ ದತ್ತುಪುತ್ರನಿಗೆ ಅನುಕಂಪದ ಉದ್ಯೋಗ ನೀಡಬೇಕಾಗುತ್ತದೆ. ಮೇಲಾಗಿ, ಅನುಕಂಪದ ಉದ್ಯೋಗದ ನಿಯಮಗಳಿಗೆ ಈಗಾಗಲೇ ತಿದ್ದುಪಡಿ ತಂದಿರುವುದರಿಂದ, ದತ್ತು ಪುತ್ರ ಮತ್ತು ಸ್ವಾಭಾವಿಕ ಪುತ್ರ ನಡುವೆ ತಾರತಮ್ಯ ಮಾಡಲಾಗುತ್ತದೆ ಎಂದು ಹೈಕೋರ್ಟ್ ಆದೇಶದಲ್ಲಿ ಹೇಳಿದೆ.

ಆಧಾರ:ವಿಶ್ವವಾಣಿ, ದಿನಾಂಕ:23.11.2022

## 12. ಆಯೋಗದ ಸ್ವಾಯತ್ತೆ ರಕ್ಷಿಸಿ

ಮುಖ್ಯ ಚುನಾವಣಾ ಆಯುಕ್ತರ (ಸಿಇಸಿ) ನೇಮಕಾತಿ ಪ್ರಕ್ರಿಯೆ ನಡೆಸುವಾಗ ಸುಪ್ರೀಂಕೋರ್ಟ್‌ನ ಮುಖ್ಯ ನ್ಯಾಯಾಮೂರ್ತಿಯನ್ನು (ಸಿಜೆಐ) ಸೇರಿಸಿಕೊಳ್ಳಿ. ಇದರಿಂದ ನೇಮಕಾತಿ ಹೆಚ್ಚು ಸ್ವತಂತ್ರವಾಗಿ ನಡೆಯುವುದನ್ನು ಖಾತ್ರಿಪಡಿಸಬಹುದು ಎಂದು ಸುಪ್ರೀಂಕೋರ್ಟ್ ಹೇಳಿದೆ.

ಆಡಳಿತ ಪಕ್ಷಗಳು ಅಧಿಕಾರದಲ್ಲಿ ಶಾಶ್ವತವಾಗಿರಲು, ಹಾಲಿ ವ್ಯವಸ್ಥೆ ಮುಂದುವರಿಸಲು ಹೌದಪ್ಪ ಎನ್ನುವ ಅಧಿಕಾರಿಗಳನ್ನು ಆಯಕಟ್ಟಿನ ಹುದ್ದೆಗೆ ನೇಮಿಸುತ್ತದೆ. ಆದರೆ ದಕ್ಷರನ್ನು ಸಾಂವಿಧಾನಿಕ ಹುದ್ದೆಗಳಿಗೆ ನೇಮಿಸಬೇಕು ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು.

ನೇಮಕಾತಿ ವೇಳೆಯಲ್ಲಿ ಸಂಸ್ಥೆಯ ಸ್ವಾಯತ್ತೆಗೆ ಧಕ್ಕೆ ಆಗುವುದಿಲ್ಲ ಎಂಬುದನ್ನು ಖಾತ್ರಿ ಪಡಿಸುವಂತಹ ಪರಿಶೀಲನಾ ಕ್ರಿಯೆಗಳು ಸಮರ್ಪಕವಾಗಿ ನಡೆಯಬೇಕು. ಈ ಪ್ರಕ್ರಿಯೆಯಲ್ಲಿ ಸಿಜೆಐ ಒಳಗೊಳ್ಳುವುದರಿಂದ ಚುನಾವಣಾ ಸಂಸ್ಥೆಯ ಸ್ವಾಯತ್ತೆಗೆ ಧಕ್ಕೆತಾಗುವುದಿಲ್ಲ ಎಂದು ಹೇಳಿದೆ. ಜೊತೆಗೆ, ಇತ್ತೀಚೆಗಷ್ಟೇ ಸ್ವಯಂ ನಿವೃತ್ತಿ ಪಡೆದಿರುವ ಅರುಣ್ ಗೋಯಲ್ ಅವರನ್ನು ಚುನಾವಣಾ ಆಯುಕ್ತರಾಗಿ ನೇಮಕಕ್ಕೆ ಸಂಬಂಧಿಸಿದ ಕಡತವನ್ನು ಹಾಜರುಪಡಿಸುವಂತೆ ನ್ಯಾಯಪೀಠ ನಿರ್ದೇಶನ ನೀಡಿತು. ಚುನಾವಣಾ ಆಯುಕ್ತ (ಇಸಿ) ಮತ್ತು ಸಿಇಸಿ ನೇಮಕಾತಿಗೂ ನ್ಯಾಯಮೂರ್ತಿಗಳ ನೇಮಕಕ್ಕೆ ಇರುವ ಕೊಲಿಜಿಯಂ ವ್ಯವಸ್ಥೆ ರೂಪಿಸಬೇಕು ಎಂದು ಕೋರಿರುವ ಅರ್ಜಿ ವಿಚಾರಣೆಯನ್ನು ನ್ಯಾ. ಜೋಫ ನ್ಯಾಯಾಮೂರ್ತಿಗಳಾದ ಅಜಯ್ ರಸ್ತೋಗಿ ಅನಿರುದ್ಧ ಬೋಸ್, ಹೃಷಿಕೇಶ್ ರಾಯ್ ಮತ್ತು ಸಿ.ಟಿ. ರವಿಕುಮಾರ್ ಪೀಠದ ಸದಸ್ಯರು.

**ಕೇಂದ್ರದ ವಾದ ಏನು:** 1991ರ ಚುನಾವಣಾ ಆಯೋಗದ ಆಯುಕ್ತರ ಸೇವಾ ಪರಿಷತ್ತಿನ ನಿಯಮ ಮತ್ತು ಅವರ ಕರ್ತವ್ಯ ಕಾಯ್ದೆ ಪ್ರಕಾರ ಚುನಾವಣಾ ಆಯೋಗವು ಸ್ವಾಯತ್ತ ಸಂಸ್ಥೆ. ಅಲ್ಲಿನ ಉನ್ನತ ಅಧಿಕಾರಿಗಳ ನೇಮಕ, ವೇತನ ಮತ್ತು ಸೇವಾವಧಿಯು ಈ ಕಾಯ್ದೆಯಂತೆ ನಡೆಯುತ್ತದೆ.

ಇದರಲ್ಲಿ ಕೋರ್ಟ್ ಹಸ್ತಕ್ಷೇಪ ಸಲ್ಲ. ಉನ್ನತ ಹುದ್ದೆಗಳು ಖಾಲಿ ಉಳಿದಿದ್ದು, ದೀರ್ಘ ಕಾಲದಿಂದ ನೇಮಕ ನಡೆಯದಿದ್ದರೆ, ಅನಿಯಂತ್ರಿಕ ಪ್ರಕ್ರಿಯೆಗಳಾಗುತ್ತಿವೆ ಎಂದಾಗ ಕೋರ್ಟ್ ಮಧ್ಯಪ್ರವೇಶಿಸಬಹುದು ಎಂದು ಸರ್ಕಾರ ವಾದಿಸಿತು.

ಸಿಇಸಿ ಮತ್ತು ಇಸಿ ನೇಮಕಾತಿ ವೇಳೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಹಿರಿಯ ಅಧಿಕಾರಿಗಳನ್ನು ಪರಿಗಣಿಸಲಾಗುತ್ತದೆ. ಇಸಿಗಳಲ್ಲಿ ಹಿರಿಯರಾದವರು ಸಿಇಸಿ ಆಗುತ್ತಾರೆ ಎಂದು ಹುದ್ದೆಗೆ ಅರ್ಹರನ್ನು ಕೇಂದ್ರ ಸಂಪುಟ ಶಿಫಾರಸ್ಸು ಮಾಡುತ್ತದೆ. ಹಾಲಿ ವ್ಯವಸ್ಥೆಯಲ್ಲಿ ಸಿಇಸಿ ಮತ್ತು ಇಬ್ಬರು ಇಸಿಗಳಿದ್ದಾರೆ ಎಂದ ಅವರು ನೇಮಕಾತಿಗೆ ಕೊಲಿಜಿಯಂ ಮಾದರಿ ವ್ಯವಸ್ಥೆಯನ್ನು ವಿರೋಧಿಸಿದರು.

**ಸಿಇಸಿ ಶಕ್ತರೇ:** ಒಂದೊಮ್ಮೆ ಪ್ರಧಾನಿ ವಿರುದ್ಧವೇ ಕ್ರಮ ಕೈಗೊಳ್ಳಬೇಕಿದ್ದ ಪಕ್ಷದಲ್ಲಿ ಸಿಇಸಿ ಅದನ್ನು ಮಾಡಲು ಶಕ್ತರೇ, ಏಕರಂದರೆ ಈ ಹುದ್ದೆಯ ನೇಮಕಾತಿಯನ್ನು ಅನುಮೋದೊಸುವವರು ಪ್ರಧಾನಿ ಮತ್ತು ಸಂಪುಟ. ಅದ್ದರಿಂದ ಈ ಪ್ರಕ್ರಿಯೆಯನ್ನು ಬದಲಾಯಿಸುವ ಧೈರ್ಯ ತೋರಬೇಕಿದೆ. ಗುಣವಂತ ವ್ಯಕ್ತಿಯಷ್ಟೆ ನೇಮಕವಾದರೆ ಸಾಲದು ಆ ಗುಣಾತಿಶಯವು ಸ್ವಾತಂತ್ರ್ಯ ಪೂರ್ಣವಾಗಿರಬೇಕು ಎಂದು ಪೀಠ ಅಭಿಪ್ರಾಯಪಟ್ಟಿತು.

**ನ್ಯಾಯಾಪೀಠ ಹೇಳಿದ್ದೇನು:** ಚುನಾವಣಾ ಆಯೋಗದ ಉನ್ನತ ಹುದ್ದೆಗಳಿಗೆ ಸಂಬಂಧಿಸಿದ 1991ರ ಕಾಯ್ದೆಯು ಹೆಸರೇ ಸೂಚಿಸುವಂತೆ ಸೇವಾ ನಿಯಮಗಳನ್ನು ಸ್ಪಷ್ಟಪಡಿಸುತ್ತದೆ ಹೊರತು ಆಯ್ಕೆ ಪ್ರಕ್ರಿಯೆಯ ದಕ್ಷತೆ ಕುರಿತು ಚರ್ಚಿಸುವುದಿಲ್ಲ. ಉದಾಹರಣೆಗೆ ಸರ್ಕಾರದ ಮನಸ್ಥಿತಿಯನ್ನೇ ಹೊಂದಿರುವ ಹೌದಪ್ಪ ಎನ್ನುವಂತಹ ಅಧಿಕಾರಿಯನ್ನು ಅರ್ಹನೆಂದು ಸರ್ಕಾರ ನೇಮಿಸಿದರೆ, ಆತನಿಗೂ ಒಪ್ಪುವ ಕಾಯ್ದೆಯ ಎಲ್ಲ ನಿಯಮ ಅಧಿಕಾರ ಸಂಬಳ ಸವಲತ್ತು ದೊರೆಯುತ್ತದೆ. ಆಗ ಸಂಸ್ಥೆಯ ಸ್ವಾಯತ್ತೆ ಎಲ್ಲಿ ಉಳಿಯಿತು ಇದು ಚುನಾವಣಾ ಆಯೋಗ ಸ್ವಾತಂತ್ರ್ಯ ಬಹಳ ಮುಖ್ಯ ಎಂದು ಪೀಠ ಖಚಿತ ಧ್ವನಿಯಲ್ಲಿ ಹೇಳಿತು. ಚುನಾವಣಾ ಆಯುಕ್ತರ ನೇಮಕಕ್ಕೆ ಕೊಲಿಜಿಯಂ ಮಾದರಿಯಂತಹ ವ್ಯವಸ್ಥೆ ಬೇಕು ಎಂದು ಹಲವರು ಆಗ್ರಹಿಸಿದ್ದಾರೆ. ಈ ಪೈಕಿ ಬಿಜೆಪಿಯ ಹಿರಿಯ ನಾಯಕ ಎಲ್.ಕೆ. ಆಡ್ವಾಣಿ ಕೂಡ ಒಬ್ಬರು. 1990ರ ದಶಕದಲ್ಲಿ ಅವರು ಈ ಆಗ್ರಹ ಮಾಡಿದ್ದರು ಎಂದು ಪೀಠ ಹೇಳಿತು.

**ನಾಲ್ಕು ವಿಶೇಷ ಪೀಠಗಳ ರಚನೆ:** ವಿಷಯವಾರು ಅರ್ಜಿಗಳ ವಿಚಾರಣೆಗಾಗಿಯೇ ನಾಲ್ಕು ವಿಶೇಷ ಪೀಠಗಳನ್ನು ರಚಿಸುವುದಾಗಿ ಸುಪ್ರೀಂಕೋರ್ಟ್ ತಿಳಿಸಿದೆ. ಕ್ರಿಮಿನಲ್ ವಿಷಯಗಳಿಗೆ ಸಂಬಂಧಿಸಿದ, ನೇರ ಮತ್ತು ಪರೋಕ್ಷ ತೆರಿಗೆ ವ್ಯಾಜ್ಯ, ಭೂಸ್ವಾಧೀನದ ತಕರಾರು ಮತ್ತು ವಾಹನ ಅಪಘಾತ ಕ್ಲೇಮು ನ್ಯಾಯಾಧೀಕರಣ ತೀರ್ಪಿನ ಮೇಲ್ಮನವಿಗೆ ಸಂಬಂಧಿಸಿದ ಅರ್ಜಿಗಳ ವಿಚಾರಣೆಯನ್ನು ಈ ನಾಲ್ಕು ಪೀಠಗಳು ನಡೆಸಲಿವೆ ಎಂದು ಮುಖ್ಯ ನ್ಯಾಯಾಮೂರ್ತಿ ಡಿ.ವೈ ಚಂದ್ರಚೂಡ್ ಹೇಳಿದರು. ಭೂ ಸ್ವಾಧೀನಕ್ಕೆ ಸಂಬಂಧಿಸಿದ ಅರ್ಜಿಯನ್ನು ತುರ್ತು ವಿಚಾರಣೆಗೆ ಪರಿಗಣಿಸಬೇಕು ಎಂಬ ಮನವಿಗೆ ಪ್ರತಿಕ್ರಿಯಿಸಿದ ಸಿಜೆಐ, ಇನ್ನುಂದೆ ಈ ವಿಷಯವನ್ನು ವಿಶೇಷ ಪೀಠ ಇತ್ಯರ್ಥ ಪಡಿಸಲಿದೆ. ನ್ಯಾ ಸೂರ್ಯಕಾಂತ್ ನೇತೃತ್ವದ ಪೀಠ ಭೂಸ್ವಾಧೀನ ತಕರಾರಿನ ಅರ್ಜಿಗಳ ವಿಚಾರಣೆ ನಡೆಸಲಿದೆ ಎಂದರು. ಸುಪ್ರೀಂಕೋರ್ಟ್‌ನ ಪ್ರತಿಯೊಂದು ಪೀಠವೂ ನಿತ್ಯ 10 ಜಾಮೀನು ಕುರಿತು ಅರ್ಜಿಗಳು ಹಾಗೂ ಕೌಟುಂಬಿಕ ಕಲಹಕ್ಕೆ ಸಂಬಂಧಿಸಿದ 10 ವರ್ಗಾವಣೆ ಅರ್ಜಿಗಳ ವಿಚಾರಣೆಯನ್ನು ನಡೆಸಲಿದೆ ಎಂದು ಕಳೆದ ವಾರ ಸಿಜೆಐ ಹೇಳಿದ್ದರು.

ಆಧಾರ: ವಿಜಯವಾಣಿ ದಿನಾಂಕ:24.11.2022

## 13. ಆತುರದ ನೇಮಕಾತಿ ಏಕೆ

ಚುನಾವಣಾ ಆಯುಕ್ತರ ನೇಮಕಾತಿ ಬಗ್ಗೆ ಸಮಗ್ರ ವಿಚಾರಣೆ ನಡೆಸಿರುವ ಸುಪ್ರೀಂಕೋರ್ಟ್‌ನ ಸಾಂವಿಧಾನಿಕ ಪೀಠ, ಈಚೆಗಷ್ಟೇ ಹೊಸದಾಗಿ ನೇಮಕಗೊಂಡ ಮಾಜಿ ಐಎಎಸ್ ಅಧಿಕಾರಿ ಅರುಣ್ ಗೋಯೆಲ್ ಅವರನ್ನು ಅತಿ ಆತುರದಲ್ಲಿ ನೇಮಕಗೊಳಿಸಿದ್ದರ ಉದ್ದೇಶವೇನು ಎಂದು ಕೇಂದ್ರ ಸರ್ಕಾರವನ್ನು ಖಾರವಾಗಿ ಪ್ರಶ್ನಿಸಿದೆ.

ಅರುಣ್ ಗೋಯೆಲ್ ನೇಮಕಾತಿ ಪ್ರಕ್ರಿಯೆ ಕುರಿತ ದಾಖಲೆಗಳನ್ನು ಕೇಂದ್ರ ಸರ್ಕಾರದಿಂದ ಪಡೆದು ಪರಿಶೀಲನೆ ನಡೆಸಿದ ನ್ಯಾಯಪೀಠ, ಕೇಂದ್ರ ಕಾನೂನು ಸಚಿವರು ಶಾರ್ಟ್‌ಲಿಸ್ಟ್ ಮಾಡಿದ ಹೆಸರುಗಳು ಯೋಗ್ಯ ಎಂದು ಭಾವಿಸಿದ್ದರೂ, ನಿಮ್ಮ ಆಯ್ಕೆ ಪ್ರಕ್ರಿಯೆ ಅಚ್ಚರಿ ಮೂಡಿಸಿದೆ. ಚುನಾವಣಾ ಆಯುಕ್ತರ ನೇಮಕಾತಿ ಕುರಿತ ಫೈಲನ್ನು ನವೆಂಬರ್ 18ರಂದು ಕಾನೂನು ಇಲಾಖೆ ಸಿದ್ಧಪಡಿಸಿ, ನಂತರ ಪ್ರಧಾನಮಂತ್ರಿಯವರೂ ಅದೇ ದಿನದಂದು ಒಂದು ಹೆಸರಿಗೆ ಸಮ್ಮತಿ ನೀಡಿದರು. ಈ ಆಯ್ಕೆಯನ್ನು ತರಾತುರಿಯಲ್ಲೇಕೆ ಮಾಡಲಾಗಿದೆ? ಎಂದು ನ್ಯಾಯಮೂರ್ತಿ ಕೆ.ಎಂ.ಜೋಸೆಫ್ ನೇತೃತ್ವದ ಸಾಂವಿಧಾನಿಕ ಪೀಠ ಕೇಳಿದೆ.

ಮೇ 15 ರಿಂದ ಈ ಹುದ್ದೆ ಖಾಲಿಯಿತ್ತು. ಆದರೆ ಈ ಪ್ರಕ್ರಿಯೆ ಒಂದೇ ದಿನದಲ್ಲಿ ಪ್ರಾರಂಭಗೊಂಡು, ಪೂರ್ಣಗೊಂಡಿತು. 24 ಗಂಟೆಗೆ ಮುನ್ನವೇ ಎಲ್ಲಾ ಪ್ರಕ್ರಿಯೆ ಮುಗಿಸಿ, ಅಧಿಸೂಚನೆ ಹೊರಡಿಸಲಾಗಿದೆ. ಆಯ್ಕೆ ಬಗ್ಗೆ ಇಲ್ಲಿ ಯಾವ ರೀತಿಯ ಮೌಲ್ಯಮಾಪನ ನಡೆಸಲಾಗಿದೆ? ಎಂದು ಕೇಂದ್ರಕ್ಕೆ ನ್ಯಾಯಪೀಠ ಬಿಸಿಮುಟ್ಟಿಸಿತು.

**ತೀರ್ಪು ಕಾದಿರಿಸಿದ ಕೋರ್ಟ್**: ಚುನಾವಣಾ ಆಯುಕ್ತರ ನೇಮಕಾತಿಗೆ ಸುಪ್ರೀಂಕೋರ್ಟ್ ಕೊಲಿಜಿಯಂ ಮಾದರಿ ವ್ಯವಸ್ಥೆ ಜಾರಿಗೆ ತರಬೇಕು ಎಂದು ಕೋರಿ ಸಲ್ಲಿಸಲಾಗಿರುವ ಅರ್ಜಿಗಳ ವಿಚಾರಣೆ ನಡೆಸಿರುವ ನ್ಯಾಯಪೀಠ, ವಿಚಾರಣೆಯನ್ನು ಪೂರ್ಣಗೊಳಿಸಿ, ತೀರ್ಪನ್ನು ಕಾದಿರಿಸಿದೆ. ಚುನಾವಣಾ ಆಯುಕ್ತ ಹುದ್ದೆಗೆ ನೇಮಕಗೊಳ್ಳುವ ವ್ಯಕ್ತಿ ಕಡ್ಡಾಯವಾಗಿ 6 ವರ್ಷ ಅಧಿಕಾರಾವಧಿ ಪೂರ್ಣಗೊಳಿಸಬೇಕು ಎಂದು ಕಾನೂನೇ ಹೇಳುತ್ತದೆ. ಆದರೆ, ನಿಗದಿತ ಆರು ವರ್ಷಗಳ ಅಧಿಕಾರಾವಧಿಯನ್ನು ಪೂರ್ಣಗೊಳಿಸಲು ಸಾಧ್ಯವಾಗದ ನಾಲ್ಕು ಹೆಸರುಗಳಲ್ಲಿ ಒಬ್ಬರನ್ನು ಆಯ್ಕೆ ಮಾಡಲು ಕಾನೂನು ಸಚಿವರು ಆಸಕ್ತಿ ತೋರಿದ್ದೇಕೆ? 6 ವರ್ಷ ಅವಧಿ ಪೂರ್ಣಗೊಳಿಸಲು ಸಾಧ್ಯವಾಗದವರನ್ನು ನೇಮಕ ಮಾಡುವುದು ಮುಖ್ಯ ಚುನಾವಣಾ ಆಯುಕ್ತರು ಮತ್ತು ಇತರ ಚುನಾವಣಾ ಆಯುಕ್ತರ (ಸೇವಾ ಷರತ್ತುಗಳು) ಕಾಯ್ದೆ 1991ರ ಸೆಕ್ಷನ್ 6ರ ಸ್ಪಷ್ಟ ಉಲ್ಲಂಘನೆ ಎಂದು ವಿಚಾರಣೆ ಸಂದರ್ಭದಲ್ಲಿ ಅಟಾರ್ನಿ ಜನರಲ್ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದಾಗ ವಕೀಲ ಪ್ರಶಾಂತ್ ಭೂಷಣ್ ತಮ್ಮ ಅನಿಸಿಕೆ ಮೂಲಕ ಹಸ್ತಕ್ಷೇಪ ಮಾಡಲು ಮುಂದಾದರು. ಇದರಿಂದ ಕುಪಿತಗೊಂಡ ಅಟಾರ್ನಿ ಜನರಲ್ ವೆಂಕಟರಮಣಿ, ದಯವಿಟ್ಟು ಸ್ವಲ್ಪ ಸಮಯ ನಿಮ್ಮ ಬಾಯಿಯನ್ನು ಹಿಡಿದಿಟ್ಟುಕೊಳ್ಳಿ ಎಂದರು.

**ಯಾರು ಅರುಣ್ ಗೋಯೆಲ್**: ಅರುಣ್ ಗೋಯೆಲ್ ನವೆಂಬರ್ 21ರಂದು ಕೇಂದ್ರ ಮುಖ್ಯ ಚುನಾವಣಾ ಆಯುಕ್ತರಾಗಿ ಅಧಿಕಾರ ವಹಿಸಿಕೊಂಡಿದ್ದಾರೆ. ಪಂಜಾಬ್ ಕೇಡರ್‌ನ 1985ರ ಬ್ಯಾಚ್‌ನ ಐಎಎಸ್ ಅಧಿಕಾರಿಯಾಗಿದ್ದ ಅರುಣ್, 37 ವರ್ಷಗಳ ಸೇವೆಯ ನಂತರ ನಿವೃತ್ತಿಯಾದರು. ನಿವೃತ್ತಿ ವೇಳೆ ಕೇಂದ್ರ ಭಾರಿ ಕೈಗಾರಿಕಾ ಸಚಿವಾಲಯದ ಕಾರ್ಯದರ್ಶಿಯಾಗಿದ್ದರು. 2025ರ ಫೆಬ್ರವರಿ ತಿಂಗಳಲ್ಲಿ ರಾಜೀವ್ ಕುಮಾರ್ ನಿವೃತ್ತಿ ನಂತರ ಹಿರಿತನದ ಆಧಾರದಲ್ಲಿ ಅರುಣ್ ಗೋಯೆಲ್ ಮುಖ್ಯ ಚುನಾವಣಾ ಆಯುಕ್ತ ಹುದ್ದೆಗೇರಲಿದ್ದಾರೆ.

**ಸ್ವಾತಂತ್ರ್ಯಕ್ಕೆ ಧಕ್ಕೆ:** ಅರ್ಜಿದಾರರ ಪರ ವಾದ ಮಂಡಿಸಿದ ಹಿರಿಯ ವಕೀಲ ಗೋಪಾಲ್ ಶಂಕರ ನಾರಾಯಣ್, 6 ವರ್ಷಗಳ ಅವಧಿ ಪೂರ್ಣಗೊಳಿಸಬಹುದಾದ ಯಾವುದೇ ಅಧಿಕಾರಿಯನ್ನು

ಚುನಾವಣಾ ಆಯುಕ್ತರ ಹುದ್ದೆಗೆ ಕೇಂದ್ರ ಸರ್ಕಾರ ಈವರೆಗೆ ನೇಮಿಸಿಲ್ಲ. ಇದರಿಂದ ಸಂಸ್ಥೆಯ ಸ್ವಾತಂತ್ರ್ಯದ ಮೇಲೆ ದುಷ್ಪರಿಣಾಮ ಬೀರುತ್ತಿದೆ. 6 ವರ್ಷಗಳ ಅಧಿಕಾರವಧಿಯನ್ನು ಹೇಗೆ ಮೊಟಕುಗೊಳಿಸುತ್ತೀರಿ. ಚುನಾವಣಾ ಆಯೋlೀಗ ಎನ್ನುವುದು ಈಗ ಅಧಿಕಾರಶಾಹಿಗಳ ಕೇಡರ್ ಆಗಿಬಿಟ್ಟಿದೆ. ಜೇಷ್ಠತೆಯ ಆಧಾರದ ಮೇಲೆ ವ್ಯಕ್ತಿಗಳನ್ನು ನೇಮಿಸಲಾಗುತ್ತದೆ. ಆದರೆ ಕಾನೂನು ಬೇರೆಯದೇ ಆಗಿದೆ. 6 ವರ್ಷಗಳ ಅಧಿಕಾರವಧಿ ಇರಬೇಕು ಎಂದು ನಿಯಮ ಹೇಳುತ್ತದೆ. ಆದರೆ ಕೇಂದ್ರ 6 ತಿಂಗಳ ಕಾಲ ಅವಧಿಗೆ ವ್ಯಕ್ತಿಯನ್ನು ಆಯ್ಕೆ ಮಾಡುತ್ತದೆ. ಹೀಗಾಗಿ, ಈ ಸಂಸ್ಥೆ ಸ್ವತಂತ್ರವಾಗಿ ಉಳಿಯಬಹುದೆಂಬ ನಂಬಿಕೆ ನಮಗಿಲ್ಲ ಎಂದು ಅಸಮಾಧಾನ ಹೊರಹಾಕಿದರು.

ಆಧಾರ:ವಿಜಯವಾಣಿ, ದಿನಾಂಕ:25.11.2022

## 14. ಗಡಿ ವಿವಾದಕ್ಕೆ ಮಾತೇ ಮದ್ದು

ಕರ್ನಾಟಕ–ಮಹಾರಾಷ್ಟ್ರ ಗಡಿ ವಿವಾದಕ್ಕೆ ಸಂಬಂಧಿಸಿದಂತೆ ಕಳೆದ ಮೂರು ದಿನಗಳಿಂದ ರೋಷಾವೇಷ ಪ್ರದರ್ಶಿಸುತ್ತಿದ್ದ ಮಹಾರಾಷ್ಟ್ರ, ಕರ್ನಾಟಕ ನೀಡಿರುವ ತಿರುಗೇಟಿಗೆ ಕೊಂಚ ಮೆತ್ತಗಾದಂತೆ ಕಂಡು ಬಂದಿದ್ದು, ಮಾತುಕತೆ ಮೂಲಕ ಬಗೆಹರಿಸಿಕೊಳ್ಳುವ ಪ್ರಸ್ತಾಪ ಮಾಡಿದೆ.

ಇದರ ಬೆನ್ನಲ್ಲೇ ಮುಖ್ಯಮಂತ್ರಿ, ವಿವಾದ ಕುರಿತಂತೆ ಸರ್ವಪಕ್ಷಗಳ ಸಭೆ ಕರೆದು ಚರ್ಚಿಸಲಾಗುವುದು ಎಂದಿದ್ದಾರೆ. ಮಾತುಕತೆಗೆ ಮಹಾರಾಷ್ಟ್ರ ಸಿಎಂ ಉತ್ಸಾಹ ತೋರಿದ್ದಾರೆ. ಪ್ರಕರಣ ದಾಖಲಿಸಿದ್ದೇ ಅವರು, ಶಿಂದೆ ಹೇಳಿಕೆ ಕುರಿತು ಹಾಗೂ ಗಡಿ ವಿವಾದಕ್ಕೆ ಸಂಬಂಧಿಸಿದ ಎಲ್ಲಾ ವಿಚಾರಗಳ ಬಗ್ಗೆ ಮುಂದಿನ ವಾರ ಸರ್ವಪಕ್ಷ ಸಭೆಯಲ್ಲಿ ನಿರ್ಧಾರ ಕೈಗೊಳ್ಳಲಾಗುವುದು ಎಂದಿದ್ದಾರೆ ಬೊಮ್ಮಾಯಿ.

ಬೆಂಗಳೂರಿನಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿದ ಬೊಮ್ಮಾಯಿ, ಗಡಿ ವಿವಾದ ಮುಗಿದ ಅಧ್ಯಾಯ. ಆದರೆ ಮಹಾರಾಷ್ಟ್ರದವರು ಮತ್ತೆ ವಿವಾದ ಎಬ್ಬಿಸಿದ್ದಾರೆ. ಅವರೇ ದಾವೆ ಹೂಡಿದ್ದಾರೆ. ಜತ್ ತಾಲ್ಲೂಕನ್ನು ಕರ್ನಾಟಕಕ್ಕೆ ಸೇರಿಸುವ ಬಗ್ಗೆ ಗ್ರಾಮ ಪಂಚಾಯ್ತಿಗಳ ನಿರ್ಣಯ ಸೇರಿದಂತೆ ಪೂರಕ ದಾಖಲೆಗಳು ನಮ್ಮ ಬಳಿ ಇವೆ. ಎಲ್ಲಾ ವಿಚಾರಗಳಗಳನ್ನು ಸುಪ್ರೀಂ ಕೋರ್ಟ್‌ನಲ್ಲಿ ಸಮರ್ಥವಾಗಿ ಮಂಡಿಸಲಾಗುವುದು. ಇದಕ್ಕೆ ಎಲ್ಲಾ ರೀತಿಯ ಸಿದ್ಧತೆಗಳನ್ನು ಮಾಡಿಕೊಳ್ಳಲಾಗಿದೆ. ನಮ್ಮ ವಾದಕ್ಕೆ ಗಟ್ಟಿ ಆಧಾರವೂ ಇದೆ ಎಂದು ಹೇಳಿದ್ದಾರೆ.

ಈ ಕುರಿತು ಮಾತನಾಡಿರುವ ಮಹಾರಾಷ್ಟ್ರ ಮುಖ್ಯಮಂತ್ರಿ, ಗಡಿ ವಿವಾದ ಮಾತುಕತೆ ಮೂಲಕ ಬಗೆಹರಿಯಬೇಕೆಂಬುದು ನಮ್ಮ ನಿಲುವು. ನಾವು ಈಗಾಗಲೇ ಸಭೆ ನಡೆಸಿದ್ದೇವೆ. ಹಳೆಯ ವಾದ ಕೋರ್ಟ್ ಮುಂದಿದೆ. ಎರಡೂ ರಾಜ್ಯಗಳ ರಾಜ್ಯಪಾಲರ ಸಭೆಯಾಗಿದೆ. ಕೇಂದ್ರ ಸರ್ಕಾರ ಸಹ ಸಕಾರಾತ್ಮಕ ನಿಲುವು ವ್ಯಕ್ತಪಡಿಸಬೇಕಿದೆ. ವಿವಾದ ಸರ್ವಸಮ್ಮತಿಯ ಮೂಲಕ ಬಗೆಹರಿಯಬೇಕೆಂಬುದು ನಮ್ಮ ನಿಲುವಾಗಿದೆ. ಈ ನಿಟ್ಟಿನಲ್ಲಿ ನಾವು ಸಭೆ ಸಹ ಮಾಡಿದ್ದೇವೆ ಎಂದು ತಿಳಿಸಿದರು.

ಗಡಿ ಭಾಗದ ಮರಾಠಿಗಳಿಗೆ ಸರ್ಕಾರದ ಯೋಜನೆಗಳ ಲಾಭ ಹೆಚ್ಚಿಸಿದ್ದೇವೆ. ಮತ್ಯಾರೋ ವಾದ ಸೃಷ್ಟಿಸಿ ಮತ್ತಷ್ಟು ಜಟಿಲಗೊಳಿಸಬಾರದು. ನಮ್ಮ ಸಭೆಯಲ್ಲಿ ಸಾಕಷ್ಟು ಸಲಹೆಗಳು ಬಂದಿವೆ. ಎರಡೂ ರಾಜ್ಯಗಳು ಮಾತುಕತೆ ಮೂಲಕ ವಿವಾದ ಬಗೆಹರಿಸಿಕೊಳ್ಳಬೇಕು ಎಂಬುದು ನಮ್ಮ ನಿಲುವು. ಗಡಿಭಾಗದ ಮರಾಠಿಗಳಿಗೆ ಸಿಗುತ್ತಿದ್ದ ಮಹಾರಾಷ್ಟ್ರ ಸರ್ಕಾರದ ಯೋಜನೆಯ ಲಾಭ ಹೆಚ್ಚಿಸಿದ್ದೇವೆ. ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿ 10 ಸಾವಿರ ರೂಪಾಯಿಯಿಂದ 20 ಸಾವಿರ ರೂಪಾಯಿಗೆ ಹೆಚ್ಚಿಸಲಾಗಿದೆ. ಧರ್ಮಾದಾಯ ಸಹಾಯ ನಿಧಿ ಯೋಜನೆಯ ಲಾಭ ಬಂದ್ ಆಗಿತ್ತು. ಅದನ್ನೂ ಮತ್ತೆ ಶುರು ಮಾಡಿದ್ದೇವೆ ಅಷ್ಟೇ ಎಂದು ಶಿಂಧೆ ಸ್ಪಷ್ಟಪಡಿಸಿದರು.

ಆಧಾರ:ವಿಶ್ವವಾಣಿ, ದಿನಾಂಕ:25.11.2022

## 15. ನಿಷೇಧಿಸಿದ್ದು ಸರಿ

ಉಗ್ರ ಸಂಘಟನೆಗಳೊಂದಿಗೆ ಸಂಪರ್ಕ ಹೊಂದಿ ಭಯೋತ್ಪಾದಕ ಚಟುವಟಿಕೆಗಳಲ್ಲಿ ಭಾಗಿಯಾಗಿ ದೇಶದಲ್ಲಿ ಅಶಾಂತಿಯ ವಾತಾವರಣ ಸೃಷ್ಟಿ ಮಾಡುತ್ತಿದ್ದ ಆರೋಪದ ಹಿನ್ನೆಲೆಯಲ್ಲಿ 'ಪಾಪ್ಯೂಲರ್ ಫ್ರಂಟ್ ಆಫ್ ಇಂಡಿಯಾ' (ಪಿಎಫ್‌ಐ) ಸಂಘಟನೆಯನ್ನು ನಿಷೇಧಿಸಿದ ಕೇಂದ್ರ ಸರ್ಕಾರದ ನಿರ್ಧಾರವನ್ನು ಹೈಕೋರ್ಟ್ ಎತ್ತಿಹಿಡಿದಿದೆ.

ಪಿಎಫ್‌ಐ ಅನ್ನು ನಿಷೇಧಿಸಿರುವುದು ಮತ್ತು ಆ ನಿಷೇಧವನ್ನು ತಕ್ಷಣದಿಂದ ಜಾರಿಗೆ ತಂದಿರುವುದನ್ನು ಪ್ರಶ್ನಿಸಿ ಪಿಎಫ್‌ಐ ಅಧ್ಯಕ್ಷ ನಾಸಿರ್ ಪಾಷಾ ಸಲ್ಲಿಸಿರುವ ಅರ್ಜಿ ವಿಚಾರಣೆ ನಡೆಸಿ ನವೆಂಬರ್ 28ರಂದು ಕಾಯ್ದಿರಿಸಿದ್ದ ತೀರ್ಪನ್ನು ಪ್ರಕಟಿಸಿರುವ ನ್ಯಾಯಮೂರ್ತಿ ಎಂ.ನಾಗಪ್ರಸನ್ನ ಅವರಿದ್ದ ಏಕಸದಸ್ಯ ನ್ಯಾಯಪೀಠ, ಕೇಂದ್ರ ಸರ್ಕಾರದ ಆದೇಶ ಎತ್ತಿಹಿಡಿದು ಅರ್ಜಿಯನ್ನು ವಜಾಗೊಳಿಸಿ ಆದೇಶಿಸಿದೆ.

ಪಿಎಫ್‌ಐ ಸಂಘಟನೆಯನ್ನು ನಿಷೇಧ ಮಾಡಿರುವ ವಿಚಾರ ಸಂಬಂಧಪಟ್ಟ ನ್ಯಾಯಾಧೀಕರಣದ ಮುಂದಿದೆ. ಹೀಗಾಗಿ, ನಿಷೇಧವನ್ನು ತಕ್ಷಣದಿಂದ ಜಾರಿಗೊಳಿಸಿರುವ ಕೇಂದ್ರ ಸರ್ಕಾರದ ಕ್ರಮವನ್ನು ಸದ್ಯ ನ್ಯಾಯಾಲಯ ಪರಿಶೀಲಿಸಬೇಕಿದೆ. ಅದರಂತೆ, ನಿಷೇಧವನ್ನು ತಕ್ಷಣದಿಂದ ಜಾರಿಗೆ ತಂದಿರುವುದನ್ನು ಡಾ:ಝಾಕೀರ್ ನಾಯ್ಕ್ ಅವರ ಇಸ್ಲಾಮಿಕ್ ರಿಸರ್ಚ್ ಫೌಂಡೇಷನ್ (ಐಆರ್‌ಎಸ್) ಪ್ರಕರಣದಲ್ಲಿ ದೆಹಲಿ ಹೈಕೋರ್ಟ್ ನೀಡಿರುವ ತೀರ್ಪನ್ನು ಸುಪ್ರೀಂಕೋರ್ಟ್ ಮಹಮ್ಮದ್ ಜಾಫರ್ ಪ್ರಕರಣದಲ್ಲಿ ಪರಿಗಣಿಸಿರುವುದನ್ನು ತನ್ನ ತೀರ್ಪಿನಲ್ಲಿ ಹೈಕೋರ್ಟ್ ಉಲ್ಲೇಖಿಸಿದೆ.

ಅಲ್ಲದೇ ಸಂವಿಧಾನದ ಅನುಚ್ಛೇದ 19(1)(ಸಿ) ಅಡಿಯಲ್ಲಿ ದೊರಕುವ ಹಕ್ಕು ಮತ್ತು ಸ್ವಾತಂತ್ರ್ಯ ಅನುಚ್ಛೇದ 19(4)ನ್ನು ಅವಲಂಬಿಸಿದೆ. ದೇಶದ ಸಮಗ್ರತೆ ಹಾಗೂ ಐಕ್ಯತೆಗೆ ಧಕ್ಕೆ ಬರುವ ಸಂದರ್ಭಗಳಿದ್ದಾಗ ಕೆಲವು ನಿರ್ಬಂಧಗಳನ್ನು ಹೇರಬಹುದು. ಕೇಂದ್ರ ಸರ್ಕಾರ ಹೊರಡಿಸಿರುವ ಅಧಿಸೂಚನೆಯಲ್ಲಿ ನಿಷೇಧಕ್ಕೆ ಕಾರಣಗಳನ್ನು ಆಧಾರಸಹಿತವಾಗಿ ಕೊಡಲಾಗಿದೆ. ಹಾಗಾಗಿ, ಕೇಂದ್ರ ಸರ್ಕಾರದ ಅಧಿಸೂಚನೆಯಲ್ಲಿ ಮಧ್ಯಪ್ರವೇಶಿಸುವುದಿಲ್ಲ ಎಂದು ಹೈಕೋರ್ಟ್ ತೀರ್ಪಿನಲ್ಲಿ ಹೇಳಿದೆ.

**ಕೇಂದ್ರ ಸರ್ಕಾರದ ವಾದ**: ವಿಚಾರಣೆ ವೇಳೆ ನಿಷೇಧವನ್ನು ಬಲವಾಗಿ ಸಮರ್ಥಿಸಿಕೊಂಡಿದ್ದ ಕೇಂದ್ರ ಸರ್ಕಾರ, ಫಿಎಫ್‌ಐ ಸಂಘಟನೆ ದೇಶ ವಿರೋಧಿ ಕೃತ್ಯಗಳನ್ನು ನಡೆಸುತ್ತಿದೆ. ಅದು ಭಯೋತ್ಪಾದಕ ಸಂಘಟನೆಗಳ ಜೊತೆ ಕೈಜೋಡಿಸಿ ದೇಶದಲ್ಲಿ ಹಿಂಸಾತ್ಮಕ ಚಟುವಟಿಕೆಗಳನ್ನು ನಡೆಸುವುದಲ್ಲದೆ, ಅಂತಹ ಕೃತ್ಯಗಳಿಗೆ ಕುಮ್ಮಕ್ಕು ಸಹ ನೀಡುತ್ತಿದೆ. ಸಂಘಟನೆಯ ಕಾರ್ಯಕರ್ತರು ದೇಶದಲ್ಲಿ ಭಯದ ವಾತಾವರಣ ಸೃಷ್ಟಿ ಮಾಡುತ್ತಿದ್ದಾರೆ. ಎಲ್ಲಾ ಆಧಾರಗಳನ್ನು ಸಂಗ್ರಹಿಸಿದ ಬಳಿಕವೇ ನಿಷೇಧ ಹೇರಲಾಗಿದೆ. ಕಾರಣವಿಲ್ಲದೆ ನಿಷೇಧ ಮಾಡಲಾಗಿದೆ ಎಂಬ ವಾದ ಒಪ್ಪಿತವಲ್ಲ. ಇದರಲ್ಲಿ ಕಾನೂನುಬಾಹಿರ ಅನ್ನುವುದೇನೂ ಇಲ್ಲ. ಆದ್ದರಿಂದ ಅರ್ಜಿಯನ್ನು ಪರಿಗಣಿಸಬಾರದು ಎಂದು ವಾದಿಸಿತ್ತು.

**ಅರ್ಜಿದಾರರ ವಾದವೇನಿತ್ತು:** 'ಕಾನೂನುಬಾಹಿರ ಚಟುವಟಿಕೆಗಳ ನಿಯಂತ್ರಣ ಕಾಯ್ದೆ' (ಯುಎಪಿಎ) 1967ರ ಸೆಕ್ಷನ್ 3ರ ಉಪನಿಯಮ 3ರಡಿ ಪಿಎಫ್‌ಐ ಸಂಘಟನೆ ನಿಷಿಧಿಸಿರುವುದು ಕಾನೂನು ಬಾಹಿರವಾಗಿದೆ. ಸಂಘಟನೆಯನ್ನು ಕಾನೂನುಬಾಹಿರ ಎಂದು ಘೋಷಿಸಿರುವುದು ಸಂವಿಧಾನ ವಿರೋಧಿ ಕ್ರಮ. ಸಂಘಟನೆಯನ್ನು ಕಾನೂನುಬಾಹಿರ ಎಂದು ಘೋಷಿಸಿರುವುದಕ್ಕೆ ನಿಷೇಧ ತಕ್ಷಣದಿಂದಲೇ ಅನ್ವಯವಾಗಲಿದೆ ಎಂಬುದಕ್ಕೆ ಪ್ರತ್ಯೇಕ ಕಾರಣಗಳನ್ನು ಸರ್ಕಾರದ ಆದೇಶದಲ್ಲಿ ನೀಡಲಾಗಿಲ್ಲ. ಪಿಎಫ್‌ಐಗೆ ವಾದ ಮಂಡಿಸಲೂ ಅವಕಾಶ ನೀಡದೇ ಏಕಾಏಕಿ ನಿಷೇಧ ಆದೇಶ ಹೊರಡಿಸಲಾಗಿದೆ. ಯುಎಪಿಎ ಕಾಯ್ದೆಯ ವಿರುದ್ಧದ ಈ ಆದೇಶ ರದ್ದುಗೊಳಿಸಬೇಕು ಎಂದು ಅರ್ಜಿದಾರರು ಕೋರಿದ್ದರು.

ಆಧಾರ:ಉದಯವಾಣಿ, ದಿನಾಂಕ:01.12.2022

## 16. ಮತಾಂತರಗೊಂಡರೆ ಮೀಸಲು ಇಲ್ಲ

ಇಸ್ಲಾಂ ಮತ್ತು ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ದಲಿತರಿಗೆ ಪರಿಶಿಷ್ಟ ಜಾತಿಯಡಿ ಕಲ್ಪಿಸಿರುವ ಮೀಸಲಾತಿ ನೀಡಲಾಗುವುದು ಎಂದು ಕೇಂದ್ರ ಸರ್ಕಾರ ಸುಪ್ರೀಂಕೋರ್ಟ್‌ಗೆ ತಿಳಿಸಿದೆ. ಈ ಎರಡೂ ಧರ್ಮಗಳಲ್ಲಿ ಅಸ್ಪೃಶ್ಯತೆಯ ದಬ್ಬಾಳಿಕೆ ಇಲ್ಲದ ಕಾರಣ ಈ ಧರ್ಮವನ್ನು ಒಪ್ಪಿಕೊಂಡಿರುವ ದಲಿತರಿಗೆ ಮೀಸಲಾತಿ ನೀಡುವುದು ಅಸಂವಿಧಾನಿಕ ಆಗುತ್ತದೆ ಎಂದು ಸರ್ಕಾರ ತಿಳಿಸಿದೆ. 1950ರ ಪರಿಶಿಷ್ಟ ಜಾತಿ ಆದೇಶವು ಕಾಲ ಕಾಲಕ್ಕೆ ಪರಿಷ್ಕೃತಗೊಂಡಿದ್ದು, ಹಿಂದು, ಸಿಖ್ಖ ಮತ್ತು ಬೌದ್ಧ ಧರ್ಮದಲ್ಲಿ ದಲಿತರಾಗಿದ್ದವರಿಗೆ ಮಾತ್ರ ಪರಿಶಿಷ್ಟ ಜಾತಿ ಅಡಿಯ ಮೀಸಲಾತಿ ಇದೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ಮೂರು ಬಿಟ್ಟು ಬೇರೆ ಧರ್ಮಕ್ಕೆ ಮತಾಂತರ ಆದವರಿಗೆ ಮೀಸಲಾತಿಯನ್ನು ಅನ್ವಯಿಸಲಾಗದು ಎಂದಿದೆ. ದಲಿತ, ಕ್ರಿಶ್ಚಿಯನ್ನರು ಮತ್ತು ದಲಿತರ ಮುಸ್ಲಿಮರನ್ನು ಪರಿಶಿಷ್ಟ ಜಾತಿಯ ವ್ಯಾಪ್ತಿಗೆ ತರಬೇಕು ಎಂಬ ಜಸ್ಟೀಸ್ ರಂಗನಾಥ ಮಿಶ್ರಾ ಆಯೋಗದ ಶಿಫಾರಸ್ಸನ್ನು ಸರ್ಕಾರ ಒಪ್ಪಿಕೊಂಡಿಲ್ಲವಾದ್ದರಿಂದ ಈ ಆಯೋಗದ ವರದಿ ಉಲ್ಲೇಖಿಸಿ ಮೀಸಲಾತಿಗೆ ಒತ್ತಾಯಿಸುವುದು ಅಪ್ರಸ್ತುತವಾಗುತ್ತದೆ ಎಂದು ಹೇಳಿದೆ. 1950ರ ಪರಿಶಿಷ್ಟ ಜಾತಿ ಆದೇಶವು ತಾರತಮ್ಯದಿಂದ ಕೂಡಿದ್ದು, ಸಂವಿಧಾನದ 14 (ಕಾನೂನಿನಡಿ ಎಲ್ಲರೂ ಸಮಾನರು) ಮತ್ತು 15ನೇ ವಿಧಿಗಳಿಗೆ (ಧರ್ಮ, ಜಾತಿ, ಜನಾಂಗದ ಆಧಾರದಲ್ಲಿ ತಾರತಮ್ಯ ನಿಷೇಧ) ವಿರುದ್ಧವಾಗಿದೆ. ಆದ್ದರಿಂದ ಕ್ರೈಸ್ತ ಮತ್ತು ಮುಸ್ಲಿಂ ಧರ್ಮಗಳಿಗೆ ಮತಾಂತರಗೊಂಡ ದಲಿತರಿಗೂ ಮೀಸಲು ಕಲ್ಪಿಸಬೇಕು ಎಂಬ ಅರ್ಜಿಗೆ ಸರ್ಕಾರ ಅಫಿಡವಿಟ್ ಮೂಲಕ ಪ್ರತಿಕ್ರಿಯೆ ದಾಖಲಿಸಿದೆ. ಸೆಂಟರ್ ಫಾರ್ ಪಬ್ಲಿಕ್ ಇಂಟರೆಸ್ಟ್ ಲಿಟಿಗೇಷನ್ ಮತ್ತು ಇತರರು ಸಲ್ಲಿಸಿರುವ ಅರ್ಜಿಯನ್ನು ನ್ಯಾಯಮೂರ್ತಿ ಎಸ್.ಕೆ.ಕೌಲ್ ನೇತೃತ್ವದ ಪೀಠ ವಿಚಾರಣೆ ನಡೆಸುತ್ತಿದೆ.

**ಸುಪ್ರೀಂಕೋರ್ಟ್ ಮೊಬೈಲ್ ಆ್ಯಪ್‌ಗೆ ಚಾಲನೆ:** ನ್ಯಾಯಮೂರ್ತಿಗಳು ಮತ್ತು ವಿವಿಧ ಕೇಂದ್ರ ಸಚಿವಾಲಯಗಳ ನೋಡಲ್ ಅಧಿಕಾರಿಗಳೂ ಕೋರ್ಟ್ ಕಲಾಪಗಳನ್ನು ನೇರವಾಗಿ (ರಿಯಲ್ ಟೈಮ್) ವೀಕ್ಷಿಸಲು ಸಾಧ್ಯವಾಗುವ ಮೊಬೈಲ್ ಆ್ಯಪ್‌ಗೆ ಸುಪ್ರೀಂಕೋರ್ಟ್ ಚಾಲನೆ ನೀಡಿದೆ. ಕಲಾಪ ಆರಂಭವಾಗುವುದಕ್ಕೂ ಮೊದಲು ಮುಖ್ಯನ್ಯಾಯಮೂರ್ತಿ (ಸಿಜೆಐ) ಡಿ.ವೈ.ಚಂದ್ರಚೂಡ್ ಇದನ್ನು ಪ್ರಕಟಿಸಿದರು. ಇದನ್ನು ಈಗ ಗೂಗಲ್ ಪ್ಲೇಸ್ಟೋರ್‌ನಲ್ಲಿ ಡೌನ್ ಲೋಡ್ ಮಾಡಬಹುದಾಗಿದ್ದು ಐಓಎಸ್ ಆವೃತ್ತಿ ಮುಂದಿನ ವಾರ ಲಭ್ಯವಾಗಲಿದೆ ಎಂದು ವಿವರಿಸಿದ್ದಾರೆ. ನೋಂದಾಯಿತ ವಕೀಲರು ಮತ್ತು ಅಡ್ವೋಕೇಟ್ಸ್ ಆನ್ ರೆಕಾರ್ಡ್ ಕೂಡ ಕಲಾಪಗಳನ್ನು ನೇರವಾಗಿ ವೀಕ್ಷಿಸಲು ಈ ಆ್ಯಪ್ ನೆರವಾಗುತ್ತದೆ.

ಆಧಾರ:ವಿಜಯವಾಣಿ, ದಿನಾಂಕ:08.12.2022

## 17. ಚುನಾವಣಾ ವಿಳಂಬವೇಕೆ

ಪದೇ ಪದೇ ಒಂದಲ್ಲಾ ಒಂದು ಕಾರಣ ನೀಡಿ ಜಿಲ್ಲಾ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿ ಚುನಾವಣಾ ಮುಂದೂಡುತ್ತಿರುವ ಸರ್ಕಾರದ ಕಾರ್ಯವೈಖರಿ ವಿರುದ್ಧ ಕಿಡಿ ಕಾರಿರುವ ಹೈಕೋರ್ಟ್, ರೂ. 5 ಲಕ್ಷ ದಂಡ ವಿಧಿಸಿದೆ.

ಅಲ್ಲದೆ, 2023ರ ಫೆಬ್ರವರಿ 1 ರೊಳಗೆ ಕ್ಷೇತ್ರ ಪುನರ್ ವಿಂಗಡಣೆ, ಮೀಸಲು ನಿಗದಿ ಪೂರ್ಣಗೊಳಿಸಬೇಕು ಎಂದು ಗಡುವು ವಿಧಿಸಿರುವ ನ್ಯಾಯಾಲಯ ಸರ್ಕಾರ ಬಸವನ ಹುಳುವಿನಂತೆ ತೆವಳುತ್ತಿದೆ ಎಂದು ತರಾಟೆಗೆ ತೆಗೆದುಕೊಂಡಿದೆ.

ರಾಜ್ಯದಲ್ಲಿ ತಾಲ್ಲೂಕು ಪಂಚಾಯಿತಿ ಹಾಗೂ ಜಿಲ್ಲಾಪಂಚಾಯಿತಿ ಕ್ಷೇತ್ರ ಮರುವಿಂಗಡಣೆ ಹಾಗೂ ಮೀಸಲಾತಿ ನಿಗದಿಗೆ ಪ್ರತ್ಯೇಕವಾಗಿ ಸೀಮಾ ನಿರ್ಣಯಯೋಗ ರಚಿಸಿರುವುದನ್ನು ಪ್ರಶ್ನಿಸಿ ರಾಜ್ಯ ಚುನಾವಣಾ ಆಯೋಗ ಸಲ್ಲಿಸಿರುವ ಮೂಲ ಅರ್ಜಿ ವಿಚಾರಣೆಯನ್ನು ಮುಖ್ಯ ನ್ಯಾಯಮೂರ್ತಿ ಪಿ.ಬಿ.ವರ್ಲೆ ಹಾಗೂ ನ್ಯಾಯಮೂರ್ತಿ ಅಶೋಕ್ ಎಸ್.ಕಿಣಗಿ ಅವರಿದ್ದ ವಿಭಾಗೀಯಪೀಠ ಕೈಗೆತ್ತಿಕೊಂಡಿತು.

ಅದರ ಜೊತೆಗೆ, ಕ್ಷೇತ್ರ ಪುನರ್‌ವಿಗಡಣೆ ಹಾಗೂ ಮೀಸಲಾತಿ ನಿಗದಿ ಪ್ರಕ್ರಿಯೆ ಪೂರ್ಣಗೊಳಿಸಲು ಮೂರು ತಿಂಗಳು ಕಾಲಾವಕಾಶ ನೀಡಬೇಕೆಂದು ಕೋರಿ ಪಂಚಾಯತ್‌ರಾಜ್ ಸೀಮಾ ನಿರ್ಣಯ ಆಯೋಗ ಸಲ್ಲಿಸಿದ ಎರಡು ಮಧ್ಯಂತರ ಅರ್ಜಿಗಳ ಕುರಿತು ವಿಚಾರಣೆ ನಡೆಸಿತು.

**ಬಸವನ ಹುಳುವಂತೆ ತೆವಳದಿರಿ:**

- ಚುನಾವಣೆ ಮುಂದೂಡಲು ಸರ್ಕಾರ ನೆಪ ಹೇಳುತ್ತಿರುವುದು ಸಮರ್ಥನೀಯವಲ್ಲ.
- ಇದು ನ್ಯಾಯಾಲಯದ ಆದೇಶಗಳನ್ನು ನಿಷ್ಕ್ರಿಯಗೊಳಿಸುವ ಪ್ರಯತ್ನ ಎನ್ನಲು ಯಾವುದೇ ಹಿಂಜರಿಕೆ ಇಲ್ಲ.
- ಹೈಕೋರ್ಟ್‌ನ ಆದೇಶಗಳು, ಸುಪ್ರೀಂಕೋರ್ಟ್‌ನ ನಿರ್ದೇಶನಗಳನ್ನು ಸರ್ಕಾರ ಪಾಲಿಸಬೇಕು.
- ಕಾಲಬದ್ಧವಾಗಿ ಚುನಾವಣೆ ನಡೆಸಬೇಕೆಂಬ ಸಾಂವಿಧಾನಿಕ ಹೊಣೆಗಾರಿಕೆ ನಿಭಾಯಿಸುವ ಬದ್ಧತೆ ಸರ್ಕಾರಕ್ಕೆ ಇದ್ದಂತಿಲ್ಲ.
- ಕ್ಷೇತ್ರ ಪುನರ್ ವಿಂಗಡಣೆ ಮತ್ತು ಮೀಸಲಾತಿ ನಿಗದಿಗೆ ಬರೋಬ್ಬರಿ 24 ವಾರ ಕಾಲಾವಕಾಶ ತೆಗೆದುಕೊಂಡಿದೆ. ಆದರೂ ಸರ್ಕಾರ ಒಂದಿಂಚೂ ಮುಂದಕ್ಕೆ ಹೋಗಿಲ್ಲ ಸರ್ಕಾರ 'ಬಸವನಹುಳು' ರೀತಿಯಲ್ಲಿ ನಿಧಾನಗತಿಯಲ್ಲಿ ಸಾಗುತ್ತಿದೆ.

**ಸೀಮಾ ಆಯೋಗಕ್ಕೆ ಗಡುವು:** ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್ ಕ್ಷೇತ್ರಗಳ ಪುನರ್ ವಿಂಗಡಣೆ ಮತ್ತು ಒಬಿಸಿ ಸೇರಿದಂತೆ ಇತರೆ ವರ್ಗಗಳಿಗೆ ಮೀಸಲಾತಿ ನಿಗದಿಪಡಿಸುವ ಪ್ರಕ್ರಿಯೆಯನ್ನು 2023ರ ಫೆಬ್ರವರಿ 1ರೊಳಗೆ ಪೂರ್ಣಗೊಳಿಸಬೇಕು ಎಂದು ರಾಜ್ಯ ಸರ್ಕಾರ ಹಾಗೂ ಸೀಮಾ ನಿರ್ಣಯ ಆಯೋಗಕ್ಕೆ ಹೈಕೋರ್ಟ್ ಗಡುವು ನೀಡಿದೆ. ಅದರಂತೆ, ಫೆಬ್ರವರಿ 1ರೊಳಗೆ ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್ ಕ್ಷೇತ್ರಗಳ ಪುನರ್ ವಿಂಗಡಣೆ ಮತ್ತು ಒಬಿಸಿ ಸೇರಿದಂತೆ ಇತರೆ ವರ್ಗಗಳಿಗೆ ಮೀಸಲಾತಿ ನಿಗದಿಪಡಿಸುವ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಎಲ್ಲಾ ರೀತಿಯ ಕ್ರಮಗಳನ್ನು ಕೈಗೊಳ್ಳಬೇಕು ಎಂದು ತಾಕೀತು ಮಾಡಿ ವಿಚಾರಣೆಯನ್ನು ಫೆಬ್ರವರಿ 2ಕ್ಕೆ ಮುಂದೂಡಿತು.

ವಿಚಾರಣೆ ವೇಳೆ ಪಂಚಾಯತ್‌ರಾಜ್ ಸೀಮಾ ನಿರ್ಣಯ ಆಯೋಗದ ಪರ ವಾದ ಮಂಡಿಸಿದ ಹಿರಿಯ ವಕೀಲ ಜಯಕುಮಾರ್ ಎಸ್.ಪಾಟೀಲ್, "ಕ್ಷೇತ್ರ ಪುನರ್ ವಿಂಗಡಣೆ ಕರಡು ಅಧಿಸೂಚನೆ ಪ್ರಕಟಿಸಿ ಸಾರ್ವಜನಿಕರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಿ ಅವುಗಳನ್ನು ವಿಲೇವಾರಿ ಮಾಡಿ ಅಂತಿಮ ಅಧಿಸೂಚನೆ ಹೊರಡಿಸಲು ಮೂರು ತಿಂಗಳು ಕಾಲಾವಕಾಶಬೇಕು," ಎಂದು ಕೋರಿದರು. ಸರ್ಕಾರದ ಪರ ಪ್ರತಿಮಾ ಹೊನ್ನಾಪುರ, ರಾಜ್ಯ ಚುನಾವಣಾ ಆಯೋಗದ ಪರ ಹಿರಿಯ ನ್ಯಾಯವಾದಿ ಕೆ.ಎನ್.ಫಣೀಂದ್ರ ವಾದ ಮಂಡಿಸಿದರು.

ರಾಜ್ಯ ಚುನಾವಣಾ ಆಯೋಗದ ಮೂಲ ಅರ್ಜಿಯಲ್ಲಿ ಪ್ರತಿವಾದಿಯನ್ನಾಗಿ ಸೇರಲು ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗ ಸಲ್ಲಿಸಿದ ಮಧ್ಯಂತರ ಮನವಿಯನ್ನು ಹೈಕೋರ್ಟ್ ಅಂಗೀಕರಿಸಿತು. ಆದರೆ, ಕ್ಷೇತ್ರಗಳ ಗಡಿ ಹಾಗೂ ಮೀಸಲಾತಿ ನಿಗದಿ ಪ್ರಕ್ರಿಯೆ ಪೂರ್ಣಗೊಳಿಸಲು ಮೂರು ತಿಂಗಳು ಕಾಲಾವಕಾಶ ಕೋರಿದ್ದ ಮನವಿಯನ್ನು ತಳ್ಳಿಹಾಕಿದ ಹೈಕೋರ್ಟ್, 2023ರ ಫೆಬ್ರವರಿ 2ರ ವರೆಗೆ ಕಾಲಾವಕಾಶ ನೀಡಿ ಮನವಿಯನ್ನು ಇತ್ಯರ್ಥಪಡಿಸಿತು. ಜೊತೆಗೆ ದಂಡದ ಮೊತ್ತದಲ್ಲಿ ರೂ. 2 ಲಕ್ಷ ಕಾನೂನು ಸೇವಾ ಪ್ರಾಧಿಕಾರಕ್ಕೆ, ರೂ. 2 ಲಕ್ಷ ವಕೀಲರ ಸಂಘಕ್ಕೆ, ಮತ್ತು ರೂ. 1 ಲಕ್ಷಗಳನ್ನು ವಕೀಲರ ಗುಮಾಸ್ತರ ಸಂಘಕ್ಕೆ ಪಾವತಿಸಲು ಸರ್ಕಾರಕ್ಕೆ ಸೂಚನೆ ನೀಡಲಾಗಿದೆ.

**ಹಿನ್ನೆಲೆ:** ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್ ಕ್ಷೇತ್ರ ಮರುವಿಂಗಡಣೆ ಹಾಗೂ ಮೀಸಲಾತಿ ನಿಗದಿಗೆ ಮೊದಲು ಸರ್ಕಾರ 12 ವಾರ ಕಾಲಾವಕಾಶ ಕೇಳಿತ್ತು. 2022ರ ಸೆಪ್ಟೆಂಬರ್ 23 ರಂದು ಅರ್ಜಿ ವಿಚಾರಣೆಗೆ ಬಂದಾಗ ಸೀಮಾ ನಿರ್ಣಯ ಆಯೋಗದ ಪತ್ರ ಆಧರಿಸಿ ಪುನಃ 12 ವಾರ ಕಾಲಾವಕಾಶ ಕೇಳಲಾಯಿತು. ಆಗ 12 ವಾರಗಳಲ್ಲಿ ಪ್ರಕ್ರಿಯೆ ಪೂರ್ಣಗೊಳಿಸಲಾಗುವುದು ಎಂದು ಸ್ವತಃ ಅಡ್ವೊಕೇಟ್ ಜನರಲ್ ಹೈಕೋರ್ಟ್‌ಗೆ ಭರವಸೆ ಕೊಟ್ಟಿದ್ದರು. ಆ 12 ವಾರಗಳ ಗಡುವು ಡಿಸೆಂಬರ್ 26ಕ್ಕೆ ಮುಗಿಯುತ್ತಿದೆ. ಈ ನಡುವೆ ಸೀಮಾ ನಿರ್ಣಯ ಆಯೋಗ ಮತ್ತೆ ಮೂರು ತಿಂಗಳು ಕಾಲಾವಕಾಶ ಕೇಳುತ್ತಿದೆ. ಅಚ್ಚರಿ ಎಂದರೆ ಮೂರು ತಿಂಗಳಲ್ಲಿ ಕ್ಷೇತ್ರ ಹಾಗೂ ಮೀಸಲಾತಿ ನಿಗದಿ ಪ್ರಕ್ರಿಯೆ ಮುಗಿಸುತ್ತೇವೆ ಎಂದು 2022ರ ಸೆಪ್ಟೆಂಬರ್ 19ರ ಪತ್ರದಲ್ಲಿ ಹೇಳಿದ್ದ ಸೀಮಾ ನಿರ್ಣಯ ಆಯೋಗ ಈಗ ಮತ್ತೆ 3 ತಿಂಗಳ ಸಮಯ ಕೇಳುತ್ತಿದೆ.

ಆಧಾರ:ವಿಜಯಕರ್ನಾಟಕ, ದಿನಾಂಕ:15.12.2022

# ಭಾಗ – 7

# ಹೊರ ರಾಜ್ಯಗಳ ಸುದ್ದಿಗಳು

## 1. Old pension scheme promise strikes a chord

The old pension scheme (OPS) became a consentaneous issue before the Himachal Pradesh election, as the Congress which had introduced the scheme in Rajasthan, Jharkhand and Chhattisgarh promised to do the same if it won in the State. It undoubtedly struck a chord with the people of the hill State.

Around 1.5 lakh employees in the State are covered under the new pension scheme.

The post-poll study by Lokniti-CDS found that a staggering three-fourths of the votes (74%) in the State were aware of this electoral promise made by the Congress. Not only were the voters aware of the scheme but support for it was also quite high. Among those who were aware of the promise, an overwhelming 70% supported the restoration of the OPS (Table 1).

This support somewhat translated into votes as 65% of those who were in full support of the OPS voted for the Congress (Table 2). However the party did not find the same support among those who partially supported the scheme, with only three in 10 supporting it and over half the voters supporting the BJP. Considering that half of the vote fully supports this scheme, these figures for the Congress support becomes all the more significant.

**Anger over Agnipath**: Another burning issue was the newly introduced Agnipath scheme under which soldiers would be recruitment into the armed forces on a contractual basis for a period of four years.

One in two voters said they opposed the policy fully or to some extent (Table 3). Only 19% were in full support to this scheme. Among those who fully opposed the scheme, 55% voted for the Congress. While among those in partial support, the vote was divided equally among the BJP and the Congress (46% each). The BJP did have an upper hand among those who fully supported the scheme (six in 10) and those who said they somewhat supported the scheme (55%).

A geographical analysis of the support for the Agnipath scheme found that close to three-fifths (57%) of the western region which includes Kangra district opposed it. This region also has a high number of people in the armed forces. The corresponding figure for the eastern region was 43%.

The most significant criticism of the scheme has been its impact on the career prospects of the youth who may find it difficult to gain employment elsewhere after serving for four years. The findings of the survey also indicate the same as three of five people aged 18-25 disapproved of the scheme.

It is clear from the survey findings that policy missteps from the BJP, which adversely impacted key vote banks significantly, cost the ruling party and ended up benefiting the Congress which somewhat successfully tapped into the issues of the electorate.

**Table 2: Vote by support for the OPS:**

| | Party voted for Assembly Election 2022 | | |
|---|---|---|---|
| | Congress voted | BJP | Others |
| Fully support | 65 | 25 | 10 |
| Somewhat support | 33 | 53 | 14 |
| Fully oppose | 18 | 79 | 3 |
| Note: All figures in percentages. Rest did not respond | | | |

**Table 1: High support for the old pension scheme:**

| | |
|---|---|
| Fully support | 50 |
| Somewhat support | 20 |
| Somewhat oppose | 06 |
| Fully oppose | 17 |

Note: All figures in percentages. Rest did not respond.

**Question asked**: Do you support or oppose the election promise of the Congress to bring back the OPS ?

**Table 3: Not much support for the Agnipath scheme:**

| | |
|---|---|
| Fully support | 19 |
| Somewhat support | 14 |
| Somewhat oppose | 08 |
| Fully oppose | 42 |

**Note**: All figures in percentages. Rest did not respond.

**Question asked**: Do you support or oppose the recruitment in the Army under the Central government's Agnipath scheme?

Courtesy: The Hindu, Dated: 11.12.2022

## 2. Sukhu takes charges as Himachal CM

Sukhvinder Singh Sukhu, a bus driver's son and fourth-term Congress MLA was sworn in as the 15th Chief Minister of Himachal Pradesh, while Mukesh Agnihotri a former journalist took oath as his deputy with the Congress trying to keep the Thakur-Brahmin social equation in the hill state on an even keel.

However, the shadow of the party's stalwart leader the late Virbhadra Singh a six-term former chief minister, could be felt during the ceremony, with his widow Pratibha Singh a Lok Sabha MP from Mandi and contender for the CM's post-accorded respect by the Congress top leadership.

Congress leaders Priyanka Gandhi Vadra and Rahul Gandhi, who were present at the ceremony in Shimla, hugged Prathipa Singh when she arrived at the venue. Pratibha Singh was seated beside Priyanka on the dais as the party appeared keen to signal that all was well and the leaders were united,

Rahul posted for photographs with Pratibha and her son Vikramaditya Singh. Congress leaders paid floral tributes to Virbhadra Singh's portrait who dominated state politics till he passed away last year, before the start of the ceremony.

Earlier, Sukhu went to the Holly, Lodge, and the residence of Virbhadra Singh and said the first invitation was given of Pratibha Singh, as she is the leader of the Congress organisation in the state, Vikramaditya Singh may be accommodated in the state cabinet.

The announcement of Sukhu's election as the leader of the Congress legislature party led to protests from supporters of Pratibha Singh. She had earlier arrested that Virbhadra's family cannot be ignored, and his legacy contributed to the Congress victory in the Assembly polls.

However, after the official announcement on Sukhu, an upset Pratibha said "We accept the decision of the high command".

**Gehlot, Pilot fly together to Shimla**: Rajasthan Chief Minister and his Congress colleague Sachin Pilot, who have been locked in a turf was, flew together to Shimla to attend the swearing-in of Sukhvinder Singh Sukhu as Himachal Pradesh CM, with the party asserting they were "united".

Courtesy: Deccan Herald, Dated: 12.12.2022

## 3. ಗುಜರಾತ್:ಭೂಪೇಂದ್ರ ಪಟೇಲ್ ಪ್ರಮಾಣ

ಎರಡನೇ ಅವಧಿಗೆ ಗುಜರಾತ್ ಮುಖ್ಯಮಂತ್ರಿಯಾಗಿ ಭೂಪೇಂದ್ರ ಪಟೇಲ್ ಅವರು ಪ್ರಮಾಣವಚನ ಸ್ವೀಕರಿಸಿದರು. ನರೇಂದ್ರ ಮೋದಿ, ಅಮೀತ್ ಶಾ, ಕೇಂದ್ರ ಸಚಿವರು ಹಾಗೂ ಬಿಜೆಪಿ ಆಡಳಿತವಿರುವ ರಾಜ್ಯಗಳ ಮುಖ್ಯಮಂತ್ರಿಗಳು ರಾಜ್ಯ ಘಟಕದ ಮುಖಂಡರು ಸಮಾರಂಭಕ್ಕೆ ಸಾಕ್ಷಿಯಾದರು.

ಪಟೇಲ್ ಅವರ ಜೊತೆ 16 ಶಾಸಕರು ಸಚಿವರಾಗಿ ಪದಗ್ರಹಣ ಮಾಡಿದರು. ಈ ಪೈಕಿ ಎಂಟು ಸಚಿವರಿಗೆ ಸಂಪುಟ ದರ್ಜೆ ನೀಡಲಾಗಿದೆ. ಒಬಿಸಿ, ಮೂವರು ಪ್ರಭಾವಿ ಪಾಟೀದಾರ್, ಇಬ್ಬರು ಬುಡಕಟ್ಟು ಹಾಗೂ ತಲಾ ಒಬ್ಬರು ಪರಿಶಿಷ್ಟ ಜಾತಿ, ಬ್ರಾಹ್ಮಣ, ಜೈನ ಹಾಗೂ ರಜಪೂತ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಸಂಪುಟದಲ್ಲಿ ಒಬ್ಬ ಮಹಿಳೆ ಸ್ಥಾನ ಪಡೆದಿದ್ದಾರೆ. ಸಚಿವ ಸ್ಥಾನ ಹಂಚಿಕೆಯಲ್ಲಿ ಸೌರಾಷ್ಟ್ರ ಭಾಗದವರಿಗೆ ಹೆಚ್ಚು ಆದ್ಯತೆ ನೀಡಲಾಗಿದೆ.

ಗಾಂಧಿನಗರದ ಹೆಲಿಪ್ಯಾಡ್ ಮೈದಾನದಲ್ಲಿ ನಡೆದ ಸಮಾರಂಭದಲ್ಲಿ ರಾಜ್ಯಪಾಲ ಆಚಾರ್ಯ ದೇವವ್ರತ ಅವರು ಪ್ರತಿಜ್ಞಾವಿಧಿ ಬೋಧಿಸಿದರು. ಪ್ರಮಾಣ ವಚನದ ಬಳಿ, ಭೂಪೇಂದ್ರ ಅವರು ನಗರದ ತ್ರಿಮೂರ್ತಿ ದೇವಸ್ಥಾನಕ್ಕೆ ತೆರಳಿದರು. ಸಂಜೆ ಸಚಿವ ಸಂಪುಟದ ಮೊದಲ ಸಭೆ ನಡೆಸಿದರು. ಕಾಂಗ್ರೆಸ್‌ನಿಂದ ಬಿಜೆಪಿಗೆ ವಲಸೆ ಬಂದಿದ್ದ ಬಲವಂತ್‌ಸಿಂಗ್ ರಜಪೂತ್, ರಾಘವ್‌ಜೀ ಪಟೇಲ್ ಹಾಗೂ ಕುನ್ವರ್‌ಜೀ ಬಾಲವಿಯಾ ಅವರಿಗೆ ಸಚಿವ ಸ್ಥಾನ ನೀಡಲಾಗಿದೆ.

ಕರ್ನಾಟಕದ ಮುಖ್ಯಮಂತ್ರಿ ಹಾಗೂ ಬಿಜೆಪಿ ಸಂಸದೀಯ ಮಂಡಳಿಯ ಸದಸ್ಯ ಬಿ.ಎಸ್.ಯಡಿಯೂರಪ್ಪ ಅವರೂ ಪ್ರಮಾಣ ವಚನ ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಆಧಾರ:ಪ್ರಜಾವಾಣಿ, ದಿನಾಂಕ:13.12.2022

## 4. ಕುಲಾಧಿಪತಿ ಅಧಿಕಾರ ಮೊಟಕು: ಬಿಲ್ ಪಾಸ್

ಕೇರಳ ರಾಜ್ಯಪಾಲ ಆರಿಫ್ ಮೊಹಮ್ಮದ್ ಖಾನ್–ಮುಖ್ಯಮಂತ್ರಿ ಪಿಣರಾಯಿ ವಿಜಯನ್ ಸರ್ಕಾರದ ನಡುವೆ ಸಂಘರ್ಷ ಸೃಷ್ಟಿಸಿರುವ ವಿವಿಗಳ ಕುಲಪತಿ ನೇಮಕ ಕದನ ಮತ್ತೊಂದು ಹಂತ ದಾಟಿದೆ. ಸರ್ಕಾರಕ್ಕೆ ಸೆಡ್ಡು ಹೊಡಿದಿದ್ದ ರಾಜ್ಯಪಾಲರನ್ನೇ ವಿವಿಗಳ ಕುಲಾಧಿಕತಿ ಹುದ್ದೆಯಿಂದ ವಜಾಗೊಳಿಸುವ ವಿಧೇಯಕ ಆಖೈರುಗೊಂಡಿದೆ.

ಕೇರಳ ಸರ್ಕಾರ ರೂಪಿಸಿದ್ದ ವಿಶ್ವವಿದ್ಯಾಲಯ ಕಾನೂನು ತಿದ್ದುಪಡಿ ವಿಧೇಯಕ ವಿಧಾನಸಭೆಯಲ್ಲಿ ಅಂಗೀಕಾರಗೊಂಡಿದೆ. ಪ್ರತಿಪಕ್ಷ ಕಾಂಗ್ರೆಸ್ ಸಭಾತ್ಯಾಗದ ನಡುವೆ ಧ್ವನಿ ಮತದ ಮೂಲಕ ವಿಧೇಯಕವನ್ನು ಅಂಗೀಕರಿಸಲಾಗಿದೆ. ವಿಧೇಯಕದಲ್ಲಿ ಕೆಲವು ಬದಲಾವಣೆಗೆ ನೀಡಿದ ಸಲಹೆಗಳನ್ನು ಸರ್ಕಾರ ತಿರಸ್ಕರಿಸಿದ ಹಿನ್ನೆಲೆಯಲ್ಲಿ ಪ್ರತಿಪಕ್ಷ ಕಾಂಗ್ರೆಸ್ ಸಭಾತ್ಯಾಗ ಮಾಡಿತು.

ವಿಧೇಯಕ ಮೇಲೆ ಸುದೀರ್ಘ ಚರ್ಚೆ ನಡೆಯಿತು. "ಸರ್ಕಾರ ರೂಪಿಸಿದ ವಿಧೇಯಕಕ್ಕೆ ನಮ್ಮ ವಿರೋಧವಿಲ್ಲ, ಆದರೆ, ವಿವಿಗಳ ಕುಲಾಧಿಪತಿ ಹುದ್ದೆಗೆ ಸುಪ್ರೀಂ ಕೋರ್ಟ್ ಅಥವಾ ಹೈಕೋರ್ಟ್ ನ್ಯಾಯಮೂರ್ತಿಯನ್ನು ನೇಮಿಸಬೇಕು. ಆಯ್ಕೆ ಸಮಿತಿಗೆ ಮುಖ್ಯಮಂತ್ರಿ, ಪ್ರತಿಪಕ್ಷ ನಾಯಕರು, ಕೇರಳ ಹೈಕೋರ್ಟ್ ಮುಖ್ಯನ್ಯಾಯಮೂರ್ತಿ ಒಳಗೊಂಡ ಶೋಧನಾ ಸಮಿತಿ ರಚನೆ ಮಾಡಬೇಕು," ಎಂದು ಕಾಂಗ್ರೆಸ್ ಸದಸ್ಯರು ಸಲಹೆ ನೀಡಿದ್ದರು.

ಪ್ರತಿಪಕ್ಷ ನಾಯಕರ ಸಲಹೆ ತಿರಸ್ಕರಿಸಿದ ಶಿಕ್ಷಣ ಸಚಿವರು "ಶೋಧನಾ ಸಮಿತಿಗೆ ನ್ಯಾಯಮೂರ್ತಿಗಳನ್ನು ಆಯ್ಕೆ ಮಾಡುವುದು ಸರಿಯಾದ ಕ್ರಮವಲ್ಲ. ಅಗತ್ಯವೆನಿಸಿದರೆ ಸಮಿತಿಗೆ ಸ್ಪೀಕರ್ ಅವರನ್ನು ನೇಮಿಸಬಹುದು," ಎಂದರು. ಇತ್ತೀಚೆಗೆ ನಿಯಮ ಉಲ್ಲಂಘನೆ ಕಾರಣ ನೀಡಿ 9 ವಿವಿ ಕುಲಪತಿಗಳ ರಾಜೀನಾಮೆಗೆ ರಾಜ್ಯಪಾಲ ಆರಿಫ್ ಮೊಹಮ್ಮದ್ ಖಾನ್ ಆದೇಶ ಮಾಡಿದ್ದರು.

ಆಧಾರ:ವಿಜಯಕರ್ನಾಟಕ, ದಿನಾಂಕ:14.12.2022

## 5. ಸಾಂದರ್ಭಿಕ ಸಾಕ್ಷ್ಯದ ಆಧಾರ: ಸರ್ಕಾರಿ ಅಧಿಕಾರಿಗೆ ಶಿಕ್ಷೆ ಸಾಧ್ಯ

'ಅಕ್ರಮ ಗಳಿಕೆ ಅಥವಾ ಲಂಚದ ಆರೋಪ ಎದುರಿಸುತ್ತಿರುವ ಸರ್ಕಾರಿ ನೌಕರ ಇಲ್ಲವೇ ಅಧಿಕಾರಿ ವಿರುದ್ಧ ಮೌಖಿಕ ಸಾಕ್ಷ್ಯ ಅಥವಾ ಸೂಕ್ತ ದಾಖಲೆಗಳು ಲಭ್ಯವಿಲ್ಲದಿದ್ದಾಗ ಸಾಂದರ್ಭಿಕ ಪುರಾವೆಗಳ ಆಧಾರದಲ್ಲೇ ಅರವನ್ನು ಶಿಕ್ಷೆಗೆ ಗುರಿಪಡಿಸಬಹುದು' ಎಂದು ಸುಪ್ರೀಂ ಕೋರ್ಟ್ ಹೇಳಿದೆ.

ನ್ಯಾಯಮೂರ್ತಿ ಎಸ್.ಅಬ್ದುಲ್ ನಜೀರ್ ನೇತೃತ್ವದ ಐವರು ಸದಸ್ಯರನ್ನೊಳಗೊಂಡ ನ್ಯಾಯಪೀಠವು ಈ ಕುರಿತು ವಿಚಾರಣೆ ನಡೆಸಿತು.

'ಅರ್ಜಿದಾರರು ಹಾಗೂ ಪ್ರಾಸಿಕ್ಯೂಷನ್ ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಹಾಗಾದಲ್ಲಿ ಭ್ರಷ್ಟ ಅಧಿಕಾರಿಗಳಿಗೆ ಶಿಕ್ಷೆ ವಿಧಿಸಬಹುದು. ಆ ಮೂಲಕ ಆಡಳಿತ ಹಾಗೂ ಪ್ರಭುತ್ವವನ್ನು ಭ್ರಷ್ಟಾಚಾರದಿಂದ ಮುಕ್ತಗೊಳಿಸಬಹುದು' ಎಂದು ನ್ಯಾಯಮೂರ್ತಿಗಳಾದ ವಿ.ರಾಮಸುಬ್ರಮಣಿಯನ್ ಹಾಗೂ ಬಿ.ವಿ.ನಾಗರತ್ನ ಅವರಿದ್ದ ನ್ಯಾಯಪೀಠ ತಿಳಿಸಿತು.

'ನಿಧನ ಅಥವಾ ಇನ್ನಿತರ ಕಾರಣಗಳಿಂದಾಗಿ ದೂರುದಾರ ನೇರವಾಗಿ ಸಾಕ್ಷ್ಯ ಹೇಳಲು ಲಭ್ಯವಿಲ್ಲದಿದ್ದರೂ ಕೂಡ ಭ್ರಷ್ಟ ಅಧಿಕಾರಿಗಳನ್ನು ಸಂಬಂಧಪಟ್ಟ ನಿಬಂಧನೆಗಳ ಅಡಿಯಲ್ಲಿ ಶಿಕ್ಷೆಗೆ ಗುರಿಪಡಿಸಬಹುದು' ಎಂದು ನ್ಯಾಯಪೀಠ ಹೇಳಿದೆ.

'ವಿವಿಧ ಕಾರಣಗಳಿಂದಾಗಿ ವಿಚಾರಣೆ ವೇಳೆ ದೂರುದಾರನು ತನ್ನ ಬಳಿ ಇರುವ ಸಾಕ್ಷ್ಯವನ್ನು ನ್ಯಾಯಾಲಯಕ್ಕೆ ಒದಗಿಸಲು ಸಾಧ್ಯವಾಗದೆ ಹೋದರೆ, ಇತರೆ ಯಾವುದೇ ಸಾಕ್ಷಿ ಒದಗಿಸುವ ಮೌಖಿಕ ಅಥವಾ ದಾಖಲೆ ರೂಪದ ಪುರಾವೆಗಳನ್ನು ಪರಿಗಣಿಸಬಹುದು. ಇಲ್ಲವೇ ಸಾಂದರ್ಭಿಕ ಸಾಕ್ಷ್ಯದ ಆಧಾರದಲ್ಲಿ ಅಧಿಕಾರಿ ಅಥವಾ ನೌಕರನ ಮೇಲಿನ ಆರೋಪವನ್ನು ಪ್ರಾಸಿಕ್ಯೂಷನ್ ಸಾಬೀತುಪಡಿಸಬಹುದು' ಎಂದಿದೆ.

ಆಧಾರ:ಪ್ರಜಾವಾಣಿ, ದಿನಾಂಕ:16.12.2022

## 6. ಒಕ್ಕೂಟ ವ್ಯವಸ್ಥೆಗೆ ಮಹಾ ಧಕ್ಕೆ

ಬೆಳಗಾವಿ ಗಡಿ ವಿಚಾರವಾಗಿ ಕರ್ನಾಟಕ ಮತ್ತು ಮಹಾರಾಷ್ಟ್ರ ನಡುವಿನ ಜಟಾಪಟಿ ಈಗ 'ನಿರ್ಣಯ' ಸಮರವಾಗಿ ಮಾರ್ಪಟ್ಟಿದೆ. ಕರ್ನಾಟಕದ ಬೆಳಗಾವಿ, ಕಾರವಾರ, ನಿಪ್ಪಾಣಿ, ಭಾಲ್ಕಿ, ಬೀದರ್ ನಗರಗಳು ಮತ್ತು 865 ಮರಾಠಿ ಭಾಷಿಕರ ಹಳ್ಳಿಗಳನ್ನು ಮಹಾರಾಷ್ಟ್ರಕ್ಕೆ ಸೇರಿಸಿಕೊಳ್ಳಲು ಕಾನೂನು ಹೋರಾಟ ನಡೆಸುವ ನಿರ್ಣಯವನ್ನು ಮಹಾರಾಷ್ಟ್ರ ವಿಧಾನಸಭೆಯಲ್ಲಿ ಸರ್ವಾನುಮತದಿಂದ ಅಂಗೀಕರಿಸಲಾಗಿದೆ.

"ಕರ್ನಾಟಕದ ಒಂದಿಂಚೂ ಜಾಗವನ್ನು ಬಿಡುವುದಿಲ್ಲ," ಎಂದು ಬೆಳಗಾವಿ ಅಧಿವೇಶನದಲ್ಲಿ ಸರ್ವಾನುಮತದಿಂದ ಅಂಗೀಕರಿಸಿದ ನಿರ್ಣಯಕ್ಕೆ ಪ್ರತಿಯಾಗಿ ಮಹಾರಾಷ್ಟ್ರ ಸರ್ಕಾರ ಈ ನಿರ್ಣಯ ಅನುಮೋದಿಸಿದೆ.

ಈ ಮಧ್ಯೆ ಮಹಾರಾಷ್ಟ್ರದ ನಿರ್ಣಯಕ್ಕೆ ಕರ್ನಾಟಕದಲ್ಲಿ ಪಕ್ಷಾತೀತವಾಗಿ ತೀವ್ರ ಖಂಡನೆ ವ್ಯಕ್ತವಾಗಿದೆ. ರಾಜ್ಯದ ಒಂದಿಂಚು ಭೂಮಿಯನ್ನು ಬಿಟ್ಟು ಕೊಡುವ ಪ್ರಶ್ನೆಯೇ ಇಲ್ಲ ಎಂದು ಸರ್ಕಾರ ಸ್ಪಷ್ಟಪಡಿಸಿದ್ದು, ಮಹಾರಾಷ್ಟ್ರದ ನಡೆಯನ್ನು ಒಕ್ಕೂಟ ವ್ಯವಸ್ಥೆ ವಿರೋಧಿ ಎಂದು ಟೀಕಿಸಿದೆ.

**ಪ್ರಚೋದನೆ ಆರೋಪ:** ಮಹಾರಾಷ್ಟ್ರದ ಮುಖ್ಯಮಂತ್ರಿ ಅವರು ಈ ನಿರ್ಣಯ ಮಂಡಿಸಿದರು. "ಕರ್ನಾಟಕವು ಉದ್ದೇಶಪೂರ್ವಕವಾಗಿ ಗಡಿ ಕದನಕ್ಕೆ ಪ್ರಚೋದನೆ ನೀಡಿದೆ," ಎಂದು ನಿರ್ಣಯದಲ್ಲಿ ಆರೋಪಿಸಲಾಗಿದೆ.

"ಕರ್ನಾಟಕ ಗಡಿಯ ಮರಾಠಿ ಭಾಷಿಕರ ಬೆನ್ನಿಗೆ ಮಹಾರಾಷ್ಟ್ರ ಸರ್ಕಾರ ದೃಢವಾಗಿ ನಿಂತಿದೆ. ಕರ್ನಾಟಕದಲ್ಲಿರುವ ಮರಾಠಿ ಭಾಷಿಕ ಹಳ್ಳಿಗಳ ಇಂಚು ಭೂಮಿಯನ್ನೂ ರಾಜ್ಯಕ್ಕೆ ಸೇರಿಸಿಕೊಳ್ಳಲು ಮಹಾರಾಷ್ಟ್ರ ಸರ್ಕಾರವು ಸುಪ್ರೀಂಕೋರ್ಟ್‌ನಲ್ಲಿ ಕಾನೂನುಬದ್ಧವಾಗಿ ಹೋರಾಟ ನಡೆಸಲಿದೆ," ಎಂದು ನಿರ್ಣಯದಲ್ಲಿ ಉಲ್ಲೇಖಿಸಲಾಗಿದೆ.

"ಗಡಿ ಪ್ರದೇಶದಲ್ಲಿರುವ ಮರಾಠಿ ಭಾಷಿಕರ ಸುರಕ್ಷತೆ ಕಾಯ್ದುಕೊಳ್ಳುವ ಭರವಸೆ ನೀಡುವಂತೆ ಕರ್ನಾಟಕ ಸರ್ಕಾರಕ್ಕೆ ಕೇಂದ್ರ ಸರ್ಕಾರ ನಿರ್ದೇಶನ ನೀಡಬೇಕು," ಎಂದು ನಿರ್ಣಯದಲ್ಲಿ ಒತ್ತಾಯಿಸಲಾಗಿದೆ.

**ಕನ್ನಡಿಗರ ರಕ್ಷಣೆಗೆ ಬದ್ಧ:** ಗಡಿ ವಿವಾದ ಸಂಬಂಧ ಮಹಾರಾಷ್ಟ್ರ ಸರ್ಕಾರ ವಿಧಾನಸಭೆಯಲ್ಲಿ ಮಂಡಿಸಿರುವ ನಿರ್ಣಯವನ್ನು ಬಸವರಾಜ ಬೊಮ್ಮಾಯಿಯವರು ಖಂಡಿಸಿದ್ದಾರೆ. "ರಾಜ್ಯ ಪುನರ್ ರಚನಾ ಕಾಯಿದೆ ರೂಪಿಸಿ ಸಾಕಷ್ಟು ವರ್ಷಗಳಾಗಿವೆ. ಎರಡೂ ಕಡೆ ಜನ ನೆಮ್ಮದಿಯಿಂದಿದ್ದಾರೆ. ರಾಜಕಾರಣಕ್ಕಾಗಿ ಈ ರೀತಿಯ ಹೇಳಿಕೆ ನೀಡಿ, ನಿರ್ಣಯ ಕೈಗೊಳ್ಳುತ್ತಿದ್ದಾರೆ," ಎಂದು ಕಿಡಿಕಾರಿದ್ದಾರೆ. "ನಮ್ಮ ನಿಲುವಿನಲ್ಲಿ ಸ್ಪಷ್ಟತೆ ಇದೆ. ಇಂದಿಂಚೂ ಜಾಗ ಬಿಟ್ಟು ಕೊಡುವ ಪ್ರಶ್ನೆಯೇ ಇಲ್ಲ. ಗಡಿಯಿಂದಾಚೆಯಿರುವ ಕನ್ನಡಿಗರ ರಕ್ಷಣೆಗೆ ಸರ್ಕಾರ ಬದ್ಧ," ಎಂದು ಹೇಳಿದ್ದಾರೆ.

**ಶೀಘ್ರ ಜತ್ ಸಭೆ:** ಹೊರ ರಾಜ್ಯದ ಕನ್ನಡಿಗರ ಬೇಡಿಕೆಗಳನ್ನು ಚರ್ಚಿಸಲು ಬೆಳಗಾವಿಯಲ್ಲಿ ಶೀಘ್ರದಲ್ಲಿಯೇ ಗಡಿ ಅಬಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು, ಕನ್ನಡ ಸಂಘಟನೆಗಳ ಕ್ರಿಯಾ ಸಮಿತಿಯ ಅಧ್ಯಕ್ಷರು ಹಾಗೂ ಜತ್ ಕನ್ನಡಿಗರ ಸಭೆ ಕರೆಯಲಾಗುವುದು ಎಂದು ಮುಖ್ಯಮಂತ್ರಿಯವರು ಭರವಸೆ ನೀಡಿದ್ದಾರೆ.

**'ಸುಪ್ರೀಂ ಮಾರ್ಗ'ಕ್ಕೆ ಉದ್ಧವ್ ಸಲಹೆ:** ಬೆಳಗಾವಿ ಸೇರಿದಂತೆ ಕರ್ನಾಟಕದಲ್ಲಿರುವ ಮರಾಠಿ ಭಾಷಿಕ ವಿವಾದಿತ ಪ್ರದೇಶಗಳನ್ನು ಕೇಂದ್ರಾಡಳಿತ ಪ್ರದೇಶವಾಗಿ ಘೋಷಿಸಲು ಸುಪ್ರೀಂ ಕೋರ್ಟ್ ಮೊರೆ ಹೋಗುವ ಅಗತ್ಯವಿದೆ ಎಂದು ಮಹಾರಾಷ್ಟ್ರ ಮಾಜಿ ಮುಖ್ಯಮಂತ್ರಿ ಉದ್ಧವ್ ಠಾಕ್ರೆಯವರು ಅಲ್ಲಿನ ಸರ್ಕಾರವನ್ನು ಒತ್ತಾಯಿಸಿದ್ದಾರೆ. ಕಲಾಪದ ಬಳಿಕ ಮಾಧ್ಯಮದವರೊಂದಿಗೆ ಮಾತನಾಡಿರುವ ಠಾಕ್ರೆ, "ನಾವು ಇಂದಿನ ನಿರ್ಣಯವನ್ನು ಬೆಂಬಲಿಸಿದ್ದೇವೆ. ಮಹಾರಾಷ್ಟ್ರದ ಪರವಾಗಿ ಏನೇ ಆದರೂ ನಾವು ಜೊತೆಗಿರುತ್ತೇವೆ" ಎಂದಿದ್ದಾರೆ.

"ಕರ್ನಾಟಕದಲ್ಲಿರುವ ವಿವಾದಿತ ಪ್ರದೇಶಗಳನ್ನು ಕೇಂದ್ರಾಡಳಿತ ಪ್ರದೇಶವೆಂದು ಘೋಷಿಸಲು ಸಾಧ್ಯವಿಲ್ಲ ಎಂದು ನೆರೆ ರಾಜ್ಯದ ಸರ್ಕಾರ ಹೇಳುತ್ತಿದೆ. ಇದಕ್ಕೆ 2008ರ ಸುಪ್ರೀಂ ಕೋರ್ಟ್ ಆದೇಶವನ್ನು ಮುಂದಿಡುತ್ತಿದೆ. ಆದರೆ, ಈಗ ಪರಿಸ್ಥಿತಿ ಬದಲಾಗಿದೆ. ಕರ್ನಾಟಕ ಸರ್ಕಾರ ಏನನ್ನೂ ಪಾಲಿಸುತ್ತಿಲ್ಲ. ಅವರು ಬೆಳಗಾವಿಯಲ್ಲಿ ವಿಧಾನಸಭೆಯ ಅಧಿವೇಶನ ನಡೆಸುತ್ತಿದ್ದಾರೆ. ಜಿಲ್ಲೆಗೆ ಬೆಳಗಾವಿ ಎಂದು ಮರುನಾಮಕರಣ ಮಾಡಿದ್ದಾರೆ. ವಿವಾದಿತ ಪ್ರದೇಶಗಳನ್ನು ಕೇಂದ್ರಾಡಳಿತ ಪ್ರದೇಶವೆಂದು ಘೋಷಿಸಲು ಮನವಿ ಮಾಡಬೇಕು" ಎಂದು ಒತ್ತಾಯಿಸಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:28.12.2022

# ಭಾಗ – 8

# ಶ್ರದ್ಧಾಂಜಲಿ

## 1. ಜಬ್ಬಾರಖಾನ್ ಹೊನ್ನಳ್ಳಿ, ಮಾಜಿ ಸಚಿವ

ಹಿರಿಯ ಕಾಂಗ್ರೆಸ್ ಮುಖಂಡ ಮಾಜಿ ಸಚಿವ, ಹುಬ್ಬಳ್ಳಿ ಅಂಜುಮನ್ ಇಸ್ಲಾಂ ಸಂಸ್ಥೆಯ ಮಾಜಿ ಅಧ್ಯಕ್ಷ ಜಬ್ಬಾರ್ ಖಾನ್ ಹೊನ್ನಳ್ಳಿ ನಿಧನ ಹೊಂದಿರುತ್ತಾರೆ, ಅವರಿಗೆ 81 ವರ್ಷ ವಯಸ್ಸಾಗಿತ್ತು,

ಶಿಕ್ಷಕರಾಗಿದ್ದ ಅವರು, ಒಂದು ಬಾರಿ ವಿಧಾನ ಪರಿಷತ್ ಸದಸ್ಯರಾಗಿದ್ದರು. ಅಲ್ಲದೆ, 1999 ಹಾಗೂ 2004ರಲ್ಲಿ ಹುಬ್ಬಳ್ಳಿ ಶಹರ ಕ್ಷೇತ್ರದ ಶಾಸಕರಾಗಿ ಆಯ್ಕೆಯಾಗಿದ್ದರು. ಧರ್ಮಸಿಂಗ್ ಸರ್ಕಾರದಲ್ಲಿ ಕ್ರೀಡಾ ಮತ್ತು ಯುವಜನ ಸಚಿವರಾಗಿಯೂ ಕಾರ್ಯ ನಿರ್ವಹಿಸಿದ್ದರು. ಯಡಿಯೂರಪ್ಪನವರು ಕೆಜೆಪಿ ಸ್ಥಾಪಿಸಿದಾಗ ಆ ಪಕ್ಷಕಕ್ಕೆ ಸೇರ್ಪಡೆಗೊಂಡಿದ್ದರು ನಂತರ ಮತ್ತೆ ಕಾಂಗ್ರೆಸ್‌ಗೆ ವಾಪಸ್ಸಾಗಿದ್ದರು.

ಆಧಾರ: ಕನ್ನಡಪ್ರಭ, ದಿನಾಂಕ:08.10.2022.

## 2. ಮುಲಾಯಂ ಸಿಂಗ್, ಉತ್ತರ ಪ್ರದೇಶದ ಮಾಜಿ ಮುಖ್ಯಮಂತ್ರಿ

ರಾಷ್ಟ್ರ ರಾಜಕಾರಣದಲ್ಲಿ ತಮ್ಮದೇ ಆದ ಮಹತ್ವದ ಸ್ಥಾನಮಾನ ಹೊಂದಿದ್ದ ಉತ್ತರ ಪ್ರದೇಶ ಮಾಜಿ ಮುಖ್ಯಮಂತ್ರಿ ಎಸ್.ಪಿ. ಪಕ್ಷದ ಸಂಸ್ಥಾಪಕ ಮುಲಾಯಂ ಸಿಂಗ್ ಯಾದವ್ ನಿಧನ ಹೊಂದಿರುತ್ತಾರೆ, ಅವರಿಗೆ 82 ವರ್ಷ ವಯಸ್ಸಾಗಿತ್ತು,

ಹತ್ತು ಬಾರಿ ಶಾಸಕ, 7 ಬಾರಿ ಲೋಕಸಭೆಯ ಸದಸ್ಯರಾಗಿದ್ದರು. ಜೆಡಿಎಸ್ ವರಿಷ್ಠ ಹೆಚ್. ಡಿ. ದೇವೇಗೌಡರು, ದಿವಂಗತ ಐ.ಕೆ. ಗುಜ್ರಾಲ್ ಪ್ರಧಾನಿಯಾಗಿದ್ದ ವೇಳೆ ರಕ್ಷಣಾ ಸಚಿವರಾಗಿದ್ದರು, 1939ರ ನವೆಂಬರ್ 22 ರಂದು ಉತ್ತರ ಪ್ರದೇಶದ ಇಟಾವಾ ಜಿಲ್ಲೆಯ ಸೈಫಾಯ್‌ನಲ್ಲಿ ಕೃಷಿ ಕುಟುಂಬದಲ್ಲಿ ಜನಿಸಿದ್ದ ಮುಲಾಯಂ ಸಿಂಗ್ ಅವರು, ಉತ್ತರ ಪ್ರದೇಶದ ರಾಷ್ಟ್ರದ ಪ್ರಮುಖ ನೇತಾರನಾಗಿ ರೂಪುಗೊಂಡರು.

ರಾಜಕೀಯದಲ್ಲಿ ನೇತಾಜಿ ಎಂದು ಕರೆಯಿಸಿಕೊಳ್ಳುತ್ತಿದ್ದರು. ಸಮಾಜವಾದಿ ತತ್ವದ ಹಿನ್ನೆಲೆಯಲ್ಲಿ ಮುಲಾಯಂ ಎಲ್ಲಾ ಪಕ್ಷಗಳ ನಾಯಕರ ಜೊತೆಗೆ ಆತ್ಮೀಯ ಬಾಂಧವ್ಯ ಹೊಂದಿದ್ದರು. ರಾಷ್ಟ್ರಪತಿ ದ್ರೌಪದಿ ಮುರ್ಮು, ಪ್ರಧಾನಿ ಮೋದಿ, ಗೃಹ ಸಚಿವ ಅಮಿತ್ ಶಾ, ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ, ಕರ್ನಾಟಕ ಮುಖ್ಯಮಂತ್ರಿ ಬೊಮ್ಮಾಯಿ, ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಕಂಬನಿ ಮಿಡಿದಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:11.10.2022.

## 3. ಮಡಿವಾಳಪ್ಪ, ಕರಡಿ ಮಜಲು ಕಲಾವಿದ

ಮಡಿವಾಳಪ್ಪ ಕರಡಿ ಮಜಲು ಕಲಾವಿದ ಇವರು ನಿಧನ ಹೊಂದಿರುತ್ತಾರೆ, ಇವರಿಗೆ 69 ವರ್ಷ ವಯಸ್ಸಾಗಿತ್ತು.

ಕರಡಿ ಮಜಲು ಕಲೆ ಕರಗತ ಮಾಡಿಕೊಂಡು ಬದುಕನ್ನೇ ಕಲೆಗೆ ಮುಡಿಪಾಗಿಡುವುದರ ಜೊತೆಗೆ ಮನೆತನದ ಹೆಸರನ್ನೇ ಕರಡಿ ಎಂದು ಬದಲಿಸಿಕೊಂಡು ಬಂದ ಖ್ಯಾತ ಕರಡಿ ಮಜಲು ಕಲಾವಿದ ಮಡಿವಾಳಪ್ಪ ಮಹಾಲಿಂಗಪ್ಪ ಕರಡಿ ಇವರು ಕರ್ನಾಟಕ ಜಾನಪದ ಪರಿಷತ್ತಿನ ಜಾನಪದ ಲೋಕ ಪ್ರಶಸ್ತಿಗೆ ಪಾತ್ರವಾಗಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:13.10.2022.

## 4. ಎನ್. ಟಿ. ಬೊಮ್ಮಣ್ಣ, ಮಾಜಿ ಶಾಸಕ

ಎನ್. ಟಿ. ಬೊಮ್ಮಣ್ಣ, ಮಾಜಿ ಶಾಸಕ, ಇವರು ನಿಧನ ಹೊಂದಿರುತ್ತಾರೆ. ಇವರಿಗೆ 79 ವರ್ಷ ವಯಸ್ಸಾಗಿತ್ತು.

1978ರಲ್ಲಿ ತಾಲ್ಲೂಕು ಬೋರ್ಡ್ ಅಧ್ಯಕ್ಷರಾಗಿದ್ದ ಬೊಮ್ಮಣ್ಣನವರು, 1985, 1989 ರಲ್ಲಿ ಎರಡು ಬಾರಿ ಕೊಡ್ಲಗಿ ಕ್ಷೇತ್ರದಿಂದ ಕಾಂಗ್ರೆಸ್‌ನಿಂದ ಶಾಸಕರಾಗಿದ್ದರು. 1999ರಲ್ಲಿ ಕೊಡ್ಲಗಿ ಕ್ಷೇತ್ರದಲ್ಲಿ ಬಿಜೆಪಿಯಿಂದ ಕೊಟ್ಟೂರು ಕ್ಷೇತ್ರದಿಂದ ಸ್ಪರ್ಧಿಸಿ ಸೋತಿದ್ದರು. 2018ರ ಚುನಾವಣೆಯಲ್ಲಿ ಕೂಡ್ಲಗಿ ಕ್ಷೇತ್ರದಿಂದ ಜೆಡಿಎಸ್ ನಿಂದ ಸ್ಪರ್ಧಿಸಿ ಪರಾಭವಗೊಂಡಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:13.10.2022.

## 5. ಕಾಮೇಗೌಡ, ಕೆರೆಗಳ ನಿರ್ಮಾತ

ಮಳವಳ್ಳಿ ತಾಲ್ಲೂಕಿನ ದಾಸನದೊಡ್ಡಿಯ ಕೆರೆಗಳ ನಿರ್ಮಾತೃ ಆಧುನಿಕ ಭಗೀರಥ ಎಂದು ಕರೆಸಿಕೊಂಡಿದ್ದ ಕಲ್ಮನೆ ಕಾಮೇಗೌಡ ಇವರು ನಿಧನ ಹೊಂದಿರುತ್ತಾರೆ. ಅವರಿಗೆ 86 ವರ್ಷ ವಯಸ್ಸಾಗಿತ್ತು.

**ಜಲಋಷಿ:** ದಾಸನದೊಡ್ಡಿ ಗ್ರಾಮದ ಬಳಿಯಿರುವ ಕುಂದನ ಬೆಟ್ಟವನ್ನು ಕಾಮೇಗೌಡರು ಸ್ವಂತ ಖರ್ಚಿನಲ್ಲಿ ಸುಮಾರು 16ಕ್ಕೂ ಹೆಚ್ಚು ಕೆರೆ ಕಟ್ಟೆಗಳನ್ನು ನಿರ್ಮಿಸಿದ್ದಾರೆ. ಮೊದಲು ತಾವೇ ಸ್ವತಃ ಕೈಯಿಂದಲೇ ಕೆರೆಗಳನ್ನು ನಿರ್ಮಿಸುತ್ತಿದ್ದರು. ನಂತರ ತಾವು ಸಾಕಿದ್ದ ಕುರಿಗಳನ್ನು ಮಾರಿ ಜೆಸಿಬಿ ಮೂಲಕ ಹಲವು ಕೆರೆಗಳನ್ನು ನಿರ್ಮಿಸಿದ್ದಾರೆ. ಇದರಿಂದ ಪ್ರಾಣಿ, ಪಕ್ಷಿಗಳಿಗೆ ಬೇಸಿಗೆ ಕಾಲದಲ್ಲೂ ನೀರು ಸಿಗುವಂತೆ ಮಾಡಿದ್ದರು. ಅಲ್ಲದೆ ಅಂತರ್ಜಲ ವೃದ್ಧಿಗೂ ಕಾರಣರಾಗಿದ್ದರು. ಜೊತೆಗೆ ಕೆರೆಗಳ ಸುತ್ತ ಗಿಡಮರಗಳನ್ನು ಬೆಳೆಸುವ ಮೂಲಕ ಪರಿಸರ ಕಾಳಜಿ ವಹಿಸಿದ್ದರು.

**ಪ್ರಧಾನಿ ಮೋದಿ ಶ್ಲಾಘನೆ:** ಕಲ್ಮನೆ ಕಾಮೇಗೌಡರ ಕಾರ್ಯವನ್ನು ಮೆಚ್ಚಿ ಪ್ರಧಾನಿ ನರೇಂದ್ರ ಮೋದಿ ಅವರು ಮನ್ ಕೀ ಬಾತ್‌ನಲ್ಲಿ ಶ್ಲಾಘಿಸಿದ್ದರು. ಇದರಿಂದ ಕಾಮೇಗೌಡರಿಗೆ ದೇಶಾದ್ಯಂತ ಮೆಚ್ಚುಗೆ ವ್ಯಕ್ತವಾಗಿತ್ತು. ಖ್ಯಾತ ಕ್ರಿಕೆಟಿಗ ವಿ.ವಿ.ಎಸ್. ಲಕ್ಷ್ಮಣ್ ಕೂಡ ಟ್ವಿಟ್ಟರ್ ಮೂಲಕ ಮೆಚ್ಚುಗೆ ವ್ಯಕ್ತಪಡಿಸಿದ್ದರು. ಸುಮಾರು ರೂ.15 ಲಕ್ಷ ವೆಚ್ಚದಲ್ಲಿ ಕೆರೆಗಳನ್ನು ನಿರ್ಮಿಸಿ ಮಾದರಿಯಾಗಿದ್ದಾರೆಂದು ಬರೆದುಕೊಂಡಿದ್ದರು.

**ಪ್ರಶಸ್ತಿಗಳು:** ಇವರ ಕಾರ್ಯಕ್ಕೆ ರಾಜ್ಯಾದ್ಯಂತ ವಿವಿಧ ಪ್ರಶಸ್ತಿಗಳು ಹುಡುಕಿಕೊಂಡು ಬಂದಿದ್ದವು. 2018ರಲ್ಲಿ ರಾಜ್ಯ ಸರ್ಕಾರ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿತ್ತು.

ಸರ್ಕಾರ ಜಿಲ್ಲಾಡಳಿತ ಇವರ ಸೇವೆಗೆ ಜೀವಿತಾವಧಿವರೆಗೆ ಸಂಚಾರಕ್ಕೆ ಸಾರಿಗೆ ಪಾಸ್ ನೀಡಿತ್ತು. ಮನೆ ನಿರ್ಮಿಸಿಕೊಡುವ ಭರವಸೆ ನೀಡಿತ್ತು.

ಆಧಾರ: ಉದಯವಾಣಿ, ದಿನಾಂಕ:18.10.2022.

## 6. ಆನಂದ ಮಾಮನಿ, ಉಪ ಸಭಾಧ್ಯಕ್ಷರು

ಬೆಳಗಾವಿ ಜಿಲ್ಲೆ ಸವದತ್ತಿ ಕ್ಷೇತ್ರದ ಬಿಜೆಪಿ ಶಾಸಕ ಹಾಗೂ ವಿಧಾನ ಸಭೆ ಉಪ ಸಭಾಧ್ಯಕ್ಷ ಆನಂದ ಚಂದ್ರಶೇಖರ್ ಮಾಮನಿ ನಿಧನ ಹೊಂದಿರುತ್ತಾರೆ, ಅವರಿಗೆ 56 ವರ್ಷ ವಯಸ್ಸಾಗಿತ್ತು.

**ಹತ್ತಿ ವ್ಯಾಪಾರದಿಂದ ರಾಜಕೀಯಕ್ಕೆ:** ರಾಜಕೀಯಕ್ಕೆ ಬರುವ ಮುನ್ನ 1984ರಿಂದ 1999ರವರೆಗೆ ಹತ್ತಿ ವ್ಯಾಪಾರ ಮಾಡುತ್ತಿದ್ದ ಆನಂದ ಮಾಮನಿಯವರು ಪ್ರತಿ ವರ್ಷ ರೂ. 2 ರಿಂದ 3.5 ಕೋಟಿ ವ್ಯವಹಾರ ನಡೆಸುತ್ತಿದ್ದರು.

2000 ರಿಂದ ಸವದತ್ತಿಯ ಲಯನ್ಸ್ ಕ್ಲಬ್ ಅಧ್ಯಕ್ಷರಾಗಿ ಮತ್ತು ಶ್ರೀ ಕಾಡಸಿದ್ದೇಶ್ವರ ಉಚಿತ ಪ್ರಸಾದ ನಿಲಯ, ಸವದತ್ತಿಯ ಪೊಲೀಸ್‌ಠಾಣೆಯ ಅಧ್ಯಕ್ಷರಾಗಿ ತಮ್ಮ ರಾಜಕೀಯ ಜೀವನವನ್ನು ಪ್ರಾರಂಭಿಸಿದರು. 2008ರಲ್ಲಿ ಮೊದಲ ಬಾರಿಗೆ ಬಿಜೆಪಿಯಿಂದ ಸವದತ್ತಿ ಕ್ಷೇತ್ರದ ಶಾಸಕರಾಗಿ ಆಯ್ಕೆಯಾದ ಆನಂದ ಮಾಮನಿ 2013 ಹಾಗೂ 2018ರಲ್ಲೂ ಗೆದ್ದು ಹ್ಯಾಟ್ರಿಕ್ ಬಾರಿಸಿದ್ದರು. 2020ರ ಮಾರ್ಚ್‌ನಲ್ಲಿ ವಿಧಾನಸಭೆ ಉಪಸಭಾಧ್ಯಕ್ಷರಾಗಿ ಆಯ್ಕೆಯಾಗಿದ್ದರು.

ಆಧಾರ: ಕನ್ನಡಪ್ರಭ, ದಿನಾಂಕ:23.10.2022.

## 7. ಸುಧೀಂದ್ರರಾವ್ ಕಸಬೆ, ಮಾಜಿ ಸಚಿವ

ಕಲ್ಮಲಾ ಕ್ಷೇತ್ರದಿಂದ ಎರಡು ಬಾರಿ ಶಾಸಕರಾಗಿ ಆಯ್ಕೆಯಾಗಿ ಸಚಿವರಾಗಿ ಕಾರ್ಯ ನಿರ್ವಹಿಸಿದ್ದ ಸುಧೀಂದ್ರರಾವ್ ಕಸಬೆ ನಿಧನ ಹೊಂದಿರುತ್ತಾರೆ.

1978ರಲ್ಲಿ ಜಿಲ್ಲೆಯ ಕಲ್ಮಲಾ ವಿಧಾನಸಭೆ ಕ್ಷೇತ್ರದಿಂದ ಕಾಂಗ್ರೆಸ್‌ನಿಂದ ಆಯ್ಕೆಯಾಗಿದ್ದರು. 1980ರಲ್ಲಿ ಗುಂಡೂರಾವ್ ಸಚಿವ ಸಂಪುಟದಲ್ಲಿ ಮುಜರಾಯಿ ಮತ್ತು ಕೃಷಿ ಮಾರುಕಟ್ಟೆ ಖಾತೆ ಸಚಿವರಾಗಿದ್ದರು. 1983ರಲ್ಲಿ ಕಲ್ಮಲಾ ಕ್ಷೇತ್ರದಿಂದ ಶಾಸಕರಾಗಿ ಪುನರಾಯ್ಕೆಗೊಂಡಿದ್ದರು.

ಆಧಾರ: ಉದಯವಾಣಿ, ದಿನಾಂಕ:24.10.2022.

## 8. ಎಸ್.ಎಸ್. ಪೂಜಾರಿ, ಮಾಜಿ ಸದಸ್ಯ

ವಿಧಾನ ಪರಿಷತ್ ಮಾಜಿ ಸದಸ್ಯ ಎಸ್.ಎಸ್. ಪೂಜಾರಿ ನಿಧನ ಹೊಂದಿರುತ್ತಾರೆ. ಅವರಿಗೆ 88 ವರ್ಷ ವಯಸ್ಸಾಗಿತ್ತು. ಮೂಲತ: ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರದವರಾದ ಪೂಜಾರಿ, ಶಿಕ್ಷಕ ವಿರೋಧಿ ಸರ್ಕಾರಗಳ ಕಾರ್ಯವೈಖರಿಗಳ ಬಗ್ಗೆ ಗುಡುಗುತ್ತಿದ್ದರು. ಅನಾರೋಗ್ಯದಿಂದ ಬಳಲುತ್ತಿದ್ದರೂ ಶಿಕ್ಷಕರ ಬಗ್ಗೆ ಅಪಾರ ಕಾಳಜಿ ಮಾಡುತ್ತಿದ್ದರು. ಎಸ್.ಎಸ್. ಪೂಜಾರಿ ಅವರನ್ನು ಕಳೆದುಕೊಂಡು ಶಿಕ್ಷಕ ಸಮೂಹ ಅನಾಥವಾಗಿದೆ ಎಂದು ವಿಧಾನ ಪರಿಷತ್ ಸದಸ್ಯ ಬಸವರಾಜ ಹೊರಟ್ಟಿ ಕಂಬನಿ ಮಿಡಿದಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:07.11.2022.

## 9. ಲೋಹಿತಾಶ್ವ, ಚಿತ್ರ ನಟ

ವಯೋಸಹಜ ಕಾಯಿಲೆಯಿಂದ ಬಳಲುತ್ತಿದ್ದ ನಟ ಲೋಹಿತಾಶ್ವ ನಿಧನ ಹೊಂದಿರುತ್ತಾರೆ. ಅವರಿಗೆ 80 ವರ್ಷ ವಯಸ್ಸಾಗಿತ್ತು.

ಲೋಹಿತಾಶ್ವ ಅವರು ರಂಗಭೂಮಿ ಮೂಲಕ ಸಿನಿಮಾ ಕ್ಷೇತ್ರಕ್ಕೆ ಕಾಲಿಟ್ಟವರು. ಮೊದಲು ಕಲಾತ್ಮಕ ಚಿತ್ರಗಳಲ್ಲಿ ಬಣ್ಣ ಹಚ್ಚುತ್ತಿದ್ದ ಅವರಿಗೆ ಕಮರ್ಷಿಯಲ್ ಬ್ರೇಕ್ ನೀಡಿದ್ದು, ಶಂಕರ್‌ನಾಗ್ ಅವರ ಗೀತಾ ಸಿನಿಮಾ, ನಂತರ ಧರ್ಮ ದಾರಿ ತಪ್ಪಿತ್ತು. ಗಜೇಂದ್ರ ಸಂಭವಾಮಿ ಯುಗೇಯುಗೇ , ಸಾಂಗ್ಲಿಯಾನ ಹೀಗೆ 500ಕ್ಕೂ ಅಧಿಕ ಸಿನಿಮಾಗಳಲ್ಲಿ ನಟಿಸಿದ್ದಾರೆ. ಹೆಚ್ಚಿನ ಸಿನಿಮಾದಲ್ಲಿ ಮುಖ್ಯಮಂತ್ರಿ ಪಾತ್ರಕ್ಕೆ ಬಣ್ಣ ಹಚ್ಚಿದ್ದ ಖ್ಯಾತಿ ಲೊಹಿತಾಶ್ವ ಅವರದ್ದು, ಮೈಸೂರಿನ ಮಾನಸಗಂಗೋತ್ರಿಯಲ್ಲಿ ಎಂ.ಎ. ಪದವಿ ಪಡೆದು 33 ವರ್ಷ ಇಂಗ್ಲೀಷ್ ಪ್ರಾಧ್ಯಾಪಕರಾಗಿಯೂ ಅವರು ಕಾರ್ಯನಿರ್ವಹಿಸಿದ್ದರು.

ಆಧಾರ:ಪ್ರಜಾವಾಣಿ, ದಿನಾಂಕ:09.11.2022.

## 10. ಕೃಷ್ಣ, ತೆಲುಗು ಚಿತ್ರನಟ

ತೆಲಗು ಚಿತ್ರರಂಗದ ಹಿರಿಯ ನಟ, ನಿರ್ಮಾಪಕ ಕೃಷ್ಣ ನಿಧನ ಹೊಂದಿರುತ್ತಾರೆ. ಇವರಿಗೆ 80 ವರ್ಷ ವಯಸ್ಸಾಗಿತ್ತು.

ಆಂಧ್ರಪ್ರದೇಶದ ಬುರ್ರಿಪಾಲೆಂ ಎಂಬ ಕುಗ್ರಾಮದಲ್ಲಿ 1943ರ ಮೇ 31ರಲ್ಲಿ ಸಾಮಾನ್ಯ ಕುಟುಂಬದಲ್ಲಿ ಜನಿಸಿದ ಕೃಷ್ಣ ಚಿತ್ರರಂಗ ಪ್ರವೇಶಿಸಿ ಅಸಾಮಾನ್ಯ ಕಲಾವಿದರಾಗುತ್ತಾರೆ ಎಂಬ ಕಲ್ಪನೆ ಯಾರಿಗೂ ಇರಲಿಲ್ಲ. ಆದರೆ, ಮೇರುನಟ ಎಎನ್‌ಆರ್ ಚಿತ್ರಗಳನ್ನು ನೋಡಿ ತಾನೂ ನಾಯಕನಾಗಬೇಕೆಂಬ ಹೆಬ್ಬಯಕೆ ಮೊಳಕೆಯೊಡೆಯಿತು. ಮದ್ರಾಸ್ ರೈಲು ಹತ್ತಿದ ಕೃಷ್ಣ ಆದುರ್ತಿ ಸುಬ್ಬರಾವ್ ಎಂಬ ಹಿರಿಯ ನಿರ್ದೇಶಕ ಪ್ರೋತ್ಸಾಹದಿಂದ 1961 ರಿಂದ 66ರವರೆಗೆ ಸಣ್ಣ ಪಾತ್ರಗಳಲ್ಲಿ ಅಭಿನಯಿಸಿ ನಟನೆಯ ಛಾಪು ರೂಡಿಸಿಕೊಂಡರು. ಮೊದಲ ಚಿತ್ರ ಕುಲಗೋತ್ರಾಲು ಯಶಸ್ವಿಯಾದ ನಂತರ ತೇನೆಮನಸುಲು ಚಿತ್ರದಲ್ಲಿ ಕೃಷ್ಣ ಅಭಿನಯ ಗಮನ ಸೆಳೆದು ನಾಯಕನ ಸ್ಥಾನ ಅವರನ್ನು ಹುಡುಕಿಕೊಂಡು ಬಂತು. ನಂತರ ಟಾಲಿವುಡ್‌ನಲ್ಲಿ ಸ್ಫುರದ್ರೂಪಿ ಕೃಷ್ಣ ಹಿಂತಿರುಗಿ ನೋಡಿದ್ದೇ ಇಲ್ಲ. 1966 ರಿಂದ 89ರವರೆಗೆ ಛಲ ಪರಿಶ್ರಮ, ಪ್ರತಿಭೆ ಮೂಲಕ ರಾರಾಜಿಸಿದ ಕೃಷ್ಣ ತೆಲುಗು ಚಿತ್ರರಂಗದಲ್ಲಿ ತಮ್ಮದೇ ಆದ ಮಹತ್ವದ ಸ್ಥಾನ ಗಳಿಸುವಲ್ಲಿ ಸಫಲರಾದರು. ಹತ್ತಾರು ಯಶಸ್ವಿ ಚಿತ್ರಗಳನ್ನು ಬೆಳ್ಳಿತೆರೆಗಿತ್ತ ಅವರು ಪ್ರೇಕ್ಷಕರ ಹೃದಯದಲ್ಲಿ ಚಿರಸ್ಥಾಯಿಯಾಗಿದ್ದಾರೆ.

ನಟಶೇಖರ ಎಂಬ ಬಿರುದಾಂಕಿತರಾದ ಕೃಷ್ಣ 44 ವರ್ಷಗಳ ಕಾಲ ಬಿಡುವಿಲ್ಲದ ಕೌಬಾಯ್ ಚಿತ್ರಗಳ ಟ್ರೆಂಡ್ ಹುಟ್ಟು ಹಾಕಿದ್ದೇ ಅಲ್ಲದೆ, ಎನ್‌ಟಿಆರ್ ಬೇಡವೆಂದಿದ್ದ ಐತಿಹಾಸಿಕ ಕಥೆಯುಳ್ಳ ಅಲ್ಲೂರಿ ಸೀತಾರಾಮ ಚಿತ್ರದಲ್ಲಿ ತಾನೇ ನಾಯಕನಾಗಿ ನಟಿಸಿ ನಿರ್ಮಿಸಿ ಇತಿಹಾಸವನ್ನೇ ಸೃಷ್ಟಿಸಿದರು. ಕೃಷ್ಣ ನಿರ್ಮಿಸಿದ ಪಂಡಂಟಿ ಕಾಪುರಂ ಎಂಬ ಸಾಂಸಾರಿಕ ಚಿತ್ರ ಅವರ ಸಾರ್ವಕಾಲಿಕ ಸಾಮಾಜಿಕ ಚಿತ್ರವೆನಿಸಿದೆ. ಚಿತ್ರರಂಗಕ್ಕೆ ಅಗತ್ಯವಿದ್ದಾಗ ಹೊಸ ಪ್ರಯೋಗಗಳ ಜೊತೆ ನಿರ್ಮಾಣ ಚಟುವಟಿಕೆಗೆ ಮತ್ತೊಂದು ತಿರುವು ಕೊಟ್ಟ ಕೃಷ್ಣ ಪದ್ಮಾಲಯ ಸ್ಟುಡಿಯೋ ನಿರ್ಮಿಸಿ ಹೈದರಾಬಾದ್‌ನಲ್ಲೆ ತೆಲಗು ಚಿತ್ರಗಳ ನಿರ್ಮಾಣಕ್ಕೆ ವೇದಿಕೆ ಕಲ್ಪಿಸಿಕೊಟ್ಟರು. ಒಟ್ಟಾರೆ ತಮ್ಮ 50 ವರ್ಷಗಳ ಚಿತ್ರ ಜೀವನದಲ್ಲಿ 350ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿ ಚಿತ್ರರಂಗದಲ್ಲಿ ಹೊಸಬರಿಗೆ ಬೆಳೆಯಲು ಅವಕಾಶ ಕಲ್ಪಿಸಿದ ಕೀರ್ತಿ ಕೃಷ್ಣ ಅವರದು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:16.11.2022

## 11. ಅಬ್ದುಲ್ ಸಮದ್ ಸಿದ್ದಿಖೀ, ರಾಜ್ಯ ಸಭಾ ಮಾಜಿ ಸದಸ್ಯ

ಹಿರಿಯ ರಾಜಕಾರಣಿ, ರಾಜ್ಯ ಸಭೆ ಮಾಜಿ ಸದಸ್ಯ ಅಬ್ದುಲ್ ಸಮದ್ ಸಿದ್ದಿಖಿ ಅವರು ನಿಧನ ಹೊಂದಿರುತ್ತಾರೆ. ಅವರಿಗೆ 87 ವರ್ಷ ವಯಸ್ಸಾಗಿತ್ತು.

ರಾಯಚೂರು ನಗರದಲ್ಲಿ ಅನೇಕ ಶಿಕ್ಷಣ ಸಂಸ್ಥೆ ಸ್ಥಾಪಿಸಿದ್ದರು. ಅದರಲ್ಲೂ ನ್ಯೂ ಎಜ್ಯುಕೇಷನ್ ಸೊಸೈಟಿಯಡಿ ವಿಶೇಷವಾಗಿ ಪ್ರಾಥಮಿಕ, ಪ್ರೌಢ, ಪದವಿಪೂರ್ವ ಹಾಗೂ ಪದವಿ ಕಾಲೇಜುಗಳನ್ನು ಆರಂಭಿಸಿದ್ದರು. ನಗರಸಭೆ ಸದಸ್ಯರಾಗಿದ್ದರು. ನಂತರ ಜನತಾದಳದಿಂದ 1988 ರಲ್ಲಿ ರಾಜ್ಯಸಭಾ ಸದಸ್ಯರಾಗಿ ಆಯ್ಕೆಯಾಗಿ 1994ರವರೆಗೆ ಕಾರ್ಯನಿರ್ವಹಿಸಿದ್ದರು. ಅವರ ಹಿರಿಯ ಸಹೋದರ ನಜೀರ್ ಆಹ್ಮದ್ ಸಿದ್ದಕ್ಕಿ ಎರಡು ಬಾರಿ ಶಾಸಕರು ಹಾಗೂ ಸಚಿವರಾಗಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:23.11.2022

## 12. ಶ್ರೀಶೈಲಪ್ಪ ಬಿದರೂರ, ಮಾಜಿ ಶಾಸಕ

ಗದಗ ಕ್ಷೇತ್ರದ ಮಾಜಿ ಶಾಸಕರಾಗಿದ್ದ ಶ್ರೀ ಶೈಲಪ್ಪ ಬಿದರೂರ ಅವರು ನಿಧನ ಹೊಂದಿರುತ್ತಾರೆ. ಅವರಿಗೆ 60 ವರ್ಷ ವಯಸ್ಸಾಗಿತ್ತು.

ಕಾಂಗ್ರೆಸ್ ಪಕ್ಷದ ಟಿಕೆಟ್ ಆಕಾಂಕ್ಷೆಗಳ ಸಭೆಯಲ್ಲಿ ಪಾಲ್ಗೊಂಡಿದ್ದ ವೇಳೆಯೆ ತೀವ್ರ ಹೃದಯಘಾತವಾಗಿದ್ದು, ತಕ್ಷಣವೇ ಸಮೀಪದ ಖಾಸಗಿ ಆಸ್ಪತ್ರೆಗೆ ದಾಖಲಿಸಿದ್ದರೂ ಚಿಕಿತ್ಸೆ ಫಲಕಾರಿಯಗದೇ ಮೃತಪಟ್ಟರು. 1994ರಲ್ಲಿ ಜನತಾದಳದಿಂದ ರೋಣ ಕ್ಷೇತ್ರದ ಶಾಸಕರಾಗಿದ್ದ ಬಿದರೂರ

2008ರ ಗದಗದಿಂದ ಬಿಜೆಪಿ ಶಾಸಕರಾಗಿ ಆಯ್ಕೆಯಾಗಿದ್ದರು. 2020ರಲ್ಲಿ ಕಾಂಗ್ರೆಸ್ ಸೇರ್ಪಡೆಯಾಗಿದ್ದು 2023ರ ಚುನಾವಣೆಗೆ ಟಿಕೇಟ್ ಆಕಾಂಕ್ಷಿಯಾಗಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:26.11.2022.

## 13. ಬಸವನಗೌಡ, ಮಾಜಿ ಸಂಸದ

ಬಳ್ಳಾರಿ ಲೋಕಸಭಾ ಕ್ಷೇತ್ರದ ಮಾಜಿ ಸದಸ್ಯ ಕೊಳೂರು ಬಸವನಗೌಡ ನಿಧನ ಹೊಂದಿರುತ್ತಾರೆ. ಅವರಿಗೆ 89 ವರ್ಷ ವಯಸ್ಸಾಗಿತ್ತು.

1999 ರಿಂದ 2004ರವರೆಗೆ ಬಳ್ಳಾರಿ ಲೋಕಸಭಾ ಕ್ಷೇತ್ರವನ್ನು ಬಸವನಗೌಡ ಪ್ರತಿನಿಧಿಸಿದ್ದರು. ಕಾಂಗ್ರೆಸ್ ಪಕ್ಷದ ಮಾಜಿ ಅಧ್ಯಕ್ಷೆ ಸೋನಿಯಾ ಗಾಂಧಿ ಅವರ ರಾಜೀನಾಮೆಯಿಂದ ತೆರವಾದ ಸ್ಥಾನಕ್ಕೆ ಅವರು ಆಯ್ಕೆಯಾಗಿದ್ದರು. ಅವರಿಗೆ ಪತ್ನಿ ಕಾಮಾಕ್ಷಮ್ಮ, ವೀರಶೈವ ಕಾಲೇಜಿನ ನಿವೃತ್ತ ಪ್ರಾಂಶುಪಾಲರು

ಆಧಾರ: ಉದಯವಾಣಿ, ದಿನಾಂಕ:27.11.2022.

## 14. ವಿಕ್ರಮ್ ಕಿರ್ಲೋಸ್ಕರ್, ಕಿರ್ಲೋಸ್ಕರ್ ಮೋಟಾರ್ಸ್‌ನ ಉಪಾಧ್ಯಕ್ಷ

ಟೊಯೊಟಾ ಕಿರ್ಲೋಸ್ಕರ್ ಮೋಟಾರ್ಸ್‌ನ ಉಪಾಧ್ಯಕ್ಷ ವಿಕ್ರಮ್ ಕಿರ್ಲೋಸ್ಕರ್ ಅವರು ನಿಧನ ಹೊಂದಿರುತ್ತಾರೆ. ಅವರಿಗೆ 64 ವರ್ಷ ವಯಸ್ಸಾಗಿತ್ತು.

ಮೆ॥ ಸಾಚುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಮೆಕ್ಯಾನಿಕಲ್ ಎಂಜಿನಿಯರ್ ವಿಷಯದಲ್ಲಿ ಪದವಿ ಪಡೆದ ವಿಕ್ರಮ್, ದೇಶದ ಕೈಗಾರಿಕೋದ್ಯಮದ ಪ್ರಭಾವಿ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದರು. ವಿವಿಧ ಕೈಗಾರಿಕಾ ಒಕ್ಕೂಟದ ಮುಖ್ಯಸ್ಥರಾಗಿಯೂ ಕಾರ್ಯನಿರ್ವಹಿಸಿದ್ದರು. ಇವರ ಕಾರ್ಪೋರೇಟ್ ನಾಯಕತ್ವಕ್ಕೆ 2020ರಲ್ಲಿ ಜೆಆರ್‌ಡಿ ಟಾಟಾ ಪ್ರಶಸ್ತಿ ನೀಡಿ ಗೌರವಿಸಲಾಗಿತ್ತು.

ಆಧಾರ: ಪ್ರಜಾವಾಣಿ, ದಿನಾಂಕ:01.12.2022.

## 15. ಕುಂಬ್ಳೆ ಸುಂದರರಾವ್, ಮಾಜಿ ಶಾಸಕ

ಯಕ್ಷಗಾನ ಬಯಲಾಟ ಮತ್ತು ತಾಳಮುದ್ದಳೆಯಲ್ಲಿ ಏಕರೂಪದ ಖ್ಯಾತಿ ಹೊಂದಿದ್ದ ಹಿರಿಯ ಕಲಾವಿದ, ಮಾಜಿ ಶಾಸಕ ಕುಂಬ್ಳೆ ಸುಂದರರಾವ್ ನಿಧನ ಹೊಂದಿರುತ್ತಾರೆ. ಅವರಿಗೆ 90 ವರ್ಷ ವಯಸ್ಸಾಗಿತ್ತು. ಸುರತ್ಕಲ್, ಧರ್ಮಸ್ಥಳ ಮತ್ತು ಇರಾ ಮೇಳಗಳಲ್ಲಿ ವೇಷಧಾರಿಯಾಗಿ ನಾಲ್ಕು ದಶಕಕ್ಕೂ ಹೆಚ್ಚು ಕಾಲ ಮೇಳದ ತಿರುಗಾಟ ನಡೆಸಿದ ಹೆಗ್ಗಳಿಕೆ ಇವರದು. ಸುರತ್ಕಲ್ ಕ್ಷೇತ್ರದ ಬಿಜೆಪಿ ಶಾಸಕನಾಗಿ ಯಕ್ಷಗಾನ ಬಯಲಾಟ ಅಕಾಡೆಮಿ ಮೊದಲ ಅಧ್ಯಕ್ಷರಾಗಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದವರು. ಕಲೆ, ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಮೇರೆದ ಅಪೂರ್ವ ಕಲಾವಿದರು ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಕಾರ್ಯಕರ್ತ ಜನಸಂಘದ ಕಾಲದಿಂದಲೂ ರಾಜಕೀಯ ಭಾಷಣಕ್ಕೆ ತೆರಳುತ್ತಿದ್ದ ಇವರು ದಿನಕ್ಕೆ ಮೂರು ಕಡೆ ಭಾಷಣ ಮಾಡಿದ್ದೂ ಇದೆ.

ಪಾರ್ತಿಸುಬ್ಬ ಜನಸಿದ ಕಾಸರಗೋಡಿನ ಕುಂಬ್ಳೆಯವರಾದ ಸುಂದರರಾವ್ ಯಕ್ಷರಂಗದಲ್ಲಿ ತನ್ನಯತೆ ಮತ್ತು ಭಾವಪೂರ್ಣ ಅರ್ಥಗಾರಿಕೆ ಪ್ರಾಸಬದ್ಧ ಮಾತುಗಳ ಮೂಲಕ ಅನೂಹ್ಯ ರಸಭಾವ ಸೃಷ್ಟಿಸಿ ಅಪಾರ ಅಭಿಮಾನಿ ವರ್ಗವನ್ನು ತಮ್ಮದಾಗಿಸಿಕೊಂಡಿದ್ದರು.

**ಯಕ್ಷನುಗ್ರಹದ ಮನೆ:** 1934 ಮಾರ್ಚ್20 ರಂದು ಕುಂಬ್ಳೆ ಸಮೀಪದ ನಾರಾಯಣಮಂಗಲ ಎಂಬಲ್ಲಿ ಕುಂಞಕಣ್ಣ–ಕಲ್ಯಾಣಿ ದಂಪತಿಯ 10 ಮಕ್ಕಳಲ್ಲಿ 5ನೇಯವರಾಗಿ ಸುಂದರರಾವ್ ಜನಿಸಿದ್ದರು. ಸುಂದರರಾವ್–ಸುಶೀಲ ದಂಪತಿಗೆ ಮೂವರು ಪುತ್ರಿಯವರು, ಇಬ್ಬರೂ ಪುತ್ರರು ಮೂಲತ: ಕೇರಳದ

ಕಾಸಗೋಡಿನವರಾದರೂ ಕುಟುಂಬ ಮಂಗಳೂರಿನ ಪಂಪ್‌ವೆಲ್‌ನಲ್ಲಿ ನೆಲೆಸಿತ್ತು. ಸ್ವಗೃಹಕ್ಕೆ ಯಕ್ಷಾನುಗ್ರಹ ಎಂದೇ ಹೆಸರಿಸಿದ್ದರು.

**ದುಶ್ಯಂತ ನಿಂದ ಭರತನವರೆಗೆ:**ಯಕ್ಷಗಾನದ ಪಟ್ಟಾಭಿಷೇಕ ಪ್ರಸಂಗದ ಭರತ ಕರ್ಣಭೇದನದ ಕರ್ಣ, ಚಕ್ರೇಶ್ವರ ಪರೀಕ್ಷಿತ ಪ್ರಸಂಗದ ಪರೀಕ್ಷಿತ ಅವರ ಅಚ್ಚುಮೆಚ್ಚಿನ ಪಾತ್ರಗಳು ಚಾರ್ವಾಕ, ಅಗ್ನಿವರ್ಣ ರಾಮ, ಕೃಷ್ಣ ಧರ್ಮಸ್ಥಳ ಕ್ಷೇತ್ರ ಮಹಾತ್ಮೆಯ ಗೋವಿಂದ ದೀಕ್ಷಿತ, ಹೆಗಡೆ ಭುವನ ಭಾಗ್ಯದ ದುಶ್ಯಂತ ಪಾತ್ರಗಳು ಇವರಿಗೆ ಹೆಚ್ಚಿನ ಪ್ರಸಿದ್ಧಿಯನ್ನು ತಂದುಕೊಟ್ಟಿದ್ದವು. 1998ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ವಿಶ್ವಕನ್ನಡ ಸಮ್ಮೇಳನ ಪ್ರಶಸ್ತಿ, ಪೇಜಾವರ ವಿಶ್ವೇಶತೀರ್ಥ ಸ್ವಾಮೀಜಿ ಅವರಿಂದ ವಿಜಯ ವಿಠಲ ಪ್ರಶಸ್ತಿ ಸಹಿತ ನೂರಾರೂ ಪುರಸ್ಕಾರಗಳು ಸಂದಿವೆ. ಸುಂದರ ಕಾಂಡ ಎಂಬ ಹೆಸರಿನಲ್ಲಿ ಇವರ ಜೀವನಚರಿತ್ರೆ ಪ್ರಕಟವಾಗಿದೆ.

ಆಧಾರ: ವಿಜಯವಾಣಿ, ದಿನಾಂಕ:01.12.2022

## 16. ಬಾಲಚಂದ್ರ ಜಯಶೆಟ್ಟಿ, ಖ್ಯಾತ ಅನುವಾದಕ

ಅನುವಾದಕ ಬಾಲಚಂದ್ರ ಜಯಶೆಟ್ಟಿ ನಿಧನ ಹೊಂದಿರುತ್ತಾರೆ. ಅವರಿಗೆ 83 ವರ್ಷ ವಯಸ್ಸಾಗಿತ್ತು. 1998ರ ಏಪ್ರಿಲ್‌ನಲ್ಲಿ ಜರುಗಿದ ಬೀದರ್ ಜಿಲ್ಲಾ ಮಟ್ಟದ 5ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. 1994ರಲ್ಲಿ ಭಾರತೀಯ ಕಾವ್ಯ ಮೀಮಾಂಸೆ ಅನುವಾದಕ್ಕಾಗಿ ರಾಷ್ಟ್ರ ಪ್ರಶಸ್ತಿಗೆ ಪಾತ್ರರಾಗಿದ್ದರು. ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ಕೇಂದ್ರಿಯ ಹಿಂದಿ ನಿರ್ದೇಶನಾಲಯ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದ್ದಾರೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:19.12.2022

## 17. ಕೇಶವಮೂರ್ತಿ, ಗಮಕ ಗಂಧರ್ವ

ಗಮಕ ಗಂಧರ್ವ, ಪದ್ಮಶ್ರೀ ಪುರಸ್ಕೃತ ಹೊಸಹಳ್ಳಿಯ ಹೆಚ್.ಆರ್.ಕೇಶವಮೂರ್ತಿ ನಿಧನ ಹೊಂದಿರುತ್ತಾರೆ. ಅವರಿಗೆ 89 ವರ್ಷ ವಯಸ್ಸಾಗಿತ್ತು

16ನೇ ವಯಸ್ಸಿನಲ್ಲಿ ಗ್ರಾಮದ ವೆಂಕಟೇಶಯ್ಯ ಅವರ ಬಳಿ ಗಮಕ ವಾಚನ ಅಧ್ಯಯನ ಆರಂಭಿಸಿದ್ದ ಕೇಶವಮೂರ್ತಿಯವರು ರಾಮಾಯಣ, ಮಹಾಭಾರತ ಕನ್ನಡ ಹಾಗೂ ಸಂಸ್ಕೃತ ಕಾವ್ಯಗಳನ್ನು ಹಲವು ರಾಗಗಳಲ್ಲಿ ವಾಚನ ಮಾಡುವುದನ್ನು ರೂಢಿಸಿಕೊಂಡಿದ್ದರು. 100ಕ್ಕೂ ಅಧಿಕ ವಿಭಿನ್ನ ರಾಗಗಳಲ್ಲಿ ವಚನ ಮಾಡುವ ಮೂಲಕ ಶತರಾಗಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಅವರ ಗಮಕ ಶೈಲಿ ಕೇಶವಮೂರ್ತಿ ಘರಾನಾ ಜಿಲ್ಲಾ ಎಂದು ಪ್ರಸಿದ್ಧವಾಗಿತ್ತು. ಶಾಂತಲ ನಾಟ್ಯಶ್ರೀ ಪ್ರಶಸ್ತಿ, ಕುಮಾರವ್ಯಾಸ ಪ್ರಶಸ್ತಿ, 2022ರಲ್ಲಿ ಪದ್ಮಶ್ರೀ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳು ಕೇಶವಮೂರ್ತಿ ಅವರನ್ನು ಅರಸಿ ಬಂದಿವೆ.

ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ಪಂಪನ ಮಹಾ ಭಾರತ, ರನ್ನನ ಗದಾಯುದ್ಧ ರಘುವಂಶ, ಕುಮಾರಸಂಭವದ ಶ್ಲೋಕಗಳಿಗೆ ರಾಗ ಸಂಯೋಜನೆ ಮಾಡಿ ಆರು ದಶಕಗಳ ಕಾಲ ಗಮಕವನ್ನು ದೇಶದೆಲ್ಲದೆ ಹರಡಿದ್ದರು. ಮತ್ತೂರು ಲಕ್ಷ್ಮೀಕೇಶವ ಶಾಸ್ತ್ರಿಯವರ ವ್ಯಾಖ್ಯಾನದೊಂದಿಗೆ ಸಮಗ್ರ ಕುಮಾರವ್ಯಾಸ ಭಾರತದ 135 ಧ್ವನಿ ಸುರಳಿಗಳು ಹೊರಬಂದಿವೆ.

ಆಧಾರ: ವಿಶ್ವವಾಣಿ, ದಿನಾಂಕ:22.12.2022

# ಭಾಗ – 9

# ಪ್ರಮುಖ ಲೇಖನಗಳು

## 1. ಬಡತನ ನಿರ್ಮೂಲನೆಯ ಕೇಂದ್ರದ ಯತ್ನಕ್ಕೆ ಸುಪ್ರೀಂ ಬಲ

ಜನರಲ್ ಕೆಟಗರಿಗೆ ಸೇರಿದ, ಆದರೆ ಆರ್ಥಿಕವಾಗಿ ಹಿಂದುಳಿದಿರುವ ಜನರಿಗೆ ಶೇ.10ರಷ್ಟು ಮೀಸಲಾತಿಯನ್ನು ನೀಡಲು ಕೇಂದ್ರ ಸರ್ಕಾರ 2019ರ ಜನವರಿಯಲ್ಲಿ ಮಾಡಿದ್ದ ಸಂವಿಧಾನ ತಿದ್ದುಪಡಿಯನ್ನು ಸರ್ವೋಚ್ಚ ನ್ಯಾಯಾಲಯ 3:2 ಬಹುಮತದ ತೀರ್ಪಿನೊಂದಿಗೆ ಎತ್ತಿ ಹಿಡಿದಿದೆ. 2019 ರ ಲೋಕಸಭೆ ಚುನಾವಣೆಗೆ ಕೆಲವೇ ತಿಂಗಳು ಇರುವಾಗ ನರೇಂದ್ರ ಮೋದಿ ನೇತೃತ್ವದ ಕೇಂದ್ರ ಸರ್ಕಾರ ತಂದಿದ್ದ ಈ ಮೀಸಲಾತಿ ಕಾನೂನಿನ ಅಗ್ನಿಪರೀಕ್ಷೆಯಲ್ಲಿ ಉತ್ತೀರ್ಣವಾಗಿದ್ದು, ಮೇಲ್ವರ್ಗದ ಬಡ ಫಲಾನುಭವಿಗಳ ಆತಂಕ ನಿವಾರಣೆಯಾಗಿದೆ. ದೇಶದಲ್ಲಿ ಜಾತಿ ಆಧಾರಿತ ಮೀಸಲಾತಿ ಇದೆ, ಮೀಸಲಾತಿ ಎಂಬುದು ಬಡತನ ನಿರ್ಮೂಲನೆ ಕಾರ್ಯಕ್ರಮವಲ್ಲ, ಆರ್ಥಿಕ ಪರಿಸ್ಥಿತಿಯನ್ನು ಆಧರಿಸಿ ಮೀಸಲಾತಿ ಕೊಡಲಾಗದು, ಇದು ಸಂವಿಧಾನ ಬಾಹಿರ ಎಂಬುದು ಮೇಲ್ವರ್ಗ ಮೀಸಲು ವಿರೋಧಿ ಅರ್ಜಿದಾರರ ಒಂದು ವಾದವಾಗಿತ್ತು. ಒಟ್ಟಾರೆ ಮೀಸಲಿನ ಪ್ರಮಾಣ ಶೇ.50ರ ಮಿತಿ ದಾಟುವಂತಿಲ್ಲ ಎಂದು ಸುಪ್ರೀಂಕೋರ್ಟ್ 1992ರಲ್ಲಿ ಹೇಳಿದೆ ಎಂಬುದು ಮತ್ತೊಂದು ವಾದವಾಗಿತ್ತು. ಇದು ಸಂವಿಧಾನದ ಮೂಲ ಆಶಯಗಳಿಗೆ ವಿರದ್ಧವಲ್ಲ ಎಂದು ನ್ಯಾಯಾಲಯ ಹೇಳಿದೆ. ವಿಶೇಷ ಸಂದರ್ಭಗಳಲ್ಲಿ ಶೇ.50ರ ಮಿತಿಯನ್ನು ಮೀರಬಹುದು ಎಂಬ ಕೇಂದ್ರದ ವಾದಕ್ಕೆ ಮನ್ನಣೆ ನೀಡಿದೆ. ಇದು ಐತಿಹಾಸಿಕ.

ಮೇಲ್ವರ್ಗದಲ್ಲೂ ಬಡವರಿದ್ದಾರೆ, ಜನರಲ್ ಕೆಟಗರಿಗೆ ಸೇರಿದವರು ಎಂಬ ಕಾರಣಕ್ಕೆ ಕಿತ್ತು ತಿನ್ನುವ ಬಡತನ ಇದ್ದರು ಅವರಿಗೆ ಮೀಸಲಾತಿಯ ಪ್ರಯೋಜನ ದಕ್ಕುತ್ತಿಲ್ಲ. ಅಂಥವರ ನೆರವಿಗೆ ಸರ್ಕಾರಗಳು ನಿಲ್ಲಬೇಕು ಎಂಬ ಕೂಗು ಬಹಳ ಹಳೆಯದು. ಇದಕ್ಕೆ ಮನ್ನಣೆ ನೀಡಿ 1991ರಲ್ಲಿ ಪಿ.ವಿ.ನರಸಿಂಹರಾವ್ ಸರ್ಕಾರ ಶೇ.10 ಮೇಲ್ವರ್ಗ ಮೀಸಲನ್ನು ನೀಡಿತ್ತು. ಆದರೆ ಸುಪ್ರೀಂಕೋರ್ಟ್ ಅದನ್ನು ರದ್ದುಗೊಳಿಸಿತ್ತು. ಮೇಲ್ವರ್ಗ ಮೀಸಲನ್ನು ನೀಡಿತ್ತು. ಆದರೆ ಸುಪ್ರೀಂಕೋರ್ಟ್ ಅದನ್ನು ರದ್ದುಗೊಳಿಸಿತ್ತು. ಮೇಲ್ವರ್ಗದವರಿಗೆ ಅಂಕಿ–ಅಂಶಗಳ ಬೆಂಬಲದೊಂದಿಗೆ ಮೀಸಲಾತಿ ನೀಡಲು ಯುಪಿಎ ಸರ್ಕಾರ ಸಮಿತಿಯೊಂದನ್ನು ರಚಿಸಿತ್ತು. ಆ ಸಮಿತಿಯ ವರಿದಿಯನ್ನೇ ಆಧರಿಸಿ ಮೋದಿ ಸರ್ಕಾರ ಮೀಸಲಾತಿ ನೀಡಿತ್ತು. ಈ ಕುರಿತಾದ ಮಸೂದೆಗೆ ಬಹುತೇಕ ಎಲ್ಲ ಪಕ್ಷಗಳ ಬೆಂಬಲವೂ ಇತ್ತು. ಹೀಗಾಗಿ ಸುಲಭವಾಗಿ ಅನುಮೋದನೆ ಪಡೆಯಿತು. ಆದರೆ ಶೇ.50ರ ಮಿತಿಯನ್ನು ಮೀರಿ ಮೀಸಲು ನೀಡಬಹುದು ಎಂಬ ಕೇಂದ್ರದ ವಾದಕ್ಕೆ ಮನ್ನಣೆ ನೀಡಿರುವುದರಿಂದ ಇತರೆ ಸಮುದಾಯಗಳಿಂದಲೂ ಮೀಸಲು ಹೆಚ್ಚಳಕ್ಕೆ ಬೇಡಿಕೆ ಬರಬಹುದು. ಪ್ರಸ್ತುತ ಆರ್ಥಿಕವಾಗಿ ಹಿಂದುಳಿದವರಿಗೆ ನೀಡುವ ಮೀಸಲಿಗೆ ನ್ಯಾಯಾಲಯದ ಸಮ್ಮತಿ ಸಿಕ್ಕಿರುವುದರಿಂದ ಬಡವರಿಗೊಂದು ಆಶಾಕಿರಣ ಸಿಕ್ಕಂತಾಗಿದೆ.

ಆಧಾರ:–ಕನ್ನಡಪ್ರಭ, ದಿನಾಂಕ:8.11.2022.

## 2. EWS ಕೇಸರಿಬಾತ್

ಸದ್ಯದಲ್ಲೇ ಗುಜರಾತ್, ಹಿಮಾಚಲ ಪ್ರದೇಶಗಳ ವಿಧಾನಸಭೆಗಳಿಗೆ ಚುನಾವಣೆ ನಡೆಯಲಿದೆ. ಬೆಲೆ ಏರಿಕೆ, ನಿರುದ್ಯೋಗ, ಕಾಂಗ್ರೆಸ್ ಭಾರತ್ ಜೋಡೋ ಯಾತ್ರೆ, ಆಮ್ ಆದ್ಮಿ ಪಕ್ಷದ ಬಲವರ್ಧನೆ– ಇವೆಲ್ಲ ಸವಾಲುಗಳ ನಡುವೆ ಬಿಜೆಪಿ ನಿಂತಿದೆ. ಪ್ರಸ್ತುತ ಸುಪ್ರೀಂಕೋರ್ಟ್ಎತ್ತಿಹಿಡಿದ ಶೇ.10 ಇಡಬ್ಲ್ಯುಎಸ್ ಮೀಸಲು ನೀತಿಯು ಬಿಜೆಪಿಗೆ ಈ ಎಲ್ಲಾ ಸವಾಲುಗಳನ್ನು ಹೊಡೆದುರುಳಿಸುವ ರಾಮಬಾಣವಾಗಲಿದೆ ಎಂದೇ ರಾಜಕೀಯ ವಲಯ ವಿಶ್ಲೇಷಿಸುತ್ತಿದೆ.

'ಒಂದೇ ಕಲ್ಲಿನಲ್ಲಿ ಎರಡು ಹಕ್ಕಿ' ಎನ್ನುವ ಮಾತಿಗೆ ಅನ್ವರ್ಥವಾಗುವ ವಿದ್ಯಾಮಾನಗಳು ರಾಜಕೀಯ ವಲಯದಲ್ಲಿ ಹೊಸತೇನೂ ಅಲ್ಲ ಮೊನ್ನೆ ಸುಪ್ರೀಂ ಕೋರ್ಟ್ ಎತ್ತಿ ಹಿಡಿದ ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೂ (ಇಡಬ್ಲುಎಸ್) ಮೀಸಲು ನಿಲುವು ಕೂಡ ಇದೇ ಅನ್ವರ್ಥಕ್ಕೆ ಜೋತು ಬಿದ್ದಿರುವಂಥ ಸಂಗತಿ. ಸುಪ್ರೀಂಕೋರ್ಟ್ ಪ್ರಕಟಿಸಿದ ಈ ಐತಿಹಾಸಿಕ ತೀರ್ಪಿನಿಂದಾಗಿ ಗುಜರಾತ್ ಮತ್ತು ಹಿಮಾಚಲ ಪ್ರದೇಶಗಳ ಚುನಾವಣೆಯಲ್ಲಿ ಬಿಜೆಪಿಗೆ ಭರ್ಜರಿ ಲಾಭವಾಗಲಿದೆ ಎಂದೇ ರಾಜಕೀಯ ಪಂಡಿತರು ವಿಶ್ಲೇಷಿಸುತ್ತಿದ್ದಾರೆ.

2019ರ ಸಂಸತ್ ಚುನಾವಣೆಗೂ ಪೂರ್ವದಲ್ಲೇ ಇಡಬ್ಲ್ಯುಎಸ್ ಮೀಸಲಿಗೆ ಅಸ್ತು ಸೂಚಿಸಿದ್ದ ಕೇಂದ್ರ ಸರ್ಕಾರ ಈ ನೀತಿಯ ಜಾರಿಗೊಳಿಸಲು ಸಾಕಷ್ಟು ಉತ್ಸಾಹದಲ್ಲಿತ್ತು. ಮರಳಿ ಅಧಿಕಾರ ಹಿಡಿದ ಮೇಲೂ ಶೇ.10ರ ಇಡಬ್ಲ್ಯುಎಸ್ ಮೀಸಲಾತಿ ಜಾರಿಗೆ ಸಾಕಷ್ಟು ಅಡೆತಡೆಗಳು ಬಂದವು. ಸುಪ್ರಿಂಕೋರ್ಟ್‌ನ ಅಂಗಳದಲ್ಲೇ ಈ ತೊಡಕನ್ನು ನಿವಾರಿಸಿ, ಸಾಮಾನ್ಯ ವರ್ಗದ ಆರ್ಥಿಕ ದುರ್ಬಲರಿಗೆ ಉಡುಗೊರೆ ನೀಡಬೇಕಾದ ಪರಿಸ್ಥಿತಿಯೂ ಬಂತು. ಆದರೆ, ಈ ಯಶಸ್ಸು ತಡವಾಗಿ ಸಿಕ್ಕರೂ ಚುನಾವಣೆ ಸಮಯದಲ್ಲೇ ದಕ್ಕಿರುವುದು ಬಿಜೆಪಿಗೆ ಆತ್ಮವಿಶ್ವಾಸ ಇಮ್ಮಡಿಸುವಂತೆ ಮಾಡಿದೆ. ಈ ಡಬಲ್ ಖುಷಿಗೆ ಕಾರಣ ಗುಜರಾತ್, ಹಿಮಾಚಲ ಪ್ರದೇಶಗಳ ಎಲೆಕ್ಷನ್.

**ಮೇಲ್ವರ್ಗದ ಹಿಂದುಗಳ ಶೇ.60 ಮತಗಳ ಮೇಲೆ ಕಣ್ಣು:** ಗುಜರಾತ್ ಹಾಗು ಹಿಮಾಚಲ ಪ್ರದೇಶಗಳಲ್ಲಿ ಪ್ರತಿಪಕ್ಷಗಳು ನಿರುದ್ಯೋಗ, ಹಣದುಬ್ಬರ ವಿಚಾರವನ್ನೇ ಮುಂದಿಟ್ಟುಕೊಂಡು ಬಿಜೆಪಿಗೆ ಮುತ್ತಿಗೆ ಹಾಕುತ್ತಿವೆ. ಅದರಲ್ಲೂ ದೇಶಾದ್ಯಂತ ಭಾರತ ಜೋಡೋ ಯಾತ್ರೆ ನಡೆಸುತ್ತಿರುವ ಕಾಂಗ್ರೆಸ್‌ಗೆ ಈ ಟೀಕೆಗಳೇ ಬ್ರಹ್ಮಾಸ್ತ್ರ ಪ್ರತಿಪಕ್ಷಗಳು ಸೃಷ್ಟಿಸುತ್ತಿರುವ ಈ ಹಿನ್ನೆಡೆಗಳಿಗೆ ತಕ್ಕ ಉತ್ತರವಾಗಿ ಇಡಬ್ಲ್ಯುಎಸ್ ಮೀಸಲು ಬಿಜೆಪಿಯ ಕೈಹಿಡಿಯುವ ಸಾಧ್ಯತೆ ಇದೆ. ಉಭಯ ರಾಜ್ಯಗಳ ಚುನಾವಣೆಗಳಲ್ಲಿ ಮೇಲ್ಜಾತಿ ಹಿಂದುಗಳ ಶೇ.60ರಿಂದ 62ರಷ್ಟು ಮತಗಳನ್ನು ಬಿಜೆಪಿ ಪಡೆಯಲಿದೆ ಎಂದು ರಾಜಕೀಯ ಪಂಡಿತರು ವಿಶ್ಲೇಷಿಸುತ್ತಿದ್ದಾರೆ. ಇತ್ತ ಡಿಸೆಂಬರ 4ರಂದು ನಡೆಯಲಿರುವ ದಿಲ್ಲಿ ಪಾಲಿಕೆ ಚುನಾವಣೆಯಲ್ಲೂ 250 ವಾರ್ಡ್‌ಗಳ 'ಛೋಟಿ ಸರ್ಕಾರ್' ರಚಿಸಲೂ ಬಿಜೆಪಿಗೆ ಈ ಮೀಸಲು ವರದಾನ. ದಿಲ್ಲಿಯಲ್ಲಿ ವಾಸಿಸುವ ದೊಡ್ಡ ಜನಸಂಖ್ಯೆಯಲ್ಲಿ ಬಿಹಾರ, ಉತ್ತರಖಂಡ, ಉತ್ತರ ಪ್ರದೇಶದಿಂದ ವಲಸೆ ಬಂದವರೇ ಆಗಿದ್ದಾರೆ. ಈ ಪೈಕಿ ಮೇಲ್ವರ್ಗದ ಶೇ.70 ಮಂದಿ ಮಾಸಿಕ 15–20 ಸಾವಿರ ಆದಾಯದಲ್ಲಿ ಜೀವನ ನಡೆಸುತ್ತಿದ್ದಾರೆ. ಇಡಬ್ಲ್ಯುಎಸ್ ಮೀಸಲು ನೀತಿ ತಕ್ಕ ಮಟ್ಟಿಗೆ ಇವರಿಗೆ ಖುಷಿಪಡಿಸಲಿದೆ.

**EWS ಮತಗಳಿಂದ ಬಿಜೆಪಿಗೆ ಹೇಗೆ ಲಾಭ:** ಹಿಮಾಚಲ ಪ್ರದೇಶದ 68 ಮತ್ತು ಗುಜರಾತ್‌ನ 182 ವಿಧಾನಸಭಾ ಸ್ಥಾನಗಳಿಗೆ ಚುನಾವಣೆ ನಡೆಯಲಿದೆ. ಗುಜರಾತ್‌ನಲ್ಲಿ ಇಡಬ್ಲ್ಯುಎಸ್ ಮೀಸಲಾತಿಯ ಪ್ರಯೋಜನ ಪಡೆಯುತ್ತಿರುವವರು ಬರೋಬ್ಬರಿ 2 ಕೋಟಿ ಜನ! ಅಂದರೆ ಜನಸಂಖ್ಯೆಯ ಸುಮಾರು 30 ಪ್ರತಿ ಶತ. ಇಡಬ್ಲ್ಯುಎಸ್ ಕೋಟಾವು ರಜಪೂತ, ಭೂಮಿಹಾರ್, ಬ್ರಾಹ್ಮಣ ಮತ್ತು ಕಾಯಸ್ಥ, ಬನಿಯಾ ಮತ್ತು ಪಾಟಿದಾರ್ ಜಾತಿಗಳಿಗೆ ಪ್ರಯೋಜನ ನೀಡಲಿದೆ. ಮತ್ತೊಂದೆಡೆ, ಹಿಮಾಚಲದಲ್ಲಿ ರಜಪೂತರು ಶೇ.33, ಬ್ರಾಹ್ಮಣರು ಶೇ.19 ಮತ್ತು ಒಬಿಸಿ ಶೇ.14 ಮತ್ತು ಎಸ್ಟಿ ಶೇ.6 ಮಂದಿ ಇದ್ದಾರೆ. ಬಡ ಮೇಲ್ಜಾತಿ ಮತದಾರರಿಂದ ಇಲ್ಲಿ ಬಜೆಪಿ ಗರಿಷ್ಠ ಲಾಭ ಪಡೆಯುವ ಸಂಭವವಿದೆ.

**ಗುಜರಾತ್‌ನಲ್ಲಿ ಬಿಜೆಪಿಗಿರುವ ಸವಾಲುಗಳು:**

- ಪ್ರಸ್ತುತ ಗುಜರಾತ್ ವಿಧಾನಸಭಾ ಚುನಾವಣೆಯಲ್ಲಿ ಆಡಳಿತ ಪಕ್ಷ ಬಿಜೆಪಿ ಹಿಂದೆಂದಿಗಿಂತ ಹೆಚ್ಚು ಸವಾಲುಗಳನ್ನು ಎದುರಿಸುತ್ತಿದೆ.
- 2001 ರಿಂದ 2014ರ ವರೆಗೆ ನರೇಂದ್ರ ಮೋದಿ ಅವರನ್ನು 'ಸ್ಥಿರ ಸಿಎಂ' ಆಗಿ ಕಂಡಿದ್ದ ಬಿಜೆಪಿಗೆ ತದನಂತರ ಸದೃಢ ನಾಯಕತ್ವದ ಕೊರತೆ ಎದುರಿಸುತ್ತಿದೆ.

- ಬಿಲ್ಕೀಸ್ ಬಾನೊ ಸಾಮೂಹಿಕ ಅತ್ಯಾಚಾರ ಪ್ರಕರಣದ 11 ಆರೋಪಿಗಳನ್ನು ಸನ್ನಡತೆ ಆಧಾರದಲ್ಲಿ ಬಿಡುಗಡೆ ಮಾಡಿದ್ದು ಪಕ್ಷದ ಇಮೇಜ್‌ಗೆ ಭಾರೀ ಆಘಾತ ತಂದೊಡ್ಡಿದೆ.
- 24 ವರ್ಷ ಅಧಿಕಾರ ನಡೆಸಿದ ಪಕ್ಷ ಆಡಳಿತ ವಿರೋದಿ ಅಲೆಯನ್ನೂ ಎದುರಿಸುತ್ತಿದೆ. ಕಾಂಗ್ರೆಸ್‌ನ ಪಕ್ಕದಲ್ಲೇ ರಾಜಕೀಯ ಶಿಶು ಆಪ್ ಪೈಪೋಟಿಗಿಳಿದಿದೆ.
- ಮೊರ್ಬಿ ತೂಗುಸೇತುವೆ ಕುಸಿತ ದುರಂತ, ಸರ್ಕಾರಿ ನೇಮಕಾತಿ ಪರೀಕ್ಷೆಗಳ ಪ್ರಶ್ನೆ ಪತ್ರಿಕೆ ಸೋರಿಕೆ ಹಗರಣ ಇತ್ತೀಚಿನ ಬಹುದೊಡ್ಡ ಹಿನ್ನಡೆ.
- ಕಳೆದೆರಡು ವರ್ಷಗಳಲ್ಲಿ ಸುರಿದ ಅತಿವೃಷ್ಟಿಯಿಂದಾಗಿ ಸಾಕಷ್ಟು ರೈತರಿಗೆ ಸೂಕ್ತ ಪರಿಹಾರ ಸಿಕ್ಕಿಲ್ಲ.
- ದುಬಾರಿ ವಿದ್ಯುತ್ ದರ ಪ್ರಮುಖ ಸವಾಲು. ಇತ್ತ ಕಾಂಗ್ರೆಸ್, ಆಪ್ ತಾವು ಅಧಿಕರಕ್ಕೆ ಬಂದರೆ ತಿಂಗಳಿಗೆ 300 ಯೂನಿಟ್ ಉಚಿತ ಎಂದಿರುವುದು ಬಿಜೆಪಿಗೆ ತಲೆನೋವಾಗಿದೆ.
- ಬೆಲೆ ಏರಿಕೆ, ನಿರುದ್ಯೋಗದ ಆರೋ5ಪಗಳನ್ನು ಪ್ರತಿಪಕ್ಷಗಳು ಹೊರಿಸುತ್ತಿವೆ.

- ಆಧಾರ:–ಪ್ರಜಾವಾಣಿ, ದಿನಾಂಕ:15.11.2022.

## 3. ಜಗತ್ತಿನಲ್ಲೇ ಅತಿ ವಿಶಿಷ್ಟ ಭಾರತೀಯ ಸಂವಿಧಾನ

ಭಾರತೀಯ ಸಂವಿಧಾನವು ನವೆಂಬರ್ 26. 1949 ರಂದು ಅಂಗೀಕಾರವಾಯಿತು. ಭಾರತೀಯ ಸಂವಿಧಾನ ರಚಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಭಾರತದ ಮೊದಲ ಕಾನೂನು ಸಚಿವ ಡಾ.ಬಿ.ಆರ್.ಅಂಬೇಡ್ಕರ್ ಅವರಿಗೆ ಈ ದಿನ ಗೌರವ ಸಲ್ಲಿಸಲಾಗುತ್ತದೆ.

ಭಾರತದಲ್ಲಿ ಸಂವಿಧಾನ ದಿನವನ್ನು ಪ್ರತಿ ವರ್ಷ ನವೆಂಬರ್ 26ರಂದು ಆಚರಿಸಲಾಗುತ್ತದೆ. ಭಾರತದ ಸಂವಿಧಾನವು ವಿಶ್ವದ ಎಲ್ಲಾ ಸಂವಿಧಾನಗಿಳಿಗಿಂತ ಅತಿ ದೊಡ್ಡ ಲಿಖಿತ ಸಂವಿಧಾನ. ಸಂವಿಧಾನದಲ್ಲಿ ಪ್ರತಿಪಾದಿಸಿರುವ ಮೂಲಭೂತ ಕರ್ತವ್ಯಗಳ ಅರಿವು ಮೂಡಿಸುವ ಗುರಿಯನ್ನು ಈ ದಿನವು ಹೊಂದಿದೆ.

ಭಾರತವು ಸ್ವಾತಂತ್ರ್ಯ ರಾಷ್ಟ್ರವಾದ ನಂತರ ಸಂವಿಧಾನ ರಚನಾ ಸಭೆಯು ಡಾ।ಭೀಮರಾವ್ ಅಂಬೇಡ್ಕರ್ ಅವರ ಅಧ್ಯಕ್ಷತೆಯ ಸಂವಿಧಾನವನ್ನು ರಚಿಸುವ ಕೆಲಸವನ್ನು ವಹಿಸಿಕೊಟ್ಟಿತು. ಭಾರತದ ಮೊದಲ ರಾಷ್ಟ್ರಪತಿ ಡಾ।ರಾಜೇಂದ್ರ ಪ್ರಸಾದ್ ಅವರು ಸಂವಿಧಾನ ರಚನಾ ಸಭೆಯ ಅಧ್ಯಕ್ಷರಾಗಿದ್ದರು. 1948ರ ಆರಂಭದಲ್ಲಿ ಡಾ।ಅಂಬೇಡ್ಕರ್ ಅವರು ಭಾರತೀಯ ಸಂವಿಧಾನದ ಕರಡನ್ನು ಪೂರ್ಣಗೊಳಿಸಿದರು ಮತ್ತು ಅದನ್ನು ಸಂವಿಧಾನ ಸಭೆಯಲ್ಲಿ ಮಂಡಿಸಿದರು. ನವೆಂಬರ್ 26, 1949 ರಂದು ಈ ಕರಡನ್ನು ಕೆಲವು ತಿದ್ದುಪಡಿಗಳೊಂದಿಗೆ ಅಂಗೀಕರಿಸಲಾಯಿತು.

ಭಾರತೀಯ ಸಂವಿಧಾನವು ಜನವರಿ 26, 1950 ರಂದು ಜಾರಿಗೆ ಬಂದಿತು. ಈ ಸಂವಿಧಾನವು ಭಾರತವನ್ನು ಸಾರ್ವಭೌಮ, ಸಮಾಜವಾದಿ, ಜಾತ್ಯತೀತ ಮತ್ತು ಪ್ರಜಾಸತ್ತಾತ್ಮಕ ಗಣರಾಜ್ಯವೆಂದು ಘೋಷಿಸುತ್ತದೆ ಮತ್ತು ಎಲ್ಲಾ ನಾಗರಿಕರಿಗೆ ನ್ಯಾಯ, ಸ್ವತಂತ್ರ್ಯ, ಸಮಾನತೆ ಮತ್ತು ರಾಷ್ಟ್ರದ ಏಕತೆ ಮತ್ತು ಸಮಗ್ರತೆಯನ್ನು ಕಾಪಡಿಕೊಳ್ಳಲು ಭ್ರಾತೃತ್ವವನ್ನು ಉತ್ತೇಜಿಸಿಸುವ ಗುರಿಯನ್ನು ಹೊಂದಿದೆ. ಭಾರತೀಯ ಸಂವಿಧಾನವನನ್ನು ರಚಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಭಾರತದ ಮೊದಲ ಕಾನೂನು ಸಚಿವ ಡಾ.ಬಿ.ಆರ್.ಅಂಬೇಡ್ಕರ್ ಅವರಿಗೆ ಈ ದಿನ ಗೌರವ ಸಲ್ಲಿಸಲಾಗುತ್ತದೆ.

**ಭಾರತದ ಸಂವಿಧಾನದ ವೈಶಿಷ್ಟ:**

ಭಾರತದ ಸಂವಿಧಾನವು ಹಲವು ವೈಶಿಷ್ಟಗಳನ್ನು ಹೊಂದಿದೆ. ಅವುಗಳಲ್ಲಿ ಕೆಲವು ಈ ಕೆಳಗಿನಂತಿವೆ.

- ಭಾರತದ ಸಂವಿಧಾನವು ಬ್ರಿಟನ್, ಐರ್ಲೆಂಡ್, ಜಪಾನ್, ಯುಎಸ್ಎ, ದಕ್ಷಿಣ ಆಫ್ರಿಕಾ ಜರ್ಮನಿ, ಆಸ್ಟ್ರೇಲಿಯಾ ಮತ್ತು ಕೆನಡಾ ಸೇರಿದಂತೆ ಇತರ ದೇಶಗಳಿಂದ ವೈಶಿಷ್ಟಗಳನ್ನು ಎರವಲು ಪಡೆದುಕೊಂಡಿದೆ.
- ಭಾರತದ ಸಂವಿಧಾನ ಸಭೆಯನ್ನು 1946ರಲ್ಲಿ ಸ್ಥಾಪಿಸಲಾಯಿತು. ಭಾರತ ಸಂವಿಧಾನ ರಚನೆಗೆ 2 ವರ್ಷ 11 ತಿಂಗಳು 18 ದಿನಗಳ ಕಾಲ ಸಮಯ ತೆಗೆದುಕೊಳ್ಳಲಾಯಿತು.
- ಭಾರತದ ಸಂವಿಧಾನವು ಕೈ ಬರಹದ ದಾಖಲೆಯಾಗಿದೆ. ಇದು ಪ್ರಪಂಚದಲ್ಲೇ ಅತ್ಯಂತ ದೊಡ್ಡದಾದ ಕೈಬರಹ ದಾಖಲೆಗಳಲ್ಲಿ ಒಂದಾಗಿದೆ. ಇಂಗ್ಲಿಷ್ ಆವೃತ್ತಿಯಲ್ಲಿ ಒಟ್ಟು 1,17,369 ಪದಗಳಿವೆ.
- ಆರಂಭದಲ್ಲಿ ಸಮಜವಾದಿ ಎಂಬ ಪದವು ಭಾರತೀಯ ಸಂವಿಧಾನದ ಪ್ರಿಯಾಂಬಲ್ (ಪೀಠಿಕೆ) ಭಾಗವಾಗಿರಲಿಲ್ಲ. ತುರ್ತು ಪರಿಸ್ಥಿತಿಯ ಸಮಯದಲ್ಲಿ 1976ರ 42ನೇ ತಿದ್ದುಪಡಿ ಕಾಯಿದೆಯ ಮೂಲಕ ಆ ಪದವನ್ನು ಸೇರಿಸಲಾಯಿತು. ಇದು ಪೀಠಿಕೆಗೆ ಇದುವರೆಗಿನ ಏಕೈಕ ತಿದ್ದುಪಡಿಯಾಗಿದೆ.
- ಭಾರತೀಯ ಸಂವಿಧಾನದ ಮೂಲ ರಚನೆಯು ಭಾರತ ಸರ್ಕಾರದ ಕಾಯಿದೆ 1935ರ ಮೇಲೆ ನಿಂತಿದೆ.
- ಸಂವಿಧಾನದ ಮೂಲ ಕೈ ಬರಹ ಪ್ರತಿಗಳನ್ನು ಸಂಸತ್ ಭವನದ ಗ್ರಂಥಾಲಯದಲ್ಲಿ ಹೀಲಿಯಂ ತುಂಬಿದ ಪ್ರಕೋಷ್ಠದಲ್ಲಿ ಸಂರಕ್ಷಿಸಲಾಗಿದೆ.
- ನವೆಂಬರ್ 26, 1949ರಂದು ಸಾಂವಿಧಾನಿಕ ಸಭೆಯು ಸಭೆ ಸೇರಿತು. ಅಂದು ಜೋರಾಗಿ ಹಾಗೂ ದೀರ್ಘವಾದ ಹರ್ಷೋದ್ಗಾರಗಳೊಂದಿಗೆ ಮತ್ತು ಮೇಜುಗಳ ಬಡಿತದೊಂದಿಗೆ ಸಂವಿಧಾನದ ಅಂಗೀಕಾರವನ್ನು ಸ್ವಾಗತಿಸಲಾಯಿತು.
- ಸಂವಿಧಾನ ರಚನಾ ಸಭೆಯ ಅಧ್ಯಕ್ಷರಾದ ಡಾ।ರಾಜೇಂದ್ರ ಪ್ರಸಾದ್ ಅವರು ಸಂವಿಧಾನವನ್ನು ಅಂಗೀಕರಿಸುವ ಪ್ರಸ್ತಾವನೆಯನ್ನು ಮಂಡಿಸುವ ಮೊದಲು ತಮ್ಮ ಭಾಷಣದಲ್ಲಿ ಮಹಾತ್ಮ ಗಾಂಧೀಜಿಯವರಿಗೆ ಶ್ರದ್ದಾಂಜಲಿ ಸಲ್ಲಿಸಿದರು ಮತ್ತು ಈ ಸಂವಿಧಾನವನ್ನು ಕಾರ್ಯಗತಗೊಳಿಸಲು ಯಾರ ಸೌಭಾಗ್ಯವಿದೆಯೋ ಅವರೆಲ್ಲರಿಗೂ ನಾನು ಶುಭ ಹಾರೈಸುತ್ತೇನೆ ಎಂದು ಹೇಳಿದರು. ಇದು ರಾಷ್ಟ್ರಪಿತ ಕಲಿಸಿದ ವಿಶಿಷ್ಟ ವಿಧಾನದಿಂದ ನಾವು ಸಾಧಿಸಿದ ಅಪೂರ್ವ ವಿಜಯ ಎಂದು ಭವಿಷ್ಯದಲ್ಲಿ ಭಾರತೀಯರು ನೆನಪಿಸಿಕೊಳ್ಳಲಿದ್ದಾರೆ. ನಾವು ಗೆದ್ದ ಸ್ವಾತಂತ್ರ್ಯವನ್ನು ಸಂರಕ್ಷಿಸುವುದು ಮಾತ್ರವಲ್ಲದೇ ಅದನ್ನು ನಿಜವಾಗಿಯೂ ಮನುಷ್ಯನಿಗೆ ಫಲದ ರೂಪದಲ್ಲಿ ನೀಡುವುದು ನಮ್ಮ ಕೈಯಲ್ಲಿದೆ ಎಂದು ಹೇಳಿದ್ದರು ಎಂದು ಪತ್ರಕರ್ತ ಮತ್ತು ಸ್ವಾತಂತ್ರ್ಯ ಹೋರಾಟಗಾರ ಶೈಲೇನ್ ಚಟರ್ಜಿಯವರ ಪ್ರಕಾರ ಹಿರಿಯ ಸ್ವಾತಂತ್ರ್ಯ ಹೋರಾಟಗಾರ್ತಿ ಪೂರ್ಣಿಮಾ ಬ್ಯಾನರ್ಜಿ ಅವರಿಂದ ಜನ–ಗಣ–ಮನ ಅಧಿನಾಯಕ ಜಯ ಹೇ ಭಾರತ ಭಾಗ್ಯ ವಿಧಾತ ಎಂಬ ರಾಷ್ಟ್ರಗೀತೆಯನ್ನು ಹಾಡುವುದರೊಂದಿಗೆ ಕೊನೆಗೊಂಡಿತು.
- ಸಂವಿಧಾನದ ಪ್ರಕಾರ ಜನವರಿ 24, 1950 ರಂದು ನಡೆದ ವಿಶೇಷ ಅಧಿವೇಶನದಲ್ಲಿ ಅಸೆಂಬ್ಲಿಯು ಡಾ।ರಾಜೇಂದ್ರ ಪ್ರಸಾದ್ ಅವರನ್ನು ಭಾರತೀಯ ಗಣರಾಜ್ಯದ ಮೊದಲ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿತು.

ಲೇಖಕರು: ಮಣಿಕಂಠ ತ್ರಿಶಂಕರ್ ಮೈಸೂರ್.

ಆಧಾರ:–ಕನ್ನಡ ಪ್ರಭ, ದಿನಾಂಕ:26.11.2022.

## 4. ಎಲೆಕ್ಷನ್ ಕಮಿಷನ್ ಕಾಪಾಡಿ

ಕೇಂದ್ರ ಚುನಾವಣಾ ಆಯೋಗ ಆಯುಕ್ತರ ವಿಚಾರದಲ್ಲಿ ಕೇಂದ್ರ ಸರ್ಕಾರದ ಹಸ್ತಕ್ಷೇಪವನ್ನು ಸುಪ್ರೀಂ ಕೋರ್ಟ್‌ನ ಪೀಠ ಬಲವಾಗಿ ಖಂಡಿಸಿದೆ. ಪದೇ–ಪದೇ ಆಯುಕ್ತರ ಬದಲಾವಣೆ, ಅಧಿಕಾರ ಮೊಟಕುಗೊಳಿಸುವಿಕೆ, ದುರ್ಬಲರನ್ನು ಆಯುಕ್ತ ಹುದ್ದೆಗೆ ನೇಮಿಸಿಕೊಳ್ಳುವಿಕೆ–ಇತ್ಯಾದಿ ಅಂಶಗಳ ವಿರುದ್ಧ ತೀಕ್ಷ್ಣ ಪ್ರಶ್ನೆಗಳನ್ನೆತ್ತಿದೆ. ಏನಿದು ವಿವಾದ?ಚುನಾವಣಾ ಆಯೋಗದ ಮಹತ್ವವೇನು? ಇತ್ಯಾದಿ ಅಂಶಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಇಲ್ಲಿದೆ.

ಜಗತ್ತಿನ ಅತಿದೊಡ್ಡ ಚುನಾವಣೆಯನ್ನು ಸಂಘಟಿಸುವ ಭಾರತೀಯ ಚುನಾವಣಾ ಆಯೋಗ ಈಗ ಚರ್ಚೆಯ ವಸ್ತು. ಆಯೋಗದ ಕುರಿತಾಗಿ ಸುಪ್ರೀಂ ಕೋರ್ಟ್‌ನ ಐವರು ನ್ಯಾಯ ಮೂರ್ತಿಗಳ ಸಾಂವಿಧಾನಿಕ ಪೀಠವು ಕೇಂದ್ರ ಸರ್ಕಾರದ ಮೇಲೆ ಕೆಲವು ತೀಕ್ಷ್ಣವಾದ ಪ್ರಶ್ನೆಗಳನ್ನೆತ್ತಿದೆ. 2004 ರಿಂದ ಮುಖ್ಯ ಚುನಾವಣಾ ಆಯುಕ್ತರ (ಸಿಇಸಿ) ಅವಧಿಯನ್ನು ಸರ್ಕಾರ ಏಕೆ ಕಡಿತಗೊಳಿಸುತ್ತಿದೆ? ಈ ವಿಚಾರದಲ್ಲಿ ನ್ಯಾಯಯುತ ಮತ್ತು ಪಾರದರ್ಶಕ ನೇಮಕಾತಿ ಪ್ರಕ್ರಿಯೆಗೆ ಸೂಕ್ತ ಕಾನೂನನ್ನೇಕೆ ರೂಪಿಸಿಲ್ಲ? ದುರ್ಬಲ ಎನ್ನಿಸುವಂಥ ವ್ಯಕ್ತಿಗಳನ್ನೇ ಸಿಇಸಿ ಹುದ್ದೆಗೆ ನೇಮಿಸುತ್ತಿರುವುದೇಕೆ? –ಇಂಥ ಹರಿತ ಪ್ರಶ್ನೆಗಳ ಮೂಲಕ ಚಾಟಿ ಬೀಸಿದೆ.

ಇತ್ತೀಚೆಗಷ್ಟೆ ಸೇವೆಯಿಂದ ಸ್ವಯಂ ನಿವೃತ್ತರಾದ ಪಂಜಾಬ್ ಕೇಡರ್‌ನ ಐಎಎಸ್ ಅಧಿಕಾರಿ ಅರುಣ್ ಗೊಯಲ್ ಅವರನ್ನು ಒಂದು ದಿನವೂ ತಡ ಮಾಡದೆ ಕೇಂದ್ರ ಸರ್ಕಾರ ಚುನಾವಣಾ ಆಯುಕ್ತರನ್ನಾಗಿ ನೇಮಿಸಿತ್ತು. ವಿಆರ್‌ಎಸ್ ಪಡೆದ ಮರುದಿನವೇ ಆಯುಕ್ತರಾದ ಗೋಯಲ್ ನೇಮಕಾತಿ ಸಂಬಂಧದ ಕಡತಗಳನ್ನು ವರ್ಗಾಯಿಸುವಂತೆಯೂ ಸುಪ್ರೀಂ ಕೋರ್ಟ್ ಕೇಳಿದೆ. ಅಷ್ಟಕ್ಕೂ, ಸಂವಿಧಾನದ ಸ್ವಾಯತ್ತ ಸಂಸ್ಥೆಯಾದ ಚುನಾವಣಾ ಆಯೋಗದ ಸುತ್ತಮುತ್ತ ಏನಿದು ವಿವಾದ? ಸಿಇಸಿ ಹುದ್ದೆಯ ನೇಮಕ ಹೇಗಾಗುತ್ತದೆ? ಅವರ ಪರಮಾಧಿಕಾರಗಳೇನು?– ಚರ್ಚೆ ಮುನ್ನೆಲೆಗೆ ಬಂದಿದೆ.

**ಸುಪ್ರೀಂನ ಪ್ರಶ್ನೆಗಳೇಕೆ:** ಪ್ರಸ್ತುತ ವ್ಯವಸ್ಥೆಯಲ್ಲಿ ಸರ್ಕಾರವು ತನ್ನ ಆಯ್ಕೆಯ ಅಧಿಕಾರಿಗಳನ್ನು ಮುಖ್ಯ ಚುನವಣಾ ಆಯುಕ್ತ ಮತ್ತು ಚುನಾವಣಾ ಆಯುಕ್ತರನ್ನಾಗಿ ನೇಮಿಸುತ್ತದೆ. ನ್ಯಾಯಮೂರ್ತಿಗಳಾದ ಕೆ.ಎಂ. ಜೋಸೆಫ್, ಅಜಯ್ ರಸ್ತೋಗಿ, ಅನಿರುದ್ಧ್ ಬೋಸ್, ಹೃಷಿಕೇಶ್ ರಾಯ್ ಮತ್ತು ಸಿ.ಟಿ.ರವಿಕುಮಾರ್ ಅವರನ್ನೊಳಗೊಂಡ ಐವರು ನ್ಯಾಯಮೂರ್ತಿಗಳ ಸಂವಿಧಾನ ಪೀಠವು ಚುನಾವಣಾ ಆಯೋಗದ ಸದಸ್ಯರ ನೇಮಕಾತಿ ಪ್ರಕ್ರಿಯೆಲ್ಲಿ ಸುಧಾರಣೆ ಕೋರಿ ಸಲ್ಲಿಸಲಾದ ಅರ್ಜಿಗಳ ವಿಚಾರಣೆ ನಡೆಸಿದೆ.

ಟಿ.ಎನ್.ಶೇಷನ್ ಬಳಿಕ ಯಾರೊಬ್ಬ ಸಿಇಎಸ್ ಕೂಡ 6 ವರ್ಷಗಳ ಪೂರ್ಣಾವಧಿ ಅಧಿಕಾರ ನಡೆಸಲಿಲ್ಲ ನಿವೃತ್ತಿ ಅಂಚಿನಲ್ಲಿ ಇವರನ್ನು ಸಿಇಎಸ್ ಆಗಿಸುವ ಅಥವಾ ಅವಧಿಗೂ ಮುನ್ನವೇ ಇವರನ್ನು ವಜಾಗೊಳಿಸುವ ತೀರ್ಮಾನವನ್ನು ಕೇಂದ್ರ ಸರ್ಕಾರಗಳು ಕೈಗೊಂಡಿವೆ. ಸರ್ಕಾರ ತನಗೆ ಬೇಕಾದವರನ್ನೇ ಆಯೋಗದ ಹುದ್ದೆಗಳಿಗೆ ನೇಮಿಸಿಕೊಳ್ಳುತ್ತಿದೆ ಎನ್ನುವುದು ಸುಪ್ರೀಂ ಆರೋಪ.

**ಟಿ.ಎನ್.ಶೇಷನ್‌ರನ್ನು ಸುಪ್ರೀಂ ಸ್ಮರಿಸಿದ್ದೇಕೆ:** ಸಿಇಸಿ ಹುದ್ದೆಯ ಪರಮಾಧಿಕಾರವು ದೇಶಕ್ಕೆ ಮನವರಿಕೆ ಆಗಿದ್ದೇ ಟಿ.ಎನ್.ಶೇಷನ್‌ರ ಕಾಲಾವಧಿಯಲ್ಲಿ 10ನೇ ಚುನಾವಣಾ ಆಯುಕ್ತರಾಗಿ ಬಂದು ರಾಜಕೀಯ ಪಕ್ಷಗಳ ಮೂಗಿನ ನೇರಕ್ಕೆ ನಡೆಯುತ್ತಿದ್ದ ಚುನಾವಣಾ ವ್ಯವಸ್ಥೆಯಲ್ಲಿ ಭಾರೀ ಸುಧಾರಣೆ ತಂದರು. ಪಕ್ಷಗಳ ಅತೃಪ್ತಿಯ ನಡುವೆಯೂ ಮಾದರಿ ನೀತಿ ಸಂಹಿತೆಯನ್ನು ಕಟ್ಟುನಿಟ್ಟಾಗಿ ಜಾರಿ ಮಾಡಿದರು. ನ್ಯಾಯಸಮ್ಮತ ಚುನಾವಣೆಗೆ ಅಪಾರ ಶ್ರಮಿಸಿದರು. ಚುನಾವಣೆಯಲ್ಲಿ ಅಕ್ರಮ ಎಸಗುತ್ತಿದ್ದ ಸ್ಥಳೀಯ ಗೂಂಡಾಗಳನ್ನು ಮಟ್ಟಹಾಕಲು, ಮತಪೆಟ್ಟಿಗೆ ಹೈಜಾಕ್ ತಪ್ಪಿಸಲು ಕೇಂದ್ರ ಪೊಲೀಸ್ ಪಡೆಯನ್ನು ಮೊದಲ ಬಾರಿಗೆ ಬಳಸಿದರು. ಭಾರತೀಯ ಚುನಾವಣೆಯಲ್ಲಿ ಇವರ ಇಂಥ ಗಮನಾರ್ಹ ಸುಧಾರಣೆ ಪರಿಗಣಿಸಿ 1996 ರಲ್ಲಿ ಇವರಿಗೆ 'ರೇಮನ್ ಮ್ಯಾಗ್ಸೆಸ್ಸೆ' ಗೌರವ ಒಲಿದು ಬಂತು. "ಶೇಷನ್

ಕಟ್ಟಿದ ಈ ಚುನವಣಾ ವ್ಯವಸ್ಥೆಯನ್ನು ಹಾಳುಗೆಡವದಿರಿ," ಎಂದು ಸುಪ್ರೀಂ ಕೋರ್ಟ್ ಕಳವಳ ವ್ಯಕ್ತಪಡಿಸಿದ್ದೂ ಇದೇ ಕಾರಣಕ್ಕೆ. ಶೇಷನ್‌ರಂಥ ಸಮರ್ಥರನ್ನೇ ಸಿಇಸಿ ಹುದ್ದೆಗೆ ನೇಮಿಸಿ ಎಂದು ಕೋರ್ಟ್ ಹೇಳುತ್ತಿರುವುದೂ ಇದೇ ಕಾರಣಕ್ಕೆ.

**ಚುನಾವಣಾ ಆಯೋಗದಲ್ಲಿ ಯಾರ್‍ಯಾರಿದ್ದಾರೆ:** ಆರಂಭದಲ್ಲಿ ಚುನಾವಣಾ ಆಯುಕ್ತರಷ್ಟೇ ಇದ್ದರು. 1989, ಅಕ್ಟೋಬರ್ 16ರಿಂದ ಮುಖ್ಯ ಚುನಾವಣಾ ಆಯುಕ್ತರ ಜೊತೆಗೆ ಇಬ್ಬರು ಚುನಾವಣಾ ಆಯುಕ್ತರನ್ನು ನೇಮಿಸಿಕೊಳ್ಳಲಾಯಿತು. ಅಂದೇ ಮತದಾರರ ಕನಿಷ್ಠ ವಯೋಮಿತಿಯನ್ನು 21 ವರ್ಷದಿಂದ 18 ವರ್ಷಕ್ಕೆ ಇಳಿಸುವ ಐತಿಹಾಸಿಕ ನಿರ್ಧಾರವನ್ನೂ ಕೈಗೊಳ್ಳಲಾಯಿತು. 1990ರ ಜನವರಿಯಲ್ಲಿ ಏಕ ಆಯುಕ್ತ ಚುನಾವಣಾ ಆಯೋಗವು ಪುನಃ ಸ್ಥಾಪಿಸಲಾಯಿತು. ಆದರೆ ಅಕ್ಟೋಬರ್ 1993ರಲ್ಲಿ ಸಿಇಸಿ ಜೊತೆಗೆ ಇಬ್ಬರು ಚುನಾವಣಾ ಆಯುಕ್ತರನ್ನು ನೇಮಿಸುವ ಮೂಲಕ ಅದನ್ನು 3 ಸದಸ್ಯರ ಸಂಸ್ಥೆಯ ಮಂಡಲಿಯನ್ನಾಗಿ ರಚಿಸಲಾಯಿತು. ಆ ವ್ಯವಸ್ಥೆ ಇಂದಿಗೂ ಜಾರಿಯಲ್ಲಿದೆ.

**ಯಾರು ನೇಮಕ ಮಾಡುತ್ತಾರೆ:** ಮುಖ್ಯ ಚುನಾವಣಾ ಆಯುಕ್ತರು ಮತ್ತು ಇಬ್ಬರು ಚುನವಣಾ ಆಯುಕ್ತರನ್ನು ರಾಷ್ಟ್ರಪತಿಗಳು ನೇಮಿಸುತ್ತಾರೆ. ಸಿಸಿ ಶ್ರೇಣಿಯ ಅಧಿಕಾರಿಗಳು. ಇವರ ಅಧಿಕಾರವಧಿ 6 ವರ್ಷಗಳು ಅಥವಾ 65 ವರ್ಷಗಳವರೆಗೆ (ವಯಸ್ಸು) ಸೇವೆ ಸಲ್ಲಿಸಬಹುದು. ಮುಖ್ಯ ಚುನಾವಣಾ ಆಯುಕ್ತರ ಸ್ಥಾನಮಾನವು ಸುಪ್ರೀಂ ಕೋರ್ಟ್ ನ್ಯಾಯಾಧೀಶರಿಗೆ ಸಮಾನ. ಅಲ್ಲದೆ, ಸಿಜೆಐಗೆ ಸಮಾನವಾದ ವೇತನ ಮತ್ತು ಭತ್ಯೆಗಳನ್ನು ಪಡೆಯುತ್ತಾರೆ. ಅಂದಹಾಗೆ, ಮುಖ್ಯ ಚುನಾವಣಾ ಆಯುಕ್ತರ ಸಂಬಳ 2,50,000 ರೂಪಾಯಿ! ಮುಖ್ಯ ಚುನಾವಣಾ ಆಯುಕ್ತರೇ ಚುನಾವಣಾ ಆಯೋಗದ ಮುಖ್ಯಸ್ಥರಾಗಿರುತ್ತಾರೆ. ಆಯೋಗದ ನಿರ್ಧಾರಗಳನ್ನು ಸದಸ್ಯರ ಬಹುಮತ ಅಥವಾ ಒಮ್ಮತದ ಆಧಾರದ ಮೇಲೆ ಕೈಗೊಳ್ಳಲಾಗುತ್ತದೆ.

**ಆಯುಕ್ತರನ್ನೂ ವಜಗೊಳಿಸುವವರು ಯಾರು:** ಸಂಸತ್ತಿನ ಮಹಾಭಿಯೋಗ ಪ್ರಕ್ರಿಯೆ ಮೂಲಕ ಮಾತ್ರ ಮುಖ್ಯ ಚುನಾವಣಾ ಆಯುಕ್ತರನ್ನು ಹುದ್ದೆಯಿಂದ ವಜಾಗೊಳಿಸಬಹುದು. ಸುಪ್ರೀಂ ಕೋರ್ಟ್‌ನ ನ್ಯಾಯಾಧೀಶರನ್ನು ತೆಗೆದು ಹಾಕಲೂ ಇದೇ ಪ್ರಕ್ರಿಯೆ ಅನುಸರಿಸಲಾಗುತ್ತದೆ. ಆದಾಗ್ಯೂ, ಸಿಇಸಿ ಶಿಫಾರಸ್ಸಿನ ಮೇರೆಗೆ ರಾಷ್ಟ್ರಪತಿಗಳು ಯಾವುದೇ ಸಮಯದಲ್ಲಿ ಚುನಾವಣಾ ಆಯುಕ್ತರನ್ನೂ ವಜಾಗೊಳಿಸಬಹುದು. ಚುನಾವಣಾ ಆಯುಕ್ತರು ತಮ್ಮ ಅವಧಿಯ ಮೊದಲು ರಾಜೀನಾಮೆ ನೀಡಬಹುದು ಅಥವಾ ಅವಧಿ ಪೂರ್ಣಗೊಳ್ಳುವ ಮೊದಲೇ ಅವರನ್ನು ತೆಗೆದುಹಾಕಬಹುದು.

**ಆಯುಕ್ತ ಮಂಡಳಿಯ ಈಗಿನ ಸದಸ್ಯರಾರು:**

- ರಾಜೀವ್ ಕುಮಾರ್

  ಮುಖ್ಯ ಚುನಾವಣಾ ಆಯುಕ್ತ (ಸಿಇಸಿ)

- ಅನೂಪ್ ಚಂದ್ರಪಾಂಡೆ

  ಚುನಾವಣಾ ಆಯುಕ್ತ

- ಅರುಣ್ ಗೋಯಲ್

  ಚುನಾವಣಾ ಆಯುಕ್ತ (ಹೊಸ ನೇಮಕ)

**2004ರಿಂದ ಆಯುಕ್ತರ ಬದಲಾವಣೆ:**

ಯುಪಿಎ ಕಾಲಾವಧಿ

- ಜೆ.ಎಂ.ಲಿಂಗ್ಡೋ–2 ವರ್ಷ 269 ದಿನ

- ಟಿ.ಎಸ್. ಕೃಷ್ಣಮೂರ್ತಿ–1 ವರ್ಷ 69 ದಿನ
- ಬಿ.ಬಿ. ಟಂಡನ್–269 ದಿನ
- ಎನ್.ಗೋಪಾಲಸ್ವಾಮಿ–2 ವರ್ಷ 294 ದಿನ
- ನವೀನ್ ಚಾವ್ಲಾ–1 ವರ್ಷ 89 ದಿನ
- ಎಸ್.ವೈ. ಖುರೇಷಿ–1 ವರ್ಷ 316 ದಿನ

**ಎನ್‌ಡಿಎ ಕಾಲಾವಧಿ:**

- ಹರಿಕೃಷ್ಣ ಬ್ರಹ್ಮ–92 ದಿನ
- ನಸೀಂ ಝೈದಿ–2 ವರ್ಷ 77 ದಿನ
- ಅಚಲ್ ಕುಮಾರ್ ಜ್ಯೋತಿ–200 ದಿನ
- ಓಂ ಪ್ರಕಾಶ್ ರಾವತ್–312 ದಿನ
- ಸುನೀಲ್ ಅರೋರಾ– 2 ವರ್ಷ 131 ದಿನ
- ಸುಶೀಲ್ ಚಂದ್ರ –1 ವರ್ಷ 31 ದಿನ
- ರಾಜೀವ್ ಕುಮಾರ್–193 ದಿನ(ಪ್ರಸ್ತುತ)

ಆಧಾರ:–ವಿಜಯ ಕರ್ನಾಟಕ, ದಿನಾಂಕ:26.11.2022.

## 5. ಸದಾಶಯಗಳ ಚಿಲುಮೆ ಸಂವಿಧಾನ

ಸಂವಿಧಾನ ಎಂಬುದು ರಾಷ್ಟ್ರದ ಮೂಲ ದಾಖಲೆ ಮಾತ್ರವಲ್ಲ ಅದೊಂದು ರಾಷ್ಟ್ರೀಯ ಅಭಿವೃದ್ಧಿಯ, ಸಮಗ್ರತೆಯ ಹಾಗೂ ಸಾಮೂಹಿಕ ಚಿಂತನೆಯ ಮೂಲ ಸೂತ್ರ. ಭಾರತ ಸಂವಿಧಾನ 2 ವರ್ಷ, 11 ತಿಂಗಳು ಹಾಗೂ 18 ದಿನಗಳ ನಿರಂತರ ಪ್ರಯತ್ನದ ಫಲಶ್ರುತಿಯಾಗಿ ಮೂಡಿಬಂತು. 1949ರ ನವೆಂಬರ್ 26 ರಂದು ಸಂವಿಧಾನ ರಚನಾ ಸಭೆಯಲ್ಲಿ ಅಂಗೀಕೃತಗೊಂಡು, 1950ರ ಜನವರಿ 26ರಂದು ಈ ಮೂಲ ಆಕಾರ ಗ್ರಂಥ ನಮ್ಮೀ ಬೃಹತ್ ರಾಷ್ಟ್ರಕ್ಕೆ ಸಮರ್ಪಿತಗೊಂಡಿತು. 1930ರ ಜನವರಿ 26 ರಂದು ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ "ಪೂರ್ಣ ಸ್ವರಾಜ್ಯವೇ ನಮ್ಮ ಗುರಿ" ಎಂಬುದಾಗಿ ಘೋಷಣೆ ಮೊಳಗಿತ್ತು. ಆ ದಿನವನ್ನೇ ನೆನಪಿಸುವ ಸಲುವಾಗಿ ಸಂವಿಧಾನ ಅದೇ ಜನವರಿ 26ರಂದೇ ಉದ್ಘಾಟನೆಗೊಂಡಿತ್ತು. ಅದನ್ನೇ ನಾವು "ಗಣರಾಜ್ಯೋತ್ಸವ" ಎಂಬುದಾಗಿ ಅದ್ದೂರಿಯಿಂದ ಆಚರಿಸುತ್ತಿದ್ದೇವೆ. ನವೆಂಬರ್ 26 "ಸಂವಿಧಾನ ದಿನ" ಎಂಬ ಹೆಸರಿನಿಂದ ಸರಳವಾಗಿ ಆಚರಣೆಯಾಗುತ್ತಿದೆ.

ಸಂವಿಧಾನ ಎಂಬುದು ಇತರ ನೂರಾರು ಪುಸ್ತಕಗಳಂತೆ ಒಂದೇ ಗ್ರಂಥವಲ್ಲ ವಾಸ್ತವಿಕವಾಗಿ ಅದು ಸಮಗ್ರ ಭಾರತದ "ಭಾಗ್ಯವಿಧಾತ" ಎನ್ನುವ ತೆರದಲ್ಲಿರುವ ಮೂಲ ಗ್ರಂಥ. ಕೇಂದ್ರದ ರಾಷ್ಟ್ರಾಧ್ಯಕ್ಷರ ಪದದಿಂದ ಗ್ರಾಮ ಮಟ್ಟದ ಸ್ವಯಂ ಆಡಳಿತದ ನಿಟ್ಟಿನವರೆಗೂ, ಈ ನೆಲದ ಕಟ್ಟುಕಟ್ಟಳೆಗಳು, ರಾಜಕೀಯ ಸಂಸ್ಥೆಗಳು ಹಾಗೂ ಅದರ ಕಾರ್ಯವ್ಯಾಪ್ತಿಯ ಮೂಲ ನಿಘಂಟು ಇದು. ಈ ನಮ್ಮ ಸಂವಿಧಾನ ಕೇವಲ 300 ಪುಟಗಳ, ಸುಮಾರು 470 ವಿಧಿಗಳ ಒಂದು ಸಂಪುಟ ಮಾತ್ರವಲ್ಲ. ಈ ಮೂಲ ದಾಖಲೆ, ಮೌನವಾಗಿ ತನ್ನೊಳಗಿನ ಆಶೋತ್ತರಗಳ ಖನಿಯನ್ನೇ ಆಳವಾಗಿ ಅಧ್ಯಯನ ಗೈಯುವವರಿಗೆ ತೆರೆದಿಡುವಂತದ್ದು. 1973ರಲ್ಲಿ ಶ್ರೀ ಕೇಶವಾನಂದ ಭಾರತಿ ವಿರುದ್ಧ ಕೇರಳ ಸರ್ಕಾರ ಮೊಕದ್ದಮೆಯ

ತೀರ್ಪಿನಂತೆ ಸಂಸತ್‌ಗೆ 368ನೇ ವಿಧಿಯನ್ವಯ ಈ ಸಂವಿಧಾನದ ಎಲ್ಲ ಭಾಗಗಳನ್ನು ತಿದ್ದುಪಡಿಗಾಗಿ ಮುಟ್ಟುವ ಅಧಿಕಾರ ನೀಡಲಾಗಿದೆ.

ನಮ್ಮ ಸಂವಿಧಾನ ಇದೀಗ 73 ಸಂವತ್ಸರಗಳ ಪಥಗಾಮಿಯಾಗಿ ಮುಂದುವರಿಯುತ್ತಿದೆ. ಬದಲಾಗುವ ಸಮಾಜ ಹಾಗೂ ಯುವ ಪೀಳಿಗೆಯ ಆಶೋತ್ತರಗಳಿಗೆ ಚ್ಯುತಿ ಬರದಂತೆ "ಕಾಲಕಾಲಕ್ಕೆ ತಿದ್ದುಪಡಿಗೊಳಿಸಿದ ಎಂಬ ಮೌಲಿಕ ಅಂಶವನ್ನು 368ನೇ ವಿಧಿ ತುಂಬಿ ನಿಂತಿದೆ. ಹಾಗೆಂದು ಆಡಳಿತರೂಢ ಪಕ್ಷ ಹಾಗೂ ಅದರ ನೇತಾರರ ಆಣತಿಗೆ ಶಿರಬಾಗಿ ಇರಬೇಕಾಗಿಲ್ಲ. ಇದು ಎಂದಿಗೂ 'ಗಾಳಿಕೋಳಿ' (Weather cock) ರೀತಿ ಇರತಕ್ಕದ್ದಲ್ಲ ಹಾಗೂ ಸ್ಥಿರತೆ ಬಿಂಬಿಸುವಂಥದ್ದು. ಸಂಪೂರ್ಣ ಪ್ರಭುತ್ವ ಸಂಪನ್ನತೆ, ಪ್ರಜಾತಂತ್ರ, ಸರ್ವಧರ್ಮ ಸಮನ್ವಯತೆಯ 'ಸೆಕ್ಯುಲರಿಸಂ, ಸಮಾಜವಾದ ಹಾಗೂ ಗಣರಾಜ್ಯ ಪದ್ಧತಿಗೆ ಒಂದಿನಿತೂ ಕುಂದು ತಟ್ಟದಿರಲಿ ಎಂಬ ಸದಾಶಯ ಇಲ್ಲಿ ಮಿಳಿತಗೊಂಡಿದೆ. ಅದೇ ರೀತಿ ನ್ಯಾಯ, ಸಮಾನತೆ ಹಾಗೂ ಸ್ವಾತಂತ್ರ್ಯ ಈ ನೆಲದಲ್ಲಿ ಸುಂದರ ಹೂವಿನಂತೆ ಬಿರಿದರಳಿ ಸೌರಭ ಸೂಸುತ್ತಿರಲಿ ಎಂಬುದು ಸಂವಿಧಾನಿಕ ಸದಾಶಯ. ಜೊತಜೊತೆಗೇ ರಾಷ್ಟ್ರದ ಏಕತೆ, ಅಖಂಡತೆ, ಅಂತೆಯೇ ವ್ಯಕ್ತಿ ಗೌರವಕ್ಕೆ ಇಂದಿನತೂ ಭಂಗ ಒದಗಿ ಬರದಿರಲಿ ಎಂದೇ ಸದಾಶಯ ಸಾಂವಿಧಾನಿಕ ಪೀಠಿಕೆಯೇ ಇನ್ನು ಪ್ರಪ್ರಥಮ ವಿಧಿಯಲ್ಲಿ ಭಾರತವನ್ನು ಸಂಯುಕ್ತ ರಾಜ್ಯ (weather cock) ಎಂದು ಸಂಬೋಧಿಸದೆ, ಭಾರತದ ರಾಜ್ಯಗಳ ಒಕ್ಕೂಟ (union of states) ಎಂಬ ನವೀನ ಹೆಸರು ನೀಡಿದೆ. ಇದೇ ಶಬ್ದ ವಿಶ್ವದ ಸಂವಿಧಾನಗಳ ಪೈಕಿ ಪ್ರಪ್ರಥಮ ಬಾರಿಗೆ ಮೂಡಿಬಂದುದು ಭಾರತದಲ್ಲಿ ಮಾತ್ರ. ತನ್ಮೂಲಕ ಕೇವಲ ಆಗಮನದ ದ್ವಾರ' ಮಾತ್ರ ತೆರೆದಿಟ್ಟು ಯಾವುದೇ ಕಾಲಘಟ್ಟದಲ್ಲಿ ಈ ನಮ್ಮ ಒಕ್ಕೂಟದಿಂದ ಹೊರ ನಡೆಯುವ ಬಾಗಿಲನ್ನೇ ಸದಾಕಾಲಕ್ಕೂ ಮುಚ್ಚಿರುವುದು ವೈಶಿಷ್ಟ ಪೂರ್ಣ. ಅದು 1961ರಲ್ಲಿ ದೊರೆತ ಗೋವಾ ಡಿಯು ಡಾಮನ್ ಇರಬಹುದು, 1975ರಲ್ಲಿ ಸಿಕ್ಕಿದ ಸಿಕ್ಕಿಂ ಇರಬಹುದು, 'ನಾವು ಪುನಃ ಮರಳಿ ಹೋಗುತ್ತೇನೆ' ಎಂಬುದಾಗಿ ನಮ್ಮ ಒಕ್ಕೂಟದಲ್ಲಿ ಬಿರುಕು ಹುಟ್ಟಿಸುವಲ್ಲಿ ಶಾಶ್ವತ ತಡೆಗೋಡೆಯನ್ನೇ ಈ ಪ್ರಪ್ರಥಮ ವಿಧಿ ತನ್ನೊಡಲ ಒಳಗೆ ಇರಿಸಿದೆ.

ಇನ್ನು 6 ಮೂಲಭೂತ ಹಕ್ಕುಗಳ ಸುಂದರ ಗೊಂಚಲು ಸಂವಿಧಾನದ 3ನೇ ವಿಭಾಗದಲ್ಲಿ ತೊನೆಯುತ್ತಿದೆ. 1947ರ ಆಗಸ್ಟ್ 14ರ ಮಧ್ಯರಾತ್ರಿ ಬ್ರಿಟಿಷ್ ಸರ್ಕಾರದಿಂದ ಭಾರತೀಯರಿಗೆ ಹಸ್ತಾಂತರವಾದ ಸಮಗ್ರ ರಾಜಕೀಯ ಶಕ್ತಿಯನ್ನು 100 ಪ್ರತಿಶತ ಎಂದು ಗಣಿಸಿದರೆ ಅದರಲ್ಲಿ 50 ಪ್ರತಿಶತವನ್ನು ಪ್ರಪ್ರಥಮವಾಗಿ ಅತೀ ಅಮೂಲ್ಯ ಎಂದು ಪರಿಗಣಿಸಿ ಜನತೆಗೆ ಮೂಲಭೂತ ಹಕ್ಕುಗಳ ರೂಪದಲ್ಲಿ ಕಾದಿರಿಸುವುದನ್ನು ಕಾಣಬಲ್ಲೆವು. ನಮ್ಮ ರಾಜ್ಯಾಂಗ ಘಟನೆ ಸಮಾನತೆಯ ಹಕ್ಕು, ಸ್ವಾತಂತ್ರ್ಯದ ಹಕ್ಕು, ಶೋಷಣೆಯ ವಿರುದ್ಧದ ಹಕ್ಕು, ಧಾರ್ಮಿಕ ಸ್ವಾತಂತ್ರ್ಯದ ಹಕ್ಕು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಹಕ್ಕು, ಅಂತೆಯೇ ಈ ಹಕ್ಕುಗಳು ಹ್ರಸ್ವಗೊಂಡಾಗ ಅವುಗಳನ್ನು ನ್ಯಾಯಾಲಯದ ಮೂಲಕ ಸಂರಕ್ಷಿಸಲು ಸಾಂವಿಧಾನಿಕ ರಕ್ಷಣಾತ್ಮಕ ಹಕ್ಕು– ಈ ಎಲ್ಲ ಹಕ್ಕುಗಳನ್ನು ಜನಸಮುದಾಯಕ್ಕೆ ನೀಡಿದೆ. ಅದರೆ ರಾಷ್ಟ್ರೀಯ ಭದ್ರತೆ, ಸಮಗ್ರತೆ, ಸಾರ್ವಜನಿಕ ಶಾಂತಿ, ಏಕತೆ ಇತ್ಯಾದಿಗೆ ಈ ಯಾವುದೇ ಹಕ್ಕುಗಳು ಭಂಗ ಒದಗಿಸುವಂತಿಲ್ಲ.

ನಮ್ಮ ಸಂವಿಧಾನದ ಆಶಯಗಳನ್ನು ಕ್ರೋಡೀಕರಿಸುವಿಕೆ ತೀರಾ ಅತ್ಯಗತ್ಯ. ಏಕೆಂದರೆ ಈ ನೆಲದಲ್ಲಿ ಬಾಳಿ ಬದುಕುವ ನಮ್ಮೆಲ್ಲರಿಗೆ ಅದು ಸಾಧನಾ ಪಥ ಹಾಗೂ ಸಾಮೂಹಿಕ ಬದುಕಿನ ಜೀವಾಳ. ಈ ವಿಶಾಲ ಭಾರತದಲ್ಲಿ ಕೇಂದ್ರ–ರಾಜ್ಯಗಳ ಸದಸ್ಯರ ಸಹಕಾರಿ ಸಂಯುಕ್ತ ರಾಜ್ಯತತ್ವ ಅಥವಾ ಕನಿಷ್ಠ ಸ್ಪರ್ಧಾತ್ಮಕ ಸಂಯುಕ್ತ ತತ್ವ ಇರಬೇಕೇ ವಿನಃ ಪರಸ್ಪರ ವೈರತ್ವದ ಸಂಯುಕ್ತ ರಾಜ್ಯ ಪದ್ಧತಿ ಇರಲಿ ಎಂದು ಸಂವಿಧಾನ ಎಂದೂ ಬಯಸುವುದಿಲ್ಲ ಯಾವುದೇ ಕ್ರೀಡೆಯ ನಿಯಮ ಉಲ್ಲಂಘನೆಗೊಂಡಾಗ ಅದು 'ತಪ್ಪಿನ ಆಟ' ಎಂದೇ ಗುರುತಿಸಲ್ಪಡುತ್ತದೆ. ನಮ್ಮ ಸಂವಿಧಾನ ಈ ನೆಲದಲ್ಲಿ ಕಾನೂನು ಬಾಹಿರ

ರಾಜಕೀಯಕ್ಕೆ ಕಡಿವಾಣ ಹಾಕಿದೆ ಎಂಬ ಕಟುಸತ್ಯವನ್ನು ಸ್ಫುರಿಸುತ್ತದೆ. ಒಟ್ಟಾರೆ ನಮ್ಮ ನೆಲದ ಮೂಲ ದಾಖಲೆ ಸಂವಿಧಾನ ಮೌನವಾಗಿ ಆಶಯಗಳ ನಿರಂತರ ಚಿಲುಮೆಯಂತೆ ಮೌನವಾಗಿ ಭೋದಿಸುತ್ತದೆ.

ಲೇಖಕರು: ಡಾ। ಪಿ. ಅನಂತಕೃಷ್ಣ ಭಟ್ ನಿವೃತ್ತ ಪ್ರೊಫೆಸರ್, ಕೆನರಾ ಕಾಲೇಜು, ಮಂಗಳೂರು.

ಆಧಾರ:–

## 6. ಸಂವಿಧಾನ ತತ್ವಗಳು ನಮ್ಮ ಬಾಳಿನ ನಿತ್ಯ ಸಂಕಲ್ಪವಾಗಲಿ

ಹೆಂಡತಿ ಮಾರಣಾಂತಿಕ ಕಾಯಿಲೆಯಿಂದ ಹಾಸಿಗೆ ಹಿಡಿದಿದ್ದಾಳೆ. ಗಂಡ ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ಹೊರಟು ನಿಂತಿದ್ದಾರೆ. ಸಾವು ಬದುಕಿನ ನಡುವೆ ಹೋರಾಟ ಮಾಡುತ್ತಿರುವ ತನ್ನ ಹೆಂಡತಿಗಿಂತ ಉನ್ನತ ಶಿಕ್ಷಣವೇ ಅವರಿಗೆ ಮಹತ್ವವಾಯಿತೆ? ಇವರೆಂಥ ಹೃದಯ ಹೀನ! ಎಂದು ಒಂದು ಕ್ಷಣವಾದರೂ ಅನ್ನಿಸದಿರುವುದು. ಹೌದು, ತಾನು ಅನುಭವಿಸಿದ ನೋವು, ಅವಮಾನಗಳು ಅವರನ್ನು ಅಷ್ಟೊಂದು ಕಠೋರ ವ್ಯಕ್ತಿಯನ್ನಾಗಿ ಮಾಡಿದ್ದವು. ಈ ದೇಶದ ಅನಿಷ್ಟ ಜಾತಿ ವ್ಯವಸ್ಥೆಯನ್ನು ನಿರ್ಮೂಲನಗೊಳಿಸಬೇಕು. ದಾಸ್ಯಕ್ಕೆ ಸಿಕ್ಕ ಜನರ ಪಾಲಿಗೆ ಹೊಸ ಬದುಕು ಕಟ್ಟಬೇಕು ಎಂಬ ಮಹತ್ವಾಕಾಂಕ್ಷೆ ಇಟ್ಟುಕೊಂಡು, ಅಂದು ದೀನಬಂಧು ಬಾಬಾಸಾಹೇಬ ಅಂಬೇಡ್ಕರರು ತಮ್ಮ ವೈಯುಕ್ತಿಕ ಬದುಕಿಗಂತ ಈ ದೇಶದ ಹಿತ ಮುಖ್ಯವೆಂದು ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ತೆರಳಿದರು. ಬುದ್ಧನ ನಿರ್ಮೋಹಿತ್ವ ಇಟ್ಟುಕೊಂಡು ಹಗಲಿರುಳು ಶ್ರಮವಹಿಸಿದರು. ಈ ದೇಶಕ್ಕೊಂದು ಸಂವಿಧಾನ ರಚಿಸಿಕೊಟ್ಟರು.

ಜಸ್ಟೀಸ್ ಎಲ್.ಎಂ.ಸಿಂಗ್ವಿ ಅವರ ಕಾಳಜಿಯ ಫಲವಾಗಿ 1979ರಿಂದ ನವೆಂಬರ್ 26 'ಕಾನೂನು ದಿನ'ವಾಗಿ ನ್ಯಾಯಾಂಗ ಕ್ಷೇತ್ರದಲ್ಲಿ ಆಚರಣೆಗೆ ಬಂದಿತ್ತು. ಅಂಬೇಡ್ಕರ್ ಅವರ 125ನೇ ಜನ್ಮದಿನಾಚರಣೆ ಸಂದರ್ಭದಲ್ಲಿ 2015ರಲ್ಲಿ ಮುಂಬಯಿಯಲ್ಲಿ ಅಂಬೇಡ್ಕರ್ ಮೆಮೋರಿಯಲ್‌ಗೆ ಅಡಿಗಲ್ಲು ಸಮಾರಂಭ ನೆರವೇರಿಸಿದ ಪ್ರಧಾನಿ ನರೇಂದ್ರ ಮೋದಿ, 'ನವೆಂಬರ್ 26 ಸಂವಿಧಾನ ದಿನ' ಎಂದು ಪ್ರತಿ ವರ್ಷ ಆಚರಿಸುವುದಾಗಿ ಘೋಷಿಸಿದ್ದು ಐತಿಹಾಸಿಕ.

ನಮ್ಮ ಸಂವಿಧಾನ ಏಕಾಏಕಿ ರಚನೆಯಾದುದಲ್ಲ. 1895ರಲ್ಲಿ ಬಾಲ ಗಂಗಾಧರ ತಿಲಕ್ ಭಾರತ ಸಂವಿಧಾನದ ವಿಧೇಯಕ ರಚಿಸಿದ್ದರು. 1928ರಲ್ಲಿ ಮೋತಿಲಾಲ್ ನೆಹರೂ ಕಮಿಟಿಯೂ ಸಂವಿಧಾನದ ಕರಡು ತಯಾರಿಸಿತ್ತು. ಬಿ.ಎನ್.ರಾವ್ ಎಂಬ ಕನ್ನಡಿಗ ಐ.ಸಿ.ಎಸ್.ಅಧಿಕಾರಿ ಪ್ರಜಾಪ್ರಭುತ್ವ ರಾಷ್ಟ್ರಗಳಿಗೆ ತೆರಳಿ, ವಿದೇಶಿ ಸಂವಿಧಾನಗಳನ್ನು ಅಧ್ಯಯನ ಮಾಡಿ, ಪ್ರಾಥಮಿಕ ಕರಡು ರಚಿಸಿ, 1948ರಲ್ಲಿ ಕರಡು ಸಮಿತಿ ಮುಂದೆ ಸಲ್ಲಿಸಿದರು. ಅಂಬೇಡ್ಕರ್ ನೇತೃತ್ವದ ಕರಡು ರಚನಾ ಸಮಿತಿ ಮತ್ತು ಸಂವಿಧಾನದ ರಚನಾ ಸಮಿತಿಯ 389 ಜನ ಪ್ರತಿನಿಧಿಗಳು ಸತತ 2 ವರ್ಷ 11 ತಿಂಗಳು ಮತ್ತು 18 ದಿನಗಳ ಕಾಲ ಚರ್ಚೆ ನಡೆಸಿ, 1948ರ ನವೆಂಬರ್‌ನಲ್ಲಿ ಸಂವಿಧಾನವನ್ನು ಸಿದ್ದಪಡಿಸಿದರು. ಅದೇ ಕರಡನ್ನು 1949ರ ನವೆಂಬರ್ 26 ರಂದು ಅಂಗೀಕರಿಸಲಾಯಿತು. ಆದರೆ, ಭಾರತ ಸಂವಿಧಾನದ ಒಟ್ಟು 395 ಕಲಮುಗಳಲ್ಲಿ 250 ಕಲಮುಗಳು ಬಾಲ್ಡ್ವಿನ್ ಕ್ಯಾಬಿನೆಟ್ ಪಾಸು ಮಾಡಿದ ಗೌರ್ನಮೆಂಟ್ ಆಫ್ ಇಂಡಿಯಾ ಆ್ಯಕ್ಟ್ 1935 ರಿಂದ ಅಳವಡಿಸಿಕೊಂಡಿರುವುದು ವಿಶೇಷ ಮತ್ತು ವಿಚಿತ್ರ.

ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿದ್ದ ವಾಜಪೇಯಿ ನೇತೃತ್ವದ ಬಿಜೆಪಿ ಸರ್ಕಾರವು ಸಂವಿಧಾನ ಕಾರ್ಯವಿಧಾನ ಪುನರಾವಲೋಕನ ಆಯೋಗವನ್ನು ನ್ಯಾಯಧೀಶರಾದ ಎಂ.ಎನ್.ವೆಂಕಟಾಚಲಯ್ಯ ನೇತೃತ್ವದಲ್ಲಿ ರಚಿಸಿತ್ತು. ಆದರೆ, ಮುಂದೆ ಅಧಿಕಾರಕ್ಕೆ ಬಂದ ಸರ್ಕಾರಗಳು ಆಯೋಗದ ವರದಿಗಳನ್ನು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಆಯೋಗದ ವರದಿಗಳನ್ನು ಬಿಡಿ, ಸಂವಿಧಾನದ ಅದೆಷ್ಟೋ ಆಶಯಗಳು ಇನ್ನೂ ಸಾಕಾರಗೊಂಡಿಲ್ಲ ಎಂಬುದೇ ಕಳವಳಕಾರಿ ಸಂಗತಿ. ಸಂವಿಧಾನವೇ ಪಾರಮ್ಯ ಎನ್ನುವವರು ಸಂವಿಧಾನ ಹೇಳಿದ ಏಕರೂಪ ನಾಗರಿಕ ಸಂಹಿತೆ ಮತ್ತು ಪೌರತ್ವ ಕಾಯಿದೆ ಜಾರಿಗೆ ವಿರೋಧಿಸುತ್ತಿದ್ದಾರೆ. ಸಮಾನತೆಯ ಮೌಲ್ಯಗಳ ಮೇಲೆ ರಚನೆಯಾದ ಸಂವಿಧಾನವು ಇನ್ನೂ ಆಚರಣೆಗೆ ಬರಬೇಕಾಗಿದೆ.

ಮತದಾನದಲ್ಲಿ ಮಾತ್ರ ಎಲ್ಲರೂ ಸಮಾನ ಹಕ್ಕನ್ನು ಹೊಂದಿದ್ದಾರೆ. ಆದರೆ ಸಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ಥರಗಳಲ್ಲಿ ಸಮಾನತೆಯೆಂಬುದು ಗಗನ ಕುಸುಮವಾಗಿದೆ. ಅಧಿಕಾರ ಶ್ರೀಮಂತರ, ಪ್ರಬಲ ಜಾತಿಯ ಜನರ ಪಾಲಾಗುತ್ತಿದೆ. ಬಡವರು ಬಡವರೇ ಆಗುತ್ತಿದ್ದಾರೆ. ಚುನಾವಣಾ ವೆಚ್ಚವು ಒಬ್ಬ ಜನಸಾಮಾನ್ಯ ಇಂದು ಜನಪ್ರತಿನಿಧಿಯಾಗದಂತೆ ಮಾಡಿದೆ.

ಯಾವುದೇ ಕಾನೂನು ಅಥವಾ ಕಟ್ಟಳೆಗಳಿಂದಲೇ ಮಾತ್ರ ಇಡೀ ಸಮಾಜದ ಗತಿಯನ್ನು ಬದಲಿಸಲು ಸಾಧ್ಯವಿಲ್ಲ. ಆ ಸಮಾಜದ ವ್ಯಕ್ತಿಗಳು ಹಾಗೂ ಸಮುದಾಯದ ಮನೋಭಾವ ಮತ್ತು ಪ್ರವೃತ್ತಿಗಳು ಇದಕ್ಕೆ ಪೂರಕವಾಗಿ ಸ್ಪಂದಿಸುವುದೂ ಅತ್ಯಗತ್ಯ.

ಲೇಖಕರು: ಡಾ। ಮಲ್ಲಿಕಾರ್ಜುನ ಗುಮ್ಮಗೋಳ, ಸಾಹಿತಿ, ನ್ಯಾಯಾಂಗ ಇಲಾಖೆ ಅಧಿಕಾರಿ

ಆಧಾರ:–

## 7. ತಾಯಿ ನುಡಿಗೆ ಬಲ ತುಂಬಿದ ಸರ್ವೆ

ಭಾರತ ಬಹುಭಾಷೆಗಳ ದೇಶ. ಒಂದೊಂದು ಭಾಷೆಯ ಸಂರಚನೆಯಲ್ಲಿ ದೊಡ್ಡ ವ್ಯತ್ಯಾಸಗಳಿವೆ. ಇದು ಕೇವಲ ಭಾಷೆಗಳ ನಡುವೆ ಅಂತರವಷ್ಟೇ ಅಲ್ಲ ಆಯಾ ಭಾಷಿಕರ ಸಂಸ್ಕೃತಿ ಕೂಡ ಅನನ್ಯವಾಗಿರುತ್ತದೆ. ಇಲ್ಲಿ ಏಕರೂಪಿ ಭಾಷಾ ನೀತಿಗಿಂತ ಬಹು ಭಾಷೆಗಳ ಅಸ್ಮಿತೆಯನ್ನು ಕಾಪಾಡುವ ರೀತಿಯಲ್ಲಿ ಸರ್ಕಾರ ಯೋಚಿಸಬೇಕಾಗುತ್ತದೆ. ಇದನ್ನು ಅರಿತೇ ಈ ಸಮೀಕ್ಷೆ ಜರುಗಿದೆ. ಈಗ ಇದನ್ನು ವಿಶ್ಲೇಷಣೆಗೊಳಪಡಿಸಿ ಅದಕ್ಕೆ ಕಾರ್ಯ ಸ್ವರೂಪ ನೀಡಬೇಕಾಗಿದೆ.

**ಏನಿದು ಸಮೀಕ್ಷೆ:** ಕೇಂದ್ರ ಗೃಹ ಸಚಿವಾಲಯ ಭಾರತದಲ್ಲಿ ಮಾತೃಭಾಷೆಗಳ ಸಮೀಕ್ಷೆಯನ್ನು ಇತ್ತೀಚೆಗಷ್ಟೆ ಪೂರ್ಣಗೊಳಿಸಿದೆ. 2011ರ ಜನಗಣತಿ ಹಾಗೂ ಭಾಷಾ ಗಣತಿಯ ದತ್ತಾಂಶಗಳನ್ನು 2018ರಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಯಿತು. ಇದನ್ನು ಈಗಿನ ಸರ್ವೆ ಆಧರಿಸಿದೆ. 2011ರ ಲಿಂಗ್ವಿಸ್ಟಿಕ್ ಸೆನ್ಸಸ್ ಪ್ರಕಾರ ದೇಶದಲ್ಲಿ 52.8ಕೋಟಿ ಮಂದಿ ಹಿಂದಿಯೇ ತಮ್ಮ ತಾಯಿ ನುಡಿ ಎಂದು ಹೇಳಿಕೊಂಡಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಹಿಂದಿ ಸ್ವಭಾಷಿಕರ ಪ್ರಮಾಣ ಶೇ.43.6 ಆಗುತ್ತದೆ. ದೇಶದ ಒಟ್ಟು 576 ಭಾಷೆಗಳನ್ನಾಡುವ ಪ್ರದೇಶಗಳ ವಿಡಿಯೋಗ್ರಫಿಯನ್ನೂ ಮಾಡಲಾಗಿದೆ.

**ಮಾತೃ ಭಾಷೆ ಎಂದಾಗ ಉಂಟಾಗುವ ಸಮಸ್ಯೆ:** ಮಾತೃ ಭಾಷೆ ಎಂಬುದು ಪ್ರತಿಕ್ರಿಯೆದಾರರು ನೀಡಿದ ಪದನಾಮ(ಡೆನ್ಸಿಗ್ನೇಷನ್). ಆದರೆ ಅವರು ಹೇಳಿದ್ದು ವಾಸ್ತವವಾಗಿ ಇರುವ ಭಾಷಾ ಮಾಧ್ಯಮಕ್ಕೆ ಹೋಲಿಕೆಯಾಗಬೇಕಾಗಿಲ್ಲ. ಅದರೊಂದಿಗೆ ಗುರುತಿಸಬೇಕಾಗಿಲ್ಲ. ಭಾಷಾ ಪರಿಶೀಲನೆ ವೇಳೆಯಲ್ಲಿ ಭಾಷಿಕರು ಸಲ್ಲಿಸಿದ 19,569 ಪ್ರತಿಕ್ರಿಯೆಗಳ ದಾಖಲೆಗಳನ್ನು ಪರಿಶೀಲಿಸಲಾಯಿತು. ಅದನ್ನು ವಿವೇಚನೆಗೊಳಪಡಿಸಲಾಯಿತು. ಇವುಗಳನ್ನು 121 ಮಾತೃಭಾಷೆಗಳನ್ನಾಗಿ ವಿಂಗಡಿಸಲಾಗಿದೆ ಎಂದು ಹಿಂದೆಯೇ ರಿಜಿಸ್ಟ್ರಾರ್ ಜನರಲ್ ಮತ್ತು ಜನಗಣತಿ ಆಯುಕ್ತರು ಹೇಳಿದ್ದರು.

**ದತ್ತಾಂಶಗಳ ಸಂರಕ್ಷಣೆ:** ಸಮೀಕ್ಷೆಗೊಳಪಟ್ಟ ಮಾತೃಭಾಷೆಗಳ ಆಡಿಯೋ ಮತ್ತು ವಿಡಿಯೋ ಫೈಲ್‌ಗಳನ್ನು ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ) ಮತ್ತು ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮ (ಎನ್‌ಎಫ್‌ಡಿಸಿ)ಗಳೂ ದಾಖಲಿಸಿಕೊಳ್ಳುತ್ತವೆ ಮತ್ತು ಸಂರಕ್ಷಿಸುತ್ತವೆ ಎಂದು ವರದಿಯಲ್ಲಿ ಹೇಳಲಾಗಿದೆ. ಈ ಕಾರ್ಯವಿನ್ನೂ ಶುರುವಾಗಿಲ್ಲ.

**ಗುರಿ ಮತ್ತು ಉದ್ದೇಶ:** ಪ್ರತಿಯೊಂದು ಮಾತೃ ಭಾಷೆಯ ಸೊಗಡನ್ನು ಸಂರಕ್ಷಿಸಲು ಮತ್ತು ವಿಶ್ಲೇಷಿಸಲು, ರಾಷ್ಟ್ರೀಯ ಮಾಹಿತಿ ಕೇಂದ್ರದಲ್ಲಿ (ಎನ್ಐಸಿ) ವೆಬ್–ಆರ್ಕೈವ್ ಸ್ಥಾಪಿಸಲು ಯೋಜಿಸಲಾಗಿದೆ ಎಂದು ಗೃಹ ಸಚಿವಾಲಯ 2021–22ರ ತನ್ನ ವಾರ್ಷಿಕ ವರದಿಯಲ್ಲಿ ಹೇಳಿದೆ. ಜಾಲ ದಾಖಲೆಗಾರದಿಂದ ಆಯಾ ಭಾಷೆಗಳ ಮೂಲ ಸ್ವರೂಪ ತಿಳಿಯುತ್ತದೆ. ಇದನ್ನು ಆಧರಿಸಿ ಕಾಲನುಕ್ರಮದಲ್ಲಿ ಆ ಭಾಷೆಯ ಮಾತು, ಬರಹದಲ್ಲಾಗಿರುವ ಪಲ್ಲಟಗಳನ್ನು ಗುರುತಿಸಬಹುದು. ಇದಕ್ಕೆ

ಕಾರಣಗಳನ್ನು ಹುಡುಕಬಹುದು. ಭಾಷಿಕ ಬದಲಾವಣೆಯ ಮೂಲಾಂಶಗಳನ್ನು ತಿಳಿಯಲು ನೆರವಾಗುತ್ತದೆ.

**ಮೋದಿ ಆದ್ಯತೆ:** ಮಾತೃ ಭಾಷೆಯನ್ನು ಭೋಧನಾ ಮಾಧ್ಯಮವನ್ನಾಗಿಸುವುದು. ವಿಶೇಷವಾಗಿ ಪ್ರಾಥಮಿಕ ಶಾಲಾ ಶಿಕ್ಷಣಕ್ಕೆ ಒತ್ತು ನೀಡುವುದು ಹಲವಾರು ವರ್ಷಗಳಿಂದ ಶಿಕ್ಷಣ ನೀತಿಯ ಲಕ್ಷಣವೇ ಆಗಿದೆ. ಪ್ರಧಾನಿ ನರೇಂದ್ರ ಮೋದಿ ಮತ್ತು ಗೃಹ ಸಚಿವ ಅಮಿತ್ ಶಾ ಅವರು ಮಕ್ಕಳ ಶಿಕ್ಷಣ ಆರಂಭಿಕ ಹಂತದಲ್ಲಿ ಮಾತೃಭಾಷೆಯಲ್ಲೇ ಆಗಬೇಕು. ಇದು ನಮ್ಮ ನೀತಿಯಾಗಬೇಕು ಎಂದು ಪದೆ ಪದೇ ಹೇಳುತ್ತಲೇ ಇದ್ದಾರೆ.

**ತಾಯಿ ನುಡಿಗಳು ಎಷ್ಟು:** 2011ರ ಭಾಷಾ ಜನಗಣತಿಯ ಅಂಕಿಅಂಶಗಳ ವಿಶ್ಲೇಷಣೆಯ ಪ್ರಕಾರ, ಭಾರತದಲ್ಲಿ 19,500ಕ್ಕೂ ಹೆಚ್ಚು ಭಾಷೆಗಳು ಅಥವಾ ಉಪಭಾಷೆಗಳನ್ನು ಮಾತೃ ಭಾಷೆಗಳಾಗಿ ಮಾತನಾಡಲಾಗುತ್ತದೆ ಎಂದು ಪಿಟಿಐ ಈ ಹಿಂದೆ ವರದಿ ಮಾಡಿತ್ತು.

**ಸ್ವಂತ ನುಡಿಗೆ ಪ್ರಧಾನ:** ಕಳೆದ ತಿಂಗಳು ಶಿಕ್ಷಣ ಸಚಿವ ಧರ್ಮೇಂದ್ರ ಪ್ರಧಾನ್ ಅವರು ಶಿಕ್ಷಣದ ಅಡಿಪಾಯ ಹಂತಗಳಿಗಾಗಿ ಹೊಸ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟನ್ನು (ಎನ್‌ಸಿಎಫ್) ಅನಾವರಣ ಮಾಡಿದರು. ಇದರಲ್ಲಿ ಎಂಟು ವರ್ಷದೊಳಗಿನ ಮಕ್ಕಳಿಗೆ ಶಾಲೆಗಳಲ್ಲಿ ಮಾತೃಭಾಷೆಯು ಪ್ರಾಥಮಿಕ ಬೋಧನಾ ಮಧ್ಯಮವಾಗಿರಬೇಕು ಎಂದು ಶಿಫಾರಸ್ಸು ಮಾಡಲಾಗಿದೆ.

**ಜನಗಣತಿಯ ಸ್ಥಿತಿಗತಿ:** 1872ರಲ್ಲಿ ಮೊದಲ ಬಾರಿಗೆ ಜನಗಣತಿ ನಡೆಸಲಾಯಿತು. ಪ್ರತಿ ಹತ್ತು ವರ್ಷಗಳಿಗೊಮ್ಮೆ ಇದು ಜರುಗುತ್ತದೆ. ಮುಂದೆ ಆಗ ಬೇಕಾಗಿರುವುದು 16ನೇ ಗಣತಿ. ಇದಕ್ಕೆ 2021ರಲ್ಲೇ ಚಾಲನೆ ಸಿಗಬೇಕಿತ್ತು. ಆದರೆ ಕೋವಿಡ್‌ನಿಂದ ಅದನ್ನು ಮುಂದೂಡಲಾಯಿತು. ಇದು ಸ್ವಾತಂತ್ರ್ಯ ಸಿದ್ಧಿಯಾದ ನಂತರದ ಎಂಟನೇ ಜನ ಗಣತಿಯಾಗಿದೆ. ಈ ಬಾರಿ ದತ್ತಾಂಶಗಳ ಡಿಜಿಟಲ್ ಸಂಸ್ಕರಣೆ, ಜಿಯೋಸ್ಪೇಷಿಯಲ್ ತಂತ್ರಜ್ಞಾನ, ದತ್ತಾಂಶಗಳ ತ್ವರಿತ ಬಿಡುಗಡೆ ಮಾಡಲಾಗುತ್ತದೆ ಎಂದು ಗೃಹಸಚಿವಾಲಯ ಘೋಷಿಸಿದೆ.

**ಮನೆ ಭಾಷೆಗೆ ಒತ್ತು ಯಾವಾಗ:** ಶಾಲಾ ಪೂರ್ವ ಅಂದರೆ ಎಲ್‌ಕೆಜಿ, ಯುಕೆಜಿ ಹಂತ ಹಾಗೂ 1–2ನೇ ತರಗತಿಗಳಲ್ಲಿ ಮಕ್ಕಳು ಮನೆ ಭಾಷೆಯನ್ನು ಸುಲಭವಾಗಿ ಕಲಿತುಕೊಳ್ಳುತ್ತಾರೆ. ಅವರಿಗೆ ಹೇಳಿಕೊಡುವವರು ಅವರ ಭಾಷೆಯನ್ನೇ ಬಳಸಬೇಕು. ಇಲ್ಲಿ ಮಾತನಾಡುವ ನುಡಿ ಮತ್ತು ಬರೆಯುವ ನುಡಿ ಎಂದು ವಿಭಾಗ ಮಾಡಿಕೊಂಡು, ಬರೆಯುವ ನುಡಿಗೆ ಹೆಚ್ಚು ಒತ್ತು ನೀಡಿದರೆ ಆಡುನುಡಿ ಸರಿಯೋ–ತಪ್ಪೋ ಎಂಬ ಆಂದೋಲನ ಶುರುವಾಗುತ್ತದೆ. ಈಗಾಗಲೇ ನಡೆದಿರುವ ಹಲವು ಸಂಶೋಧನೆಗಳು ಮನೆ ಭಾಷೆಯನ್ನೇ ಕಲಿಕೆಯ ಮಧ್ಯಮವಾಗಿಸಿಕೊಳ್ಳಬೇಕು. ಅದಕ್ಕೇ ಹೆಚ್ಚು ಒತ್ತು ಕೊಡಬೇಕು ಎಂಬುದನ್ನು ದೃಢವಾಗಿ ಪ್ರತಿಪಾದಿಸಿವೆ. ಮಕ್ಕಳು ತಮ್ಮ ಮಾತೃಭಾಷೆಯಲ್ಲಿ ಯಾವುದೇ ಪರಿಕಲ್ಪನೆಗಳನ್ನು ಅತ್ಯಂತ ವೇಗವಾಗಿ ಮತ್ತು ಆಳವಾಗಿ ಕಲಿತುಬಿಡುತ್ತಾರೆ. ಆದರೆ ಭಾರತದಲ್ಲಿ ಇರುವ ಮೂಲಭೂತ ಸಮಸ್ಯೆ ಎಂದರೆ ಮಕ್ಕಳ ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಬರಹಕ್ಕೆ ಹೆಚ್ಚು ಒತ್ತು ಕೊಡುವುದೇ ಆಗಿದೆ. ಆಲಿಸುವುದು, ಮಾತನಾಡುವುದು ಮತ್ತು ಓದುವ ಕೌಶಲಗಳು ಹಿಂದೆ ಬೀಳುತ್ತವೆ. ಬರಹದ ಭಾಷೆ ಮತ್ತು ಆಡು ನುಡಿಯ ಅಂತರಗಳು ತಪ್ಪುಗಳಿಗೆ ಕಾರಣವಾಗುತ್ತದೆ. ಈ ಅಂಶಗಳು ಸಮೀಕ್ಷೆಯಲ್ಲಿ ತಿಳಿದು ಬಂದರೂ ಅದರ ವಿಶ್ಲೇಷಣೆ ಇನ್ನೂ ಸಾಧ್ಯವಾಗಿಲ್ಲ.

ಆಧಾರ:–ವಿಜಯ ಕರ್ನಾಟಕ, ದಿನಾಂಕ:12.11.2022.

## 8. ಇ – ವಿಧಾನ ಇನ್ನೆಷ್ಟು ನಿಧಾನ

ವಿಧಾನ ಪರಿಷತ್ ಸದಸ್ಯರು ತಮಗೆ ವಹಿಸಿರುವ ವಿವಿಧ ಸಮಿತಿಗಳ ಕಾರ್ಯ ವೈಖರಿಯ ಕ್ರಿಯಾಶೀಲತೆಯನ್ನು ಹೆಚ್ಚಿಸುವ ಸಲುವಾಗಿ ವಿವಿಧ ರಾಜ್ಯಗಳಿಗೆ ಪ್ರವಾಸ ಕೈಗೊಂಡು ಅಲ್ಲಿರುವ ಅತ್ಯುತ್ತಮ ನೀತಿಗಳ ಬಗ್ಗೆ ವರದಿಯನ್ನು ನೀಡುವುದು ವಾಡಿಕೆಯಾಗಿರುತ್ತದೆ. ನಾನು ಮೊಟ್ಟಮೊದಲ ಬಾರಿಗೆ ವಿಧಾನ ಪರಿಷತ್ ಸದಸ್ಯನಾಗಿ ಕಳೆದ ಒಂದು ವರ್ಷದಿಂದ ಸದನದ ಎಲ್ಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದಾಗ ನನಗೆ ನಮ್ಮ ಶಾಸನ ಸಭೆಯ ಬಗ್ಗೆ ಸರಕಾರದ ಕಾರ್ಯ ಕಲಾಪಗಳ ಬಗ್ಗೆ ದೊರಕುತ್ತಿರುವ ಜ್ಞಾನವು ನನ್ನ ಸಾರ್ವಜನಿಕ ಜೀವನದ ಮುಖ್ಯ ಘಟ್ಟವೆನ್ನಬಹುದು.

ಹಕ್ಕು ಬಾಧ್ಯತಾ ಸಮಿತಿಯ ಸದಸ್ಯನಾಗಿರುವ ನಾನು ಮತ್ತು ಸಮಿತಿಯ ಉಳಿದ ಸದಸ್ಯರನ್ನು ಒಳಗೊಂಡ ತಂಡವು ಕೈಗೊಂಡ ನನ್ನ ಪಾಲಿನ ಮೊಟ್ಟ ಮೊದಲ ಅಧ್ಯಯನ ಪ್ರವಾಸವು ಉತ್ತರ ಪ್ರದೇಶ, ಬಿಹಾರ ಮತ್ತು ದೆಹಲಿಯ ಶಾಸನಸಭೆಗಳಿಗೆ ಭೇಟಿ ಆಗಿತ್ತು. ಅಲ್ಲಿನ ಶಾಸನಸಭೆಯ ಮುಖ್ಯಸ್ಥರೊಂದಿಗೆ ಸಮಾಲೋಚನೆ ನಡೆಸಿ ಅಲ್ಲಿ ಬಳಸುತ್ತಿರುವ ಉತ್ತಮ ವಿಧಾನಗಳನ್ನು ಅಧ್ಯಯನ ಮಾಡಲೆಂದು ನಿಗದಿಯಾಗಿದ್ದ ಪ್ರವಾಸವಾಗಿತ್ತು.

ಇದೇನು ಮೋಜು ಮಸ್ತಿಯಲ್ಲ. ಮೊದಲ ದಿನದಿಂದ ಕೊನೆಯ ದಿನದವರೆಗೆ ನಮ್ಮ ಅರಿವು, ನಡವಳಿಕೆಯನ್ನು ಹೆಚ್ಚಿಸುವ ರೀತಿಯಲ್ಲಿತ್ತು ಎಂದು ಹೇಳಿಕೊಳ್ಳಲು ಹೆಮ್ಮೆಯಾಗುತ್ತದೆ.

ಈ ಪ್ರವಾಸದ ದಿನಗಳಲ್ಲಿ ನನ್ನ ಮನಸ್ಸಿನಲ್ಲಿ ಮೂಡಿದಂತಹ ಕೆಲವೊಂದು ಆಲೋಚನೆಗಳು ನನ್ನಲ್ಲಿ ಹೊಸ ಚಿಂತನೆಗಳನ್ನು ಹುಟ್ಟುಹಾಕಿತು. ಇಡೀ ವಿಶ್ವದಲ್ಲಿ ಅತಿ ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿ ಮುಂಚೂಣಿಯಲ್ಲಿರುವ, ಪ್ರಪಂಚದಲ್ಲೇ ಅತಿ ಹೆಚ್ಚು ಯುವಕರನ್ನು ಹೊಂದಿರುವ ಮುಂದೊಂದು ದಿನ ಇಡೀ ವಿಶ್ವಕ್ಕೆ ದಾರಿದೀಪವಾಗುವಂತಹ ರಾಷ್ಟ್ರವೆಂದರೆ ಅದು ನಮ್ಮ ಹೆಮ್ಮೆಯ ಭಾರತ.

ನರೇಂದ್ರ ಮೋದಿಯವರು ಪ್ರಧಾನಿಯಾದ ನಂತರ ಭಾರತವನ್ನು ವಿಶ್ವದಲ್ಲೇ ಮುಂಚೂಣಿಯಲ್ಲಿರಸಬೇಕೆಂದು ಕೈಗೊಂಡ ಹಲವಾರು ಬದಲಾವಣೆಗಳಲ್ಲಿ ತಂತ್ರಜ್ಞಾನದ ಅಳವಡಿಕೆ, ಐಟಿ ಮತ್ತು ಅದರ ಇಂಪ್ಲಿಮೆಂಟೇಶನ್ ಬಹು ಮುಖ್ಯವಾದ ಬದಲಾವಣೆಯಾಗಿದೆ.

ಸದನದಲ್ಲಿ ಈ ಪೇಮೆಂಟ್ ಸಿಸ್ಟಮ್‌ಗಳ ಬಗ್ಗೆ ಲೇವಡಿ ಮಾಡಿದ ಎಷ್ಟೋ ಉದಾಹರಣೆಗಳಿದ್ದರೂ ನರೇಂದ್ರ ಮೋದಿಯವರು ಭಾರತದ ಮೂಲೆ ಮೂಲೆಗಳಲ್ಲಿ ಪ್ರತಿಯೊಬ್ಬರೂ ಡಿಜಿಟಲ್ ಪೇಮೆಂಟ್ ಮತ್ತು ಡಿಜಿಟಲ್ ಎಕಾನಮಿ ಭಾಗವಾಗುವಂತೆ ಮಾಡಿದರು. ಇದು ವಿಶ್ವವೇ ಬೆರಗಾಗುವಂತೆ ಭಾರತದಲ್ಲಿ ಡಿಜಿಟಲ್ ಕ್ರಾಂತಿ ಆಗಿದೆ. ಇದು ಪ್ರಪಂಚದ ಅತಿ ದೊಡ್ಡ ಅದ್ಭುತಗಳಲ್ಲೊಂದು. ನಾವು ಭೇಟಿ ನೀಡಿದ

ಉತ್ತರ ಪ್ರದೇಶ, ತಮಿಳುನಾಡು ಮತ್ತು ವಿಶೇಷವಾಗಿ ಬಿಹಾರ ರಾಜ್ಯಗಳ ಶಾಸನ ಸಭೆಗಳಲ್ಲಿ ಜಾರಿಗೊಂಡಿರುವ ತಂತ್ರಜ್ಞಾನದ ಬಳಕೆ ಹಾಗೂ ಸಂಪೂರ್ಣ ಡಿಜಿಟಲೀಕರಣದ ಸಹಾಯದಿಂದ ಶಾಸನ ಸಭೆಗಳು ಪಡೆದುಕೊಂಡಿರುವ ಪ್ರಯೋಜನಗಳು ಅದ್ಭುತವೆನಿಸಿತು.

ಉತ್ತರ ಪ್ರದೇಶ, ತಮಿಳುನಾಡು ಮತ್ತು ವಿಶೇಷವಾಗಿ ಬಿಹಾರ ರಾಜ್ಯಗಳ ಶಾಸನಸಭೆಗಳಲ್ಲಿ ಅಳವಡಿಸಿಕೊಂಡಿರುವ ಡಿಜಿಟಲೈಜೇಷನ್ ಆಫ್ ಲೆಜಿಸ್ಲೇಚರ್ ಅಥವಾ ಕೇಂದ್ರ ಸರಕಾರದ ಸಹಯೋಗದಿಂದ ಜಾರಿಗೊಂಡಿರುವ ನ್ಯಾಷನಲ್ ಇ-ವಿಧಾನ ಸ್ಕೀಮ್ (ನೇವಾ) ಯೋಜನೆಯನ್ನು ಜಾರಿಗೊಳಿಸಿ ಮತ್ತು ಅದರ ಸಂಪೂರ್ಣ ಲಾಭವನ್ನು ಪ್ರತ್ಯಕ್ಷವಾಗಿ ಕಂಡು ಅತ್ಯಂತ ಸಂತಸಗೊಂಡೆನು.

ಶಾಸನಸಭೆಗೆ ಬರುವ ಪ್ರತಿಯೊಬ್ಬ ಸದಸ್ಯನ ಆಸನದ ಮುಂಭಾಗದಲ್ಲಿ ಟ್ಯಾಬ್‌ಗಳು ಅಂದು ನಡೆಯುವ ಪ್ರಶ್ನೋತ್ತರ ವೇಳೆಯಲ್ಲಿ ಸದಸ್ಯರು ಕೇಳುವ ಪ್ರತಿಯೊಂದು ಪ್ರಶ್ನೆಗಳು ಸಾಫ್ಟ್‌ಕಾಪಿ ರೂಪದಲ್ಲಿ ಆ ಟ್ಯಾಬ್ಗಳಲ್ಲಿ ಅಳವಡಿಸಲಾಗಿರುತ್ತದೆ. ಕಲಾಪವನ್ನು ಸಂಪೂರ್ಣ ಪೇಪರ್ ಲೆಸ್ ಮಾಡುವ ಉದ್ದೇಶದಿಂದ ಈ ಯೋಜನೆಯನ್ನು ಪ್ರಾರಂಬಿಸಲಾಗಿದೆ.

ಪ್ರತಿಯೊಬ್ಬ ಸದಸ್ಯರು ಯಾವಾಗ ಬೇಕಾದರೂ ಸಂಬಂಧಪಟ್ಟ ಸಚಿವರು ನೀಡಿದ ಉತ್ತರವನ್ನು ಕೇವಲ ಒಂದು ಕ್ಲಿಕ್‌ನಲ್ಲಿ ಪಡೆದುಕೊಳ್ಳಬಹುದು. ಈ ಯೋಜನೆಯ ಮತ್ತೊಂದು ಬಹುದೊಡ್ಡ ಪ್ರಯೋಜನವೆಂದರೆ ಅನಗತ್ಯ ಬಿಳಿಹಾಳೆಗಳ ಬಳಕೆಯನ್ನು ಆಮೂಲಾಗ್ರವಾಗಿ ಕಡಿಮೆಗೊಳಿಸುವುದು.

ಕೆಲವೊಮ್ಮೆ ನಮ್ಮ ಸದನಗಳಲ್ಲಿ ಸದಸ್ಯರು ಕೇಳುವ ಪ್ರಶ್ನೆಗಳಿಗೆ ಉತ್ತರಿಸುವಾಗ ರಾಜ್ಯದ ಕೆಲವೊಂದು ಅಂಕಿ ಅಂಶಗಳನ್ನು ಜಿಲ್ಲಾವಾರು, ತಾಲ್ಲೂಕುವಾರು ದಾಖಲೆಗಳನ್ನು ಒದಗಿಸಬೇಕಾಗಿರುತ್ತದೆ. ಇದು ನೂರಾರು ಪುಟಗಳಾಗುತ್ತದೆ. ಹಾಳೆಗಳ ಬೇಡಿಕೆ ತಪ್ಪಿಸಲು ಅಧಿಕಾರಿಗಳಿಗೆ ದೊಡ್ಡ ದೊಡ್ಡ ಫೈಲ್ಗಳಿಂದ ಮುಕ್ತಿ ನೀಡಲು ಡಿಜಿಟಲೀಕರಣ ಅತ್ಯಂತ ಪ್ರಯೋಜನಕಾರಿಯಾಗಿದ್ದು ನಾವು ಭೇಟಿ ನೀಡಿದ್ದ ರಾಜ್ಯಗಳ ಪ್ರತಿಯೊಬ್ಬ ಸದಸ್ಯರು ಈ ಡಿಜಿಟಲೀಕರಣದ ಉಪಯೋಗವನ್ನು ಅತ್ಯಂತ ಸಂತಸದಿಂದ ಅನುಭವಿಸುತ್ತಿದ್ದು ನಾವು ಸಂದರ್ಶಿಸಿದ ಸಭಾಧ್ಯಕ್ಷರುಗಳು ಮತ್ತು ಸಂಬಂಧಪಟ್ಟ ಅಧಿಕಾರಿಗಳು ಇ-ವಿಧಾನಸಭಾ ಯೋಜನೆಯನ್ನು ಮುಕ್ತ ಕಂಠದಿಂದ ಸ್ವಾಗತಿಸಿದರು. ಇದರಿಂದ ಆಗುವ ಸಮಯ ಮತ್ತು ಸಂಪನ್ಮೂಲದ ಉಳಿತಾಯ ದೊಡ್ಡದು.

ನಮಗೆಲ್ಲರಿಗೂ ತಿಳಿದಿರುವಂತೆ ಭಾರತದ ಸಿಲಿಕಾನ್ ವ್ಯಾಲಿ, ಅನ್ವೇಷಣೆಗಳ ಅರಮನೆ, ಸ್ಟಾರ್ಟಪ್ಗಳ ಸ್ವರ್ಗ, ದೇಶಕ್ಕೆ ಉತ್ತಮ ಅತ್ಯುತ್ತಮ ತಂತ್ರಜ್ಞಾನವನ್ನು ನೀಡಿದ ರಾಜ್ಯವೆಂದರೆ ನಮ್ಮ ಹೆಮ್ಮೆಯ ಕರ್ನಾಟಕ. ತಂತ್ರಜ್ಞಾನವೆಂದರೆ ಕರ್ನಾಟಕ ರಾಜ್ಯ ಕರ್ನಾಟಕ ರಾಜ್ಯವೆಂದರೆ ತಂತ್ರಜ್ಞಾನವೆಂಬಂತೆ

ಪ್ರಪಂಚವನ್ನು ತನ್ನೆಡೆಗೆ ಸೆಳೆದುಕೊಂಡು ವಿಶ್ವದಲ್ಲೇ ತಂತ್ರಜ್ಞಾನದ ಅಭಿವೃದ್ಧಿ ಮತ್ತು ಬಳಕೆಗೆ ಹೆಸರುವಾಸಿಯಾಗಿರುವ ನಮ್ಮ ಕರ್ನಾಟಕ ರಾಜ್ಯವು ಆಡಳಿತ, ಆರೋಗ್ಯ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಉತ್ತಮ ತಂತ್ರಜ್ಞಾನವನ್ನು ಅಳವಡಿಸಿಕೊಂಡು ದೇಶಕ್ಕೆ ಮಾದರಿಯಾಗಿದೆ.

ಐಟಿ ಮತ್ತು ಐಟಿಇಎಸ್ ಕ್ಷೇತ್ರದಲ್ಲಿ ಅಪಾರ ಉನ್ನತಿ ಸಾಧಿಸಿರುವ ನಮ್ಮ ರಾಜ್ಯದ ಸದನ ಸಭೆಗಳು ಇನ್ನೂ ಏಕೆ ಡಿಜಿಟಲೈಜ್ ಆಗಿಲ್ಲವೆಂಬ ಪ್ರಶ್ನೆ ನನ್ನ ಪ್ರವಾಸದ ಪ್ರತಿಯೊಂದು ಕ್ಷಣದಲ್ಲೂ ಕಾಡುತ್ತಿತ್ತು.

ಪ್ರವಾಸ ಮುಗಿದು ಬಂದ ಕೂಡಲೇ ಈ ಅದ್ಭುತ ಯೋಜನೆ ನಮ್ಮ ಕರ್ನಾಟಕದ ವಿಧಾನಸಭೆ ಮತ್ತು ವಿಧಾನಪರಿಷತ್‌ನಲ್ಲಿ ಯಾಕೆ ಜಾರಿಯಾಗಿಲ್ಲ ಎಂದು ಸಂಬಂಧಪಟ್ಟವರನ್ನು ವಿಚಾರಿಸಿದಾಗ ನನಗೆ ಸಿಕ್ಕ ಉತ್ತರ–ಅಧಿಕಾರಿಗಳ ನಿರ್ಲಕ್ಷ್ಯ. ಇದೇ ಅದ್ಭುತ ಯೋಜನೆಗೆ ತೊಡಕು.

ಕೇಂದ್ರ ಸರಕಾರ 'ನೇವಾ' (ನ್ಯಾಷನಲ್ ಇ– ವಿಧಾನ ಸಭಾ) ಯೋಜನೆಯನ್ನು ಜಾರಿಗೊಳಿಸಲು ಸಂಬಂಧಪಟ್ಟ ಅಧಿಕಾರಿಗಳಿಂದ ಯೋಜನಾ ವರದಿಯನ್ನು ಕೇಳಿತ್ತು. ಕೇಂದ್ರ ನೀಡಿದ್ದ ಅಂತಿಮ ಗಡುವುಗಳನ್ನು ಪದೇ ಪದೆ ವಿಸ್ತರಿಸಿದ ನಂತರವೂ ಅಧಿಕಾರಿಗಳು ನಾಮಕಾವಸ್ತೆಗೆ 'ನೇವಾ' ಯೋಜನೆಗೆ ಸಂಬಂಧಪಟ್ಟ ವರದಿಯನ್ನು ಸಲ್ಲಿಸಿದರು. ಕೇಂದ್ರ ನೀಡಿರುವ ಸೂಚನೆಗಳನ್ನು ಸರಿಯಾಗಿ ಪಾಲಿಸದ ಪರಿಣಾಮ ಇಂತಹ ಒಂದು ಅದ್ಭುತ ಯೋಜನೆ ಕರ್ನಾಟಕ ಶಾಸನಸಭೆಗಳಲ್ಲಿ ಜಾರಿಯಾಗಿಲ್ಲ. ತಾಂತ್ರಿಕ ಶಿಕ್ಷಣ ಪಡೆದಿರುವ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಈ ಯೋಜನೆಯನ್ನು ತಕ್ಷಣ ಜಾರಿಗೊಳಿಸಬೇಕು. ಪೇಪರ್ ಲೆಸ್ ಬಜೆಟ್ ಮಂಡನೆಗೂ ಇದು ಅನುಕೂಲ.

IT+1T = IT ಇಂಡಿಯನ್ ಟ್ಯಾಲೆಂಟ್ ಮತ್ತು ಮಾಹಿತಿ ತಂತ್ರಜ್ಞಾನ ಸೇರಿದರೆ ಇಂಡಿಯಾ ಟುಮಾರೋ ಎಂಬ ಘೋಷವಾಕ್ಯವನ್ನು ನೀಡಿ ಭಾರತವನ್ನು ವಿಶ್ವಕ್ಕೆ ಮಾದರಿಯಂತೆ ಯಶಸ್ವಿಯಾಗಿ ಮುನ್ನಡೆಸುತ್ತಿರುವ ಪ್ರಧಾನಿ ನರೇಂದ್ರ ಮೋದಿಯವರ ಕನಸಿನ ಭಾರತಕ್ಕೆ ನಾವು ಕೈಜೋಡಿಸಿದಂತಾಗುತ್ತದೆ.

ಲೇಖಕರು: ಡಿ.ಎಸ್. ಅರುಣ್, ವಿಧಾನ ಪರಿಷತ್ ಸದಸ್ಯರು

ಆಧಾರ: ಪ್ರಜಾವಾಣಿ, ದಿನಾಂಕ: 20.11.2022

* * * * *